# ಹಂಪಿ ಪರಿಸರದ ಶೈವಶಿಲ್ಪಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)




ಸಂಶೋಧನಾ ವಿದ್ಯಾರ್ಥಿನಿ
ಮಣಸಿಗಿ ಹೇಮಾವತಿ ಶಿವಾನಂದ

ಮಾರ್ಗದರ್ಶಕರು
ಡಾ.ಸಿ.ಎಸ್.ವಾಸುದೇವನ್
ಪ್ರಾಧ್ಯಾಪಕರು





ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬
೨೦೦೬

# ಹಂಪಿ ಪರಿಸರದ ಶೈವಶಿಲ್ಪಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧನಾ ವಿದ್ಯಾರ್ಥಿನಿ
ಮೆಣಸಿಗಿ ಹೇಮಾವತಿ ಶಿವಾನಂದ



ಮಾರ್ಗದರ್ಶಕರು
ಡಾ.ಸಿ.ಎಸ್.ವಾಸುದೇವನ್
ಪ್ರಾಧ್ಯಾಪಕರು




ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಮೆಣಸಿಗಿ ಹೇಮಾವತಿ ಶಿವಾನಂದ** ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಹಂಪಿ ಪರಿಸರದ ಶೈವಶಿಲ್ಪಗಳು** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

C. S. Vasudevan

**ಡಾ.ಸಿ.ಎಸ್.ವಾಸುದೇವನ್**
ಪ್ರಾಧ್ಯಾಪಕರು
**ಪ್ರಾಚೀನ ಇತಿಹಾಸ ಮತ್ತು**
**ಪುರಾತತ್ವ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** 28.01.2016

ಡಾ. ಸಿ.ಎಸ್. ವಾಸುದೇವನ್
ಪ್ರಾಧ್ಯಾಪಕ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ - 583 276.

# ಸಂಶೋಧಕರ ಘೋಷಣಾ ಪತ್ರ

**ಹಂಪಿ ಪರಿಸರದ ಶೈವಶಿಲ್ಪಗಳು** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ, ಪ್ರಾಧ್ಯಾಪಕರಾದ **ಡಾ.ಸಿ.ಎಸ್.ವಾಸುದೇವನ್** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

HSM

**ಮೆಣಸಿಗಿ ಹೇಮಾವತಿ ಶಿವಾನಂದ**
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿ
ಪ್ರಾಚೀನ ಇತಿಹಾಸ ಮತ್ತು
ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** 28.01.2016

# ಪರಿವಿಡಿ

## ಅಧ್ಯಾಯ ಒಂದು

# ಪ್ರಸ್ತಾವನೆ

ಭಾರತೀಯ ಪರಂಪರೆಯಲ್ಲಿ ಶಿಲ್ಪಗಳಿಗೆ ಮಹತ್ತರ ಸ್ಥಾನವಿದೆ. ಇವು ನಮ್ಮ ಸಂಸ್ಕೃತಿಯನ್ನು ಬಿಂಬಿಸುವಲ್ಲಿ ಮುಂಚೂಣಿ ಹಂತದಲ್ಲಿವೆ ಎಂದು ಹೇಳಬಹುದು. ಒಂದು ಕಾಲದಲ್ಲಿ ನಿಸರ್ಗವನ್ನು ಮತ್ತು ಅದರ ಶಕ್ತಿಯನ್ನು ನಿರಾಕಾರದಲ್ಲಿ ಪೂಜಿಸುತ್ತಿದ್ದ ಮಾನವನು ತನ್ನಲ್ಲಿರುವ ಕಲೆಯನ್ನು ಬಳಸಿ ಅದಕ್ಕೊಂದು ಆಕಾರವನ್ನು ನೀಡಿ, ದೈವೀ ಸ್ವರೂಪದ ಭಾವಾರ್ಥ ಕಲ್ಪಿಸಿ ಅದನ್ನು ಪೂಜಿಸತೊಡಗಿದನು. ಹೀಗೆ ಶಿಲ್ಪಕಲೆಯು ರೂಪು ತಳೆಯಿತು ಎನ್ನಬಹುದು. ಸಂಸ್ಕೃತದ ಶಿಲ್ಪವೆಂಬ ಶಬ್ದ 'ಶೀಲ ಸಮಾಧೌ' ಎನ್ನುವ ಧಾತುವಿನಿಂದ ಒದಗಿ ಬಂತು. ಮನಸ್ಸಿನ ಏಕಾಗ್ರತೆ ಏಕತಾನತೆಯಿಂದ ಹೊರಬಂದುದೆಲ್ಲ ಶಿಲ್ಪವೆಂದು ಹೇಳಲಾಗುತ್ತದೆ ಹಾಗೂ ಶಿಲ್ಪೋಪನಿಷತ್ತಿನಲ್ಲಿ ಬರುವ 'ಮನಸಾ ಯತ್ ಸೃಜ್ಯತೆ ವಿಶ್ವ ಕೃತಸ್ತತ್ ಸರ್ವ ಶಿಲ್ಪಮೇವ ಭವತಿ' ಎಂಬ ಶ್ಲೋಕವು ಬ್ರಹ್ಮನು ತನ್ನ ಮನಸ್ಸಿನಿಂದ ಮಾಡಿದುದೆಲ್ಲ ಶಿಲ್ಪವೇ ಎಂದು ಉಲ್ಲೇಖಿಸುತ್ತದೆ.[೧] ಇದರಂತೆ ವೇದದ ದೃಷ್ಟಿಯಲ್ಲಿ ಶಿಲ್ಪವು ಪ್ರಾರಂಭವಾದುದೇ ವಿಶ್ವಸೃಷ್ಟಿಯಿಂದ. ಸೃಷ್ಟಿಯನ್ನೇ ವೇದವು 'ಶಿಲ್ಪ' ಎಂದು ಹೇಳುತ್ತದೆ.[೨] ಈ ಎಲ್ಲ ವ್ಯಾಖ್ಯೆಗಳು ಶಿಲ್ಪ ಎಂಬ ಶಬ್ದದ ಅರ್ಥವನ್ನು ಹುಡುಕಲು ಹೊರಟಾಗ ದೊರೆಯುತ್ತವೆ. ಈ ಹಿಂದೆ ಶಿಲ್ಪ ಎಂಬ ಪದಕ್ಕೆ ವ್ಯಾಪಕವಾದ ಅರ್ಥವನ್ನು ನೀಡಲಾಗಿತ್ತು. ಅಂದರೆ ಮೂರ್ತಿಶಿಲ್ಪ, ವರ್ಣಚಿತ್ರ, ಫಲಕ ಮುಂತಾದ ಅನೇಕ ಅರ್ಥಗಳು ಇದಕ್ಕಿದ್ದುವಲ್ಲದೆ ಗೀತ, ವಾದ್ಯ, ನೃತ್ಯ ಮುಂತಾದ ಲಲಿತಕಲೆಗಳೆಲ್ಲವೂ ಇದರ ಅರ್ಥವ್ಯಾಪ್ತಿಗೆ ಸೇರುತ್ತವೆ.[೩] ಪ್ರಸ್ತುತದಲ್ಲಿ ಶಿಲ್ಪ ಎಂಬುದನ್ನು ಮೂರ್ತಿಶಿಲ್ಪಕ್ಕೆ ಸೀಮಿತಗೊಳಿಸಲಾಗಿದ್ದು ಇದಕ್ಕೆ ಬಿಂಬ, ಪ್ರತಿಮೆ, ವಿಗ್ರಹ ಎಂಬ ಪರ್ಯಾಯ ಪದಗಳನ್ನು ಬಳಸಲಾಗುತ್ತದೆ.

ಶಿಲ್ಪದಲ್ಲಿ ದೇವಶಿಲ್ಪ ಮತ್ತು ಮಾನುಷ ಶಿಲ್ಪ ಎಂಬ ಎರಡು ವಿಧಾನಗಳನ್ನು ಐತರೇಯ ಬ್ರಾಹ್ಮಣವು ಹೇಳುತ್ತದೆ.[೪] ಇವುಗಳನ್ನೆ ನಾವು ಧಾರ್ಮಿಕ(ದೇವ) ಮತ್ತು ಲೌಕಿಕ (ಮಾನುಷ) ಶಿಲ್ಪಗಳೆಂತಲೂ ಕರೆಯುತ್ತೇವೆ. ಈ ಎರಡೂ ವರ್ಗದ ಶಿಲ್ಪಗಳನ್ನು ನಮ್ಮ ದೇಶದ ಉದ್ದಗಲಕ್ಕೂ ಚಾಚಿಕೊಂಡಿರುವ ದೇವಾಲಯಗಳ ವಾಸ್ತುಶಿಲ್ಪಗಳಲ್ಲಿ ವಿಪುಲವಾಗಿ ಬಳಸಿಕೊಳ್ಳಲಾಗಿದೆ. ದೇವತಾರಾಧನೆ ಪ್ರಧಾನವಾದ ನಮ್ಮ ದೇಶದಲ್ಲಿ ಮಾನುಷ ಶಿಲ್ಪಗಳಿಗಿಂತ ದೇವ ಶಿಲ್ಪಗಳೇ ಹೆಚ್ಚು ಕಂಡುಬರುತ್ತವೆ.

ಇಂತಹ ಶಿಲ್ಪಗಳು ಧಾರ್ಮಿಕ ನೆಲೆಗಟ್ಟಿನ ಮೇಲೆ ರಚಿತವಾದಂತಹವುಗಳು ಇವುಗಳ ಉಗಮ ಮತ್ತು ವಿಕಾಸಕ್ಕೆ ಧರ್ಮ ಕಾರಣವೆಂದು ಹೇಳಬಹುದು. ಧರ್ಮದ ಅಮೂರ್ತ ಕಲ್ಪನೆಗಳಿಗೆ ಮೂರ್ತಿಶಿಲ್ಪವು ಸಾಕಾರ ರೂಪವನ್ನು ನೀಡಿ ಸಂಪೂರ್ಣತೆಯನ್ನು ಒದಗಿಸುತ್ತದೆ. ಅಂತೆಯೇ ಶಿಲ್ಪಗಳು ಧಾರ್ಮಿಕ ಅವಶ್ಯಕತೆಗಳನ್ನು ಪೂರೈಸುವ ವಸ್ತುಗಳಾಗಿ ರೂಪುಗೊಂಡಿವೆ. ಇವು ವಿಕಾಸದತ್ತ ಸಾಗಿದಾಗ ಇವುಗಳ ಭಾವರೂಪಕ್ಕೆ ಶಾಸ್ತ್ರದ ಚೌಕಟ್ಟನ್ನು ಒದಗಿಸಲಾಯಿತು. ಹೀಗಾಗಿ ಶಿಲ್ಪ ಎಂಬುದು ಮೊದಲು, ನಂತರದಲ್ಲಿ ಅವುಗಳಿಗೆ ಆಗಮಗಳು ಹಾಗೂ ಶಿಲ್ಪಶಾಸ್ತ್ರಗಳು ರಚನೆಗೊಂಡವು ಎಂದು ಹೇಳಬಹುದು. ಮಯ ಶಿಲ್ಪವು 'ರೂಪೋ ಭಾವ ಲಾವಣ್ಯ ಮಿತಿತ್ರಿದಾ ಸರ್ವಕಾರ್ಯೇಷು ಪ್ರಧಾನತಃ' ಎಂದು ಹೇಳಿದೆ.[೫] ಅಂದರೆ ಶಿಲ್ಪವೆಂದು ಕರೆಯಬಹುದಾದ ಯಾವುದೇ ಭಾಗಕ್ಕೂ ರೂಪ, ಭಾವ, ಲಾವಣ್ಯ ಎಂಬ ಮೂರು ಅಂಶಗಳು ಇರಬೇಕಾದದ್ದು ಮುಖ್ಯ. ಇಂತಹ ವಿವರಗಳನ್ನು ಶಿಲ್ಪಶಾಸ್ತ್ರ, ಆಗಮಶಾಸ್ತ್ರ, ಪುರಾಣ ಮತ್ತು ಕೋಶಗಳಲ್ಲಿ ಪಡೆಯಬಹುದು.

ಶಿಲ್ಪಗಳನ್ನು ಮರ, ಶಿಲೆ, ರತ್ನ ಲೋಹ, ಜೇಡಿಮಣ್ಣು ಮೊದಲಾದವುಗಳಿಂದ ಅಥವಾ ಅವುಗಳ ಸಮ್ಮಿಶ್ರಣದಿಂದಾಗಲಿ ರಚಿಸಬಹುದು. ಹೀಗೆ ರಚಿಸಿದ ಶಿಲ್ಪಗಳನ್ನು ಎರಡು ಪ್ರಕಾರಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆಯದು ಶಿಲ್ಪದ ರೂಪಗಳಲ್ಲಿ ಮೂರು ಬಗೆ ಎಂದು ಹೇಳಿ ಸಕಳ (ಶಿಲ್ಪದಲ್ಲಿ ಸಂಪೂರ್ಣ ದೇಹವನ್ನು ತೋರಿಸುವುದು), ನಿಷ್ಕಳ (ಸಾಂಕೇತಿಕವಾಗಿ ತೋರಿಸುವುದು ಉದಾಹರಣೆಗೆ ಲಿಂಗ, ಸಾಲಿಗ್ರಮ), ಮಿಶ್ರ (ಕೆಲವು ಅಂಗಗಳನ್ನು ತೋರಿಸಿ ಉಳಿದವುಗಳನ್ನು ಸಾಂಕೇತಿಕವಾಗಿ ತೋರಿಸುವುದು ಉದಾಹರಣೆಗೆ: ಮುಖಲಿಂಗ) ಎಂದು ವಿಭಾಗಿಸಬಹುದು. ಇನ್ನೊಂದರಲ್ಲಿ ಚಲ, ಅಚಲ, ಚಲಾಚಲ ಎಂದು ವಿಂಗಡಿಸಲಾಗಿದೆ. ಇಲ್ಲಿ ಚಲ ಪ್ರತಿಮೆಗಳು ಲೋಹದಿಂದ ಮಾಡಲ್ಪಟ್ಟಿರುತ್ತವೆ. ಇವುಗಳನ್ನು ಒಂದೆಡೆಯಿಂದ ಮತ್ತೊಂದೆಡೆಗೆ ಸಾಗಿಸಬಹುದು. ಆದ್ದರಿಂದಲೆ ಇವುಗಳನ್ನು ಚಲ ಪ್ರತಿಮೆಗಳೆನ್ನುವರು. ಅಚಲ ಪ್ರತಿಮೆಗಳಿಗೆ ಮೂಲ ವಿಗ್ರಹ ಹಾಗೂ ಧ್ರುವ ಬೇರ ಎಂತಲೂ ಕರೆಯುತ್ತಾರೆ. ಇವುಗಳನ್ನು ಶಿಲೆಯಿಂದ ಮಾಡುವವರಲ್ಲದೆ ದೇವಾಲಯದ ಗರ್ಭಗೃಹದಲ್ಲಿ ಪ್ರತಿಷ್ಠೆ ಮಾಡುವರು. ಇವುಗಳ ಸ್ಥಾನವನ್ನು ಕದಲಿಸಲಾಗುವುದಿಲ್ಲ. ಇಂತಹ ಶಿಲ್ಪಗಳನ್ನು ಸ್ಥಾನಕ, ಆಸೀನ, ಶಯನ ಎಂದು ಮತ್ತೆ ಮೂರು ತೆರನಾಗಿ ವಿಂಗಡಿಸಬಹುದು. ಇವುಗಳಲ್ಲದೆ ಉಗ್ರ ಮತ್ತು ಶಾಂತ ಎಂಬ ವಿಂಗಡಣೆಗಳೂ ಉಂಟು. ಬಿಂಬಗಳ ಕೆತ್ತನೆಯ ರೂಪವನ್ನು ಗಮನಿಸಿ ಮತ್ತೊಂದು ರೀತಿಯಲ್ಲಿ ಮೂರ್ತಿಗಳನ್ನು ವಿಂಗಡಿಸಬಹುದು. ಬಿಂಬದ ಪ್ರತಿಯೊಂದು ಭಾಗವನ್ನು ಪೂರ್ಣವಾಗಿ ಕೆತ್ತಿದ್ದರೆ ಅದನ್ನು ದುಂಡುಶಿಲ್ಪವೆಂದೂ, ಮುಂಭಾಗವನ್ನು ಮಾತ್ರ ಕಾಣುವಂತೆ ಕೆತ್ತಿದ್ದರೆ ಉಬ್ಬುಶಿಲ್ಪವೆಂದೂ, ಬಟ್ಟೆ ಅಥವಾ ಗೋಡೆಗಳ ಮೇಲೆ ಬಿಡಿಸಿದ್ದ ಶಿಲ್ಪ ಚಿತ್ರವಾದರೆ ಚಿತ್ರಭಾಸವೆಂದೂ ಕರೆಯುವರು. ಪ್ರಾಚೀನ ಭಾರತದಲ್ಲಿ ಕಂಡುಬರುವ ಧರ್ಮಗಳೆಂದರೆ ಶೈವ, ವೈಷ್ಣವ, ಬೌದ್ಧ, ಜೈನ ಇತ್ಯಾದಿಗಳು. ಶಿಲ್ಪಗಳನ್ನು ಆಯಾ ಧರ್ಮದ ಹಿನ್ನೆಲೆಯಲ್ಲಿಯೂ ವಿಂಗಡಿಸಬಹುದು. ಶಿವನಿಗೆ ಸಂಬಂಧಿಸಿದ ಶಿಲ್ಪಗಳು ಶೈವ, ವಿಷ್ಣುವಿಗೆ ಸಂಬಂಧಿಸಿದ ಶಿಲ್ಪಗಳು ವೈಷ್ಣವ ಹೀಗೆ ಶಿಲ್ಪಶಾಸ್ತ್ರಗಳು ಸಹ ಇಂತಹ ವಿಂಗಡಣೆಯಾದಿಯಾಗಿ ಅವುಗಳ ಲಕ್ಷಣಾ ವಿವರಗಳನ್ನು ನೀಡಿರುವುದನ್ನು ಗಮನಿಸಬಹುದು.

ಶಿಲ್ಪದ ಪ್ರಾಚೀನತೆಯನ್ನು ಪ್ರಾಗಿತಿಹಾಸ ಕಾಲದಿಂದಲೇ ಗುರುತಿಸಬಹುದು. ಶಿಲಾಯುಗ ಕಾಲದಲ್ಲಿ ಪ್ರಾಚೀನ ಮಾನವ ತನ್ನ ಚಟುವಟಿಕೆಗಳನ್ನು ಅಂದರೆ ಪ್ರಾಣಿಗಳು, ಬೇಟೆ, ನರ್ತನದ ದೃಶ್ಯಗಳು ಹಾಗೂ ಅಂದಿನ ಸಾಮಾಜಿಕ ಸಂವೇದನೆಗಳನ್ನು ಚಿತ್ರಗಳ ಮೂಲಕ ತನ್ನ ಆಶ್ರಯ ತಾಣಗಳಾಗಿದ್ದ ಗುಹೆಗಳು, ಶಿಲಾಶ್ರಯಗಳ ಗೋಡೆ, ಛತ್ತುಗಳಲ್ಲಿ ಅಭಿವ್ಯಕ್ತಪಡಿಸಿರುವನು. ಇಂತಹ ಚಿತ್ರಗಳು ರಾಯಘರ್, ಪಾಚಮಾರಿ, ಭೂಪಾಲ, ರೈಸಿನ್, ಸಾಗರ್, ಗ್ವಾಲಿಯರ್, ಚಂಬಲ್ ಕಣಿವೆ ಭೀಂಬೆಟ್ಕಾ ಪ್ರದೇಶ, ಮಿರ್ಜಾಪುರ, ಅಲಹಾಬಾದ್, ವಾರಣಾಸಿ, ಆಗ್ರಾ, ಬಿಹಾರ್, ಒರಿಸ್ಸಾ ಮತ್ತು ಕರ್ನಾಟಕದ ಬಳ್ಳಾರಿ, ರಾಯಚೂರು, ಕೊಪ್ಪಳ, ಬಾಗಲಕೋಟೆ, ಚಿತ್ರದುರ್ಗ, ಗುಲಬರ್ಗಾ, ಶಿವಮೊಗ್ಗ, ದಕ್ಷಿಣ ಕನ್ನಡ ಮುಂತಾದವುಗಳಲ್ಲಿ ಹಾಗೂ ಆಂಧ್ರಪ್ರದೇಶ, ಕೇರಳ ತಮಿಳುನಾಡು ಮತ್ತು ಗೋವಾ ರಾಜ್ಯಗಳಲ್ಲಿಯೂ ಕಂಡುಬಂದಿವೆ.[೬] ಈ ರೀತಿಯ ಚಿತ್ರಕಲೆಯೇ ಮುಂದೆ ಶಿಲ್ಪಕಲೆಗೆ ಪ್ರೇರಕವಾಯಿತೆನ್ನಬಹುದು. ಮೊದಲು ರೇಖಾಚಿತ್ರ ಹಾಗೂ ಗೀರು ಚಿತ್ರಗಳಿಂದ ತನ್ನ ಸಂವೇದನೆಗಳನ್ನು ಅಭಿವ್ಯಕ್ತಪಡಿಸುತ್ತಿದ್ದ ಮಾನವನು ಕಾಲಕ್ರಮೇಣ ಶಿಲ್ಪ ರಚನೆಯನ್ನು ಕಂಡುಕೊಂಡನೆಂದು ಹೇಳಬಹುದು. ಹೀಗೆ ಶಿಲ್ಪಗಳ ರಚನೆ ಆರಂಭಗೊಂಡಿದ್ದಿರಬಹುದು. ಭಾರತೀಯ ಇತಿಹಾಸದಲ್ಲಿ ಶಿಲ್ಪಗಳು ದೊರೆಯುವುದು ಸಿಂಧೂ ನಾಗರಿಕತೆಯ ಕಾಲಘಟ್ಟದಿಂದ ಹಾಗೂ ಇವೇ ಪ್ರಾಚೀನ ಶಿಲ್ಪ ರಚನೆಗಳೂ ಎನಿಸಿವೆ. ಈ ಕಾಲಘಟ್ಟದಲ್ಲಿ ಶಿಲ್ಪಗಳು ಮರ, ಶಿಲೆ, ಲೋಹ ಹಾಗೂ ಸುಡಾವೆ ಮಣ್ಣಿನಿಂದ ರಚಿತಗೊಂಡಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಗಡ್ಡಧಾರಿ ವ್ಯಕ್ತಿಯ ಪ್ರತಿಮೆ, ಕಂಚಿನ ನರ್ತಕಿಯ ಶಿಲ್ಪ, ಗೂಳಿಯ ಪ್ರತಿಮೆಗಳು, ಚಿಕ್ಕ ಗಾತ್ರದ ಲಿಂಗಗಳು ಮತ್ತು ಮುದ್ರೆಯಲ್ಲಿ ದೊರೆತ ಪಶುಪತಿ ಮತ್ತು ಇತರ ಪ್ರಾಣಿಗಳ ಚಿತ್ರಗಳು ಹಾಗೂ ಇನ್ನೂ ಹಲವು ಸುಡಾವೆ ಮಣ್ಣಿನ ಮೂರ್ತಿಗಳು ಮತ್ತು ಆಟಿಕೆಗಳು. ಇವೆಲ್ಲವೂ ಇಂದಿಗೂ ಅಧ್ಯಯನದ ಚರ್ಚೆಯಲ್ಲಿ ಮಹತ್ವದ ಸ್ಥಾನವನ್ನು ಪಡೆದಿವೆ. ಇತಿಹಾಸ ಕಾಲಕ್ಕೆ ಬಂದಾಗ, ಭಾರತವನ್ನು ಆಳಿದ ಹಲವು ಅರಸು ಮನೆತನಗಳು ಶಿಲ್ಪಕಲೆಗೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಭಾರತದ ಇತಿಹಾಸವು ಆರಂಭವಾಗುವುದು ಮೌರ್ಯರಿಂದ. ಇವರು ಕಲೆಗೆ ಅತ್ಯಂತ ಪ್ರಾಮುಖ್ಯತೆ ನೀಡಿದ್ದರೆಂಬುದು ಇವರ ಕಾಲದಲ್ಲಿ ರಚಿತಗೊಂಡ ಹಾಗೂ ಇಂದಿಗೂ ನೋಡಲು ಲಭ್ಯವಿರುವ ಶಿಲ್ಪಾವಶೇಷಗಳೇ ಸಾಕ್ಷಿಯಾಗಿವೆ. ಪ್ರಮುಖವಾಗಿ ಸಾರಾನಾಥದ ನಾಲ್ಕು ಸಿಂಹಗಳ ಸ್ತಂಭವು ಇಂದು ನಮ್ಮ ಗಣತಂತ್ರದ ರಾಷ್ಟ್ರೀಯ ಲಾಂಛನವಾಗಿ ಗುರುತಿಸಲ್ಪಡುತ್ತಿರುವುದು ಇವರ ಕಲೆಗೆ ಸಂದ ಗೌರವ ಎಂದರೆ ಅತಿಶಯೋಕ್ತಿ ಎನಿಸದು. ಮೌರ್ಯರ ನಂತರ ಬಂದಂತಹ ಕುಷಾಣರು ಗಾಂಧಾರ ಕಲೆಯನ್ನು ಪರಿಚಯಿಸಿ ಕಲೆಯ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನು ಸೃಷ್ಟಿಸಿದರು. ಗುಪ್ತರ ಕಾಲವನ್ನಂತೂ ಭಾರತ ಇತಿಹಾಸದ ಸುವರ್ಣಯುಗ ಎಂದು ಕರೆಯಲಾಯಿತು. ಇವರು ಸಾಹಿತ್ಯ, ವಿಜ್ಞಾನ, ಕಲೆ, ಆಡಳಿತ, ಸಂಗೀತ ಹೀಗೆ ಎಲ್ಲ ಕ್ಷೇತ್ರಗಳಲ್ಲೂ ಅಭಿವೃದ್ಧಿ ಸಾಧಿಸಿದ್ದವರು. ಇವರು ಕಲೆಗೆ ನೀಡಿದ ಪ್ರೋತ್ಸಾಹ ಉಲ್ಲೇಖನೀಯ.

ದಕ್ಷಿಣದಲ್ಲಿ ಶಾತವಾಹನರು, ವೇಂಗಿಯ ಚಾಲುಕ್ಯರು, ಪಲ್ಲವರು, ಪಾಂಡ್ಯರು ಮತ್ತು ಚೋಳರು ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ ಕ್ಷೇತ್ರಕ್ಕೆ ಬೃಹತ್ ಕೊಡುಗೆಯನ್ನು ನೀಡಿರುವರು. ಮುಖ್ಯವಾಗಿ ತಮಿಳುನಾಡಿನ ಬೃಹತ್ ದೇವಾಲಯಗಳು ವಿಶೇಷಗಳಾಗಿದ್ದು, ಆಳವಾದ ಕೆತ್ತನೆಯಿಂದ ಕೂಡಿದ ಆಕರ್ಷಕ ಶಿಲ್ಪಗಳು ಅಲ್ಲಿ ಕಂಡುಬರುತ್ತವೆ. ಇನ್ನು ಕರ್ನಾಟಕದಲ್ಲಿ ಬಾದಾಮಿ ಚಾಲುಕ್ಯ, ಕದಂಬ, ಗಂಗ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳರು ಹಾಗೂ ವಿಜಯನಗರದ ಅರಸರು ಆಳ್ವಿಕೆ ನಡೆಸಿ ಕಲೆಯ ಕ್ಷೇತ್ರದಲ್ಲಿ, ಇತಿಹಾಸದ ಪುಟಗಳಲ್ಲಿ ತಮ್ಮದೇ ಆದ ಛಾಪು ಮೂಡಿಸಿದ್ದಾರೆ. ಮುಖ್ಯವಾಗಿ ಬಾದಾಮಿ ಚಾಲುಕ್ಯರು ಮತ್ತು ರಾಷ್ಟ್ರಕೂಟರು ತಮ್ಮ ಗುಹಾ ದೇವಾಲಯಗಳ ರಚನೆ ಮತ್ತು ಹಲವು ಬೃಹತ್‌ಗಾತ್ರದ ಹಾಗೂ ಜಗತ್ಪ್ರಸಿದ್ಧ ಶಿಲ್ಪಗಳನ್ನು ಕಂಡಿರಿಸಿರುವುದಕ್ಕೆ ಹೆಸರು ವಾಸಿಯಾಗಿದ್ದಾರೆ. ಹಾಗೆಯೇ, ಹೊಯ್ಸಳರು ಅತ್ಯಂತ ನಾಜೂಕಾದ ಅತಿ ಅಲಂಕೃತ ಶಿಲ್ಪಗಳ ಕೆತ್ತನೆಯಿಂದಾಗಿ ಪ್ರಸಿದ್ಧಿ ಪಡೆದಿರುವರು.

ಕರ್ನಾಟಕದಲ್ಲಿ ಹೊಯ್ಸಳರ ನಂತರ ಸುಮಾರು ೩ ಶತಮಾನಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿದವರು ವಿಜಯನಗರ ಅರಸರು. ಕ್ರಿ.ಶ.೧೩೩೬ರಲ್ಲಿ ಉದಯಿಸಿದ ಈ ಸಾಮ್ರಾಜ್ಯವು ದಕ್ಷಿಣ ಭಾರತದಲ್ಲಿಯೇ ಪ್ರಬಲ ಸಾಮ್ರಾಜ್ಯವಾಗಿ ಹೊರಹೊಮ್ಮಿತು. ಹೊಯ್ಸಳರ ಕೊನೆಗಾಲದಲ್ಲಿ ದಕ್ಷಿಣ ಭಾರತವು ಪರಕೀಯರ ಧಾಳಿಗಳಿಂದ ತತ್ತರಿಸಿ ಹೋಗಿತ್ತು. ಇಂತಹ ಸಂದರ್ಭದಲ್ಲಿ ಉದಯಿಸಿದ ವಿಜಯನಗರ ಸಾಮ್ರಾಜ್ಯವು ನಾಡಿನ ಸಂಸ್ಕೃತಿಯನ್ನು ಮತ್ತೆ ನೆಲೆಯೂರುವಂತೆ ಮಾಡಿತು. ಇದರ ವ್ಯಾಪ್ತಿಯು ಕರ್ನಾಟಕಕ್ಕೆ ಸೀಮಿತವಾಗಿರದೆ ಇಡೀ ದಕ್ಷಿಣ ಭಾರತವನ್ನೇ ವ್ಯಾಪಿಸಿತ್ತು. ಈ ಸಾಮ್ರಾಜ್ಯವನ್ನು ಸಂಗಮ (೧೩೩೬–೧೪೮೫), ಸಾಳುವ (೧೪೮೫–೧೫೦೩), ತುಳುವ (೧೫೦೩–೫೫) ಹಾಗೂ ಅರವೀಡು (೧೫೫೫–೧೬೪೬) ಎಂಬ ನಾಲ್ಕು ರಾಜವಂಶಗಳು ಆನೆಗೊಂದಿ, ಹಂಪೆ ಮತ್ತು ಪೆನುಗೊಂಡಗಳನ್ನು ರಾಜಧಾನಿಯನ್ನಾಗಿಸಿಕೊಂಡು ಆಳ್ವಿಕೆ ಮಾಡಿದರು. ಪ್ರಸ್ತುತ ಅಧ್ಯಯನ ವಿಷಯವು ಆನೆಗೊಂದಿಯಿಂದ ಬದಲಾಯಿಸಿಕೊಂಡ ಹಾಗೂ ಅವರ ಪ್ರಸಿದ್ಧ ರಾಜಧಾನಿ ಎನಿಸಿಕೊಂಡ ಹಂಪೆ ಮತ್ತು ಅದರ ಸುತ್ತಮುತ್ತಲಿನ ಪರಿಸರಕ್ಕೆ ಸಂಬಂಧಿಸಿದುದಾಗಿದೆ. ವಿಜಯನಗರದ ಅರಸರು ಕಲೆ, ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಕ್ಕೆ ನೀಡಿದ ಕೊಡುಗೆಯು ಅಮೂಲ್ಯವಾದುದು. ಇದನ್ನು ಹಂಪಿಯಲ್ಲಿ ದೊರೆತ ಶಾಸನಗಳ ಮೂಲಕ ಸಂಕ್ಷಿಪ್ತವಾಗಿ ಈ ಕೆಳಗಿನಂತೆ ತಿಳಿಯಬಹುದು.

ಸಂಗಮನ ಮಕ್ಕಳಾದ ಹರಿಹರ, ಕಂಪಣ, ಬುಕ್ಕ, ಮುದ್ದಪ್ಪ, ಮಾರಪ್ಪ ಎಂಬ ಐದು ಜನ ಸಹೋದರರಿಂದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಯಿತು. ತಮ್ಮ ವಂಶವನ್ನು ತಂದೆಯ ಹೆಸರಿನಿಂದಲೇ ಗುರುತಿಸಿಕೊಂಡಿದ್ದರಿಂದ ಸಂಗಮ ವಂಶ ಎಂಬ ಹೆಸರು ಬಂದಿತು. ಇವರ ಕಾಲದಿಂದಲೇ ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳು ರಚನೆಯಾದುದು ಶಾಸನಗಳಿಂದ ತಿಳಿದುಬರುತ್ತದೆ. ಮೊದಲ ಅರಸರಾದ ಹರಿಹರ ಮತ್ತು ಬುಕ್ಕರಾಯನ ಕಾಲದಲ್ಲಿ ಹಂಪಿ ಪರಿಸರದಲ್ಲಿ ದೇವಾಲಯ ಮತ್ತು ಮೂರ್ತಿಶಿಲ್ಪಗಳ ರಚನೆಯಾದುದರ ಉಲ್ಲೇಖಗಳು ಸಿಗುವುದಿಲ್ಲ. ಆದರೆ ಬುಕ್ಕರಾಯನ ಕಾಲದಲ್ಲಿ ಶ್ರವಣಬೆಳಗೊಳದಲ್ಲಿ ಜೈನರಿಗೂ, ಶ್ರೀವೈಷ್ಣವರಿಗೂ ಕಲಹವಾದಾಗ ಅರಸನು

ಅವರನ್ನು ಸಮಾಧಾನಗೊಳಿಸಿ ಎಲ್ಲ ಧರ್ಮಗಳು ಒಂದೇ ಎರಡರಲ್ಲೂ ಭೇದವಿಲ್ಲ ಎಂದು ಉಪದೇಶಿಸಿ ಅವರನ್ನು ಸಂತೈಸಿದ ಘಟನೆಯು ಅವನ ಧಾರ್ಮಿಕ ನೀತಿಗೆ ಸಾಕ್ಷಿಯಾಗಿದೆ. ಬುಕ್ಕರಾಯನ ನಂತರದಲ್ಲಿ ಆಳ್ವಿಕೆಗೆ ಬಂದ ಇಮ್ಮಡಿ ಹರಿಹರನ ಕಾಲದಲ್ಲಿ ಹಲವು ದೇವಾಲಯಗಳ ನಿರ್ಮಾಣ ಮತ್ತು ಮೂರ್ತಿಶಿಲ್ಪಗಳ ಪ್ರತಿಷ್ಠಾಪನೆಯಾದುದು ಇವನ ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ.೧೩೭೯ರ ಶಾಸನವು[೭] ಶ್ರೀ ನಲಾನುಚಕ್ರವರ್ತಿ ಅಯ್ಯ ಎನ್ನುವವನು ಪಂಪಾತೀರದಲ್ಲಿ ನರಸಿಂಹ ದೇವರ ಮಂಟಪವನ್ನು ಕಟ್ಟಿಸಿದನೆಂದು ಹಾಗೂ ಕ್ರಿ.ಶ.೧೩೮೦ರ ಶಾಸನವು[೮] ಮಲಗೆನಾಯ್ಕನ ಮಗ ಬದ್ದೆಯನಾಯ್ಕನು ಬೇಟೆಗಾರರ ಹೆಬ್ಬಾಗಿಲಿನ ಪೂರ್ವದಿಕ್ಕಿನಲ್ಲಿ ಒರತೆಯ ಮೈಲಾರ ದೇವರನ್ನು ಪ್ರತಿಷ್ಠಾಪಿಸಿದನೆಂದೂ, ಕ್ರಿ.ಶ.೧೩೮೧ರ ಶಾಸನವು[೯] ಪಂಪಾಕ್ಷೇತ್ರದ ನರಸಿಂಹದೇವರ ಪಶ್ಚಿಮಕ್ಕೆ ಕ್ಷೇತ್ರಪಾಲನ ಮತ್ತು ಸಂನಂಜೆನಾಥನ ಸಿವಾಲಯವನ್ನು ಭಯಿರಿಸೆಟ್ಟಿಯ ಮಗ ಸಂತದ ಹಿರಿಯತಂಮ ಮತ್ತು ಚಿಕ್ಕತಂಮ ಮಾಡಿದರೆಂದೂ ಶಾಸನ ಉಲ್ಲೇಖಗಳು ದೊರೆಯುತ್ತವೆ. ಅಲ್ಲದೆ ಕ್ರಿ.ಶ.೧೩೮೬ರ ಶಾಸನವು[೧೦] ಹರಿಹರನ ಮಂತ್ರಿ ಬೈಚಪನ ಮಗ ಇರುಗಪನು ವಿಜಯನಗರದಲ್ಲಿ ಕುಂಥುಜಿನಾಲಯವನ್ನು ಶಿಲೆಯಲ್ಲಿ ನಿರ್ಮಿಸಿದನೆಂದೂ ಮತ್ತು ಕ್ರಿ.ಶ.೧೩೯೭ರ ಶಾಸನವು[೧೧] ವೀರ ಹರಿಹರನ ರಾಣಿ ಬುಕ್ಕವೆಯು ಜಡೆಯ ಶಂಕರದೇವರ ಮುಂದೆ ದೀಪಮಾಲೆ ಕಂಬವನ್ನು ಮಾಡಿಸಿದ್ದನ್ನು ಉಲ್ಲೇಖಿಸುತ್ತದೆ. ಹೀಗೆ ಹರಿಹರನ ಕಾಲದಲ್ಲಿ ದೇವಾಲಯ ಮತ್ತು ಮೂರ್ತಿಶಿಲ್ಪ ಪ್ರತಿಷ್ಠಾಪನೆಗೆ ಹೆಚ್ಚು ಪ್ರಾಶಸ್ತ್ಯ ನೀಡಿದನೆಂದು ಶಾಸನಗಳಿಂದ ತಿಳಿಯುತ್ತದೆ. ಹರಿಹರನ ನಂತರ ಬಂದಂತಹ ೧ನೇ ದೇವರಾಯ ಮತ್ತು ೨ನೇ ದೇವರಾಯರ ಕಾಲದಲ್ಲೂ ಈ ಕಾರ್ಯವು ಮುಂದುವರೆಯಿತು. ೧ನೇ ದೇವರಾಯನ ಕಾಲದ ಕ್ರಿ.ಶ.೧೪೧೦ರ ಶಾಸನವು[೧೨] ಅವನ ಮಂತ್ರಿ ಲಕ್ಷ್ಮೀಧರನು ಮಹಾಶಕ್ತಿ ಹೇರಂಭನನ್ನು ಪ್ರತಿಷ್ಠಾಪಿಸಿದ್ದನ್ನು ಉಲ್ಲೇಖಿಸುತ್ತದೆ ಹಾಗೂ ಕ್ರಿ.ಶ.೧೪೨೬ರ ಶಾಸನವು[೧೩] ದೇವರಾಯನು ವಿಜಯನಗರದ ಕ್ರಮುಕ ಪರ್ಣಾಪಣ(ಪಾನಸುಪಾರಿ ಬಜಾರ)ಬೀದಿಯಲ್ಲಿ ಪಾರ್ಶ್ವ ಚೈತ್ಯಾಲಯವನ್ನು ಕಟ್ಟಿಸಿದ್ದನ್ನು ಉಲ್ಲೇಖಿ ಸುತ್ತದೆ. ಅಲ್ಲದೆ ಹಂಪೆಯ ಹಜಾರರಾಮ ದೇವಾಲಯವು ಒಂದನೇ ದೇವರಾಯನ ಕಾಲದಲ್ಲಿ ಕಟ್ಟಲ್ಪಟ್ಟಿರಬೇಕೆಂದು ವಿದ್ವಾಂಸರು ಅಭಿಪ್ರಾಯಿಸುತ್ತಾರೆ.[೧೪] ಎರಡನೇ ದೇವರಾಯನ ಕಾಲದಲ್ಲಿ ಕ್ರಿ.ಶ.೧೪೩೯ರ ಶಾಸನವು[೧೫] ದೇವರಾಯನ ಕಟಿಗೆ ಸೇವೆಯ ಅಹಮದಖಾನನ ಧರ್ಮಶಾಲೆಯನ್ನು ಕಟ್ಟಿಸಿದುದನ್ನು ಮತ್ತು ಕ್ರಿ.ಶ.೧೪೫೫ರ ಶಾಸನವು[೧೬] ರಾಯಪಣ್ಣ ಎಂಬುವವನು ಸೌಮ್ಯ ಸೋಮೇಶ್ವರ ದೇವಾಲಯವನ್ನು ಕಟ್ಟಿಸಿದ ಉಲ್ಲೇಖವನ್ನು ತಿಳಿಸುತ್ತದೆ.

ತುಳುವ ಅರಸುಮನೆತನದ ಆಳ್ವಿಕೆಯ ಕಾಲವು ವಿಜಯನಗರದ ಇತಿಹಾಸಕ್ಕೆ ಶಿಖರಪ್ರಾಯವನ್ನು ಒದಗಿಸಿದೆ. ಇವರ ಪ್ರಸಿದ್ಧ ಅರಸ ಕೃಷ್ಣದೇವರಾಯ. ಈತನ ಆಳ್ವಿಕೆಯ ಕಾಲದಲ್ಲಿ ಕಲೆ, ವಾಸ್ತುಶಿಲ್ಪ, ಮೂರ್ತಿಶಿಲ್ಪಗಳ ರಚನೆಗಳು ಅಧಿಕಗೊಂಡವು ಹಾಗೂ ದೇವಾಲಯಗಳಿಗೆ ಭೂದಾನ, ಸ್ವರ್ಣದಾನ, ಪೂಜಾ ಪರಿಕರಗಳ ದಾನ ಕಾರ್ಯಗಳು ವಿಪುಲವಾಗಿ ನಡೆದವು. ಕ್ರಿ.ಶ.೧೫೧೦ರ ಶಾಸನವು[೧೭] ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ಸಂದರ್ಭದಲ್ಲಿ ವಿರೂಪಾಕ್ಷ ದೇವರ ಮುಂದಿನ ರಂಗಮಂಟಪ, ಅದರ ಮುಂದಿನ ಗೋಪುರವನ್ನು ಕಟ್ಟಿಸಿದುದು ಮತ್ತು ಹಿರಿಯ ಗೋಪುರವನ್ನು ಜೀರ್ಣೋದ್ಧಾರ

ಮಾಡಿಸಿದುದನ್ನು ಉಲ್ಲೇಖಿಸುತ್ತದೆ. ಕ್ರಿ.ಶ.೧೫೧೩ರ ಶಾಸನವು[೧೮] ಉದಯಗಿರಿಯಿಂದ ತೆಗೆದುಕೊಂಡು ಬಂದಂಥಾ ಶ್ರೀ ಬಾಲಕೃಷ್ಣ ದೇವರ ವಿಗ್ರಹವನ್ನು ಪ್ರತಿಷ್ಠೆ ಮಾಡಿದುದನ್ನು ಹಾಗೂ ಕ್ರಿ.ಶ.೧೫೧೩ರ ಇನ್ನೊಂದು ಶಾಸನವು[೧೯] ಈತನ ರಾಣಿಯರಾದ ಚಿನ್ನಾದೇವಿ ಮತ್ತು ತಿರುಮಲ ದೇವಿಯರು ಶ್ರೀ ವಿಠಲದೇವರಿಗೆ ಗೋಪುರಗಳನ್ನು ಕಟ್ಟಿಸಿದ್ದನ್ನು ಹಾಗೂ ಕ್ರಿ.ಶ.೧೫೧೬ರ ಶಾಸನವು[೨೦] ಕೃಷ್ಣದೇವರಾಯನು ಇದೇ ದೇವರಿಗೆ ನೂರು ಕಂಬಗಳ ಮಂಟಪವನ್ನು ಮಾಡಿಸಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ.೧೫೨೪ರ ಶಾಸನವು[೨೧] ಕೃಷ್ಣಾಪುರದಲ್ಲಿ ಲಕ್ಷ್ಮೀನರಸಿಂಹ ದೇವರನ್ನು ಪ್ರತಿಷ್ಠಾಪನೆ ಮಾಡಿದುದನ್ನು ಉಲ್ಲೇಖಿಸುತ್ತದೆ.

ಕೃಷ್ಣದೇವರಾಯನ ನಂತರ ಆಳ್ವಿಕೆಗೆ ಬಂದ ಅಚ್ಯುತದೇವರಾಯನ ಕಾಲದಲ್ಲಿ ಆತನಿಗಿಂತಲೂ ಹೆಚ್ಚು ಪ್ರಮಾಣದಲ್ಲಿ ದಾನದತ್ತಿ ನೀಡುವ ಕಾರ್ಯಗಳು ನಡೆದವು. ಹಾಗೆಯೇ ವಿವಿಧ ದೇವರ ಪ್ರತಿಷ್ಠೆಕಾರ್ಯವು ನಡೆದವು. ಕ್ರಿ.ಶ.೧೫೩೨ರ ಶಾಸನವು[೨೨] ವ್ಯಾಸತೀರ್ಥರು ವರದ ನರಹರಿಯನ್ನು ಪ್ರತಿಷ್ಠಾಪಿಸಿದರು ಎಂದು, ಕ್ರಿ.ಶ.೧೫೩೫ರ ಶಾಸನವು[೨೩] ಅಚ್ಯುತದೇವರಾಯನ ಮಂಡಳೇಶ್ವರನಾದ ಸಲಕರಾಜ ಒಡೆಯನ ಮಗನು ಹಿರಿಯ ತಿರುಮಲರಾಜ ಒಡೆಯನು ತುಂಗಭದ್ರಾ ತೀರದಲ್ಲಿ ಶ್ರೀ ತಿರುವೆಂಗಳನಾಥ ದೇವರ ಪ್ರತಿಷ್ಠೆ ಮಾಡಿಸಿದ್ದನ್ನು ಉಲ್ಲೇಖಿಸುತ್ತವೆ ಮತ್ತು ಕ್ರಿ.ಶ.೧೫೩೫ರ[೨೪] ಮತ್ತೊಂದು ಶಾಸನವು ತಿಪ್ಪಿಸೆಟ್ಟಿಯು ೧೨ ಆಳ್ವಾರರು ಮತ್ತು ತಿರುಕಂಚಿನಂಬಿಯಾಳ್ವಾರರ ಒಂದು ವಿಗ್ರಹ ಸೇರಿದಂತೆ ೧೩ ವಿಗ್ರಹಗಳನ್ನು ಪ್ರತಿಷ್ಠೆ ಮಾಡಿದುದನ್ನು ಮತ್ತು ಕ್ರಿ.ಶ.೧೫೪೦ರ ಶಾಸನವು[೨೫] ತಿಮ್ಮರಾಜನು ವರದರಾಜ ಅಮ್ಮನ ಪಟ್ಟಣ ದಿಕ್ಕಿನ ಪೆನುಗೊಂಡೆ ಬಾಗಿಲ ಬಳಿ ರಘುನಾಥ ದೇವರನ್ನು ಪ್ರತಿಷ್ಠೆ ಮಾಡಿಸಿದುದನ್ನು ಉಲ್ಲೇಖಿಸುತ್ತದೆ. ಹಾಗೆಯೇ ಮುಂದೆ ಬಂದಂತಹ ಸದಾಶಿವರಾಯನೂ ಸಹ ಇದೇ ಕಾರ್ಯಗಳನ್ನು ಮುಂದುವರಿಸಿದನು. ಈತನ ಕಾಲದ ಕ್ರಿ.ಶ.೧೫೪೫ರ ಶಾಸನವು[೨೬] ಜಂಗಮಯ್ಯನು ಕೃಷ್ಣಾಪುರ ಪೇಟೆಯ ಹಿರಿಯ ಕಾಲುವೆ ಛತ್ರದ ಬಳಿ ಮುದ್ದು ವೀರಣ್ಣನನ್ನು(ಉದ್ದಾನ ವೀರಭದ್ರ) ಪ್ರತಿಷ್ಠಾಪಿಸಿದ ಹಾಗೂ ಕ್ರಿ.ಶ.೧೫೪೫ರ ಶಾಸನವು[೨೭] ದೊಡ್ಡ ಅಂಗಡಿ ಬೀದಿಯ ಪಶ್ಚಿಮಕ್ಕೆ ಇರುವ ಮಾಧವದೇವರಿಗೆ ೨೫ ಅಂಕಣಗಳ ರಂಗಮಂಟಪವನ್ನು ಕಟ್ಟಿಸಿದ್ದನ್ನು ಮತ್ತು ಕ್ರಿ.ಶ.೧೫೫೪ರ[೨೮] ಶಾಸನವು ಅಲವೇಲ ಮಂಗಮ್ಮನ ದೇವಾಲಯವನ್ನು ಕಟ್ಟಿಸಿದ್ದನ್ನು ಹಾಗೂ ಕ್ರಿ.ಶ.೧೫೫೬ರ ಶಾಸನವು[೨೯] ಶ್ರೀ ವಿಠಲೇಶ್ವರ ದೇವಾಲಯದ ಪ್ರಾಕಾರದ ಒಳಗೆ ವಾಯುವ್ಯದಲ್ಲಿ ತಿರುಮಂಗೈಯಾಳ್ವಾರಿಗೆ ಗರ್ಭಗೃಹ, ಸುಕನಾಸಿ, ಅಂತರಾಳ, ರಂಗಮಂಟಪಗಳನ್ನು ಕಟ್ಟಿಸಿದ್ದನ್ನು ಉಲ್ಲೇಖಿಸುತ್ತವೆ.

ಹೀಗೆ ಮೇಲೆ ತಿಳಿಸಿದ ಎಲ್ಲ ಶಾಸನಗಳು ವಿಜಯನಗರದ ಅರಸರು ದೇವಾಲಯ ನಿರ್ಮಾಣ, ಜೀರ್ಣೋದ್ಧಾರ ಮತ್ತು ಮೂರ್ತಿಶಿಲ್ಪಗಳ ಪ್ರತಿಷ್ಠಾಪನೆ ಮಾಡಿದುದನ್ನು ತಿಳಿಸುತ್ತವೆ. ಇವುಗಳಿಂದ ಇವರು ಆ ಕಾಲದಲ್ಲಿ ಶೈವ, ವೈಷ್ಣವ, ಜೈನ ಮತ್ತು ಇಸ್ಲಾಂ ಧರ್ಮಗಳನ್ನು ಸಮಾನವಾಗಿ ಕಂಡು ಅವುಗಳನ್ನು ಪೋಷಿಸಿದರು ಎಂದು ತಿಳಿಯುತ್ತದೆ. ಮೇಲಿನ ಶಾಸನ ಉಲ್ಲೇಖಿತ ದೇವಾಲಯ ಹಾಗೂ ಮೂರ್ತಿಶಿಲ್ಪಗಳ ಹೊರತಾಗಿಯೂ ಹಂಪಿ ಪ್ರದೇಶದಲ್ಲಿ ಇನ್ನೂ ಹಲವು ದೇವಾಲಯ, ಮಂಟಪ ಮತ್ತು ಮೂರ್ತಿಶಿಲ್ಪಗಳು ಕಂಡುಬರುತ್ತವೆ.

ಹಂಪೆಯನ್ನು ಪಂಪೆ, ಪಂಪಾ, ಪಂಪಾವರಕ್ಷೇತ್ರ, ಭಾಸ್ಕರ ಕ್ಷೇತ್ರ ಎಂದು ಹತ್ತು ಹಲವು ಹೆಸರುಗಳಿಂದ ಕರೆಯಲಾಗಿದೆ. ತುಂಗಭದ್ರ ನದಿಯ ಬಲದಂಡೆಯ ಮೇಲಿರುವ ಹಂಪೆಯು ಪ್ರಸ್ತುತ ಪ್ರಸಿದ್ಧ ಪ್ರೇಕ್ಷಣೀಯ ಸ್ಥಳವೆನಿಸಿದೆ. ವಿರೂಪಾಕ್ಷನನ್ನು ಅಧಿದೈವವನ್ನಾಗಿಸಿಕೊಂಡ ಈ ಪ್ರದೇಶವು ರಾಶಿ ರಾಶಿ ಸಣ್ಣ-ದೊಡ್ಡ ಕಲ್ಲುಬಂಡೆಗಳನ್ನೇ ಹೊತ್ತು ನಿಂತ ಬೆಟ್ಟಗಳಿಂದ ಆವೃತವಾಗಿದೆ. ಹೆಜ್ಜೆ ಹೆಜ್ಜೆಗೂ ದೊರೆಯುವ ಭಗ್ನ ಸ್ಮಾರಕಗಳು ಅಂದಿನ ಗತವೈಭವಕ್ಕೆ ಸಾಕ್ಷಿಯಾಗಿವೆ. ಸುಸ್ಥಿತಿಯಲ್ಲಿರುವ ಹಲವು ದೊಡ್ಡ ಹಾಗೂ ಸಣ್ಣ ದೇವಾಲಯಗಳು ವಿಜಯನಗರ ವಾಸ್ತು ವೈಖರಿಯನ್ನು ತಿಳಿಸಿದರೆ ಆ ದೇವಾಲಯದ ಅಧಿಷ್ಠಾನ, ಭಿತ್ತಿ, ಕಂಬ ಹಾಗೂ ಗೋಪುರಗಳಲ್ಲಿ ಕಂಡರಿಸಲಾಗಿರುವ ಶಿಲ್ಪಗಳು ಅಂದಿನ ಧಾರ್ಮಿಕ ಮತ್ತು ಸಾಮಾಜಿಕ ಜೀವನದ ದೃಶ್ಯವನ್ನು ಕಣ್ಣಿಗೆ ಕಟ್ಟುವಂತೆ ಭಿತ್ತರಿಸುತ್ತವೆ. ಇಂತಹ ಶಿಲ್ಪಗಳ ಕುರಿತು ಅಧ್ಯಯನಗಳು ನಡೆದಿವೆ. ಹಾಗೂ ನಡೆಯುತ್ತಿವೆ. ಪ್ರಸ್ತುತ 'ಹಂಪಿ ಪರಿಸರದ ಶೈವ ಶಿಲ್ಪಗಳು' ಎಂಬ ಶೀರ್ಷಿಕೆಯಡಿಯಲ್ಲಿ ಅಧ್ಯಯನವನ್ನು ಕೈಗೊಳ್ಳುವುದರ ಮೂಲಕ ಇಂತಹ ಮತ್ತೊಂದು ಪ್ರಯತ್ನವನ್ನು ಮಾಡಲಾಗಿದೆ.

## ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಹಂಪಿಯು ನಿಸರ್ಗದತ್ತವಾಗಿ ಪಡೆದಿರುವ ಚೆಲುವಿನಿಂದ ಒಂದು ಪ್ರೇಕ್ಷಣೀಯ ಸ್ಥಳವೆನಿಸಿದೆ. ಇಂದಿಗೂ ಜೀವಂತವಾಗಿ ನಿಂತ ಹಲವು ಪ್ರಾಚೀನ ದೇವಾಲಯಗಳು ಮತ್ತು ಇತರ ಸ್ಮಾರಕಗಳಿಂದಾಗಿ ವಿಶ್ವಪಂಪರೆಯ ಐತಿಹಾಸಿಕ ತಾಣವೆಂದು ಗುರುತಿಸಲ್ಪಟ್ಟ ಇದು ಇಂದಿಗೂ ಸಂಶೋಧನಾಕಾರರಿಗೆ ಕುತೂಹಲ ಪ್ರದೇಶವೆನಿಸಿದೆ. ಈ ಹಿನ್ನೆಲೆಯಲ್ಲಿ ಇಲ್ಲಿ ಭೇಟಿ ನೀಡಿದ ಹಲವು ವಿದ್ವಾಂಸರು ಇಲ್ಲಿಯ ಪ್ರಾಚೀನತೆ, ಸಾಮ್ರಾಜ್ಯದ ಉದಯ, ಸ್ಥಳೀಯ ಆಡಳಿತ, ರಾಜಕೀಯ ಚರಿತ್ರೆ, ಆರ್ಥಿಕತೆ, ಸಾಮಾಜಿಕ ಜೀವನ, ಧರ್ಮ ಮತ್ತು ದೇವಾಲಯಗಳು ಹಾಗೂ ಶಿಲ್ಪಗಳು ಹೀಗೆ ಹಲವು ವಿಷಯಗಳ ಕುರಿತು ಅಧ್ಯಯನ ನಡೆಸಿ ತಮ್ಮ ಅಭಿಪ್ರಾಯಗಳನ್ನು ತಮ್ಮ ಕೃತಿಗಳಲ್ಲಿ ಅಭಿವ್ಯಕ್ತಪಡಿಸಿದ್ದಾರೆ. ಹಂಪಿಯಲ್ಲಿನ ಶಿಲ್ಪಗಳ ಕುರಿತು ಕೆಲವು ಅಧ್ಯಯನಗಳು ನಡೆದಿವೆ. ಅವುಗಳೆಂದರೆ ಕೆ.ಎಂ.ಸುರೇಶ ಅವರ Sculptural Art of Hampi(2003), ಮತ್ತು Vijayanagara Sculptures at Hampi (2011) ಈ ಎರಡು ಕೃತಿಗಳು ಹಂಪಿಯಲ್ಲಿನ ಶಿಲ್ಪಗಳ ಕುರಿತದ್ದಾಗಿವೆ. Sculptural Art of Hampi(2003) ಎಂಬ ಕೃತಿಯಲ್ಲಿ ಲೇಖಕರು ಏಳು ಗ್ರಾಮಗಳನ್ನು ಮಾತ್ರ ಅನುಲಕ್ಷಿಸಿ ಅವುಗಳಲ್ಲಿ ದೊರೆಯುವ ಎಲ್ಲ ರೀತಿಯ ಶಿಲ್ಪಗಳನ್ನು ಕುರಿತು ವಿವರಿಸಿರುವರು. ಆದರೆ ಕೆಲವು ಶಿಲ್ಪಗಳ ವಿವರಣೆ ಮಾತ್ರ ನೀಡಿದ್ದರಿಂದ ಇದನ್ನು ಸರಿಪಡಿಸಲು Vijayanagara Sculptures at Hampi(2011) ಎಂಬ ಕೃತಿಯನ್ನು ಬರೆದಿರುವರು. ಈ ಕೃತಿಯು ಹಿಂದಿನ ಕೃತಿಯ ಪರಿಷ್ಕೃತ ಆವೃತ್ತಿಯೇ ಆಗಿದೆ. ಇದರಲ್ಲಿ ಹಿಂದಿನ ಗ್ರಂಥದಲ್ಲಿಯ ವಿವರಣೆಗಳೊಂದಿಗೆ ಇನ್ನೂ ಹಲವು ಶಿಲ್ಪಗಳನ್ನು ಸೇರಿಸಿ ಅವುಗಳನ್ನು, ಅವುಗಳ ಪ್ರತಿಮಾ ಲಕ್ಷಣಗಳೊಂದಿಗೆ ವಿವರಿಸಲಾಗಿದೆ ಹಾಗೂ ಆಗಮಗಳಲ್ಲಿರುವ ಲಕ್ಷಣಗಳನ್ನೂ ಉಲ್ಲೇಖಿಸಿರುವರು. ಹೀಗೆ ಹಂಪಿಯ ಶಿಲ್ಪಗಳನ್ನು ಕುರಿತಾಗಿಯೇ ಇರುವ ಈ ಕೃತಿಯು ನನ್ನ ಅಧ್ಯಯನಕ್ಕೆ ಮಹತ್ವದ ಆಕರವಾಗಿದೆ. ಆದರೆ ಈ ಕೃತಿಯಲ್ಲಿ ಆಗಮಗಳನ್ನು ಉಲ್ಲೇಖಿಸಿರುವರೆ ವಿನಃ ಅವುಗಳನ್ನು ಶಿಲ್ಪಗಳಿಗೆ

ಅನ್ವಯಿಸಿ ಅವುಗಳು ಆಗಮಗಳ ಹಿನ್ನೆಲೆಯಲ್ಲಿ ಕೆತ್ತಲ್ಪಟ್ಟಿವೆಯೋ ಇಲ್ಲವೆ ಎಂಬುದನ್ನು ತಿಳಿಸಿರುವುದಿಲ್ಲ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಇದೇ ವಿಷಯವನ್ನು ಮುಖ್ಯ ಉದ್ದೇಶವನ್ನಾಗಿರಿಸಿ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಹಂಪಿಯಲ್ಲಿನ ಶಿಲ್ಪಗಳನ್ನು ಕುರಿತು ಇನ್ನೊಂದು ಪ್ರಮುಖ ಕೃತಿಯೆಂದರೆ ಅನ್ನಾ ಡಲ್ಲಾಪಿಕೊಲಾ ಹಾಗೂ ಅನಿಲಾ ವರ್ಗೀಸ್ ಅವರ Sculpture at Vijayanagara: Iconography and Style. ಈ ಕೃತಿಯಲ್ಲಿಯೂ ಲೇಖಕರು ಹಂಪಿ ಪರಿಸರದಲ್ಲಿನ ಶಿಲ್ಪಗಳನ್ನು ವಿವರಿಸಿರುವರು. ಇದರಲ್ಲಿ ಅವರು ಆಗಮ ಮತ್ತು ಪುರಾಣಗಳನ್ನು ಉಲ್ಲೇಖಿಸದೆ ಆಯಾ ಶಿಲ್ಪಗಳ ಲಕ್ಷಣಗಳನ್ನು ಸಂಕ್ಷಿಪ್ತವಾಗಿ ವಿವರಿಸಿರುವರು. ಇವರೂ ಸಹ ಎಲ್ಲ ಶಿಲ್ಪಗಳೊಂದಿಗೆ ಶೈವ ಶಿಲ್ಪಗಳನ್ನು ವಿವರಿಸಿದ್ದು, ಅವು ದೀರ್ಘವಾದ ವಿವರಣೆಯನ್ನು ಒಳಗೊಂಡಿರುವುದಿಲ್ಲ ಮತ್ತು ಯಾವುದೇ ಆಗಮ ಮತ್ತು ಪುರಾಣಗಳನ್ನು ಬಳಸಿಕೊಂಡಿಲ್ಲ. ಹೀಗೆ ಸಂಕ್ಷಿಪ್ತ ವಿವರಗಳನ್ನು ಮಾತ್ರ ತಿಳಿಸುತ್ತಿದ್ದರೂ ಹಂಪಿಯ ಶಿಲ್ಪಗಳ ಕುರಿತು ಇರುವ ಕೆಲವೇ ಅಧ್ಯಯನಗಳಲ್ಲಿ ಇದೂ ಒಂದಾಗಿದ್ದರಿಂದ ನನ್ನ ಅಧ್ಯಯನಕ್ಕೆ ಪೂರಕವಾದದ್ದಾಗಿದೆ.

ಹಂಪಿ ಪರಿಸರದ ಶಿಲ್ಪಗಳ ಕುರಿತು ಮಾಹಿತಿಯನ್ನು ಒದಗಿಸುವ ಇನ್ನೊಂದು ಕೃತಿಯೆಂದರೆ ಅನಿಲಾ ವರ್ಗೀಸ್ ಅವರ Religious Tradition at Vijayanagara ಈ ಕೃತಿಯಲ್ಲಿ ಲೇಖಕರು ಹಂಪಿಯಲ್ಲಿನ ಧಾರ್ಮಿಕ ಹಿನ್ನೆಲೆಯನ್ನು ದೀರ್ಘವಾಗಿ ಚರ್ಚಿಸಿ ನಂತರದಲ್ಲಿ ಆಯಾ ಧರ್ಮಕ್ಕೆ ಸಂಬಂಧಿಸಿದ ಕೆಲವು ಶಿಲ್ಪಗಳನ್ನು ಅವುಗಳ ಪ್ರತಿಮಾ ಲಕ್ಷಣಗಳೊಂದಿಗೆ ವಿವರಿಸಿರುವರು. ಶಿವರುದ್ರಸ್ವಾಮಿ ಎಸ್.ಎನ್.ಅವರ Vijaynagara Temples in Karnataka ಗ್ರಂಥದಲ್ಲಿ ಕರ್ನಾಟಕ ದಲ್ಲಿನ ವಿಜಯನಗರದ ದೇವಾಲಯಗಳನ್ನು ಕುರಿತು ಉಲ್ಲೇಖಿಸುವಾಗ ಶಿಲ್ಪಗಳು ಮತ್ತು ಪ್ರತಿಮಾ ಲಕ್ಷಣಗಳನ್ನು ಕುರಿತು ಒಂದು ಅಧ್ಯಾಯದಲ್ಲಿ ವಿವರಿಸಿರುವರು. ಅವುಗಳಲ್ಲಿ ಶೈವ ಶಿಲ್ಪಗಳನ್ನು ಕುರಿತು ವಿವರಿಸುವಲ್ಲಿ ಹಂಪಿಯಲ್ಲಿನ ಶಿಲ್ಪಗಳನ್ನೇ ಬಳಸಿಕೊಂಡಿರುವರು. ಇವರು ಶಿಲ್ಪಗಳನ್ನು ವಿವರಿಸುವ ಸಂದರ್ಭದಲ್ಲಿ ಆಗಮ ಮತ್ತು ಶಿಲ್ಪಶಾಸ್ತ್ರಗಳ ಉಲ್ಲೇಖಗಳನ್ನು ನೀಡಿದ್ದರೂ ಅವುಗಳನ್ನು ಶಿಲ್ಪಗಳಿಗೆ ಅನ್ವಯಿಸುವ ಕಾರ್ಯವನ್ನು ಮಾಡಿಲ್ಲ. ಕೆ.ರೆಡ್ಡೆಪ್ಪ ಅವರ Material Culture Depicted in Vijayanagara Temples ಎಂಬ ಗ್ರಂಥವು ವಿಜಯನಗರದ ದೇವಾಲಯಗಳಲ್ಲಿ ಕಂಡುಬರುವ ಮೂರ್ತಿಶಿಲ್ಪಗಳು, ಆಭರಣಗಳು, ಆಯುಧಗಳು, ಸಂಗೀತವಾದ್ಯಗಳ ಕುರಿತು ಮಾಹಿತಿಯನ್ನು ನೀಡುತ್ತದೆ. ಆದರೆ ಹಂಪಿಯಲ್ಲಿನ ಶಿಲ್ಪಗಳ ಕುರಿತ ವಿವರಣೆಯ ಕೊರತೆ ಈ ಕೃತಿಯಲ್ಲಿ ಕಂಡುಬರುತ್ತದೆ. ದೇವರಕೊಂಡಾರೆಡ್ಡಿಯವರ ಸಂಪಾದನೆಯಲ್ಲಿ ಪ್ರಕಟವಾದ ಹಂಪಿ ಸಂಪುಟದಲ್ಲಿ ವಿವಿಧ ವಿದ್ವಾಂಸರುಗಳು ಕಲೆ, ಕ್ರೀಡೆ ಮತ್ತು ಕೌಶಲ ಭಾಗಗಳಲ್ಲಿ ಬರೆದ ಹಲವು ಲೇಖನಗಳು ಸಹ ನನ್ನ ಅಧ್ಯಯನಕ್ಕೆ ಪೂರಕವಾದ ಸಾಮಾನ್ಯ ಮಾಹಿತಿಯನ್ನು ನೀಡುತ್ತವೆ.

ಅನಿಲಾ ವರ್ಗೀಸ್ ಅವರ Archaeology Art and Religion New Perspectives on Vijayanagara ಗ್ರಂಥದಲ್ಲಿ ಹಂಪಿಯ ದೇವಾಲಯಗಳು, ಪಂಥಗಳು, ಶಿಲ್ಪಗಳ ಕುರಿತಂತೆ ಇರುವ ಲೇಖನಗಳು ಹಾಗೂ ಶಿವರುದ್ರಸ್ವಾಮಿ ಎಸ್.ಎನ್. ಅವರ Timmapura Agrahara (A Cultural

Study of Vijayanagara Hampi-Temple Complex)ಗ್ರಂಥದಲ್ಲಿ ತಿಮ್ಮಲಾಪುರದ ದೇವಾಲಯದಲ್ಲಿನ ಶಿಲ್ಪಗಳ ಕುರಿತ ಮಾಹಿತಿಗಳು ನನ್ನ ಅಧ್ಯಯನಕ್ಕೆ ಪೂರಕವಾಗಿವೆ. ಹೀಗೆ ಶೈವ ಶಿಲ್ಪಗಳಿಗೂ ಒಂದು ಅಧ್ಯಾಯವನ್ನು ಮೀಸಲಿರಿಸಿ ಅವುಗಳನ್ನು ಧಾರ್ಮಿಕ ಹಿನ್ನೆಲೆಯಲ್ಲಿ ಶಿಲ್ಪಗಳ ವಿವರಣೆಯನ್ನು ನೀಡಿದರೂ ಅವುಗಳನ್ನು ಶಾಸ್ತ್ರೀಯ ಅಧ್ಯಯನಕ್ಕೆ ಒಳಪಡಿಸಿಲ್ಲದಿರುವುದು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲು ಪ್ರೇರಕವನ್ನೊದಗಿಸಿತು. ಒಟ್ಟಾರೆಯಾಗಿ ಈ ಮೇಲಿನ ಕೃತಿಗಳು ಹಂಪಿಯಲ್ಲಿನ ಶಿಲ್ಪಗಳನ್ನು ಕುರಿತಂತೆ ವಿವರಿಸುವ ಪ್ರಮುಖ ಗ್ರಂಥಗಳಾಗಿವೆ. ಈ ಎಲ್ಲ ಗ್ರಂಥಗಳಲ್ಲೂ ಶೈವ ಶಿಲ್ಪಗಳನ್ನು ಒಂದು ಪ್ರತ್ಯೇಕ ಅಧ್ಯಾಯದಲ್ಲಿ ಅವುಗಳ ಸ್ಥಳ ನಿರ್ದೇಶನದೊಂದಿಗೆ ಪ್ರತಿಮಾ ಲಕ್ಷಣಗಳನ್ನು ವಿವರಿಸಿರುವರು. ಆದರೆ ಈ ಎಲ್ಲ ಅಂಶಗಳನ್ನು ಒಳಗೊಂಡಿದ್ದಾಗ್ಯೂ ಇವುಗಳು ಇಲ್ಲಿನ ಶಿಲ್ಪಗಳನ್ನು ಶಾಸ್ತ್ರೀಯ ಅಧ್ಯಯನಕ್ಕೆ ಒಳಪಡಿಸಿಲ್ಲ. ಅಂದರೆ ಶಿಲ್ಪಗಳು ಆಗಮ ಮತ್ತು ಶಿಲ್ಪಶಾಸ್ತ್ರ ಪಠ್ಯಗಳನ್ನು ಅನುಸರಿಸಿ ಕೆತ್ತಲ್ಪಟ್ಟಿವೆಯೇ ಇಲ್ಲವೆ ಎಂಬುದನ್ನು ಕಂಡುಕೊಳ್ಳುವ ಕಾರ್ಯವನ್ನು ಮಾಡಿರುವುದಿಲ್ಲ. ಆದ್ದರಿಂದ ಈ ಕೊರತೆಯನ್ನು ನೀಗಿಸಲು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಮೇಲಿನ ಕೃತಿಗಳು ಕೇವಲ ಹಂಪಿಯಲ್ಲಿನ ಶಿಲ್ಪಗಳನ್ನು ಕುರಿತಂತಹವುಗಳಾಗಿವೆ. ಆದರೆ ವಿಜಯನಗರದ ಶಿಲ್ಪಗಳನ್ನು ಕುರಿತು ಮಾಹಿತಿಯನ್ನು ನೀಡುವ ಕೃತಿಗಳು ಹಲವು ಇವೆ. ಅವುಗಳು ಈ ಕೆಳಗಿನಂತಿವೆ.

ಸಾಲೆತೊರೆ ಆರ್.ಎನ್.ಅವರ Vijayanagara Art ಎಂಬ ಕೃತಿಯು ವಿಜಯನಗರದ ಕಲೆಯನ್ನು ಕುರಿತದ್ದಾಗಿದೆ. ಈ ಕೃತಿಯು ವಿಜಯನಗರ ಧರ್ಮ, ವಾಸ್ತುಶಿಲ್ಪ, ಮೂರ್ತಿಶಿಲ್ಪ ಮತ್ತು ಅವುಗಳ ಆಭರಣಗಳು, ಆಯುಧಗಳು, ವರ್ಣಚಿತ್ರ ಮುಂತಾದವುಗಳನ್ನು ಒಳಗೊಂಡ ಕೃತಿಯಾಗಿದೆ. ಇದು ಶಿಲ್ಪಗಳನ್ನು ಕುರಿತು ಒಂದು ಅಧ್ಯಾಯವನ್ನು ಹೊಂದಿದ್ದರೂ ಇಡೀ ವಿಜಯನಗರದ ಶಿಲ್ಪಗಳನ್ನು ಕುರಿತಂತೆ ಒಳಗೊಂಡಿರುವುದರಿಂದ ಹಂಪಿಯ ಶಿಲ್ಪಗಳನ್ನು ಅತಿ ವಿರಳವಾಗಿ ಬಳಸಿಕೊಂಡಿದೆ. ಅಲ್ಲದೆ, ಕೇವಲ ವಿಜಯನಗರದ ಕುರಿತು ಸಂಶೋಧನಾ ಲೇಖನಗಳನ್ನು ಒಳಗೊಂಡಿರುವ ವಿಜಯನಗರ ಅಧ್ಯಯನ ಸಂಪುಟಗಳು ಪ್ರತಿವರ್ಷ ಪ್ರಕಟವಾಗುತ್ತಿವೆ. ಇಲ್ಲಿಯವರೆಗೆ ಹತ್ತೊಂಬತ್ತು ಸಂಪುಟಗಳು ಪ್ರಕಟಗೊಂಡಿದ್ದು, ಇವುಗಳಲ್ಲಿ ಹಂಪಿಯ ಹಾಗೂ ಹಂಪಿಯಲ್ಲಿನ ಶಿಲ್ಪಗಳನ್ನು ಕುರಿತ ಲೇಖನಗಳಿದ್ದು, ಇವುಗಳು ಸಹ ಅಧ್ಯಯನಕ್ಕೆ ಪೂರಕವಾಗಿವೆ. ಅದರಲ್ಲಿ ಶೈವ ಶಿಲ್ಪಗಳ ಕುರಿತಾದ ಹಲವು ಲೇಖನಗಳು ಇದ್ದು ಅವುಗಳನ್ನು ಸಹ ಅಧ್ಯಯನದಲ್ಲಿ ಬಳಸಿಕೊಂಡಿರುತ್ತೇನೆ.

ಮೇಲಿನ ಕೃತಿಗಳಲ್ಲದೆ ಹಂಪಿ ಎಂಬ ಪದದಿಂದಲೇ ಪ್ರಾರಂಭವಾಗುವ ಕೆಲವು ಕೃತಿಗಳು ರಚಿತಗೊಂಡಿವೆ. ಅವುಗಳಲ್ಲಿ ಮುಖ್ಯವಾದದು ಷಟ್ಟರ್ ಎಸ್. ಅವರ Hampi a Medieval Mentropolies, ಅನಿಲಾ ವರ್ಗೀಸ್ ಅವರ Hampi Monumental Legacy, ಲಾಂಗ್‌ಹರ್ಟ್ಸ್ ಎ.ಎಚ್. ಅವರ Hampi Ruins Described and Illustrated ಹಾಗೂ ದೇವಕುಂಜರಿ ಅವರ Hampi ಎಂಬ ಕೃತಿ. ಈ ಎಲ್ಲ ಕೃತಿಗಳು ಹಂಪಿಯಲ್ಲಿನ ಸ್ಮಾರಕಗಳ ಕುರಿತ ಪರಿಚಯಾತ್ಮಕ ವಿವರಣೆಯನ್ನು ನೀಡುತ್ತವೆ.

ಹಂಪಿಯ ಕುರಿತ ಅಧ್ಯಯನಗಳಿಗೆ ಬಹುಮುಖ್ಯ ಆಕರಗಳೆಂದರೆ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಇವರಿಂದ ಪ್ರಕಟಗೊಂಡಿರುವ Vijayanagara Progress of Research ವರದಿಗಳು. ನಾಗರಾಜರಾವ್ ಎಂ.ಎಸ್. ಅವರ ೧೯೭೯-೮೩, ೧೯೮೩-೧೯೮೪ರ ಮೊದಲೆರಡು ಸಂಪುಟಗಳು ಹಾಗೂ ದೇವರಾಜ ಡಿ.ವಿ. ಮತ್ತು ಚನ್ನಬಸಪ್ಪ ಎಸ್.ಪಾಟೀಲ್ ಅವರ ೧೯೮೪-೮೭, ೧೯೮೭-೮೮, ೧೯೮೮-೯೧ರ ನಂತರದ ಮೂರು ವರದಿಗಳು ಹಾಗೂ ವಾಸುದೇವನ್ ಸಿ.ಎಸ್. ಅವರ ೧೯೯೧-೨೦೧೦ರ ವರದಿ ಒಟ್ಟು ಆರು ವರದಿಗಳಲ್ಲಿನ ಸಂಶೋಧನಾ ಲೇಖನಗಳು ನನ್ನ ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ನೀಡುತ್ತವೆ ಹಾಗೂ ಅವುಗಳನ್ನು ನನ್ನ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಮೇಲಿನ ಎಲ್ಲ ಗ್ರಂಥಗಳು, ವರದಿಗಳು, ಲೇಖನಗಳು ನೇರವಾಗಿ ಹಂಪಿ ಪರಿಸರಕ್ಕೆ ಅಥವಾ ಕ್ಷೇತ್ರಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ಒದಗಿಸುವಂತಹವುಗಳಾಗಿವೆ. ಇನ್ನು ಪ್ರಸ್ತುತ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಬಹುಮುಖ್ಯ ಪಾತ್ರವಹಿಸಿರುವ ಹಾಗೂ ಶಿಲ್ಪಗಳು, ಆಗಮಗಳು ಮತ್ತು ಶೈವಧರ್ಮವನ್ನು ಕುರಿತಾದ ಕೆಲವು ಗ್ರಂಥಗಳಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಗೋಪಿನಾಥರಾವ್ ಟಿ.ಎ. ಅವರ Elements of Hindu Iconography, Vol-2, Part I-II ಗ್ರಂಥಗಳು. ಇವು ನನ್ನ ಅಧ್ಯಯನಕ್ಕೆ ಬಹುಮುಖ್ಯವಾದ ಮಾಹಿತಿಯನ್ನು ನೀಡುತ್ತವೆ. ಈ ಗ್ರಂಥಗಳಲ್ಲಿ ಶಿವ ಹಾಗೂ ಶಿವನ ಎಲ್ಲ ರೂಪಗಳು ಮತ್ತು ಅವನ ಪರಿವಾರ ದೇವತೆಗಳು ಕುರಿತಂತೆ ಮಾಹಿತಿಯನ್ನು ಒಳಗೊಂಡಿದೆ. ಮುಖ್ಯವಾಗಿ ಎಲ್ಲ ಶಿಲ್ಪಗಳಿಗೆ ಆಗಮಗಳು, ಶಿಲ್ಪಶಾಸ್ತ್ರಗಳು, ಪುರಾಣಗಳ ಉಲ್ಲೇಖಗಳನ್ನು ನೀಡಿ ದಕ್ಷಿಣ ಭಾರತದಾದ್ಯಂತ ದೊರೆಯುವ ಪ್ರಮುಖ ಶಿಲ್ಪಗಳ ವಿವರಣೆಯನ್ನು ನೀಡಿರುವರು. ಆದರೆ ಹಂಪಿಯಲ್ಲಿನ ಶಿಲ್ಪಗಳ ವಿವರಣೆಗಳು ಇದರಲ್ಲಿ ದೊರೆಯುವುದಿಲ್ಲ. ಆದರೂ ನನ್ನ ಅಧ್ಯಯನಕ್ಕೆ ಬಹುಮುಖ್ಯ ಮಾಹಿತಿಗಳನ್ನು ಈ ಗ್ರಂಥವು ನೀಡುತ್ತದೆ.

ಜೀತೇಂದ್ರನಾಥ ಬ್ಯಾನರ್ಜಿ ಅವರ The Development of Hindu Iconography ಎಂಬ ಗ್ರಂಥವು ಶಿಲ್ಪಗಳ ಕುರಿತು ದೀರ್ಘವಾದ ವಿವರಣೆ ನೀಡುತ್ತದೆ. ಶಿಲ್ಪಗಳ ಕುರಿತು ಅತ್ಯಂತ ವಿಸ್ತಾರವಾಗಿ ಹಾಗೂ ಶೈವ, ವೈಷ್ಣವ ಮತ್ತು ಇತರೆ ಎಲ್ಲ ಶಿಲ್ಪಗಳನ್ನು ಕುರಿತು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಕೇವಲ ಶಿಲ್ಪವಲ್ಲದೆ ಅವುಗಳ ಹಸ್ತಗಳು, ಮುದ್ರೆಗಳು ಮುಂತಾದವುಗಳ ಕುರಿತು ತಿಳಿಸುತ್ತದೆ. ಆದ್ದರಿಂದ ಇದೂ ಸಹ ನನ್ನ ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸುತ್ತದೆ. ಹಾಗೆಯೇ ಗುಪ್ತೆ ಆರ್.ಎಸ್. ಅವರ Iconography of Hindus, Buddhists and Jains ಎಂಬ ಗ್ರಂಥವು ಹಿಂದೂ, ಬೌದ್ಧ ಮತ್ತು ಜೈನ ಶಿಲ್ಪಗಳನ್ನು ಕುರಿತು ತಿಳಿಸುವ ಗ್ರಂಥವಾಗಿದೆ. ಇದರಲ್ಲಿ ಶಿಲ್ಪಗಳ ಹಿನ್ನೆಲೆ ಕಥೆಯನ್ನು ತಿಳಿಸುವ ಮೂಲಕ ಶಿಲ್ಪಗಳ ವಿವರಣೆ ನೀಡಲಾಗಿದೆ.

ರಾಮಚಂದ್ರರಾವ್ ಎಸ್.ಕೆ., ಅವರ Shiva-Kosha, Vol I-II ಎಂಬ ಗ್ರಂಥಗಳು ಶಿವನ ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ಕುರಿತು ಹೇಳುತ್ತದೆ. ಇದರಲ್ಲಿ ಆಗಮಗಳು, ಪುರಾಣ ಮತ್ತು

ಇತರ ಶಿಲ್ಪಶಾಸ್ತ್ರಗಳಲ್ಲಿ ಉಲ್ಲೇಖಿಸಿರುವ ಪ್ರತಿಮಾ ಲಕ್ಷಣಗಳನ್ನು ತಿಳಿಸಿರುವರು. ಇವರದೇ ಇನ್ನೊಂದು ಕೃತಿಯಾದ Encyclopedia of Indian Iconography Hunduism-Buddism-Jainism, Vol I-II-III ಎಂಬುದರಲ್ಲಿ ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ತಿಳಿಸುವ ಗ್ರಂಥವಾಗಿದೆ. ಇದೂ ಸಹ ನನ್ನ ಅಧ್ಯಯನಕ್ಕೆ ಮಹತ್ವದ ಮಾಹಿತಿಗಳನ್ನು ಒದಗಿಸುತ್ತವೆ.

ಭಟ್ ಎನ್.ಆರ್. ಅವರ Shaivism in the Light of Epics, Puranas and Agams ಹಾಗೂ ಇದೇ ಲೇಖಕರು ಸಂಪಾದಿಸಿರುವ Rauravagama ಮತ್ತು ಭಟ್ ಎನ್.ಆರ್. ಜೇನ್ ಫಿಲಿಯೋಜಾ, ಪೆರ್ರಿ ಸೆಲ್ವಿಯನ್ ಫಿಲಿಯೋಜಾ ಅವರು ಸಂಪಾದಿಸಿದ The Great Tantra of Ajitaದ ನಾಲ್ಕು ಭಾಗಗಳು, ಸ್ವಾಮಿನಾಥ ಸಿ. ಅವರು ಸಂಪಾದಿಸಿದ Kamigama, ಮಲ್ಲೇದೇವರು ಎಚ್.ಪಿ. ಅವರು ಸಂಪಾದಿಸಿದ ವಾತುಲ ಶುದ್ಧಾಗಮ(ಕನ್ನಡ ಅನುವಾದ ಸಹಿತ) ಮತ್ತು Viragamottarm ಸಾಂಬಶಿವಶಾಸ್ತ್ರಿ ಕೆ., ಅವರು ಸಂಪಾದಿಸಿದ The Silparatna of Sri Kumara Part -II ಹಾಗೂ ಅರುಣಾಚಲಮ್ ಎಂ. ಅವರ The Saivagamas ಗ್ರಂಥಗಳು ನನ್ನ ಅಧ್ಯಯನಕ್ಕೆ ಪೂರಕವಾದ ಬಹು ಮಹತ್ವದ ಗ್ರಂಥಗಳಾಗಿವೆ. ಈ ಎಲ್ಲ ಗ್ರಂಥಗಳು ಪ್ರತಿಮಾ ಲಕ್ಷಣಗಳನ್ನು ಗುರುತಿಸಲು ಸಹಾಯಕವಾಗಿವೆ.

ಇವುಗಳಲ್ಲದೆ ಸಿದ್ಧಲಿಂಗೇಶ್ವರ ಸ್ವಾಮಿಗಳ ಶ್ರೀ ಪಂಪಾಮಹಾತ್ಮೆಯು ಹಂಪೆಯ ಪೌರಾಣಿಕ ಕಥೆಯನ್ನು ವಿವರಿಸುತ್ತಿದ್ದು, ಈ ಕ್ಷೇತ್ರದ ಕುರಿತು ತಿಳಿದುಕೊಳ್ಳಲು ಬಹು ಪ್ರಮುಖ ಗ್ರಂಥವಾಗಿದೆ. ನಂಜುಂಡರಾಧ್ಯ ಎಂ.ಜಿ. ಅವರು ಸಂಪಾದಿಸಿದ ಶಿವಾಗಮ ಸೌರಭ, ಶಿವಕುಮಾರಸ್ವಾಮಿ ಎಂ. ಅವರ ಶೈವಾಗಮಗಳು ಒಂದು ಅಧ್ಯಯನ ಎಂಬ ಕೃತಿಗಳು ಆಗಮಗಳ ಕುರಿತು ವಿವರಿಸುತ್ತದೆ. ಹಾಗೆಯೇ ವಸಂತಲಕ್ಷ್ಮೀ ಕೆ. ಅವರ ಕರ್ನಾಟಕದ ಶೈವ ಶಿಲ್ಪಗಳು ಹಾಗೂ ಕಡಪಟ್ಟಿ ಎಂ.ಎನ್., ಅವರ ಪ್ರಾಚೀನ ಕರ್ನಾಟಕದಲ್ಲಿ ಶೈವಧರ್ಮ ಎಂಬ ಕೃತಿಗಳು ಸಹ ಪ್ರಸ್ತುತ ಅಧ್ಯಯನಕ್ಕೆ ಪೂರಕವಾದವುಗಳಾಗಿವೆ. ಒಟ್ಟಾರೆ ಈ ಮೇಲಿನ ಎಲ್ಲಾ ಕೃತಿಗಳು ಒಂದಲ್ಲ ಒಂದು ರೀತಿಯಲ್ಲಿ ನನ್ನ ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ಒದಗಿಸುತ್ತವೆ.

## ಅಧ್ಯಯನದ ಉದ್ದೇಶ

ಹಂಪೆಯು ಅತ್ಯುನ್ನತ ಕಲಾ ಸಂಪತ್ತನ್ನು ಹೊಂದಿರುವ ಪ್ರಮುಖ ಕಲಾಕೇಂದ್ರವಾಗಿದೆ. ಕ್ರಿ.ಶ.೧೩೩೬ರಲ್ಲಿ ಅಸ್ತಿತ್ವಕ್ಕೆ ಬಂದ ವಿಜಯನಗರ ಸಾಮ್ರಾಜ್ಯವು ಹಂಪೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ನಂತರ ಹಂಪೆಯ ಪ್ರಾಮುಖ್ಯತೆ ದ್ವಿಗುಣಗೊಂಡಿತು. ಅಲ್ಲದೆ ಇವರ ಆಳ್ವಿಕೆಯ ಕಾಲದಲ್ಲಿ ಪದೇ ಪದೇ ಮುಸ್ಲಿಂ ದಾಳಿಗಳು ನಡೆದರೂ ಸಹ ಧೃತಿಗೆಡದೆ ಇಲ್ಲಿನ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದಲ್ಲದೇ ನಿರಂತರವಾಗಿರಿಸಿಕೊಳ್ಳುವುದರ ಜವಾಬ್ದಾರಿಯನ್ನು ನಿರ್ವಹಿಸುವೆಡೆಗೆ ಕಾರ್ಯಪ್ರವೃತ್ತವಾಯಿತು. ಆದ್ದರಿಂದಲೇ ಇಲ್ಲಿನ ಧರ್ಮ ಮತ್ತು ಸಂಸ್ಕೃತಿಯನ್ನು ಶಾಶ್ವತವಾಗಿ ನೆಲೆಗೊಳಿಸುವುದರ ಮತ್ತು ಇನ್ನಷ್ಟು ಭದ್ರವಾಗಿಸುವುದರ ನಿಟ್ಟಿನಲ್ಲಿ ಅಸಂಖ್ಯಾತ ದೇವಾಲಯಗಳು

ನಿರ್ಮಾಣಗೊಂಡವು. ಅಂದು ಶೈವ, ವೈಷ್ಣವ, ಜೈನ, ವೀರಶೈವ, ಶ್ರೀವೈಷ್ಣವ ಧರ್ಮಗಳು ಅಸ್ತಿತ್ವದಲ್ಲಿದ್ದವು. ಸಾಮ್ರಾಜ್ಯ ರಚನೆಯ ಹೆಗ್ಗಳಿಕೆಗೆ ಪಾತ್ರರಾದ ಸಂಗಮ ವಂಶಸ್ಥರು ವಿರೂಪಾಕ್ಷನನ್ನು ಅಧಿದೈವನನ್ನಾಗಿ ಸ್ವೀಕರಿಸಿ ಶೈವಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ನಂತರ ಬಂದಂತಹ ಸಾಳುವ ಮನೆತನದವರು ಇದನ್ನು ಮುಂದುವರಿಸಿದರು. ತುಳುವ ವಂಶಸ್ಥರು ವೈಷ್ಣವ ಧರ್ಮಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿದರೂ ಶೈವಧರ್ಮವನ್ನು ಕಡೆಗಣಿಸಲಿಲ್ಲ. ಒಟ್ಟಾರೆ ವಿಜಯನಗರದ ಅರಸರು ಧರ್ಮ ಸಮನ್ವಯತೆಯನ್ನು ಕಾಪಾಡಿ ಹಲವು ದೇವಾಲಯ ಹಾಗೂ ಶಿಲ್ಪಗಳನ್ನು ಕಂಡರಿಸಿದ್ದಾರೆ. ಪ್ರಸ್ತುತ ಅಧ್ಯಯನವು ಶಿಲ್ಪಗಳನ್ನು ಕುರಿತದ್ದಾಗಿದ್ದು, ಸೂಕ್ಷ್ಮ ಅಧ್ಯಯನದ ದೃಷ್ಟಿಯಿಂದ ಶೈವ ಶಿಲ್ಪಗಳನ್ನು ಆಯ್ದು ಅವುಗಳ ಅಧ್ಯಯನವನ್ನು ನಡೆಸಲಾಗಿದೆ.

ಇದುವರೆಗೂ ಹಂಪಿಯಲ್ಲಿನ ದೇವಾಲಯ, ವಾಸ್ತುಶಿಲ್ಪ ಮತ್ತು ಧರ್ಮವನ್ನು ಕುರಿತು ಹಲವು ಅಧ್ಯಯನಗಳು ನಡೆದಿವೆ. ಆದರೆ ಇಲ್ಲಿನ ಶಿಲ್ಪಗಳ ಕುರಿತಂತೆ ಅಧ್ಯಯನಗಳು ಅತಿ ವಿರಳವಾಗಿವೆ. ಅಧ್ಯಯನಗಳು ನಡೆದರೂ ಸಂಪೂರ್ಣ ವಿವರಣೆ ಕೊಡುವ ನಿಟ್ಟಿನಲ್ಲಿ ಪ್ರಯತ್ನಿಸಿದ್ದಕ್ಕಾಗಿ ಹಲವು ಶಿಲ್ಪಗಳು ಬಿಟ್ಟು ಹೋಗಿವೆ ಅಥವಾ ಅವುಗಳ ಸೂಕ್ಷ್ಮ ವಿಷಯಗಳನ್ನು ಹೇಳುವಲ್ಲಿ ಹಿಂದೆ ಬಿದ್ದಿರುವರು. ಅಲ್ಲದೆ ಪ್ರತ್ಯೇಕವಾಗಿ ಒಂದೇ ಧರ್ಮಕ್ಕೆ ಸೇರಿದ ಶಿಲ್ಪಗಳ ಅಧ್ಯಯನ ನಡೆದೇ ಇಲ್ಲವೆಂದು ಹೇಳಬಹುದು. ಆದ್ದರಿಂದಾಗಿ ಶೈವಧರ್ಮಕ್ಕೆ ಸೇರಿದ ಅಥವಾ ಶಿವನಿಗೆ ಸಂಬಂಧಿಸಿದ ಶಿಲ್ಪಗಳನ್ನಷ್ಟೆ ಆಯ್ದು ಅಧ್ಯಯನ ಕೈಗೊಳ್ಳಲಾಗಿದೆ. ಶೈವ ಶಿಲ್ಪಗಳ ಕುರಿತು ಬಿಡಿ ಲೇಖನಗಳು ಪ್ರಕಟಗೊಂಡಿವೆಯೇ ಹೊರತು ಸಮಗ್ರ ಅಧ್ಯಯನ ನಡೆದಿಲ್ಲ. ಈ ಕಾರಣದಿಂದಾಗಿಯೂ ಈ ಶೀರ್ಷಿಕೆಯನ್ನು ಆಯ್ದುಕೊಳ್ಳಲಾಯಿತು.

ಹಾಗೆಯೇ ಶಿಲ್ಪಗಳ ನಿರ್ಮಾಣಕ್ಕೆ ಆಗಮಗಳು, ಪುರಾಣಗಳು ಮತ್ತು ಇತರ ಶಿಲ್ಪಶಾಸ್ತ್ರ ಗ್ರಂಥಗಳು ತಮ್ಮದೇ ಆದ ನಿಯಮಗಳನ್ನು ರೂಪಿಸಿಕೊಂಡಿವೆ ಹಾಗೂ ಅವುಗಳನ್ನು ಅನುಸರಿಸುವ ಪರಿಪಾಠವು ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಅವುಗಳಲ್ಲಿ ಶಿಲ್ಪಗಳನ್ನು ಕೆತ್ತಲು ಬಳಸುವ ಮಾಧ್ಯಮ, ಅವುಗಳ ನಿರ್ಮಾಣ ವಿಧಾನ, ಶಿಲ್ಪಗಳ ಪ್ರತಿಷ್ಠಾಪನಾ ವಿಧಾನ, ಅವುಗಳ ಪ್ರತಿಮಾ ಲಕ್ಷಣಗಳು, ಅವುಗಳ ಆರಾಧನಾ ಪದ್ಧತಿ ಮುಂತಾದ ವಿವರಗಳನ್ನು ಒಳಗೊಂಡಿರುತ್ತವೆ. ಈ ಅಧ್ಯಯನದ ಮುಖ್ಯ ಉದ್ದೇಶವೆಂದರೆ ವಿಜಯನಗರದ ರಾಜಧಾನಿ ಎನಿಸಿದ್ದ ಮತ್ತು ಹಂಪಿ ಪರಿಸರ ಎಂದು ಘೋಷಿಸಲ್ಪಟ್ಟ ವ್ಯಾಪ್ತಿಯಲ್ಲಿನ ಶೈವಶಿಲ್ಪಗಳನ್ನು ಆಗಮ, ಪುರಾಣ ಮತ್ತು ಇತರ ಶಿಲ್ಪಶಾಸ್ತ್ರಗಳನ್ನು ಅನುಸರಿಸಿ ರಚಿತವಾದುವುಗಳಾಗಿವೆಯೇ ಅಥವಾ ಇಲ್ಲವೆ ಎಂಬುದನ್ನು ವಿಶ್ಲೇಷಿಸುವುದು. ಆಗಮ ಮತ್ತು ಇತರ ಶಿಲ್ಪಶಾಸ್ತ್ರಗಳನ್ನನುಸರಿಸಿ ನಿರ್ಮಿತವಾಗಿದ್ದರೆ ಅದು ಯಾವ ಆಗಮ ಅಥವಾ ಶಿಲ್ಪಶಾಸ್ತ್ರದ ಅನುಸರಣೆಯಾಗಿದೆ ಎಂಬುದನ್ನು ಅವುಗಳ ಪ್ರತಿಮಾ ಲಕ್ಷಣದ ವಿವರಗಳೊಂದಿಗೆ ವಿವರಿಸುವುದು ಹಾಗೂ ಶಿಲ್ಪಿಯ ಸ್ವಂತಿಕೆಯು ಅಭಿವ್ಯಕ್ತಗೊಂಡಿದ್ದಲ್ಲಿ ಅದನ್ನು ತಿಳಿಸುವುದು. ಒಟ್ಟಾರೆಯಾಗಿ ಹೇಳುವುದಾದರೆ ಹಂಪಿ ಪರಿಸರದಲ್ಲಿ ದೊರೆಯುವ ಶೈವ ಶಿಲ್ಪಗಳನ್ನು

ಶಾಸ್ತ್ರೀಯ ಅಧ್ಯಯನಕ್ಕೆ ಒಳಪಡಿಸುವುದು. ಇದುವರೆಗೂ ಹಂಪಿ ಪರಿಸರದಲ್ಲಿನ ಶಿಲ್ಪಗಳ ಕುರಿತು ಕೆಲವು ಅಧ್ಯಯನಗಳು ನಡೆದಿವೆಯಾದರೂ ಆಗಮ ಮತ್ತು ಇತರ ಶಿಲ್ಪಶಾಸ್ತ್ರಗಳ ಹಿನ್ನೆಲೆಯಲ್ಲಿ ತಿಳಿಸಿರುವುದು ವಿರಳ. ಕೆಲವು ಅಧ್ಯಯನಗಳು ಆಗಮಗಳನ್ನು ಉಲ್ಲೇಖಿಸುತ್ತವೆಯಾದರೂ ಅವುಗಳನ್ನು ಇಲ್ಲಿಯ ಶಿಲ್ಪಗಳ ಪ್ರತಿಮಾ ಲಕ್ಷಣಗಳೊಂದಿಗೆ ಹೋಲಿಸಿ ಅವುಗಳು ಆಗಮಗಳ ಅನ್ವಯದಂತೆ ಕೆತ್ತಲ್ಪಟ್ಟಿವೆಯೇ, ಇಲ್ಲವೇ ಎಂಬುದನ್ನು ಪರೀಕ್ಷಿಸಿಲ್ಲ. ಆದ್ದರಿಂದ ಈ ರೀತಿಯಾದ ಅಧ್ಯಯನಗಳು ಅತಿ ವಿರಳ ಹಾಗೂ ಕನ್ನಡ ಭಾಷೆಯಲ್ಲಿ ಇಂತಹ ಅಧ್ಯಯನಗಳು ಇದುವರೆಗೂ ನಡೆಯದಿರುವುದೂ ಸಹ ಈ ಅಧ್ಯಯನವನ್ನು ಕೈಗೊಳ್ಳಲು ಮುಖ್ಯ ಉದ್ದೇಶವಾಯಿತು.

## ಅಧ್ಯಯನದ ವ್ಯಾಪ್ತಿ

ಪ್ರತಿಯೊಂದು ಅಧ್ಯಯನವು ಒಂದು ನಿರ್ದಿಷ್ಟ ಚೌಕಟ್ಟನ್ನು ಒಳಗೊಂಡಿರುತ್ತದೆ. ಪ್ರಸ್ತುತ ಅಧ್ಯಯನವನ್ನು ಸಹ ಒಂದು ನಿರ್ದಿಷ್ಟ ಭೌಗೋಳಿಕ ಹಾಗೂ ವಿಷಯ ವ್ಯಾಪ್ತಿಗೆ ಒಳಪಡಿಸಲಾಗಿದೆ. ಶೀರ್ಷಿಕೆಯಲ್ಲಿಯೇ ಅಧ್ಯಯನದ ಭೌಗೋಳಿಕ ವ್ಯಾಪ್ತಿಯನ್ನು ಹಂಪಿ ಪರಿಸರವೆಂದು ಸೂಚ್ಯವಾಗಿ ತಿಳಿಸಲಾಗಿದೆ. ಇಲ್ಲಿ ಹಂಪಿ ಪರಿಸರ ಎಂದರೆ ಹಂಪಿ ವಿಶ್ವಪರಂಪರೆ ತಾಣ ಎಂದು ಘೋಷಿಸಿರುವ ೨೩೬ ಚದುರ ಕಿಲೋಮೀಟರ್ ಪ್ರದೇಶ. ಈ ಸೀಮಿತ ಪ್ರದೇಶವು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಹಂಪಿ, ಕಡ್ಡಿರಾಂಪುರ, ಕಮಲಾಪುರ, ಮಲಪನಗುಡಿ, ಕೊಂಡನಾಯಕನಹಳ್ಳಿ, ಧಣಾಪುರ, ಕಾಳಘಟ್ಟ, ಸಿಂಗನಾಯಕನಹಳ್ಳಿ, ನಾಗೇನಹಳ್ಳಿ, ಗುಡಿಓಬಳಾಪುರ, ಕೃಷ್ಣಾಪುರ, ನಿಂಬಾಪುರ, ವೆಂಕಟಾಪುರ, ಬುಕ್ಕಸಾಗರ ಈ ೧೪ ಗ್ರಾಮಗಳು ಹಾಗೂ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಆನೆಗೊಂದಿ, ಅಂಜನಹಳ್ಳಿ, ಬಸವನದುರ್ಗ, ಚಿಕ್ಕರಾಂಪುರ, ಹನುಮನಹಳ್ಳಿ, ಕ್ರಿಷ್ಣಾಪುರ, ಲಕ್ಷ್ಮೀಪುರ, ಮಲ್ಲಾಪುರ, ರಾಂಪುರ, ರಾಮದುರ್ಗ, ರಂಗಾಪುರ, ಸಿಂಗನಗೊಂಡ, ಸಣಾಪುರ, ತಿರುಮಲಾಪುರ ಮತ್ತು ವಿರೂಪಾಪುರಗಡ್ಡೆ; ಈ ೧೫ ಗ್ರಾಮಗಳು ಒಟ್ಟು ೨೯ ಗ್ರಾಮಗಳನ್ನು ಒಳಗೊಂಡಿದುದಾಗಿದೆ. ಈ ಗ್ರಾಮಗಳಲ್ಲದೆ ಹೊಸಪೇಟೆ ತಾಲ್ಲೂಕಿಗೆ ಸೇರುವ ಅನಂತಶಯನಗುಡಿ, ಜಂಬುನಾಥ ದೇವಾಲಯ, ತಿಮ್ಮಲಾಪುರ (ಹೊಸಪೇಟೆಯಿಂದ ಕೂಡ್ಲಗಿ ಹೋಗುವ ಮಾರ್ಗದಲ್ಲಿರುವುದು), ಮತ್ತು ಹಂಪಿಯಲ್ಲಿರುವ ರಾಜ್ಯಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಉಪನಿರ್ದೇಶಕರ ಕಛೇರಿಯ ಆವರಣದಲ್ಲಿರುವ ವಸ್ತುಸಂಗ್ರಹಾಲಯ ಹಾಗೂ ಕಮಲಾಪುರದ ಭಾರತೀಯ ಪುರಾತತ್ವ ಸರ್ವೇಕ್ಷಣಾಲಯ ಇಲಾಖೆಯ ವಸ್ತುಸಂಗ್ರಹಾಲಯಗಳಲ್ಲಿರುವ ಶೈವ ಶಿಲ್ಪಗಳನ್ನು ಈ ಅಧ್ಯಯನ ವ್ಯಾಪ್ತಿಗೆ ಒಳಪಡಿಸಲಾಗಿದೆ. ಈ ಭೌಗೋಳಿಕ ವ್ಯಾಪ್ತಿಯೊಂದಿಗೆ ಕಾಲ ಹಾಗೂ ಮಾಧ್ಯಮದ ಹಿನ್ನೆಲೆಯಲ್ಲಿಯೂ ಕೆಲವೊಂದು ಮಿತಿಗಳನ್ನು ಹಾಕಿಕೊಳ್ಳಲಾಗಿದೆ. ಇತಿಹಾಸ ಆರಂಭಕಾಲದಿಂದಲೂ ವಿಜಯನಗರ ಕಾಲದವರೆಗಿನ ಲೋಹ, ಶಿಲೆ, ಮತ್ತು ಗಾರೆ ಮಧ್ಯಮಗಳನ್ನು ಬಳಸಿ ಕಂಡರಿಸಲಾದ ಉಬ್ಬು ಮತ್ತು ದುಂಡು ಶಿಲ್ಪಗಳನ್ನು ಬಳಸಿಕೊಳ್ಳಲಾಗಿದೆ. ಹಾಗೂ ಈ ಶಿಲ್ಪಗಳನ್ನು ವಿವರಿಸುವ ಸಂದರ್ಭದಲ್ಲಿ ಲಭ್ಯವಿರುವ ಶೈವಾಗಮಗಳು, ಅವುಗಳ ಉಪಾಗಮಗಳು, ಶಿಲ್ಪರತ್ನ ಎಂಬ ಶಾಸ್ತ್ರಗ್ರಂಥಗಳನ್ನು ಹಾಗೂ ಪುರಾಣಗಳನ್ನು ವ್ಯಾಪ್ತಿಗೆ ಸೇರಿಸಿಕೊಳ್ಳಲಾಗಿದೆ.

ಹಾಗೆಯೇ ಶೀರ್ಷಿಕೆಯಲ್ಲಿ ಹೇಳಿರುವಂತೆ ವಿಷಯವು ಶೈವ ಶಿಲ್ಪಗಳಿಗೆ ಮಾತ್ರ ಸಂಬಂಧಿಸಿದ್ದಾಗಿದೆ. ಅಂದರೆ ಶಿವನ ಸೌಮ್ಯಮೂರ್ತಿಗಳು, ಅನುಗ್ರಹಮೂರ್ತಿಗಳು, ನೃತ್ಯಮೂರ್ತಿಗಳು, ದಕ್ಷಿಣಾಮೂರ್ತಿಗಳು, ಕಂಕಾಲ ಮತ್ತು ಭಿಕ್ಷಾಟನಾಮೂರ್ತಿಗಳು, ಮತ್ತು ಮುಖ್ಯ ರೂಪಗಳಾದ ಗಂಗಾಧರ, ಅರ್ಧನಾರೀಶ್ವರ, ಹರ್ಯರ್ಧ, ವೃಷಭವಾಹನ ಮುಂತಾದವುಗಳು ಅಲ್ಲದೇ, ಪುರಾಣ ಉಲ್ಲೇಖಿತ ವೃಷಭಾವತಾರಮೂರ್ತಿ, ಹಾಗೂ ಶಿವಲಿಂಗ ಆರಾಧಕ ಮತ್ತು ಸ್ಥಳ ಮಹಾತ್ಮೆ ಉಲ್ಲೇಖಿತ ಶಿವಲಿಂಗವನ್ನು ಆಲಂಗಿಸಿದ ಪಾರ್ವತಿ, ಆಂಜನೇಯನ ಮೂರ್ತಿಶಿಲ್ಪಗಳು, ಮತ್ತು ಮಹಾಭಾರತ ಉಲ್ಲೇಖಿತ ಪುರುಷಮೃಗ ಶಿಲ್ಪಗಳಿಗೆ ಸೀಮೀತಗೊಳಿಸಲಾಗಿದೆ. ಹಾಗೆಯೇ ಶಿವನ ಪರಿವಾರ ದೇವತೆಗಳಾದ ಪಾರ್ವತಿ, ಗಣೇಶ, ಕಾರ್ತಿಕೇಯ, ನಂದಿ, ಚಂಡಿಕೇಶ್ವರ, ಕಾಳಿ, ಮಹಿಷಾಸುರಮರ್ದಿನಿ, ಭೈರವಿ, ಶೈವ ದ್ವಾರಪಾಲಕರು, ಶೈವ ಯತಿಗಳು, ಶಿವಶರಣರು ಮುಂತಾದ ಶೈವ ಸಂಬಂಧಿತ ಎಲ್ಲ ಶಿಲ್ಪಗಳನ್ನು ಪ್ರಾಸಂಗಿಕವಾಗಿ ಚರ್ಚಿಸಲಾಗಿದೆ.

## ಅಧ್ಯಯನದ ವಿಧಾನ

ಒಂದು ಸಂಶೋಧನ ಪ್ರಬಂಧವನ್ನು ರಚಿಸುವಲ್ಲಿ ಪೂರ್ವಯೋಜಿತ ಅಧ್ಯಯನ ಕ್ರಮವನ್ನು ಅನುಸರಿಸುವುದು ಅತಿ ಮುಖ್ಯ. ಇದು ಆ ಅಧ್ಯಯನವನ್ನು ವ್ಯವಸ್ಥಿತವಾಗಿ ಹಾಗೂ ಸುಲಭವಾಗಿ ಕಟ್ಟಿಕೊಡುವಲ್ಲಿ ಸಹಾಯವಾಗುತ್ತದೆ. ಒಂದರ್ಥದಲ್ಲಿ ಹೇಳುವುದಾದರೆ ಸಂಶೋಧನಾ ಪ್ರಬಂಧಕ್ಕೆ ಪ್ರಥಮ ಹಾಗೂ ಅಂತಿಮ ರೂಪವನ್ನು ಈ ಅಧ್ಯಯನ ಕ್ರಮವೇ ನೀಡುತ್ತದೆ ಎಂದು ಹೇಳಬಹುದು. ಪ್ರಸ್ತುತ ಅಧ್ಯಯನವು ಹಂಪಿ ಪರಿಸರದ ಶೈವ ಶಿಲ್ಪಗಳು ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಈ ಮುಂದಿನ ಅಧ್ಯಯನ ಕ್ರಮವನ್ನು ಅನುಸರಿಸಲಾಗಿದೆ.

ಮೊದಲಿಗೆ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಗ್ರಂಥಸೂಚಿಯನ್ನು ತಯಾರಿಸಿ ಅಕಾರಾದಿಯಾಗಿ ಜೋಡಿಸಿಕೊಳ್ಳಲಾಯಿತು. ಪ್ರಸ್ತುತ ವಿಷಯಕ್ಕೆ ಕ್ಷೇತ್ರಕಾರ್ಯದಲ್ಲಿ ದೊರೆಯುವ ಶಿಲ್ಪಗಳೇ ಪ್ರಾಥಮಿಕ ಆಕರಗಳಾಗಿದ್ದು, ವ್ಯವಸ್ಥಿತವಾದ ಪೂರ್ವಯೋಜಿತ ವಿಧಾನವನ್ನು ಅನುಸರಿಸಿ ಕ್ಷೇತ್ರಕಾರ್ಯ ಕೈಗೊಳ್ಳಲಾಯಿತು. ಇಲ್ಲಿ ಅನುಸರಿಸಿರುವ ವಿಧಾನವೆಂದರೆ ಹಂಪಿಯಲ್ಲಿರುವ ಪ್ರತಿಯೊಂದು ಸ್ಮಾರಕದ ತಲನಕ್ಷೆಯನ್ನು ಸಂಗ್ರಹಿಸಿ ಹಾಗೂ ಅಗತ್ಯವಿದ್ದಲ್ಲಿ ತಯಾರಿಸಿ, ಇವುಗಳ ಆಧಾರದಿಂದ ಒಂದು ಸ್ಮಾರಕದಲ್ಲಿನ ಕ್ರಮವಾಗಿ ಅಧಿಷ್ಠಾನ, ಭಿತ್ತಿ, ಶಿಖರದಲ್ಲಿನ ಶಿಲ್ಪಗಳನ್ನು ದಿಕ್ಕುಗಳಾದಿಯಾಗಿ ಛಾಯಾಚಿತ್ರ ತೆಗೆದು, ನವರಂಗ, ರಂಗಮಂಟಪ, ಮುಖಮಂಟಪ ಅಥವಾ ಸಭಾಮಂಟಪ ಇವುಗಳಲ್ಲದೆ ಕಲ್ಯಾಣಮಂಟಪ, ಉತ್ಸವ ಮಂಟಪ, ಪ್ರಾಕಾರ ಮಂಟಪ ಮುಂತಾದವುಗಳಲ್ಲಿರುವ ಕಂಬಗಳಿಗೆ ಗಡಿಯಾರವು ತಿರುಗುವ ಮಾದರಿಯಲ್ಲಿ(clockwise), ಪೂರ್ವದಿಂದ ಪಶ್ಚಿಮ ದಿಕ್ಕಿನೆಡೆಗೆ ಬರುವಂತೆ ಸಂಖ್ಯೆ ನೀಡಿ, ಕಂಬಗಳ ಪಾರ್ಶ್ವಗಳನ್ನೂ ದಿಕ್ಕುಗಳಾದಿಯಾಗಿ ವಿಂಗಡಿಸಿ ಅವುಗಳಲ್ಲಿನ ಶಿಲ್ಪಗಳನ್ನು ಛಾಯಾಚಿತ್ರ ತೆಗೆಯುವುದರೊಂದಿಗೆ ಸಂಗ್ರಹಿಸಲಾಯಿತು. ಈ ರೀತಿ ಸಂಗ್ರಹಿಸಿದ ಶಿಲ್ಪಗಳ ಛಾಯಾಚಿತ್ರಗಳನ್ನು ಶಿಲ್ಪಗಳಲ್ಲಿನ ರೂಪ, ಲಕ್ಷಣಗಳನ್ನಾಧರಿಸಿ ಗಣಕಯಂತ್ರದ ಸಹಾಯದಿಂದ

ವಿಂಗಡಿಸಿ ಒಂದೆಡೆ ಕ್ರೋಡೀಕರಿಕೊಂಡು ಅವುಗಳ ವಿವರಗಳನ್ನು ಈ ಅಧ್ಯಯನದಲ್ಲಿ ನೀಡಲಾಗಿದೆ. ಈ ವಿಧಾನವನ್ನು ಅನುಸರಿಸುವ ಮೂಲಕ ಶಿಲ್ಪಗಳ ನಿಖರವಾದ ಸ್ಥಳ ನಿರ್ದೇಶನದ ಮಾಹಿತಿ ನೀಡಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ ಹಾಗೂ ಇದರೊಂದಿಗೆಯೇ ವಿಷಯಕ್ಕೆ ಅಗತ್ಯವೆನಿಸಿದ ಆನುಷಂಗಿಕ ಆಕರಗಳನ್ನು ಬಳಸಿಕೊಳ್ಳಲಾಗಿದೆ.

## ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವನ್ನು ಒಟ್ಟು ಆರು ಅಧ್ಯಾಯಗಳಾಗಿ ವಿಂಗಡಿಸಿಕೊಂಡಿದ್ದು ಅದರ ಸ್ವರೂಪ ಈ ಕೆಳಗಿನಂತಿದೆ.

ಮೊದಲನೆಯ ಅಧ್ಯಾಯ ಪ್ರಸ್ತಾವನೆಯಾಗಿದ್ದು, ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ಅಧ್ಯಯನ ವಿಧಾನವನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ಶಿಲ್ಪ ಪದದ ಅರ್ಥ, ಪ್ರಕಾರಗಳು, ಶಿಲ್ಪ ನಿರ್ಮಿಸಲು ಬಳಸುವ ಮಾಧ್ಯಮ, ಶಿಲ್ಪದ ಪ್ರಾಚೀನತೆ ಹಾಗೂ ಇದುವರೆಗಿನ ಅಧ್ಯಯನಗಳ ಸಮೀಕ್ಷೆಯ ವಿವರಣೆಗಳನ್ನು ತಿಳಿಸಲಾಗಿದೆ.

ಎರಡನೆಯ ಅಧ್ಯಾಯವು ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆಯಾಗಿದೆ. ಇದು ಹಂಪಿ ಪರಿಸರದ ಭೌಗೋಳಿಕತೆ, ಪ್ರಾಗಿತಿಹಾಸ, ಪೌರಾಣಿಕ ಹಿನ್ನೆಲೆ ಹಾಗೂ ಚರಿತ್ರೆಯನ್ನು ಕುರಿತು ಸಂಕ್ಷಿಪ್ತವಾದ ವಿವರಗಳನ್ನು ಒಳಗೊಂಡಿದೆ.

ಶೈವ ಧರ್ಮದ ಪ್ರಾಚೀನತೆ ಎಂಬುದು ಮೂರನೆಯ ಅಧ್ಯಾಯ. ಇದು ಶೈವ ಧರ್ಮವು ಸಿಂಧು ನಾಗರಿಕತೆಯಿಂದ ವೇದ, ರಾಮಾಯಣ, ಮಹಾಭಾರತ, ಪುರಾಣ ಮತ್ತು ಶೈವಾಗಮಗಳಲ್ಲಿ ಅಲ್ಲದೆ ಭಾರತ, ಮುಖ್ಯವಾಗಿ ಕರ್ನಾಟಕದಲ್ಲಿ ವಿವಿಧ ಅರಸುಮನೆತನಗಳ ಕಾಲಘಟ್ಟಗಳಲ್ಲಿ ಶೈವ ಧರ್ಮವು ಬೆಳೆದುಬಂದ ಬಗೆಯನ್ನು ಒಳಗೊಂಡಿದೆ. ಅದರಲ್ಲೂ ಮುಖ್ಯವಾಗಿ ವಿಜಯನಗರ ಕಾಲದಲ್ಲಿನ ಶೈವ ಧರ್ಮವನ್ನು ವಿವರಿಸುವಲ್ಲಿ ಹೆಚ್ಚು ಪ್ರಾಮುಖ್ಯತೆಯನ್ನು ನೀಡಲಾಗಿದೆ. ಹಾಗೆಯೇ ಶೈವ ಧರ್ಮದಲ್ಲಿನ ವಿಂಗಡನೆಗಳ ಕುರಿತಾಗಿಯೂ ಸಂಕ್ಷಿಪ್ತ ವಿವರಣೆಯನ್ನು ಒಳಗೊಂಡಿದೆ.

ನಾಲ್ಕನೆಯ ಅಧ್ಯಾಯವು ಶೈವಾಗಮಗಳು ಎಂಬುದಾಗಿದೆ. ಇದರಲ್ಲಿ ಶೈವ ಧರ್ಮಕ್ಕೆ ಪ್ರಮಾಣ ಗ್ರಂಥಗಳೆನಿಸಿದ ಶೈವಾಗಮಗಳು, ಅವುಗಳ ಹೆಸರು, ಅರ್ಥ, ಸಂಖ್ಯೆ ಹಾಗೂ ಅವುಗಳಲ್ಲಿರುವ ಶೈವತ್ವದ ವಿಚಾರಗಳು ಪ್ರಸ್ತುತ ಅಧ್ಯಯನಕ್ಕೆ ಹೇಗೆ ಪೂರಕವಾಗಿವೆ ಎಂಬುದನ್ನು ಚರ್ಚಿಸಲಾಗಿದೆ.

ಶೈವ ಶಿಲ್ಪಗಳು ಎಂಬುದು ಪ್ರಸ್ತುತ ಅಧ್ಯಯನದ ಐದನೇ ಹಾಗೂ ಪ್ರಮುಖ ಅಧ್ಯಾಯವಾಗಿದೆ. ಇದು ಸಂಪೂರ್ಣವಾಗಿ ಕ್ಷೇತ್ರಕಾರ್ಯವನ್ನು ಅವಲಂಭಿಸಿದೆ. ಹಂಪಿ ಪರಿಸರ ವ್ಯಾಪ್ತಿಯಲ್ಲಿ ಬರುವ ಶೈವ ಶಿಲ್ಪಗಳನ್ನು ಆಗಮ, ಪುರಾಣ, ಐತಿಹ್ಯ ಮತ್ತು ಶಿಲ್ಪಶಾಸ್ತ್ರಗ್ರಂಥಗಳಲ್ಲಿನ ಅವುಗಳ ಹಿನ್ನೆಲೆ ಹಾಗೂ ಪ್ರತಿಮಾ ಲಕ್ಷಣಗಳನ್ನು ಉಲ್ಲೇಸುವುದರ ಮೂಲಕ ಶಿಲ್ಪಗಳು ಆಗಮಗಳ ಅನ್ವಯ

ರಚಿತವಾಗಿವೆಯೇ ಎಂಬುದನ್ನು ಛಾಯಾಚಿತ್ರಗಳೊಂದಿಗೆ ಒರೆ ಹಚ್ಚಲಾಗಿದೆ. ಹಾಗೆಯೇ ಹಂಪಿ ಪರಿಸರದಲ್ಲಿ ಕಂಡುಬರುವ ಸಮಗ್ರ ಶಿವನ ಶಿಲ್ಪಗಳ ಕುರಿತಾದ ವಿವೇಚನೆಗಳನ್ನು ಒಳಗೊಂಡಿದೆ.

ಆರನೆಯ ಅಧ್ಯಾಯವು ಉಪಸಂಹಾರವಾಗಿದ್ದು ಇದು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳ ಸಂಕ್ಷಿಪ್ತ ರೂಪವಾಗಿದೆ. ಕೊನೆಯಲ್ಲಿ ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ನಕ್ಷೆಗಳನ್ನು ನೀಡಲಾಗಿದೆ.

**ಅಡಿಟಿಪ್ಪಣಿಗಳು**

೧. ರಾಮಚಂದ್ರರಾವ್ ಸಾ.ಕೃ., 'ಸಂಪ್ರದಾಯ ಶಿಲ್ಪಕಲೆ,' ತಿಪ್ಪೇಸ್ವಾಮಿ ಪಿ.ಆರ್. (ಸಂ.), *ಶಿಲ್ಪಕಲಾ ಪ್ರಪಂಚ*, ಪು.೩೫

೨. ಜ್ಞಾನಾನಂದ ಜಿ. (ಸಂ.), *ಶ್ರೀ ಕಾಶ್ಯಪ ಶಿಲ್ಪ ಶಾಸ್ತ್ರಂ(ಉತ್ತರಾರ್ಧ)*, ಪು.xii

೩. ಮೈಸೂರು ನಾಗರಾಜ ಶರ್ಮ, *ಹೊಯ್ಸಳ ಶಿಲ್ಪದಲ್ಲಿ ಶಿವ*, ಪು.೪

೪. ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ*, ಪು.xii

೫. ಪಂಚಜಾಕ್ಷ ಟಿ., *ಶಿಲ್ಪ ಸೌಂದರ್ಯ*, ಪು.೩

೬. ಶರಣಬಸಪ್ಪ ಕೋಲ್ಕಾರ, *ಶಿಲಾಯುಗದ ಗವಿ ಚಿತ್ರಗಳು*, ಪು.೧೭-೨೭

೭. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂ.೩, *ಹಂಪೆಯ ಶಾಸನಗಳು*, ಶಾ.ಸಂ.೧೪೫

೮. ಅದೇ, ಶಾ.ಸಂ.೩೬೫

೯. ಅದೇ, ಶಾ.ಸಂ.೧೪೭

೧೦. ಅದೇ, ಶಾ.ಸಂ.೩೫೦

೧೧. ಅದೇ, ಶಾ.ಸಂ.೫೭

೧೨. ಅದೇ, ಶಾ.ಸಂ.೬೯

೧೩. ಅದೇ, ಶಾ.ಸಂ.೩೨೭

೧೪. ಅದೇ, ಪು.xxxvii-xxxviii

೧೫. ಅದೇ, ಶಾ.ಸಂ.೩೧೧

೧೬. ಅದೇ, ಶಾ.ಸಂ.೩೯೮

೧೭. ಅದೇ, ಶಾ.ಸಂ.೩೪

೧೮. ಅದೇ, ಶಾ.ಸಂ.೭೩

೧೯. ಅದೇ, ಶಾ.ಸಂ.೧೮೨

೨೦. ಅದೇ, ಶಾ.ಸಂ.೨೦೬

೨೧. ಅದೇ, ಶಾ.ಸಂ.೮೧

೨೨. ಅದೇ, ಶಾ.ಸಂ.೨೧೩

೨೩. ಅದೇ, ಶಾ.ಸಂ.೧೩೨

೨೪. ಅದೇ, ಶಾ.ಸಂ.೧೮೯

೨೫. ಅದೇ, ಶಾ.ಸಂ.೩೨೬

೨೬. ಅದೇ, ಶಾ.ಸಂ.೮೪

೨೭. ಅದೇ, ಶಾ.ಸಂ.೨೮೯

೨೮. ಅದೇ, ಶಾ.ಸಂ.೨೮೮

೨೯. ಅದೇ, ಶಾ.ಸಂ.೨೦೯

## ಅಧ್ಯಾಯ ಎರಡು

# ಭೌಗೋಳಿಕ, ಪ್ರಾಗಿತಿಹಾಸ ಪೌರಾಣಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಯಾವುದೇ ಒಂದು ಪ್ರದೇಶವು ತನ್ನದೇ ಆದ ವಿಶಿಷ್ಟ ಭೌಗೋಳಿಕ ಲಕ್ಷಣಗಳನ್ನು ಹೊಂದಿರುತ್ತದೆ. ಒಂದು ಪ್ರದೇಶದ ಬೆಳವಣಿಗೆಯು ಅಲ್ಲಿನ ಭೌಗೋಳಿಕ ಅಂಶಗಳನ್ನೆ ಅವಲಂಭಿಸಿರುತ್ತದೆ. ಅಥವಾ ಒಂದು ಸಂಸ್ಕೃತಿಯ ವಿಕಸನದಲ್ಲಿ ಭೌಗೋಳಿಕ ಅಂಶಗಳು ಬಹುಪ್ರಮುಖವಾದ ಪಾತ್ರವಹಿಸುತ್ತವೆ. ಪ್ರಾಚೀನ ಭಾರತವನ್ನು ಒಳಗೊಂಡು ಪ್ರಪಂಚದೆಲ್ಲೆಡೆಯಲ್ಲಿ ಮಾನವನ ನೆಲೆ ಮತ್ತು ನಾಗರಿಕತೆಗಳನ್ನು ನದಿ ಪಾತ್ರ ಅಥವಾ ನೀರಿನ ನೆಲೆಗಳ ಸಮೀಪದಲ್ಲಿ ಉಗಮ ಮತ್ತು ವಿಕಾಸ ಹೊಂದಿರುವುದು ಕಂಡುಬಂದಿದೆ. ಪ್ರಸ್ತುತ ಅಧ್ಯಯನ ವಿಷಯದ ಕ್ಷೇತ್ರವು ಸಹ ಕರ್ನಾಟಕದ ಪವಿತ್ರ ನದಿಯೆನಿಸಿದ ತುಂಗಭದ್ರಾ ನದಿ ದಂಡೆಯ ಮೇಲೆ ಜನ್ಮತಳೆದು, ಪರಾಕಾಷ್ಠೆಯ ಮೆಟ್ಟಿಲನ್ನೂ ಏರಿ, ಕೊನೆಗೆ ಅವನತಿ ಹೊಂದಿದ ವಿಜಯನಗರ ಸಾಮ್ರಾಜ್ಯದ ಪ್ರಸಿದ್ಧ ರಾಜಧಾನಿ ಹಂಪೆಯ ಪರಿಸರವನ್ನು ಕುರಿತದ್ದಾಗಿದೆ. ಇಲ್ಲಿನ ಭೌಗೋಳಿಕ ಪರಿಸರವು ವಿಜಯನಗರ ಸಾಮ್ರಾಜ್ಯದ ಏಳ್ಗೆಯಿಂದ ಅವನತಿಯವರೆಗೆ ಪ್ರತ್ಯಕ್ಷ ಮತ್ತು ಪರೋಕ್ಷವಾದ ಪರಿಣಾಮವನ್ನು ಬೀರುತ್ತಲೇ ಬಂದಿದೆ ಎನ್ನಬಹುದು. ಆದ್ದರಿಂದ ಈ ಪರಿಸರದ ಭೌಗೋಳಿಕತೆ ಯನ್ನು ತಿಳಿಯುವುದು ಅವಶ್ಯಕ.

### ಭೌಗೋಳಿಕ ಹಿನ್ನೆಲೆ

ಪ್ರಸ್ತುತ ಅಧ್ಯಯನದ ಆಯ್ಕೆಯ ಪ್ರದೇಶವೆಂದರೆ ಹಂಪಿ ಪರಿಸರ. ವಿಶ್ವವಿಖ್ಯಾತ ಹಂಪೆಯು ಭೌಗೋಳಿಕ, ಪೌರಾಣಿಕ ಹಾಗೂ ಚಾರಿತ್ರಿಕವಾಗಿ ಪ್ರಸಿದ್ಧಿಯನ್ನು ಪಡೆದ ಸುಕ್ಷೇತ್ರ, ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿಗೆ ಸೇರಿದ ಹಂಪಿಯು ೧೪°.೩೦'–೧೫°.೧೫' ಉತ್ತರ ಅಕ್ಷಾಂಶ ಮತ್ತು ೨೫°.೪೦'–೭೭°.೧೧' ರೇಖಾಂಶಗಳ ನಡುವೆ ಇದೆ. ಇದರ ಪೂರ್ವಕ್ಕೆ ಬಳ್ಳಾರಿ ತಾಲೂಕು(ನಂತರ ಮುಂದುವರಿದು ಆಂಧ್ರಪ್ರದೇಶದ ಅನಂತಪುರ ಹಾಗೂ ಕರ್ನೂಲ್), ಪಶ್ಚಿಮಕ್ಕೆ ದಾವಣಗೆರೆ, ಗದಗ, ದಕ್ಷಿಣಕ್ಕೆ ಚಿತ್ರದುರ್ಗ, ಉತ್ತರಕ್ಕೆ ಕೊಪ್ಪಳ ಮತ್ತು ರಾಯಚೂರು

ಜಿಲ್ಲೆಗಳು ಗಡಿಗಳಾಗಿವೆ.[೧] ಹಂಪಿ ವಿಶ್ವಪರಂಪರೆ ತಾಣವೆಂದು ಘೋಷಿಸಿದ ೨೯ ಹಳ್ಳಿಗಳನ್ನು ಒಳಗೊಂಡ ೨೩೬ ಚದರು ಕಿಲೋಮೀಟರ್ ಪ್ರದೇಶವನ್ನು ಹಂಪಿ ಪರಿಸರ ಎಂದು ಪರಿಗಣಿಸಿ ಪ್ರಸ್ತುತ ವಿಷಯದ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಇಲ್ಲಿನ ಭೌಗೋಳಿಕ ಪರಿಸರವು ದೊಡ್ಡ ದೊಡ್ಡ ಬೆಟ್ಟಗುಡ್ಡ ಬಂಡೆಗಳಿಂದ ಆವೃತವಾಗಿದೆ. ಸಾಮಾನ್ಯವಾಗಿ ಇಲ್ಲಿ ಕ್ರಿಸ್ಟಸ್ ಲೈನ್‌ಸಿಸ್ಟ್(ಸ್ಪಟಿಕಾತ್ಮಕ ಪದರುಶಿಲೆ) ಎಪಿಡಿಯೋರಾಯಿಟ್ಟ ಗ್ರಾನೈಟ್(ಜಂಬಿಟ್ಟಿಗೆ) ಮತ್ತು ಲೇಟರ್ ಗ್ರಾನೈಟ್ಸ್ ಶಿಲಾಪದರುಗಳಿಂದ ಕೂಡಿದೆ. ಅಲ್ಲಲ್ಲಿ ಡೈಕ್ ಶಿಲೆ ಕಂಡುಬರುತ್ತದೆ.[೨] ಹಂಪಿಯ ಹತ್ತಿರ ಉತ್ತಮ ಮತ್ತು ಮಧ್ಯಮ ಗುಣಮಟ್ಟದ ಬೂದಿಬಣ್ಣದ ಕಣಶಿಲೆಗಳನ್ನು ಹಾಗೂ ಆನೆಗೊಂದಿ ಸಮೀಪದಲ್ಲಿ ಕೋರಡಂ ರೂಬಿ ಶಿಲೆಗಳು ದೊರೆಯುತ್ತವೆ. ಹಂಪಿ ಪ್ರದೇಶದ ರಾಮದುರ್ಗ ಪ್ರಸ್ತಭೂಮಿಯಲ್ಲಿರುವ ಸ್ಥಳೀಯ ಶಿಲೆಗಳಲ್ಲಿ ಸುರಮ ಅಂದರೆ ಅಂಟಿಮನಿ(Antimony) ಸಲ್ಫೈಡ್ ಅದುರಿನ ಕಣಗಳು ಚೆಲ್ಲಿದಂತೆ ವರದಿಯಾಗಿದೆ.[೩] ಪುರಾಣ ಕಾಲದಿಂದಲೂ ಪವಿತ್ರವೆನಿಸಿದ ಈ ಕ್ಷೇತ್ರದಲ್ಲಿ ಪುಣ್ಯತಮವಾದ ಗಿರಿಗಳು ಪ್ರಕಾಶಿಸುತ್ತವೆ. ಅವುಗಳಲ್ಲಿ ಮತಂಗಗಿರಿ, ಮಾಲ್ಯವಂತ ಗಿರಿ, ಋಷ್ಯಮೂಕ, ಕಿಷ್ಕಿಂಧಾದ್ರಿ, ಹೇಮಕೂಟ, ವಿಪ್ರಕೂಟ, ಗಂಧರ್ವಗಿರಿ, ಜಂಬೂನಾಥಗಿರಿ, ಸೋಮಪರ್ವತ, ಮಾಣಿಭದ್ರೇಶ್ವರ ಪರ್ವತ ಮುಂತಾದವುಗಳು ಪುಣ್ಯಗಿರಿಗಳೆನಿಸಿವೆ.[೪]

ತುಂಗಭದ್ರ ನದಿ ಇಲ್ಲಿನ ಜನರ ಜೀವನದಿ ಎನಿಸಿದೆ. ಕೃಷ್ಣಾ ನದಿಯ ಉಪನದಿಯಾದ ಇದು ಹಂಪಿ ಪರಿಸರದ ಏಕೈಕ ಪ್ರಧಾನ ನದಿಯಾಗಿದೆ. ಪಶ್ಚಿಮ ಘಟ್ಟದ ವರಾಹ ಪರ್ವತದ ಗಂಗಾಮೂಲದಲ್ಲಿ ಹುಟ್ಟುವ ಈ ನದಿಯು ತುಂಗ ಮತ್ತು ಭದ್ರಾ ಎಂಬೆರಡು ಶಾಖೆಗಳ ಸಂಗಮವಾಗಿದೆ. ಇಂದಿಗೂ ಪವಿತ್ರ ಕ್ಷೇತ್ರವಾದ ಹಂಪಿಯಲ್ಲಿ ಈ ನದಿಗೆ ಪಂಪಾತೀರ್ಥವೆಂದೇ ಕರೆಯಲಾಗುತ್ತದೆ. ಪಂಪಾ ಮಹಾತ್ಮೆಯಲ್ಲಿ ಇದನ್ನು ಸಪ್ತಕೋಟಿ ತೀರ್ಥಗಳ ಸಂಗಮವೆಂದು ಹಾಗೂ ಕಾಶಿ ಗಂಗೆಗೆ ಸಮಾನವಾದುದು ಎಂದು ಹೇಳಿದೆ. ಇದಕ್ಕೆ ಪೂರಕವಾಗಿ ಕ್ರಿ.ಶ.೧೧ನೇ ಶತಮಾನದ ಶಾಸನವೊಂದು ತುಂಗಭದ್ರ ನದಿಯನ್ನು ದಕ್ಷಿಣ ಭಾರತದ ಗಂಗಾ ಎಂದು ಉಲ್ಲೇಖಿಸುತ್ತದೆ.[೫] ಹಂಪಿ ಪರಿಸರದಲ್ಲಿ ಹಲವು ಕೆರೆ ಮತ್ತು ಬಾವಿಗಳೂ ಸಹ ಕಂಡುಬರುತ್ತವೆ. ಹಾಗೂ ಹಂಪಿ ಪರಿಸರದ ಬೆಟ್ಟಗಳ ಮಧ್ಯೆ ಅಲ್ಲಲ್ಲಿ ಫಲವತ್ತಾದ ಮತ್ತು ಕೃಷಿಗೆ ಯೋಗ್ಯವಾದ ಕಪ್ಪು ಮಣ್ಣಿನ ಭೂಮಿಯಿದೆ. ಹಾಗೂ ಮರಳು ಮಿಶ್ರಿತ ಕೆಂಪು ಭೂಮಿಯನ್ನೂ ಕಾಣಬಹುದು. ಇಲ್ಲಿ ಪರಿಸರದಲ್ಲಿ ತುಂಗಭದ್ರಾ ಮತ್ತು ಅದರ ಉಪನದಿಗಳ ಹಾಗೂ ಹಳ್ಳ, ಕೆರೆಗಳ ನೀರನ್ನು ಬಳಸಿಕೊಂಡು ಇಲ್ಲವೇ ಮಳೆಯಾಶ್ರಿತ ನೀರಿನ ಸಹಾಯದಿಂದ ಭತ್ತ, ಗೋಧಿ, ಜೋಳ, ಗೋವಿನ ಜೋಳ, ರಾಗಿ, ತೊಗರಿ, ಕಡಲೆ ಮುಂತಾದ ಧಾನ್ಯಗಳು ಹಾಗೂ ಕಬ್ಬು, ಹತ್ತಿ ಬಾಳೆ, ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತದೆ.[೬] ಈ ಎಲ್ಲ ಭೌಗೋಳಿಕ ಅಂಶಗಳು ಇಲ್ಲಿಯ ಮಾನವನ ಭೌದ್ಧಿಕ ಚಟುವಟಿಕೆಗಳಿಗೆ ಸಹಾಯ ಮಾಡಿ ಆತನ ಬೆಳವಣಿಗೆಗೆ ಕಾರಣವಾಯಿತು ಎನ್ನಬಹುದು.

## ಪ್ರಾಗಿತಿಹಾಸ

ಮಧ್ಯಯುಗೀನ ದಕ್ಷಿಣ ಭಾರತದ ಇತಿಹಾಸ ಕಾಲದಲ್ಲಿ ಅತ್ಯಂತ ಪ್ರಸಿದ್ಧ ಹಾಗೂ ಪ್ರಬಲ ರಾಜಮನೆತನವೆನಿಸಿದ ವಿಜಯನಗರ ಸಾಮ್ರಾಜ್ಯದ ರಾಜಧಾನಿ ಎಂದೇ ಹಂಪಿಯನ್ನು ಗುರುತಿಸಲಾಗುತ್ತದೆ. ಇದಕ್ಕೆ ಕಾರಣ ಅದು ತೋರಿದ ಸರ್ವತೋಮುಖ ಅಭಿವೃದ್ಧಿ ಹಾಗೂ ಇಂದಿಗೂ ಲಭ್ಯವಿರುವ ಅಗಣ್ಯ ಸ್ಮಾರಕಗಳು, ಶಿಲ್ಪಗಳು, ಶಾಸನಗಳು, ಇನ್ನು ಹಲವು ಆಕರಗಳು. ಇವುಗಳ ಮುಂದೆ ಹಂಪಿಯ ಪೂರ್ವ ಇತಿಹಾಸವು ಮರೆಯಾಗಿ ಹೋಗಿದೆ. ಅಥವಾ ಅದಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಲಾಗಿಲ್ಲ. ಆದರೂ ಕೆಲವೊಂದು ಸಂಶೋಧನೆಗಳಿಂದ ಮತ್ತು ಇಲ್ಲಿವರೆಗೂ ದೊರೆತ ಕೆಲವು ಪುರಾತತ್ವ ಅವಶೇಷಗಳಿಂದ ಹಂಪಿಯು ನವ ಶಿಲಾಯುಗದ ಮಾನವನ ಚಟುವಟಿಕೆಗಳಿಗೆ ತಾಣವಾಗಿತ್ತೆಂಬುದು ತಿಳಿದುಬರುತ್ತದೆ.

ಹಂಪಿ, ಕಮಲಾಪುರ, ವೆಂಕಟಾಪುರ, ನಾಗೇನಹಳ್ಳಿ, ಬುಕ್ಕಸಾಗರ, ರಾಂಪುರ, ತಿರುಮಲಾಪುರ, ಚಿಕ್ಕರಾಂಪುರ, ಅಂಜನಹಳ್ಳಿ, ಆನೆಗೊಂದಿ ಮುಂತಾದ ಹಂಪಿ ಪರಿಸರದ ಗ್ರಾಮಗಳಲ್ಲಿ ನವಶಿಲಾಯುಗದ ಮಾನವನು ಬಿಡಿಸಿರುವ ಕಲ್ಲಾಸರೆ/ಬಂಡೆಚಿತ್ರಗಳು ಅಥವಾ ವರ್ಣಚಿತ್ರ ನೆಲೆಗಳು ಕಂಡುಬಂದಿವೆ.[೭] ಆದರೆ ಆ ಸಂಸ್ಕೃತಿಯ ಕುರುಹುಗಳು ಹೆಚ್ಚಾಗಿ ಈಗ ಕಂಡುಬರುವುದಿಲ್ಲ. ಇಂತಹ ಬಂಡೆ ಚಿತ್ರಗಳು ಚಕ್ರತೀರ್ಥದ ಬಳಿ, ವಿಠ್ಠಲ ದೇವಸ್ಥಾನದ ಬಳಿಯಿರುವ ಮಸಲಯ್ಯನ ಗುಡ್ಡದ ಮೇಲೆ ಮತ್ತು ಆಚೆ ದಡದ ಆನೆಗೊಂದಿಯಲ್ಲಿಯೂ ಹಲವು ಗವಿಚಿತ್ರಗಳು ಕಂಡುಬಂದಿವೆ.

ಇವುಗಳಲ್ಲದೆ ಹಂಪೆಯಿಂದ ಸುಮಾರು ಎರಡು ಕಿಲೋಮೀಟರ್ ದೂರದಲ್ಲಿ ವಾಲಿಕಾಷ್ಟ ಎಂದು ಕರೆಯುವ ಚಿಕ್ಕ ಬೂದಿದಿಬ್ಬ ಕಂಡುಬಂದಿದೆ. ಹೀಗೆ ಮೇಲೆ ವಿವರಿಸಲಾದ ಕೆಲವೇ ಆದರೂ ನಿರ್ಣಾಯಕವಾದ ಆಧಾರಗಳಿರುವುದರಿಂದ ಹಂಪೆಯ ಪ್ರಾಂತವು ಶಿಲಾಯುಗದ ಮಾನವನ ಚಟುವಟಿಕೆಗಳ ಮತ್ತು ಸಂಸ್ಕೃತಿಯ ಕ್ಷೇತ್ರವಾಗಿತ್ತು ಎಂಬುದು ತಿಳಿದುಬರುತ್ತದೆ.

## ಪೌರಾಣಿಕ ಹಿನ್ನೆಲೆ

ಹಂಪೆಯು ಪ್ರಾಗೈತಿಹಾಸಿಕ ಕಾಲದಿಂದಲೇ ಜನವಸತಿಯನ್ನು ಆಕರ್ಷಿಸುವಂತಹ ಪರಿಸರ ಮತ್ತು ಅನುಕೂಲತೆಗಳನ್ನು ಹೊಂದಿದ್ದ ತಾಣವಾಗಿತ್ತಲ್ಲದೆ ಪುರಾಣ ಹಾಗೂ ಪ್ರಾಚೀನ ಮಹಾ ಕಾವ್ಯಗಳ ಕಾಲದಲ್ಲಿಯೂ ಅದು ಒಂದು ಪ್ರಮುಖವಾದ ಧಾರ್ಮಿಕ ಹಾಗೂ ಪವಿತ್ರ ಕ್ಷೇತ್ರವಾಗಿ ರೂಪುಗೊಂಡು ಪ್ರಸಿದ್ಧಿಗೆ ಬರುವಲ್ಲಿ ಸಫಲವಾಯಿತೆಂಬ ವಿಷಯವು ಸ್ಕಾಂದ ಪುರಾಣಾಂತರ್ಗತವಾದ ಪಂಪಾಮಹಾತ್ಮೆ, ರಾಮಾಯಣದ ಕಿಷ್ಕಿಂಧಾ ಕಾಂಡ ಮುಂತಾದ ಪ್ರಾಚೀನ ಸಾಹಿತ್ಯಾಧಾರಗಳಿಂದ ವೇದ್ಯವಾಗುತ್ತದೆ.[೮] ಪುರಾಣ ಕಾಲದಲ್ಲಿ ಹಂಪೆಯು ಪಂಪಾಕ್ಷೇತ್ರವೆಂದು ಕರೆಯಲ್ಪಟ್ಟಿದೆ. ಬ್ರಹ್ಮನ ಮಾನಸಪುತ್ರಿಯಾದ ಪಂಪಾದೇವಿಯು ತಂದೆಯ ಆಜ್ಞೆಯಂತೆ ಹೇಮಕೂಟ ಪರ್ವತದ ಉತ್ತರಕ್ಕೆ ಅರ್ಧಕ್ರೋಶ ದೂರದಲ್ಲಿರುವ ವಿಪ್ರಕೂಟಕ್ಕೆ ಬಂದು ಶಿವನ ಕುರಿತು ತಪಸ್ಸು ಮಾಡಿದಳು. ಇವಳ ತಪಸ್ಸನ್ನು ಮೆಚ್ಚಿದ ಶಿವನು ವಿರುಪಾಕ್ಷನೆಂಬ ಸುನಾಮದಿಂದ ಅವತರಿಸಿ

ಪಂಪಾದೇವಿಯನ್ನು ವರಿಸಿ ಪಂಪಾಪತಿ ಎನಿಸಿಕೊಂಡನು. ಈ ಸ್ಥಳವನ್ನು ಪಂಪಾಕ್ಷೇತ್ರವೆಂದು ಕರೆದು ಪಂಪೆಯು ತಪಸ್ಸು ಮಾಡಿದ ಸರೋವರವನ್ನು ಪಂಪಾ ಸರೋವರವೆಂದು ಖ್ಯಾತಿಯಾಗಲಿ ಎಂದು ವರವನ್ನಿತ್ತನು. ಅಂದಿನಿಂದ ಇದು ಪಂಪಾದೇವಿ, ಪಂಪಾಪತಿ, ಪಂಪಾಕ್ಷೇತ್ರ, ಪಂಪಾ ಸರೋವರ, ಪಂಪಾಪುರ ಎಂಬ ನಾಮಗಳಿಂದ ಈ ಸ್ಥಳವು ಕರೆಯಲ್ಪಟ್ಟಿತು. 'ಪಂ' ಎಂದರೆ ಅಮೃತ 'ಪ' ಎಂದರೆ ಸ್ವರ್ಣ, 'ಆ' ಎಂದರೆ ದೀನ. ಇದು 'ಪಂಪಾ' ಶಬ್ದ ಅರ್ಥವು. ನಿಜವಾಗಿಯೂ ಬೇಡುವವರಿಗೆ ಭುಕ್ತಿ ಮುಕ್ತಿಗಳನ್ನು ಕೊಟ್ಟು ರಕ್ಷಿಸುವವಳು.[೯] ಇದಕ್ಕೆ 'ಪಂಪಾ' ಎಂದು ಹೆಸರಾಯಿತೆಂದು ಹೇಳುತ್ತಾರೆ. ಇನ್ನೊಂದು ಅರ್ಥದಲ್ಲಿ ಪಂಪಾ ನದಿಯ ನೀರು ಶಾಖೆಗಳಾಗಿ ಹಂಚಿಹೋಗಿದ್ದರಿಂದ, ಪಂಪ ಅಂದರೆ ಭಾಗಗಳಾಗಿದ್ದು(ವಿಂಗಡಣೆ) ಎಂಬ ಅರ್ಥವನ್ನು ಪಡೆದು ಈ ಭಾಗದ ಜನರ ಬಾಯಲ್ಲಿ ಹಂಪಿ ಹೊಳೆಯಾಗಿದೆ.[೧೦] ಪಂಪಾ ಎಂಬುದು ತುಂಗಭದ್ರೆಯ ಇನ್ನೊಂದು ಹೆಸರು. ಇದನ್ನು ಪಂಪಾತೀರ್ಥವೆಂದೂ ಕರೆಯುತ್ತಾರೆ. ನದಿಯ ಮುರಿದಿರುವ(ತಿರುಗಿರುವ) ಭಾಗವು ಸಾಮಾನ್ಯವಾಗಿ ತೀರ್ಥವಾಗುತ್ತದೆ. ತೀರ್ಥಸ್ಥಳ ಎಂಬುದು ಪ್ರಾಚೀನ ಕ್ಷೇತ್ರವಾಗಿದ್ದು, ಅಲ್ಲಿ ನದಿಸ್ನಾನ ಅಥವಾ ಜಲಸ್ನಾನವು ಮೋಕ್ಷವನ್ನು ನೀಡುತ್ತದೆಂಬ ನಂಬಿಕೆ ಇದೆ.[೧೧] ಒಟ್ಟಾರೆಯಾಗಿ ಪಂಪೆಗೆ ಅಥವಾ ತುಂಗಭದ್ರಾ ನದಿಗೆ ಒಂದು ಪವಿತ್ರವಾದ ಸ್ಥಾನವನ್ನು ನೀಡಲಾಗಿದೆ. ಪಂಪೆಯು ವಿರೂಪಾಕ್ಷನನ್ನು ವರಿಸಿದ್ದರಿಂದ ಪಂಪಾಕ್ಷೇತ್ರವು ವಿರೂಪಾಕ್ಷ ಕ್ಷೇತ್ರವಾಗಿ ಮೆರೆಯತೊಡಗಿತು. ಹೀಗೆ ಹಂಪೆಯು ಒಂದು ಪ್ರಸಿದ್ಧ ಶೈವ ಕ್ಷೇತ್ರವಾಗಿ ಪುರಾಣ ಕಾಲದಲ್ಲಿ ಗುರುತಿಸಿಕೊಂಡಿದೆ. ಹಾಗೂ ಇಂದಿಗೂ ಉಳಿದುಕೊಂಡು ಬಂದಿದೆ.

•ರಾಮಾಯಣದ ಕಿಷ್ಕಿಂದಾ ಕಾಂಡದ ಪ್ರಕಾರ ಇದು ಆಂಜನೇಯನ ಕ್ಷೇತ್ರವೂ ಹೌದು. ರಾಮಾಯಣದಲ್ಲಿ ಬರುವ ವಾಲಿ–ಸುಗ್ರೀವರ ನಾಡು ಕಿಷ್ಕಿಂಧೆ. ಇಂದಿನ ಹಂಪೆ ಮತ್ತು ಆನೆಗೊಂದಿಗಳ ನಡುವಿನ ಪ್ರದೇಶವಾಗಿತ್ತೆಂದು ಹೇಳಲಾಗುತ್ತದೆ. ರಾಮನು ಇಲ್ಲಿ ಆಗಮಿಸಿ ವಾಲಿಯನ್ನು ಸಂಹರಿಸಿದನೆಂಬ ನಂಬಿಕೆಯೂ ಇದೆ. ಒಟ್ಟಾರೆಯಾಗಿ ರಾಮಾಯಣ ಕಾಲದಲ್ಲಿ ಹಂಪೆಯು ಪ್ರಸಿದ್ಧ ಕ್ಷೇತ್ರವಾಗಿತ್ತೆಂದು ಗುರುತಿಸಲ್ಪಡುತ್ತದೆ. ಅಲ್ಲದೆ ಇಲ್ಲಿನ ಸುತ್ತಮುತ್ತಲಿರುವ ಸುಗ್ರೀವಗುಹೆ, ವಾಲಿಭಂಡಾರ, ಮಧುವನ, ಅಂಜನಾಪರ್ವತ, ಸೀತಾಸೆರಗು ಮುಂತಾದವುಗಳಿಂದಾಗಿ ಈ ಪ್ರದೇಶ ಪ್ರಸಿದ್ಧವಾಗಿದೆ. ಹೀಗೆ ಪುರಾಣ ಕಾಲದಲ್ಲಿ ಹಂಪೆಯು ವೈಷ್ಣವ ಕ್ಷೇತ್ರವಾಗಿಯೂ ಖ್ಯಾತಿಗಳಿಸಿತ್ತೆಂಬುದನ್ನು ತಿಳಿಯಬಹುದು.

**ಚಾರಿತ್ರಿಕ ಹಿನ್ನೆಲೆ**

- ಹಂಪೆಯು ಕ್ರಿ.ಶ.೧–೨ನೇ ಶತಮಾನಗಳಲ್ಲಿ ಬೌದ್ಧರ ನೆಲೆಯಾಗಿತ್ತೆಂದು ತರ್ಕಿಸಲಾಗಿದೆ. ೧೯೭೫–೭೬ರ ಸಾಲಿನಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯವರು ಹಂಪೆಯ ಪ್ರದೇಶದಲ್ಲಿ ಉತ್ಖನನವನ್ನು ಕೈಗೊಂಡ ಸಮಯದಲ್ಲಿ ಒಂದು ಬ್ರಾಹ್ಮೀಲಿಪಿ ಇರುವ ಶಿಲಾಶಾಸನವು ದೊರೆಯಿತು. ಇದು ಒಡೆದು ಹೋಗಿರುವ ಶಾಸನದ ಕಲ್ಲಿನ ಒಂದು ಚಿಕ್ಕ ಭಾಗವಾಗಿದ್ದರೂ

ಸಹ ಹಂಪೆಯ ಪೂರ್ವ ಚರಿತ್ರೆಯ ಮೇಲೆ ಹೊಸ ಬೆಳಕನ್ನು ಬೀರುವಂಥ ಮುಖ್ಯ ಶೋಧನೆ ಹಾಗೂ ಪ್ರಮಾಣ ವಸ್ತುವಾಗಿದೆ. ಈ ಬ್ರಾಹ್ಮೀಲಿಪಿ ಶಾಸನವನ್ನು ತಿಳಿಹಸಿರು ಬಣ್ಣದ, ಸುಣ್ಣದ ಕಲ್ಲಿನ ಮೇಲೆ ಕೆತ್ತಲಾಗಿದೆ. ಈಗ ಕಾಣಬರುವುದು ಒಟ್ಟಿನಲ್ಲಿ ಎಂಟು ಅಕ್ಷರಗಳು ಮಾತ್ರ ಮೊದಲನೇ ಸಾಲಿನಲ್ಲಿ ಆರು, ಅದು ತ-ರ-ಸ-ಪು-ತ-ಸ ಎಂದಿದ್ದು ಎರಡನೇ ಸಾಲಿನಲ್ಲಿ ದಾ-ನಂ ಎಂದು ಕೆತ್ತಲಾಗಿದೆ. ಇದು ಹಂಪೆಯಲ್ಲಿ ಪ್ರಪ್ರಥಮವಾಗಿ ದೊರೆತ ಬ್ರಾಹ್ಮೀಲಿಪಿ ಶಾಸನವಾಗಿರುವುದಲ್ಲದೆ ಏಕೈಕವಾದುದಾಗಿದೆ. ಇದೇ ಶೈಲಿಯಲ್ಲಿ ಬರೆಯಲಾಗಿರುವ ಬ್ರಾಹ್ಮೀಲಿಪಿ ಶಾಸನಗಳು ಆಂಧ್ರದ ಬೌದ್ಧ ಕಲಾಕೇಂದ್ರಗಳಾದ ನಾಗಾರ್ಜುನಕೊಂಡ, ಅಮರಾವತಿ ಮುಂತಾದ ಸ್ಥಳಗಳಲ್ಲಿ ದೊರೆಯುತ್ತವೆ. ಮತ್ತು ಶಾಸನ ಕೆತ್ತನೆಗೆ ಬಳಸಿರುವ ತಿಳಿಹಸಿರು ಸುಣ್ಣದಕಲ್ಲು ಆಂಧ್ರದ ಪಲನಾಮ(ಈಗಿನ ಗುಂಟೂರು ಜಿಲ್ಲಾ ಪ್ರದೇಶ) ಭಾಗದಲ್ಲಿ ವಿಫುಲವಾಗಿ ದೊರೆಯುತ್ತದೆ. ಈ ಎಲ್ಲ ಕಾರಣಗಳಿಂದ ಆಂಧ್ರದ ಬೌದ್ಧರು ತಮ್ಮ ಉಪಯೋಗಾರ್ಥವಾಗಿ ಹಾಗೂ ಮತ ಪ್ರಚಾರಾರ್ಥವಾಗಿ ಚಿಕ್ಕ ಪ್ರಮಾಣದಲ್ಲಿ ಬಂದು ಬೌದ್ಧ ಸ್ತೂಪಗಳನ್ನು ವಿಹಾರಗಳನ್ನು ಮತ್ತು ಚೈತ್ಯ ಗೃಹಗಳನ್ನು ಕಟ್ಟಿಕೊಂಡಿರಬೇಕು. ಹೀಗೆ ಕ್ರಿ.ಶ.ಆರಂಭದಲ್ಲಿ ಹಂಪೆಯು ಬಹು ಮುಖ್ಯವಲ್ಲದಿದ್ದರೂ, ಒಂದು ಗಣನೀಯ ಬೌದ್ಧ ಮತಾನುಯಾಯಿಗಳ ಕೇಂದ್ರವಾಗಿತ್ತೆಂದು ತರ್ಕಿಸಬಹುದಾಗಿದೆ.[೧೨]

ಇದರ ನಂತರ ಹಂಪೆಯು ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ ಮತ್ತು ನೊಳಂಬರು, ಸಿಂಧರು, ಹೊಯ್ಸಳರು, ಹೊಸಮಲೆದುರ್ಗ, ಕುಮ್ಮಟದುರ್ಗದ ಅರಸರು ಹಾಗೂ ವಿಜಯನಗರದ ಅರಸರು ಇವೇ ಮೊದಲಾದ ರಾಜವಂಶೀಯರ ಆಳ್ವಿಕೆಗೆ ಒಳಪಟ್ಟಿದುದು ಎಂದು ತಿಳಿದುಬರುತ್ತದೆ.

**ಬಾದಾಮಿ ಚಲುಕ್ಯ**

ಬಾದಾಮಿ ಚಲುಕ್ಯರ ಆಳ್ವಿಕೆಗೆ ಈ ಪ್ರದೇಶ ಸೇರಿತ್ತೆನ್ನುವುದರ ಬಗ್ಗೆ ಯಾವುದೇ ಅನುಮಾನ ಗಳಿಲ್ಲ ವಾದರೂ ಅವರದೆಂದು ಹೇಳಬಹುದಾದ ಶಾಸನಗಳಾವುವೂ ಹಂಪಿಯ ಪರಿಸರದಲ್ಲಿ ದೊರೆತಿಲ್ಲ. ಆದರೆ ಬಾದಾಮಿ ಚಾಲುಕ್ಯ ವಂಶದ ಅರಸ ವಿನಯಾದಿತ್ಯ-ಸತ್ಯಾಶ್ರಯನ ಆಳ್ವಿಕೆಯ ಕಾಲದಲ್ಲಿ (ಕ್ರಿ.ಶ.೬೮೧-೬೯೬) ಆತನ ಮಂತ್ರಿ ಮತ್ತು ಸಂಧಿವಿಗ್ರಹಿಗಳಲ್ಲೊಬ್ಬನಾದ ರಾಮಪುಣ್ಯಲ್ಲಭ ನೆಂಬುವನಿಂದ ಕ್ರಿ.ಶ.೬೮೯ರಲ್ಲಿ ಹೊರಡಿಸಲಾದ ತಾಮ್ರಪಟ ಶಾಸನದಲ್ಲಿ ಹಂಪೆಯ ಅಥವಾ ಪಂಪಾತಟದ ಉಲ್ಲೇಖ ಬರುತ್ತದೆ. ಇದು ಸಂಸ್ಕೃತ ಭಾಷೆಯಲ್ಲಿದೆ.[೧೩]

ಈ ಶಾಸನವಲ್ಲದೆ ವಾಸ್ತುಶಿಲ್ಪದೆಡೆಗೆ ಗಮನಹರಿಸಿದಾಗ ಹೇಮಕೂಟದಲ್ಲಿರುವ ದೇವಾಲಯಗಳ ಸಮೂಹದಲ್ಲಿ ಕೆಲವು ವಿಜಯನಗರ ಪೂರ್ವಕಾಲದ್ದಾಗಿವೆಯೆಂದು ಗುರುತಿಸಲಾಗಿದೆ. ಇದರಲ್ಲಿಯ ಒಂದು ದೇವಾಲಯ ಬಾದಾಮಿ ಚಲುಕ್ಯರದ್ದೆಂದು ದೇವರಕೊಂಡಾರೆಡ್ಡಿಯವರು ಗುರುತಿಸುತ್ತಾರೆ. ಇವರು ತಿಳಿಸುವುದು ಹೇಮಕೂಟದ ದೇವಾಲಯದ ಸಮುಚ್ಚಯದ ವಾಯುವ್ಯದ ಇಳಿಜಾರಿನಲ್ಲಿ

ಈಗಿನ ವಿರೂಪಾಕ್ಷ ದೇವಾಲಯದ ದಕ್ಷಿಣ ಪ್ರವೇಶ ದ್ವಾರಕ್ಕೂ ತ್ರಿಕೂಟ ದೇವಾಲಯಕ್ಕೂ ಮಧ್ಯೆ ಒಂದು ಸಣ್ಣ ದೇವಾಲಯವಿದೆ. ಈ ದೇವಾಲಯವನ್ನು ಮರಳುಗಲ್ಲಿನಿಂದ ಕಟ್ಟಿದ್ದು, ಇತರ ದೇವಾಲಯಗಳಿಗಿಂತ ಇದು ಭಿನ್ನವಾಗಿದೆ. ದೇವಾಲಯವು ಅಧಿಷ್ಠಾನದಿಂದ ಸ್ತೂಪಿಯವರೆಗೂ ಸುಮಾರು ಇಪ್ಪತ್ತೈದು ಅಡಿ ಎತ್ತರವಿದೆ. ದ್ವಿತಳವನ್ನು ಹೊಂದಿರುವ ಈ ದೇವಾಲಯದಲ್ಲಿ ಗರ್ಭಗೃಹ ಮತ್ತು ಅಂತರಾಳ ಮಾತ್ರ ಮೂಲರೂಪದಲ್ಲಿ ಉಳಿದಿದ್ದು, ಮುಂದಿನ ನವರಂಗ ಭಾಗ ವಿಜಯನಗರ ಕಾಲದಲ್ಲಿ ಪೂರ್ಣವಾಗಿ ಗುರುತಿಸಲಾಗದಷ್ಟು ಬದಲಾಗಿದೆ. ಇದರ ರಚನೆ ಬಳಸಿರುವ ಮಾಧ್ಯಮದಿಂದ ಅಧಿಷ್ಠಾನದ ಮಾದರಿ ದೇವಾಲಯದ ರೀತಿ, ಎತ್ತರ, ಒಳಗಿನ ಸುರುಳಿ(ತರಂಗಗಳು) ಮುಂತಾದ ವಿವರಗಳಿಂದ ಈ ದೇವಾಲಯವನ್ನು ನಾವು ಬಾದಾಮಿ ಚಾಲುಕ್ಯರ ಕಾಲಕ್ಕೆ ಅಂದರೆ ಸುಮಾರು ಎಂಟನೆಯ ಶತಮಾನದ ಆರಂಭ ಕಾಲಕ್ಕೆ ಸೇರಿಸಬಹುದಾಗಿದೆಯೆಂದು ವಿದ್ವಾಂಸರ ಅಭಿಪ್ರಾಯವಾಗಿದೆ.[೧೪] ಈ ಎಲ್ಲ ಕಾರಣಗಳಿಂದಾಗಿ ಹಂಪಿ ಪ್ರದೇಶವು ಬಾದಾಮಿ ಚಲುಕ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದು.

## ರಾಷ್ಟ್ರಕೂಟರು

ರಾಷ್ಟ್ರಕೂಟರ ಕಾಲದ ಹಂಪೆಯ ಉಲ್ಲೇಖಿತ ಶಾಸನಗಳು ಯಾವುವು ದೊರೆತಿಲ್ಲ. ಆದರೆ ಇವರ ಕಾಲದ ವಾಸ್ತುರಚನೆಗಳು ವಿರೂಪಾಕ್ಷ ದೇವಾಲಯದ ಆವರಣದಲ್ಲಿ ಕಂಡುಬರುತ್ತವೆ. ವಿರೂಪಾಕ್ಷ ದೇವಾಲಯದ ಉತ್ತರ ದಿಕ್ಕಿಗಿರುವ ಕನಕಗಿರಿ ಗೋಪುರವನ್ನು ದಾಟಿ ಬಂದರೆ ಅಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲ್ಪಟ್ಟ ಸಣ್ಣ ಸಣ್ಣ ದೇವಾಲಯಗಳು ಕಾಣಬರುತ್ತವೆ. ಅದರಲ್ಲಿ ಎರಡು ದೇವಾಲಯಗಳು ಉಳಿದೆಲ್ಲವುಗಳಿಗಿಂತ ಪ್ರಾಚೀನವಾಗಿದ್ದು ರಾಷ್ಟ್ರಕೂಟರ ಕಾಲಕ್ಕೆ ಸೇರಿದವುಗಳಾಗಿವೆ. ಅವು ಮಹಿಷಾಸುರ ಮರ್ದಿನಿ ಅಥವಾ ದುರ್ಗಾ ದೇವಾಲಯ ಹಾಗೂ ನಾಗನಂದೀಶ್ವರ ದೇವಾಲಯ. ಇವುಗಳ ರಚನಾ ಶೈಲಿ ಹಾಗೂ ಬಳಸಿದ ಮಾಧ್ಯಮದಿಂದ ಇವುಗಳನ್ನು ೧೦ನೇ ಶತಮಾನ ಅಂದರೆ ರಾಷ್ಟ್ರಕೂಟರ ಕಾಲಕ್ಕೆ ಸೇರಿಸಬಹುದಾಗಿದೆ.[೧೫] ಆದರೆ ಎಂ.ಎಸ್.ಕೃಷ್ಣಮೂರ್ತಿಯವರು ಮಹಿಷಮರ್ದಿನಿ ದೇವಾಲಯವು ನೊಳಂಬ ಶೈಲಿಯಲ್ಲಿದ್ದು, ನೊಳಂಬರ ಅಪರೂಪದ ವಾಸ್ತುಕೃತಿ ಎಂದು ಹೇಳುತ್ತಾರೆ.[೧೬] ಒಟ್ಟಾರೆಯಾಗಿ ಅದೇನೆ ಇರಲಿ ಈ ಎಲ್ಲ ಅಂಶಗಳಿಂದ ರಾಷ್ಟ್ರಕೂಟರ ಆಳ್ವಿಕೆ ಹಂಪೆಯಲ್ಲಿ ಇತ್ತೆಂದು ಸ್ಪಷ್ಟವಾಗಿ ಗುರುತಿಸಬಹುದು.

## ಕಲ್ಯಾಣದ ಚಾಲುಕ್ಯರು ಮತ್ತು ನೊಳಂಬರು

ರಾಷ್ಟ್ರಕೂಟರನ್ನು ಸಿಂಹಾಸನದಿಂದ ಇಳಿಸಿ ಪಟ್ಟಕ್ಕೆ ಬಂದ ಕಲ್ಯಾಣದ ಚಾಲುಕ್ಯರ ಕಾಲದ ಹಾಗೂ ಅವರ ಮಾಂಡಲೀಕರಾಗಿದ್ದ ನೊಳಂಬರ ಶಾಸನಗಳು ಈ ಪ್ರದೇಶದಲ್ಲಿ ದೊರೆತಿವೆ. ಕಲ್ಯಾಣ ಚಾಲುಕ್ಯ ಅರಸರ ಶಾಸನಗಳಲ್ಲಿ ಹಂಪೆಗೆ ಸಂಬಂಧಿಸಿದಂತೆ ಮೊದಲನೆಯದು ಕ್ರಿ.ಶ.೯೮೮ರಲ್ಲಿ ಹೊರಡಿಸಲಾದ ಕನ್ನಡ ಶಿಲಾಶಾಸನವಾಗಿದೆ. ಇದು .......ಮಣ್ಣಮಯ್ಯನೆಂಬ ಹೆಸರಿನ ಮಹಾಮಾತ್ಯನಿಗೆ ಅರಸು ಅಹವಮಲ್ಲನಿಂದ ಕೆಲವೊಂದು ಭೂದಾನವನ್ನು ಕೊಟ್ಟ ವಿವರಗಳನ್ನು ತಿಳಿಸುತ್ತದೆ.

ಹೆಚ್ಚಿನ ವಿವರಗಳು ಅಳಿಸಿ ಹೋಗಿವೆಯಾದರೂ ಆ ಸ್ಥಳವನ್ನು ತುಂಗಭದ್ರೆಯ ತೆಂಕಣ ತಡಿಯ ಹಂಪೆಯೆಂದು ನೇರವಾಗಿ ಉಲ್ಲೇಖಿಸಿರುವುದನ್ನು ಗಮನಿಸಬಹುದು.[೧೬]

ಹಂಪೆಯ ಹತ್ತಿರವಿರುವ ಗೊನಹಾಳು ಎಂಬ ಗ್ರಾಮದಲ್ಲಿ ದೊರೆತ ಶಾಸನವು[೧೭] ಇರಿವ ನೊಳಂಬನಿಗೆ ಸಂಬಂಧಿಸಿದ ಶಾಸನವಾಗಿದೆ. ಈ ಶಾಸನದಲ್ಲಿ ಕಲ್ಯಾಣದ ಚಾಲುಕ್ಯ ಐದನೆಯ ವಿಕ್ರಮಾದಿತ್ಯನ ಕಾಲದಲ್ಲಿ ಅವನ ಸಾಮಂತ ಇರಿವನೊಳಂಬ ಮತ್ತವನ ಪತ್ನಿಯು ಸ್ವಸ್ತಿ ಶಕ ವರ್ಷ ೯೩೬ನೆಯ ಶ್ರಾವಣಮಾಸದಲ್ಲಿ ಪಂಪಾತೀರ್ಥ(?)ದಲ್ಲಿನ ಮಹಾಕಾಳ ದೇವರಿಗೆ .....ಪನ್ನಸುಗಳನ್ನು ದಾನ ನೀಡಿದ ಉಲ್ಲೇಖವಿದೆ. ಶಾಸನವು ತ್ರುಟಿತಗೊಂಡಿದ್ದರಿಂದ ಹೆಚ್ಚಿನ ವಿವರಗಳು ತಿಳಿಯುವುದಿಲ್ಲ. ಶಾಸನದ ಮುಖ್ಯ ಅಂಶವೆಂದರೆ ಪಂಪಾ ಹಾಗೂ ಮಹಾಕಾಳ ಎಂಬ ಉಲ್ಲೇಖಗಳಿರುವುದು ಇದು ಪಂಪಾತೀರ್ಥದಲ್ಲಿ ಅಥವಾ ಹಂಪೆಯಲ್ಲಿ ಮಹಾಕಾಳ ದೇವರ ದೇವಾಲಯವಿದ್ದುದನ್ನು ತಿಳಿಸುತ್ತದೆ. ಆದರೆ ಪ್ರಸ್ತುತದಲ್ಲಿ ಮಹಾಕಾಳ ಎಂಬ ದೇವಾಲಯವು ಕಾಣಸಿಗುವುದಿಲ್ಲ. ಅಥವಾ ಗುರುತಿಸಲಾಗಿಲ್ಲ ಎಂದು ಹೇಳಬಹುದು. ನೊಳಂಬರ ಇನ್ನೊಂದು ಶಾಸನವೆಂದರೆ ಕ್ರಿ.ಶ.೧೦೧೮ರ ಬಾಗಳೀ ಶಾಸನ.[೧೮] ಈ ಶಾಸನದಲ್ಲಿ ಚಾಲುಕ್ಯ ದೊರೆ ಜಗದೇಕಮಲ್ಲ ಜಯಸಿಂಘನ ಮಾಂಡಳಿಕನಾದ ನೊಳಂಬ ಉದಯಾದಿತ್ಯನ ಉಲ್ಲೇಖವಿದ್ದು, ಈತನು ಪಂಪಾಪುರದ ತೀರ್ಥಕೆ ಬಿಜಯಂಗೆಯ್ದು ತತ್ಕಾಲದೊಳು ಬಾಳ್ಗುಳಿಯ ಕಲಿದೇವಸ್ವಾಮಿಗೆ ದಾನ ನೀಡಿದ ಉಲ್ಲೇಖಗಳಿವೆ. ಈ ಶಾಸನದಿಂದ ತಿಳಿಯುವ ಮುಖ್ಯ ಅಂಶವೆಂದರೆ ಈ ಕಾಲಕ್ಕಾಗಲೇ ಪಂಪೆಯನ್ನು ಪಂಪಾಪುರವೆಂದು ಕರೆದಿದ್ದು, ಇದು ಪವಿತ್ರ ಕ್ಷೇತ್ರವಾಗಿ ಬಹುವಿಸ್ತಾರವನ್ನು ಹೊಂದಿತ್ತೆಂಬುದು ತಿಳಿದುಬರುತ್ತದೆ. ಒಟ್ಟಾರೆ ಈ ಶಾಸನಗಳ ಪ್ರಕಾರ ಹಂಪಿ ಪ್ರದೇಶವು ನೊಳಂಬವಾಡಿ ೩೨ ಸಾಸಿರ ಪ್ರಾಂತಕ್ಕೆ ಸೇರಿತ್ತೆಂಬುದು ತಿಳಿದುಬರುತ್ತದೆ.

**ಸಿಂಧರು**

ಕುರುಗೋಡನ್ನು ಕೇಂದ್ರವಾಗಿರಿಸಿಕೊಂಡು ಆಳ್ವಿಕೆ ನಡೆಸಿದ ಸಿಂಧರು ಈ ಪ್ರದೇಶದ ಮೇಲೆ ಪ್ರಭುತ್ವ ಹೊಂದಿದ್ದರು. ಕ್ರಿ.ಶ.೧೧೯೯ರ ಶಾಸನ[೨೦]ದಿಂದ ಈ ವಿಷಯವನ್ನು ತಿಳಿಯಬಹುದು. ಈ ಶಾಸನದಲ್ಲಿ ಸಿಂಧವಂಶದ ಇಮ್ಮಡಿ ರಾಚಮಲ್ಲನ ಮಗನಾದ ಕಲಿದೇವನು ಕುರುಗೋಡನ್ನಾಳುತ್ತಿದ್ದಾಗ ವಿರೂಪಾಕ್ಷತೀರ್ಥ ರಕ್ಷಣಾರ್ಥವಾಗಿ ಸಾಮಂತ ಮಾದೆನಾಯಕನು ಮತಂಗ ಪರ್ವತವನ್ನು ಪರಿಪಾಲಿಸುತ್ತಿದ್ದ. ಇವನ ಕೈ ಕೆಳಗಿದ್ದ ಮೈದುನ ಚೌಡನೆಂಬುವವನು ಪಂಪಾದೇವಿ ಮತ್ತು ಭೈರವದೇವಗೃಹಗಳಿಗೆ ದಾನ ನೀಡಿದ ಉಲ್ಲೇಖವಿದೆ.

**ಹೊಯ್ಸಳರು**

ಹೊಯ್ಸಳ ಇಮ್ಮಡಿ ಸೋಮೇಶ್ವರನ ಕ್ರಿ.ಶ.೧೨೪೦ರ ಶಾಸನವು[೨೧] ಹಂಪೆಯ ವಿರೂಪಾಕ್ಷ ದೇವಾಲಯದ ಕನಕಗಿರಿ ಗೋಪುರದಲ್ಲಿ ಪಶ್ಚಿಮಕ್ಕೆ ಇದೆ. ಈ ಶಾಸನವು ಸೋಮೇಶ್ವರನು ಹೇಮಕೂಟದಲ್ಲಿನ ವಿರೂಪಾಕ್ಷ ದೇವರಿಗೆ ಚಿಕ್ಕಗರಜೆ ಎಂಬ ಗ್ರಾಮವನ್ನು ದಾನ ನೀಡಿ ಅದರ ಆದಾಯದಲ್ಲಿ ಸಲ್ಲಬೇಕಾದ ಪೂಜಾ ವಿವರಗಳನ್ನು ತಿಳಿಸುತ್ತದೆ. ಇದು ಬಿಟ್ಟರೆ ಹೊಯ್ಸಳರ

ಕಾಲದ ದಾಖಲೆಗಳಲ್ಲಿ ಹಂಪೆಯ ಉಲ್ಲೇಖ ಬಂದಿರುವುದಿಲ್ಲ. ಆದರೆ ಮುಂದೆ ಬಂದ ವಿಜಯನಗರದ ಸಾಮ್ರಾಜ್ಯ ಸ್ಥಾಪಕರಾದ ಹರಿಹರ ಬುಕ್ಕರು ಹೊಯ್ಸಳ ಮುಮ್ಮಡಿ ಬಲ್ಲಾಳನ ಮಹಾಮಂಡಲೇಶ್ವರರಾಗಿಯೇ ಸಾಮ್ರಾಜ್ಯ ಸ್ಥಾಪಿಸಿ ಹೊಯ್ಸಳರ ಪರಂಪರೆಯನ್ನು ಮುಂದುವರೆಸಿದರು ಎಂಬ ಅಂಶಗಳು ಚರಿತ್ರೆಯ ಅಧ್ಯಯನಗಳಿಂದ ತಿಳಿದುಬರುತ್ತದೆ.

### ಹೊಸಮಲೆದುರ್ಗದ ಅರಸರು

ಹಂಪೆಯಲ್ಲಿ ವಿಜಯನಗರ ಆಳ್ವಿಕೆಯ ಪೂರ್ವದಲ್ಲಿ ಮುಮ್ಮಡಿ ಸಿಂಗೆಯ ನಾಯಕನ ಮಗನಾದ ಕಂಪಿಲದೇವನ ಆಳ್ವಿಕೆ ಇತ್ತು. ಕುಮ್ಮಟದ ಅರಸರ ಕುರಿತು ತಿಳಿಯಲು ಸಾಹಿತ್ಯ, ಕೈಫಿಯತ್ತು ಮತ್ತು ಶಾಸನಗಳು ಸಹಾಯವಾಗಿವೆ. ಕುಮ್ಮಟದುರ್ಗ ಮತ್ತು ಹೊಸಮಲೆದುರ್ಗ ಗಳೆರಡನ್ನು ರಾಜಧಾನಿಯನ್ನಾಗಿಸಿಕೊಂಡು ಆಳಿದ ಇವರ ಕಾಲದ ಪ್ರಮುಖ ಅರಸ ಕುಮಾರರಾಮ ಅಥವಾ ರಾಮನಾಥ. ಕ್ರಿ.ಶ.೧೩೨೭ರಲ್ಲಿ ದೆಹಲಿಯ ಮಹಮ್ಮದ್ ಬಿನ್ ತುಘಲಕ್‌ನ ಸೈನ್ಯ ಕುಮ್ಮಟದ ಮೇಲೆ ದಾಳಿ ಮಾಡಿತು. ಈ ದಾಳಿಯಲ್ಲಿ ಕಂಪಿಲದೇವ ಹಾಗೂ ಅವನ ಮಗನಾದ ರಾಮನಾಥ ಮರಣ ಹೊಂದಿದರು.[೨] ಕುಮಾರರಾಮನು ತನ್ನ ಶೌರ್ಯ ಮತ್ತು ಆದರ್ಶಗುಣಗಳಿಂದ ದೈವತ್ವದ ಸ್ಥಾನ ಪಡೆದಿರುವನು. ಶಾಸನಗಳು ಈತನ ಹೆಸರಿನಲ್ಲಿ ದೇವಾಲಯಗಳನ್ನು ನಿರ್ಮಿಸಿ ಪೂಜಿಸಿದ ಬಗ್ಗೆ ತಿಳಿಸುತ್ತವೆ. ಹೀಗೆ ಹೊಸಮಲೆದುರ್ಗದ ಅರಸರು ವಿಜಯನಗರದ ಅರಸರ ಪೂರ್ವದಲ್ಲಿ ಹಂಪೆಯಲ್ಲಿ ಅತ್ಯಂತ ಪ್ರಬಲ ಹಾಗೂ ಪ್ರಭಾವಿ ಅರಸರಾಗಿದ್ದರೆನ್ನಬಹುದು.

ಇನ್ನೊಂದು ಮುಖ್ಯವಾದ ಅಂಶವೆಂದರೆ ಈ ಮನೆತನದ ಕಂಪಿಲರಾಯನು ಹಂಪಿಯಲ್ಲಿ ಹೇಮಕೂಟದ ದೇವಾಲಯದ ಸಮೂಹದಲ್ಲಿ ಒಂದು ಶೈವ ತ್ರಿಕೂಟ ದೇವಾಲಯವನ್ನು ಕಟ್ಟಿಸಿದುದು. ಇದಕ್ಕೆ ಶಾಸನ ಉಲ್ಲೇಖವೂ ಇದೆ. ಇದರಲ್ಲಿ ಮುಮ್ಮಡಿ ಸಿಂಗೆಯನಾಯಕನ ಮಗನಾದ ವೀರಕಂಪಿಲದೇವನು ತಮ್ಮ ತಾಯಿ ಮಾರನಾಕಿತಿ, ತಂದೆ ಸಿಂಗಿಯನಾಯಕ ಮತ್ತು ಪೆರುಡಿನಾಯಕನ ಹೆಸರಿನಲ್ಲಿ ಮೂರು ಲಿಂಗಗಳನ್ನು ಪ್ರತಿಷ್ಠೆ ಮಾಡಿ ಶಿವಾಲಯ ಕಟ್ಟಿಸಿದುದನ್ನು ತಿಳಿಸುತ್ತದೆ.

### ವಿಜಯನಗರದ ಅರಸರು

೧೪ನೇ ಶತಮಾನದ ಆರಂಭದಲ್ಲಿ ಉತ್ತರದಲ್ಲಿಯ ಪ್ರಬಲ ಮಹಮ್ಮದೀಯ ಶಕ್ತಿಯು ದಕ್ಷಿಣದಲ್ಲಿನ ಆನೆಗುಂದಿಯಂತಹ ಚಿಕ್ಕ ರಾಜ್ಯಗಳನ್ನಲ್ಲದೆ ದೇವಗಿರಿ, ವರಂಗಲ್ಲ, ಹೊಯ್ಸಳ, ಮಧುರೆಯಂತಹ ದೊಡ್ಡ ರಾಜ್ಯಗಳನ್ನು ಉರುಳಿಸಿತು. ಇಂತಹ ಸಂದರ್ಭದಲ್ಲಿ ಈ ಪಾರತಂತ್ರ್ಯವನ್ನು ಅತ್ಯಂತ ಪ್ರಬಲವಾಗಿ ಪ್ರತಿಭಟಿಸಿದವನು ಹೊಯ್ಸಳರ ಕೊನೆಯ ಪ್ರಬಲ ಅರಸ ಮುಮ್ಮಡಿ ವೀರಬಲ್ಲಾಳ. ಈ ಮುಮ್ಮಡಿ ವೀರಬಲ್ಲಾಳನ ಮಹಾಮಂಡಲೇಶ್ವರನಾಗಿದ್ದ ಹರಿಹರನು ಪರಕೀಯ ದಾಳಿಗಳನ್ನು ಸಮರ್ಥವಾಗಿ ಎದುರಿಸುತ್ತಿದ್ದ ಸಾಮಂತನಾಗಿದ್ದನು. ಹೊಯ್ಸಳ ವಂಶದ ಕೊನೆಯ ಕುಡಿಯಾಗಿದ್ದ ಮುಮ್ಮಡಿ ವೀರಬಲ್ಲಾಳನ ಮಗ ವೀರ ವಿರೂಪಾಕ್ಷ ನಾಲ್ವಡಿ ಬಲ್ಲಾಳನು ಮಡಿದ ಮೇಲೆ ಸ್ವತಂತ್ರನಾಗಿ ಅಳ್ವಿಕೆ ಆರಂಭಿಸಿದನು. ಈತನು ಶೃಂಗೇರಿಯ ಶ್ರೀ ಶಂಕರಾಚಾರ್ಯ

ಮಠದ ಗುರುಗಳಾಗಿದ್ದ ವಿದ್ಯಾರಣ್ಯರ ಸಹಾಯದಿಂದ ಹಾಗೂ ತನ್ನ ನಾಲ್ಕು ಜನ ಸಹೋದರರಾದ ಬುಕ್ಕರಾಯ, ಕಂಪಣ, ಮಾರಪ್ಪ, ಮುದ್ದಪ್ಪರ ಬೆಂಬಲದಿಂದ ಕ್ರಿ.ಶ.೧೩೩೬ರಲ್ಲಿ ವಿದ್ಯಾನಗರ ಅಥವಾ ವಿಜಯನಗರ ಎಂಬ ಹೆಸರಿನಲ್ಲಿ ಸ್ವತಂತ್ರ ಸಾಮ್ರಾಜ್ಯವನ್ನು ಕಟ್ಟಿ ಆಳ್ವಿಕೆ ಮುಂದುವರೆಸಿದನು. ಹೀಗೆ ವಿಜಯನಗರ ಸಾಮ್ರಾಜ್ಯ ದಕ್ಷಿಣದಲ್ಲಿನ ಮುಸ್ಲಿಂ ದಾಳಿಗಳನ್ನು ತಡೆಗಟ್ಟುವ ಹಾಗೂ ಹಿಂದೂ ಪರಂಪರೆಯನ್ನು ರಕ್ಷಿಸುವ ಪ್ರಬಲ ಸಾಮ್ರಾಜ್ಯವಾಗಿ ಉದಯಿಸಿತು ಎಂದು ಹೇಳಬಹುದು.

ವಿಜಯನಗರ, ವಿಜಯನಗರ ಪಟ್ಟಣ, ವಿದ್ಯಾನಗರ, ವಿದ್ಯಾನಗರಿ, ಹೊಸಪಟ್ಟಣ ಮುಂತಾದ ಹೆಸರುಗಳಿಂದ ಕರೆಯಲ್ಪಡುವ ವಿಜಯನಗರ ಸಾಮ್ರಾಜ್ಯವು ಕ್ರಿ.ಶ.೧೩೩೬ ರಿಂದ ೧೫೬೫ ರವರೆಗೆ ಸಂಗಮ, ಸಾಳುವ, ತುಳುವ, ಅರವೀಡು ಎಂಬ ನಾಲ್ಕು ಮನೆತನಗಳು ಆಳ್ವಿಕೆ ನಡೆಸಿದವು. ಮೊದಲು ಆನೆಗೊಂದಿ ನಂತರದಲ್ಲಿ ಹಂಪೆ, ಕೊನೆಯಲ್ಲಿ ಪೆನುಗೊಂಡಗಳು. ಇವರ ರಾಜಧಾನಿಗಳಾಗಿ ಮೆರೆದವು. ವರಾಹವು ಇವರ ರಾಜ್ಯ ಲಾಂಛನವಾಗಿ ಶೋಭಿಸಿತು.

**ಸಂಗಮ ಮನೆತನ (ಕ್ರಿ.ಶ.೧೩೩೬–೧೪೮೫)**

**ಸಂಗಮ ಅರಸರ ವಂಶಾವಳಿ**




**ಕೃಪೆ:** ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ)

**ಮೊದಲನೇ ಹರಿಹರ (ಕ್ರಿ.ಶ.೧೩೩೬–೧೩೪೬)**

ವಿಜಯನಗರವನ್ನು ಆಳಿದ ನಾಲ್ಕು ಮನೆತನಗಳಲ್ಲಿ ಸಂಗಮ ವಂಶವು ಮೊದಲನೆಯದಾಗಿದ್ದು, ಮೊದಲನೇ ಹರಿಹರನು ಅದರ ಸ್ಥಾಪಕನು. ಈತನ ತಂದೆ ಸಂಗಮ ಆದ್ದರಿಂದ ಈ ವಂಶಕ್ಕೆ ಸಂಗಮ ಮನೆತನವೆಂಬ ಹೆಸರು ಬಂದಿತು. ಹರಿಹರನು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದ್ದನಲ್ಲದೆ ಎರಡು ದಶಕಗಳ ಕಾಲಗಳಷ್ಟು ಆಳ್ವಿಕೆ ನಡೆಸಿದನು. ಇದರಲ್ಲಿ ಈತನ ಸಹೋದರರ ಪಾತ್ರವು ಮುಖ್ಯವಾಗಿತ್ತು. ಇವರು ಕ್ರಮವಾಗಿ ಕಂಪಣನು ಉದಯಗಿರಿ ರಾಜ್ಯವನ್ನು, ದೊರಸಮುದ್ರವನ್ನು ಬುಕ್ಕನು, ಮಲೆಯ ರಾಜ್ಯವನ್ನು ಮಾರಪ್ಪ ಹಾಗೂ ಮುಳುಬಾಗಿಲು ರಾಜ್ಯವನ್ನು ಮುದ್ದಪನು ಇವರು ಮಹಾಮಂಡಲೇಶ್ವರರಾಗಿ ಆಳ್ವಿಕೆ ನಡೆಸುವುದರೊಂದಿಗೆ ತಮ್ಮ ಹಿರಿಯ ಸಹೋದರನಿಗೆ ಸಾಮ್ರಾಜ್ಯ ರಚನಾ ಕಾರ್ಯದಲ್ಲಿ ಸಹಾಯ ಮಾಡಿದರು.

ಹರಿಹರನು ರಾಜ್ಯಪದ್ಧತಿ, ರಾಜ್ಯಾಡಳಿತ ಇವುಗಳಲ್ಲಿ ಹೆಚ್ಚಾಗಿ ಹೊಯ್ಸಳರ ಸೂತ್ರ–ಸಂಪ್ರದಾಯಗಳನ್ನು ಅನುಸರಿಸುತ್ತ, ಪೂರ್ವ ಮರ್ಯಾದೆಗಳನ್ನು ಪಾರಿಪಾಲಿಸಿದನು. ಹೊಯ್ಸಳರ ಅಧಿಕಾರಿಗಳನ್ನೂ, ನಾಯಕರನ್ನೂ, ಮಂಡಲಪತಿಗಳನ್ನೂ, ತನ್ನಡೆಗೆ ಒಲಿಸಿಕೊಂಡು ಸ್ವಲ್ಪ ಸ್ವಲ್ಪ ಸಾಮ್ರಾಜ್ಯವನ್ನು ವಿಸ್ತಾರಗೊಳಿಸಿದನು. ತನ್ನ ಪರಾಕ್ರಮಗಳಿಂದ ಅರಿರಾಯ ವಿಭಾಡ, ಹಿಂದೂ ರಾಯ ಸುರತ್ರಾಣ, ಭಾಷೆಗೆ ತಪ್ಪುವ ರಾಯರ ಗಂಡ, ಪೂರ್ವ–ಪಶ್ಚಿಮ–ದಕ್ಷಿಣ ಸಮುದ್ರಾಧಿಪತಿ ಎಂಬ ಬಿರುದುಗಳನ್ನು ಧರಿಸಿದ್ದನು. ಯಶಸ್ವಿ ರಾಜ್ಯಭಾರವನ್ನು ಮಾಡಿದ ಹರಿಹರನು ಕ್ರಿ.ಶ.೧೩೫೬ರಲ್ಲಿ ಜೀವನ ಯಾತ್ರೆಯನ್ನು ಮುಗಿಸಿದನು. ಈತನ ತರುವಾಯ ಬುಕ್ಕರಾಯನು ವಿಜಯನಗರ ಸಾಮ್ರಾಜ್ಯಕ್ಕೆ ಒಡೆಯನಾದನು.[೨೪] ಈತನಿಗೆ ಸಂಬಂಧಿಸಿದ ಹಂಪೆಯ ಒಂದು ಶಾಸನ ಮಾತ್ರ ದೊರೆಯುತ್ತದೆ. ಅದು ಕ್ರಿ.ಶ.೧೩೪೮ರ ಶಾಸನ.[೨೫] ಈ ಶಾಸನದಲ್ಲಿ ಹರಿಹರನು ಶ್ರೇಷ್ಠವಾದ ಕಾಂಚೀಪುರ(ಇತ್ಯಾದಿ) ನಗರಗಳಿಗೆ ವಿಜಯಲಕ್ಷ್ಮಿಯ ರಥದ ಮಾರ್ಗಗಳನ್ನು ಮಾಡಿಸಿದ. ಹರಿಹರ ಮತ್ತು ಬುಕ್ಕರು ಕಾಲುವೆಗಳಿಂದ ಕೂಡಿದ ಅಗ್ರಹಾರಗಳನ್ನು ದಾನ ಮಾಡಿದರು. ಹರಿಹರ ತುಂಗಭದ್ರಾನದಿಯ ನೀರನ್ನು ಕಾಲುವೆಗಳ ಮೂಲಕ ಹರಿಯುವಂತೆ ಮಾಡಿದ ದೂರದರ್ಶಿತ್ವವುಳ್ಳ ಹಾಗೂ ಅನೇಕ ಯೋಜನೆಗಳನ್ನು ಹೊಂದಿದ್ದ ಹರಿಹರ ಪ್ರವಾಹಗಳಿಂದ ರಕ್ಷಿಸಲು ಸೇತುವೆಗಳನ್ನು ನಿರ್ಮಿಸಿದ. ಹರಿಹರನ ಆಜ್ಞೆಯ ಮೇರೆಗೆ ಆತನ ಮಂತ್ರಿಯಾದ ಮುದ್ದದಂಡಾಧಿಪನು ವಿರೂಪಾಕ್ಷ ದೇವಸ್ಥಾನಕ್ಕೆ ಭೂದಾನ ಮಾಡಿದನೆಂದು ತಿಳಿಯುತ್ತದೆ.

**ಬುಕ್ಕರಾಯ(ಕ್ರಿ.ಶ.೧೩೫೬–೧೩೭೭)**

ಸಹೋದರ ಹರಿಹರನಿಗೆ ಸ್ವರಾಜ್ಯ ಸ್ಥಾಪನೆಯಲ್ಲಿ ಸರಿಸಮನಾಗಿ ಭಾಗಿಯಾಗಿದ್ದ ಬುಕ್ಕನು ಅಧಿಕಾರದ ಚುಕ್ಕಾಣಿಯನ್ನು ತನ್ನ ಕೈಗೆ ತೆಗೆದುಕೊಂಡಾಗ ವಿಜಯನಗರ ಸಾಮ್ರಾಜ್ಯವೆಂಬ ರಥವು ಶೀಘ್ರಗತಿಯಲ್ಲಿ ಮುನ್ನಡೆಯಿತು. ರಾಜಕೀಯ ದೃಷ್ಟಿಯಿಂದ ಆಯಕಟ್ಟಿನ ಸ್ಥಳವಾಗಿದ್ದ ವಿಜಯನಗರವನ್ನು ಬುಕ್ಕರಾಯನು ತನ್ನ ಸ್ಥಿರವಾದ ರಾಜಧಾನಿಯನ್ನಾಗಿ ಮಾಡಿಕೊಂಡು ರತ್ನ

ಸಿಂಹಾಸನಾರೂಢನಾಗಿ ಆಳ ತೊಡಗಿದನು.[೨೭] ಬುಕ್ಕರಾಯನ ಕಾಲದಲ್ಲಿ ಬಹುಮನಿ ರಾಜ್ಯದೊಡನೆ ಕದನಗಳು ಆರಂಭವಾಗಿ ತೀವ್ರ ಸ್ವರೂಪವನ್ನು ತಾಳಿದವು. ಭಿನ್ನ ಧರ್ಮಗಳಿಗೆ ಸೇರಿದ ಈ ರಾಜ್ಯಗಳ ನಡುವಣ ಕಲಹಗಳು ಕೇವಲ ಧಾರ್ಮಿಕವಾಗಿರದೆ ತುಂಗಭದ್ರಾ-ಕೃಷ್ಣಾನದಿಗಳ ನಡುವಣ ಫಲವತ್ತಾದ ಪ್ರದೇಶವನ್ನು ಆಕ್ರಮಿಸುವ ಹೋರಾಟವು ಆಗಿತ್ತು.

ಬುಕ್ಕರಾಯನ ಮಗನಾದ ೨ನೇ ಕಂಪಣ ಅಥವಾ ಕುಮಾರ ಕಂಪಣ ತಮಿಳುನಾಡಿನ ಮಧುರೈವರೆಗೂ ಹೋಗಿ ಅಲ್ಲಿನ ಮುಸ್ಲಿಂರನ್ನು ಅಲ್ಲಿಂದ ಹೊರದೂಡಿದನು. ಮಧುರೈ ಸುಲ್ತಾನನ್ನು ಕೊಂದು ನಗರವನ್ನು ಸ್ವತಂತ್ರಗೊಳಿಸಿದನು. ಅಲ್ಲದೆ ಶ್ರೀರಂಗದ ರಂಗನಾಥನ ಮೂರ್ತಿಯನ್ನು ಮರಳಿ ತಂದು ಶ್ರೀರಂಗದಲ್ಲಿ ಪ್ರತಿಷ್ಠಾಪನೆ ಮಾಡಿದನು. ಇದನ್ನು ಕಂಪಣನ ಕೆಚ್ಚೆದೆಯ ದಂಡನಾಯಕನಾದ ಗೋಪಣ್ಣನು ಮಾಡಿದನು. ಈತನು ದಕ್ಷಿಣದ ಕಾರ್ಯಾಚರಣೆಯಲ್ಲಿ ತನ್ನ ಆರಸನೊಂದಿಗೆ ಪರಿಣಾಮಕಾರಿಯಾದ ಪಾತ್ರ ನಿರ್ವಹಿಸಿದ್ದನು. ಕಂಪಣ್ಣನ ಮಡದಿಯಾದ ಗಂಗಾದೇವಿಯು ಮಧುರಾ ವಿಜಯಂ ಎಂಬ ಸಂಸ್ಕೃತ ಕಾವ್ಯದಲ್ಲಿ ಮಧುರೆಯನ್ನು ಮುಸ್ಲಿಂ ಸುಲ್ತಾನರ ಕೈಯಿಂದ ವಶಪಡಿಸಿಕೊಂಡ ವೃತ್ತಾಂತವನ್ನು ಬಣ್ಣಿಸಿರುವಳು.

ಬುಕ್ಕನ ಕಾಲದಲ್ಲಿ ಇನ್ನೊಂದು ಪ್ರಮುಖ ಘಟನೆಯೆಂದರೆ ಅಂದು ಶ್ರವಣಬೆಳಗೊಳದಲ್ಲಿ ನಡೆದ ಮತೀಯ ಕಲಹ. ವಿಜಯನಗರ ಸಾಮ್ರಾಜ್ಯದಲ್ಲಿ ಅನೇಕ ಜಾತಿ, ಮತ, ಪಂಡಗಳಿಗೆ ಸೇರಿದ ಜನರು ನೆಲೆಸಿದ್ದರು. ಅವರಲ್ಲಿ ಈ ಕಾಲಕ್ಕೆ ಜೈನ ಮತ್ತು ಶ್ರೀ ವೈಷ್ಣವ(ರಾಮಾನುಜ) ಈ ಮತೀಯರಲ್ಲಿ ಕಲಹವು ಉಂಟಾಗಿ ವಿಕೋಪಕ್ಕೆ ಹೋಯಿತು. ಬಲಿಷ್ಠರಾದ ಶ್ರೀವೈಷ್ಣವರಿಂದ ದುರ್ಬಲರಾದ ಜೈನರಿಗೆ ಹೆಚ್ಚು ಹೆಚ್ಚು ಹಿಂಸೆಯು ಆಗಲಾರಂಭಿಸಿತು. ಜೈನರು ಬುಕ್ಕರಾಯನಲ್ಲಿಗೆ ದೂರನ್ನೊಯ್ದರು. ಆಗ ರಾಯನು ಉಭಯ ಮತದ ಮುಂದಾಳುಗಳನ್ನು ಓಲಗಕ್ಕೆ ಕರೆಯಿಸಿ ಜೈನರ ಕೈಯನ್ನು ಶ್ರೀ ವೈಷ್ಣವರ ಕೈಯಲ್ಲಿ ಕೊಟ್ಟು 'ವೈಷ್ಣವದರ್ಶನಕ್ಕೂ ಜೈನ ದರ್ಶನಕ್ಕೂ ಭೇದವಿಲ್ಲ...ವೈಷ್ಣವರೂ ಜೈನರೂ ಒಂದು. ಭೇದವಾಗಿ ಕಾಣಲಾಗದು ಎಂದು ನುಡಿದನು. ದಕ್ಷಿಣ ಭಾರತದ ಧಾರ್ಮಿಕ ಇತಿಹಾಸದಲ್ಲಿ ಅಜರಾಮರವಾದ ಈ ಜೈನ, ಶ್ರೀವೈಷ್ಣವರ ಒಡಂಬಡಿಕೆಯೂ ವಿಜಯನಗರದ ಅರಸರು ತಮ್ಮ ಸಾಮ್ರಾಜ್ಯದೊಳಗಿನ ಎಲ್ಲ ಧರ್ಮಮತದವರಿಗೆ ಅರ್ಪಿಸಿದ ಹಿರಿದಾದ ಅಧಿಕಾರ ಪತ್ರವೇ ಆಗಿದೆ.[೨೮]

ಕ್ರಿ.ಶ.೧೩೭೭ರ ಹಂಪೆಯ ಶಾಸನವು ಇವನನ್ನು ಶ್ರೀಮನುಮಹಾಮಂಡಳೇಶ್ವರ ಅರಿರಾಯವಿಭಾಡ ಭಾಷೆಗೆ ತಪ್ಪುವ ರಾಯರ ಗಂಡ. ಪೂರ್ವಪಶ್ಚಿಮ ಸಮುದ್ರಾಧಿಪತಿಯಾದ ವೀರ ಬುಕ್ಕಣ್ಣ ಒಡೆಯ, ಹಸ್ತಿನಾವತಿಯಿಂದ ಆಳುತ್ತಿದ್ದಂತೆ ಎಂದು ಉಲ್ಲೇಖಿಸುತ್ತದೆ. ಈ ಶಾಸನದಿಂದ ಬುಕ್ಕರಾಯನ ಬಿರುದುಗಳು ಹಾಗೂ ಆತನು ಆನೆಗೊಂದಿಯಿಂದ ಆಳ್ವಿಕೆ ಮಾಡಿದ್ದನೆಂಬುದನ್ನು ತಿಳಿಸುತ್ತದೆ.

**ಇಮ್ಮಡಿ ಹರಿಹರ (ಕ್ರಿ.ಶ.೧೩೭೭–೧೪೦೪)**

ಕ್ರಿ.ಶ.೧೩೭೭ರಲ್ಲಿ ಇವನು ತಂದೆ ಬುಕ್ಕರಾಯನ ಉತ್ತರಾಧಿಕಾರಿಯಾಗಿ ಆಡಳಿತ ಸೂತ್ರವಹಿಸಿಕೊಂಡನು. ಈತ ಸಾಮ್ರಾಜ್ಯವನ್ನು ಕೃಷ್ಣತೀರದವರೆಗೂ ವಿಸ್ತರಿಸಿದನು. ಹಾಗೂ ರಾಜ್ಯದ ಆರ್ಥಿಕಾಭಿವೃದ್ಧಿಗಾಗಿ ಹಲವಾರು ನೀರಾವರಿ ಯೋಜನೆಗಳನ್ನು ಕೈಗೊಂಡು ನದಿಗಳಿಗೆ ಅಣೆಕಟ್ಟನ್ನು ಕಟ್ಟಿ ಕಾಲುವೆಗಳನ್ನು ತೋಡಿಸಿದನು. ಬುಕ್ಕ ಆರಂಭಿಸಿದ್ದ ವೇದಗಳಿಗೆ ಭಾಷ್ಯವನ್ನು ಬರೆಸುವ ಯೋಜನೆ ಹರಿಹರನ ಕಾಲದಲ್ಲಿ ಪೂರ್ಣಗೊಂಡಿತು. ಆದ್ದರಿಂದ ವೈದಿಕಮಾರ್ಗ ಸ್ಥಾಪನಾಚಾರ್ಯ ಎನಿಸಿದ. ಕನ್ನಡ ಮತ್ತು ಸಂಸ್ಕೃತ ಭಾಷೆ ಸಾಹಿತ್ಯಗಳಿಗೆ ಈತ ವಿಶೇಷ ಪ್ರೋತ್ಸಾಹ ನೀಡಿ ಕರ್ನಾಟಕ ವಿದ್ಯಾವಿಲಾಸನೆನಿಸಿಕೊಂಡ.[೩೦] ಅಲ್ಲದೆ ಈತನ ಆಳ್ವಿಕೆಯಲ್ಲಿ ವರ್ತಕರ ಚಟುವಟಿಕೆಗಳು ಬೆಳೆದು ವ್ಯಾಪಾರದ ಅಭಿವೃದ್ಧಿಯಾಯಿತು. ಅದರಿಂದ ಪಟ್ಟಣಗಳು ಹೆಚ್ಚಿದುವಲ್ಲದೆ ವೈಭವವೂ ಬೆಳೆಯಿತು. ವಿಜಯನಗರವಲ್ಲದೆ ದೋರಸಮುದ್ರ ಪೆನುಗೊಂಡ, ಉದಯಗಿರಿ, ಬಂಕಾಪುರ ಮೊದಲಾದ ಪಟ್ಟಣಗಳು ಉತ್ಕರ್ಷವನ್ನು ಹೊಂದಿದವು.

ಹಂಪೆಯ ಶಾಸನಗಳು ಇವನನ್ನು ಶ್ರೀ ಮಹಾರಾಜಾಧಿರಾಜ, ರಾಜಪರಮೇಶ್ವರ ವೀರಪ್ರತಾಪ ಎಂದು ಮುಂತಾಗಿ ಹೊಗಳಿವೆ. ಈತನ ಶಾಸನಗಳಲ್ಲಿ ಮುಖ್ಯವಾದವುಗಳೆಂದರೆ ಕ್ರಿ.ಶ.೧೩೭೯ರ ಶಾಸನವು[೩೧] ಎರಡನೆಯ ಹರಿಹರ ಆಳ್ವಿಕೆಯ ಉಲ್ಲೇಖವನ್ನು ಹಾಗೂ ಸಾಯಣ ಅಯ್ಯ, ಅಕ್ಷುದನಾಥ ಒಡೆಯ ಇವರ ಆಡಳಿತದಲ್ಲಿ ಶ್ರೀ ನಲಾನುಚಕ್ರವರ್ತಿ ಅಯ್ಯ ಎನ್ನುವವನು ಪಂಪಾತೀರದಲ್ಲಿ ನರಸಿಂಹ ದೇವರ ಮಂಟಪವನ್ನು ಕಟ್ಟಿಸಿದ್ದನ್ನು ಉಲ್ಲೇಖಿಸುತ್ತದೆ. ಇನ್ನೊಂದು ಉಲ್ಲೇಖಿಸಬಹುದಾದ ಶಾಸನವೆಂದರೆ ಕ್ರಿ.ಶ.೧೩೮೬ರ ಶಾಸನ.[೩೨] ಈ ಶಾಸನ ವಿಜಯನಗರ ವನ್ನಾಳುತ್ತಿದ್ದ ಯಾದವ ವಂಶದ ಬುಕ್ಕರಾಯನನ್ನು ಹೆಸರಿಸುತ್ತದೆ. ಇವನ ಮಗ ಹರಿಹರ. ಹರಿಹರನ ಮಂತ್ರಿ ಬೈಚಪನ ಮಗ ಇರುಗಪನು ಕ್ರಿ.ಶ.೧೩೮೬ರಲ್ಲಿ ಕುಂತಳ ದೇಶದ ವಿಜಯನಗರದಲ್ಲಿ ಕುಂಥುಜಿನಾಲಯವನ್ನು ಶಿಲೆಯಲ್ಲಿ ನಿರ್ಮಿಸಿದ ಎಂದು ಹೇಳುತ್ತದೆ. ಇದು ವಿಜಯನಗರದ ಅರಸರಿಗೆ ಸಂಬಂಧಿಸಿದ ಮೊದಲನೆಯ ಜೈನ ಉಲ್ಲೇಖವಾಗಿದೆ. ರಾಯನು ಕ್ರಿ.ಶ.೧೪೦೪ರಲ್ಲಿ ತೀರಿಹೋದನು. ಈತನ ಮರಣದ ನಂತರ ರಾಜ್ಯದ ಒಡೆತನಕ್ಕಾಗಿ ಜಗಳಗಳು ಉಂಟಾದವು. ರಾಯನ ಮೂವರು ಮಕ್ಕಳಾದ ಎರಡನೇ ಬುಕ್ಕ, ಎರಡನೇ ವಿರೂಪಾಕ್ಷ ಹಾಗೂ ಒಂದನೇ ದೇವರಾಯನು ಸಿಂಹಾಸನಕ್ಕಾಗಿ ಕಾದಾಡಿ ಒಂದನೇ ದೇವರಾಯನು ಅಧಿಕಾರಕ್ಕೆ ಬಂದನು.

**ಒಂದನೇ ದೇವರಾಯ (ಕ್ರಿ.ಶ.೧೪೦೬–೧೪೨೨)**

ದೇವರಾಯನು ಕ್ರಿ.ಶ.೧೪೦೬ರಲ್ಲಿ ನವೆಂಬರ್ ೫, ಶುಕ್ರವಾರದಂದು ಪಟ್ಟಾಭಿಶಕ್ತನಾದನು. ಮತ್ತು ಕ್ರಿ.ಶ.೧೪೩೩ರವರೆಗೆ ಆಳ್ವಿಕೆ ನಡೆಸಿದನು. ಸಿಂಹಾಸನವನ್ನು ಏರುವ ಮೊದಲು ಈತ ಮುಳುಬಾಗಿಲನ್ನೂ ಒಳಗೊಂಡ ಸಿರಾ ಪ್ರಾಂತದ ಅಧಿಕಾರಿಯಾಗಿದ್ದನು. ಈತನನ್ನು ಪ್ರತಾಪ ದೇವರಾಯ ಎಂತಲೂ ಕರೆಯುವರು. ಈತ ಆಡಳಿತ, ರಾಜತಾಂತ್ರಿಕ ಹಾಗೂ ಸೈನ್ಯಾಡಳಿತದಲ್ಲೂ

ಸಮರ್ಥನಾದ ಅರಸನಾಗಿದ್ದನು. ಮೊಟ್ಟಮೊದಲ ಬಾರಿಗೆ ಗೋದಾವರಿ ನದಿ ಮುಖಜಭೂಮಿಯಲ್ಲಿ ಬರುವ ಪೂರ್ವ ಆಂಧ್ರ ಹಾಗೂ ತೆಲಂಗಾಣ ಪ್ರದೇಶಗಳವರೆಗೂ ವಿಜಯನಗರ ಸಾಮ್ರಾಜ್ಯವನ್ನು ವಿಸ್ತರಿಸಿದ ಹೆಗ್ಗಳಿಕೆ ಈತನಿಗೆ ಸಲ್ಲುತ್ತದೆ. ಈತನು ಅರೆಬಿಯಾ ಹಾಗೂ ಪರ್ಶಿಯಾದಿಂದ ಉತ್ತಮ ಕುದುರೆಗಳನ್ನು ಆಮದು ಮಾಡಿಕೊಳ್ಳುವ ಮೂಲಕ ವಿಜಯನಗರದ ಸೈನ್ಯ ಬಲವನ್ನು ಹೆಚ್ಚಿಸಿದನು. ಅಲ್ಲದೆ ರಾಜಧಾನಿಯಲ್ಲಿ ಹೊಸ ಕೋಟೆಗಳನ್ನು ನಿರ್ಮಿಸುವ ಮೂಲಕ ಧಾಳಿ ಕೋರರಿಂದ ರಕ್ಷಣೆ ಒದಗಿಸಿದನು. ತುಂಗಭದ್ರ ನದಿಯಿಂದ ರಾಜಧಾನಿಗೆ ಇಪ್ಪತ್ನಾಲ್ಕು ಕಿಲೋ ಮೀಟರ್ ಉದ್ದದ ಕಾಲುವೆಯನ್ನು ತೋಡಿಸಿದನಲ್ಲದೆ, ದೊಡ್ಡ ಅಣೆಕಟ್ಟನ್ನು ನಿರ್ಮಿಸಿದ. ಹಾಗೆಯೇ ಚಿತ್ರದುರ್ಗ ಜಿಲ್ಲೆಯ ಹರಿಹರದ ಸಮೀಪ ಹರಿದ್ರಾ ನದಿಗೂ ಸಹ ನೀರಾವರಿಗಾಗಿ ಅಣೆಕಟ್ಟೊಂದನ್ನು ನಿರ್ಮಿಸಿದನು. ಇವುಗಳಲ್ಲದೆ ಸಾಹಿತ್ಯ ಕಲೆಗಳಿಗೂ ಪ್ರೋತ್ಸಾಹ ನೀಡಿದನು. ಶೃಂಗೇರಿಯ ಚಂದ್ರಶೇಖರ ಭಾರತಿ ಈತನ ಗುರುಗಳಾಗಿದ್ದರು. ಹಾಗೂ ಲಕ್ಷ್ಮೀಧರನೆಂಬ ಸಮರ್ಥ ಮಂತ್ರಿಯು ಈತನ ಆಸ್ಥಾನದಲ್ಲಿದ್ದನು. ಈತನಿಗೆ ಮೂರು ಜನ ಪತ್ನಿಯರು ಹಾಗೂ ವೀರವಿಜಯ, ವೀರ ಮಲ್ಲಪ್ಪ, ಹರಿಹರ ಹಾಗೂ ರಾಮಚಂದ್ರನೆಂಬ ನಾಲ್ಕು ಜನ ಗಂಡು ಮಕ್ಕಳಿದ್ದರು.

ಹಂಪಿಯಲ್ಲಿ ದೊರೆತ ಶಾಸನಗಳೂ ಸಹ ದೇವರಾಯನ ಕುರಿತು ಮಾಹಿತಿಯನ್ನು ನೀಡುತ್ತವೆ. ಅವುಗಳಲ್ಲಿ ಕೆಲವನ್ನು ಉಲ್ಲೇಖಿಸಲಾಗಿದೆ. ಕ್ರಿ.ಶ.೧೪೧೦ ಶಾಸನ[೩೩] ದೇವರಾಯನ ವಂಶಾವಳೀಯನ್ನು ಹೇಳುತ್ತದೆ. ಈ ಶಾಸನದ ಆರಂಭದಲ್ಲಿ ಮಹಾಗಣಪತಿಯ ಸ್ತುತಿಯಿದ್ದು, ಮುಂದೆ ವಿಜಯನಗರದ ವಂಶಾವಳಿಯನ್ನು ಸಂಗಮನಿಂದ ಆರಂಭಿಸಿ ದೇವರಾಯನವರೆಗೆ ನೀಡಿದೆ. ಸೋಮವಂಶದಲ್ಲಿ ಸಂಗಮನು ಹುಟ್ಟಿದ. ಇವನ ಮಕ್ಕಳು ಹರಿಹರ ಮತ್ತು ಬುಕ್ಕ, ಬುಕ್ಕರಾಯನ ಮಗ ಪ್ರತಾಪ ಹರಿಹರ. ಈ ಪ್ರತಾಪ ಹರಿಹರನ ಮಗನೇ ದೇವರಾಜ ಅಥವಾ ದೇವರಾಯ. ಈ ದೇವರಾಯನ ಮಂತ್ರಿಗಳು ಮಾದರಸ ಮತ್ತು ಸಾಯಣರೆಂಬುವರು. ಮಾದರಸ ಮತ್ತು ಸಾಯಣರು ಅನೇಕ ಸಮಾಜೋದ್ಧಾರ ಕಾರ್ಯಗಳನ್ನು ಮಾಡಿ ಜನಪ್ರಿಯರಾಗಿದ್ದರು. ಹಾಗೂ ಇವರ ಸೋದರಳಿಯನಾದ ಲಕ್ಷ್ಮೀಧರನು ದೇವರಾಯನ ಮಂತ್ರಿಯಾಗಿ ತನ್ನ ಸೋದರ ಮಾವಂದಿರು ಮಾಡಿದ ಸಮಾಜೋದ್ಧಾರ ಕಾರ್ಯಗಳಾದ ಕೆರೆಯ ನಿರ್ಮಾಣ, ಬಾವಿಗಳ ತೋಡಿಸುವಿಕೆ, ದೇವಾಲಯ ನಿರ್ಮಾಣ ಮುಂತಾದ ಕಾರ್ಯಗಳನ್ನು ಮುಂದುವರೆಸಿದನೆಂದು ಶಾಸನ ತಿಳಿಸುತ್ತದೆ. ಅಲ್ಲದೆ ಈ ಲಕ್ಷ್ಮೀಧರನು ತಾನು ಕಂಡ ಕನಸಿನ ಪ್ರಕಾರ ಪಂಪಾಕ್ಷೇತ್ರದ ಪೂರ್ವಕ್ಕಿರುವ ಮಾಲ್ಯವಂತ ಪರ್ವತದ ದಕ್ಷಿಣ ದಿಕ್ಕಿನಲ್ಲಿರುವ ಸಹಜ ಗುಹೆಯೊಂದರಲ್ಲಿ ಮಹಾಶಕ್ತಿ ಹೇರಂಬ ವಿನಾಯಕನನ್ನು ಪ್ರತಿಷ್ಠಾಪಿಸಿ ಅದಕ್ಕೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.

ಕ್ರಿ.ಶ.೧೪೨೨ರಲ್ಲಿ ಈತನ ಮರಣಾನಂತರ ವೀರ ವಿಜಯನು ಅರಸನಾದನು. ಈತನನ್ನು ವಿಜಯ ಭೂಪತಿ ಮತ್ತು ಮೂರನೇ ವಿಜಯ ಬುಕ್ಕನೆಂದೂ ಸಹ ಗುರುತಿಸುತ್ತಾರೆ. ಆದರೆ ಈತ

ಅಸಮರ್ಥ ಅರಸನಾಗಿದ್ದರಿಂದ ಕ್ರಿ.ಶ.೧೪೨೪ರಲ್ಲಿ ಎರಡನೇ ದೇವರಾಯ ವಿಜಯನಗರದ ಸಿಂಹಾಸನವನ್ನೇರಿದನು.

**ಎರಡನೇ ದೇವರಾಯ ಅಥವಾ ಪ್ರೌಢದೇವರಾಯ (ಕ್ರಿ.ಶ.೧೪೨೪–೧೪೪೬)**

ಇಮ್ಮಡಿ ದೇವರಾಯನನ್ನು ಪ್ರತಾಪದೇವರಾಯ, ಪ್ರೌಢದೇವರಾಯ ಎಂದೂ ಕರೆಯಲಾಗಿದೆ. ಅಲ್ಲದೆ ಈತನಿಗೆ ಗಜಬೇಂಟೆಕಾರ ಎಂಬ ವಿಶಿಷ್ಟ ಬಿರುದು ಸಹ ಇತ್ತು. ತನ್ನ ತಂದೆಯ ಆಳ್ವಿಕೆಯ ಕಾಲದಲ್ಲಿಯೇ ಆಡಳಿತ ಚುಕ್ಕಾಣಿಯನ್ನು ಹಿಡಿದವನಾಗಿದ್ದನು. ಕರ್ನಾಟಕದಲ್ಲಿಯೇ ಅಲ್ಲದೇ ಇಡೀ ದಕ್ಷಿಣ ಭಾರತದಲ್ಲಿನ ಶ್ರೇಷ್ಠ ಅರಸರಲ್ಲಿ ಒಬ್ಬನೆಂದು ಇವನನ್ನು ಪರಿಗಣಿಸಲಾಗಿದೆ. ಈತನ ಆಳ್ವಿಕೆಯ ಕಾಲದಲ್ಲಿ ಸಾಮ್ರಾಜ್ಯವು ಆಂತರಿಕ ಶಾಂತಿ, ಸಮೃದ್ಧ ಜನಸಂಖ್ಯೆ, ಸಾಮಾಜಿಕ ಸುಧಾರಣೆ, ಕೃಷಿ ಬೆಳವಣಿಗೆ, ಆಂತರಿಕ ವ್ಯಾಪಾರ ಹಾಗೂ ವಿದೇಶಗಳೊಂದಿಗಿನ ಆಮದು ರಫ್ತುವಿನ ಸುಧಾರಣೆಗಳಿಂದಾಗಿ ಸಾಮ್ರಾಜ್ಯವು ಉತ್ಕರ್ಷದ ಉನ್ನತ ಶಿಖಕ್ಕೇರಿತು. ಈತನ ಕಾಲದಲ್ಲಿ ಸಾಹಿತ್ಯಕ್ಕೂ ಪ್ರೋತ್ಸಾಹ ದೊರೆತು ವೀರಶೈವ, ಜೈನ, ಬ್ರಾಹ್ಮಣಮತೀಯರಾದ ಅನೇಕ ಕವಿಗಳು ಉದಯಿಸಿ ಸಂಸ್ಕೃತ ಕನ್ನಡಗಳಲ್ಲಿ ಸಾಹಿತ್ಯವನ್ನು ನಿರ್ಮಿಸಿದರು. ಅವರಲ್ಲಿ ವೀರಶೈವ ಕವಿಗಳು ವಿಶೇಷವಾಗಿದ್ದು. ಅವರು ರಚಿಸಿದ ಗ್ರಂಥ ಸಂಪತ್ತು ಬಹಳವಾಗಿದೆ. ಮಹಾಲಿಂಗದೇವ, ಜಕ್ಕಣಾರ್ಯ, ಲಕ್ಕಣ್ಣ ದಂಡೇಶ, ಕುಮಾರ ಬಂಕನಾಥ, ಗುಬ್ಬಿಯ ಮಲ್ಲಣಾರ್ಯ, ಚಾಮರಸ, ಕಲ್ಲಮಠದ ಪ್ರಭುದೇವ, ಗುರುಬಸವ ಮೊದಲಾದ ವೀರಶೈವ ಕವಿಗಳು ಅನುಕ್ರಮವಾಗಿ ಏಕೋತ್ತರ ಶತಸ್ಥಲ, ನೂರೊಂದು ಸ್ಥಳ, ಶಿವತತ್ವ ಚಿಂತಾಮಣಿ, ಷಟ್ ಸ್ಥಲೋಪದೇಶ, ವೀರಶೈವಾಮೃತ ಪುರಾಣ, ಪ್ರಭುಲಿಂಗ ಲೀಲೆ, ಲಿಂಗ ಲೀಲಾವಿಲಾಸ ಚರಿತ್ರ, ಶಿವಯೋಗಾಂಗ ಭೂಷಣ ಇವು ಮೊದಲಾದ ಗ್ರಂಥಗಳನ್ನು ಬರೆದರು. ರಾಯನು ತನ್ನ ಪೂರ್ವಜರ ಪರಂಪರೆಯನ್ನು ಅನುಸರಿಸಿ, ವೈಯಕ್ತಿಕವಾಗಿ ಶೈವಮತಾವಲಂಬಿಯಾಗಿದ್ದನು. ಈತನು ವೀರಶೈವ ಮತವನ್ನು ಬಹಳವಾಗಿ ಪ್ರೋತ್ಸಾಹಿಸಿದನು. ಆದರೂ ಅನ್ಯ ಧರ್ಮಮತಗಳಲ್ಲಿಯೂ ಸಹಾನುಭೂತಿಯುಳ್ಳವನಾಗಿದ್ದನು. ಕುಮಾರವ್ಯಾಸನು ಕನ್ನಡ ಭಾರತವನ್ನು ರಚಿಸಿದನು. ಕಲ್ಯಾಣ ಕೀರ್ತಿಯೆಂಬ ಜೈನ ಕವಿಯು ಜ್ಞಾನಚಂದ್ರಾಭ್ಯುದಯ, ಕಾಮನ ಕಥೆ ಗ್ರಂಥಗಳನ್ನು ಬರೆದನು. ಸಾಳುವ ಗೋಪರಾಜನು ಸಂಸ್ಕೃತ ಪಂಡಿತನಾಗಿದ್ದು, ಕಾಮಧೇನು, ತಾಳದೀಪಿಕಾ ಮುಂತಾದ ಗ್ರಂಥಗಳನ್ನು ಬರೆದನು. ತೆಲಗು ಕವಿಗಳೂ ರಾಯನ ಆಶ್ರಯವನ್ನು ಬಯಸಿದರು. ವಿಖ್ಯಾತ ಆಂಧ್ರ ಕವಿಯಾದ ಶ್ರೀನಾಥನು ರಾಯನ ಓಲಗಕ್ಕೆ ಒಂದು ಕನಕಾಭೀಷೇಕದ ಸನ್ಮಾನವನ್ನು ಪಡೆದನು. ತನ್ನ ಅರಮನೆಯ ನೆರೆಯಲ್ಲಿ ಒಂದು ಜೈನ ಬಸದಿಯನ್ನು ಕಟ್ಟಿಸಿದನು. ಅಲ್ಲದೆ ಮಹಮ್ಮದೀಯರನ್ನು ತನ್ನ ರಾಜ್ಯ ದಲ್ಲಿ ಬಂದು ನೆಲೆಸಲು ಆಮಂತ್ರಿಸಿದನು. ತನ್ನ ರಾಜ್ಯದಲ್ಲಿ ನೆಲೆಸಿದ ಮಹಮ್ಮದೀಯ ಬಂಧುಗಳ ಧಾರ್ಮಿಕ ಆಚಾರ ವಿಚಾರಗಳಿಗೆ ತೊಂದರೆಯಾಗದಂತೆ ನೋಡಿಕೊಂಡನು. ರಾಜಧಾನಿ ಯಲ್ಲಿ ಒಂದು ಮಸೀದಿಯನ್ನು ಕಟ್ಟಿಸಿದನು. ತನ್ನ ಸಿಂಹಾಸನಕ್ಕೆ ಬಾಗುವಾಗ ಅವರ ಮನಸ್ಸು ನೋಯ

ಬಾರದೆಂದು ಸಿಂಹಾಸನದ ಮುಂದೆ ಉಚ್ಚಾಸನದ ಮೇಲೆ ಕುರಾನನ್ನು ಇರಿಸುತ್ತಿದ್ದನು. ಚತುರನಾದ ರಾಯನು ಮುಸಲ್ಮಾನರನ್ನು ಸೈನ್ಯದಲ್ಲಿ ಸೇರಿಸಿಕೊಂಡು ತನ್ನ ಸೈನ್ಯದಲ್ಲಿ ವ್ಯವಸ್ಥತೆಯನ್ನು ಕಾಪಾಡಿದನು.[೩೪] ವಿಜಯನಗರ ಸಾಮ್ರಾಜ್ಯಕ್ಕೆ ಸರ್ವಧರ್ಮ ಪೋಷಣೆಯ ಗುಣದ ಮೊದಲ ಬೀಜ ಬಿತ್ತಿದವನು ಈ ಇಮ್ಮಡಿ ದೇವರಾಯನಾಗಿದ್ದಾನೆ.[೩೫] ಹಂಪಿ ಪರಿಸರದಲ್ಲಿ ಈತನ ಕೆಲವು ಶಾಸನಗಳು ಲಭ್ಯವಿವೆ. ಅವುಗಳಲ್ಲಿ ಪ್ರಮುಖವೆನಿಸಿದ ಎರಡು ಶಾಸನಗಳನ್ನು ಉಲ್ಲೇಖಸಲಾಗಿದೆ. ಮೊದಲನೆಯದು ಕ್ರಿ.ಶ.೧೪೨೫ರ ಶಾಸನ.[೩೬] ತ್ರುಟಿತವಾಗಿರುವ ಈ ಶಾಸನವು ಹಂಪಿಯ ಎಲ್ಲಮ್ಮದೇವತೆಗೆ ಭೂಮಿಯನ್ನು ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಅರಸನ ಉಲ್ಲೇಖಭಾಗ ತ್ರುಟಿತವಾಗಿದ್ದರೂ ಸಂವತ್ಸರ ಮತ್ತು ಬಿರುದಿನ ಆಧಾರದಿಂದ ಈ ಶಾಸನವು ಪ್ರೌಢದೇವರಾಯನ ಅವಧಿಗೆ ಸೇರಿದ್ದೆಂದು ತೀರ್ಮಾನಿಸಬಹುದು. ಈಗ ಹಂಪಿಯ ಗ್ರಾಮದೇವತೆಯಾಗಿರುವ ಎಲ್ಲಮ್ಮಳ ಬಗ್ಗೆ ತಿಳಿದುಕೊಳ್ಳಲು ಇಲ್ಲಿಯವರೆಗೆ ಶಿಲ್ಪ ಮತ್ತು ಜನಪದ ಅಂಶಗಳೇ ಆಧಾರವಾಗಿದ್ದವು. ಈಗ ಆ ಅಂಶಗಳನ್ನು ಪುಷ್ಟಿಕರಿಸಲು ಶಾಸನವೂ ದೊರಕಿದೆ. ಆದ್ದರಿಂದ ಈ ಶಾಸನವನ್ನು ಪ್ರೌಢದೇವರಾಯನ ಕಾಲದ ಒಂದು ಪ್ರಮುಖ ಶಾಸನವೆಂದೇ ಹೇಳಬಹುದು. ಇನ್ನೊಂದು ಶಾಸನವು ಕ್ರಿ.ಶ.೧೪೨೬ರ ಶಾಸನ.[೩೭] ಈ ಶಾಸನವು ಈ ಕಾಲದಲ್ಲಿ ದೇವರಾಯನು ವಿಜಯನಗರದಲ್ಲಿ ರಾಜ್ಯವಾಳುತ್ತಿದ್ದನೆಂದು ಹೇಳಿದೆ. ಇದರಲ್ಲಿ ವಿಜಯನಗರ ಅರಸರ ವಂಶಾವಳಿ ನೀಡಿದ್ದು, ಶಾಸನದ ಹೆಚ್ಚಿನ ಭಾಗ ದೇವರಾಯನ ಹೊಗಳಿಕೆಯಿಂದ ತುಂಬಿದೆ. ಈ ರಾಜನು ಬುದ್ಧಿಮತ್ತೆಗೆ ಪ್ರಖ್ಯಾತನಾಗಿದ್ದು, ಇವನು ವಿಜಯನಗರದ ಕ್ರಮುಕಪರ್ಣಾಪಣ ಬೀದಿಯಲ್ಲಿ ಕಲ್ಲಿನ ಪಾರ್ಶ್ವ ಚೈತ್ಯಾಲಯವನ್ನು ನಿರ್ಮಿಸಿದುದನ್ನು ತಿಳಿಸುತ್ತದೆ. ಇದು ಇಂದಿಗೂ ನೋಡಲು ಲಭ್ಯವಿದೆ. ಇನ್ನೊಂದು ಉಲ್ಲೇಖಿಸಬಹುದಾದ ಶಾಸನವೆಂದರೆ ಕ್ರಿ.ಶ.೧೪೩೯ರ ಶಾಸನ.[೩೮] ಈ ಶಾಸನದಲ್ಲಿ ದೇವರಾಯ ಮಹಾರಾಯನ ಕಟಿಗೆಯ ಸೇವೆಯ ಅಹಮದಖಾನನು ರಾಜನಿಗೆ ಧರ್ಮವಾಗಬೇಕೆಂದು ಧರ್ಮಸಾಲೆ ಮತ್ತು ಬಾವಿಯನ್ನು ಕಟ್ಟಿಸಿದ ಉಲ್ಲೇಖವಿದೆ. ಕ್ರಿ.ಶ.೧೪೨೬ ಮತ್ತು ೧೪೩೯ ಈ ಶಾಸನಗಳಿಂದ ಪ್ರೌಢದೇವರಾಯನು ಸರ್ವಧರ್ಮ ಸಹಿಷ್ಣುನೆಂದು ತಿಳಿಯುತ್ತದೆ.

ಈ ಮೇಲಿನ ಶಾಸನಗಳಲ್ಲದೆ ಸಮಕಾಲೀನ ವಿದೇಶಿ ಪ್ರವಾಸಿಗರ ಬರವಣಿಗೆಗಳು ದೇವರಾಯನ ಕುರಿತು ಉಲ್ಲೇಖಿಸುತ್ತವೆ. ಇದರಲ್ಲಿ ಮೊದಲಿಗನು ಪರ್ಷಿಯಾದ ಅಬ್ದುಲ್ ರಜಾಕ್. ಇವನು ಬಿಜನಗರದಂಥ ನಗರವನ್ನು ಕಣ್ಣು ಕಂಡಿಲ್ಲ, ಕಿವಿ ಕೇಳಿಲ್ಲ. ಈ ನಗರವನ್ನು ಹೇಗೆ ನಿರ್ಮಿಸಿದ್ದಾರೆಂದರೆ ಏಳು ದುರ್ಗಗಳು ಏಳು ಕೋಟೆಗಳೂ ಒಂದನ್ನೊಂದು ಆವರಿಸಿಕೊಂಡಿವೆ. ಇಲ್ಲಿಯ ಅಂಗಡಿ ಬೀದಿಗಳು ಬಹು ಉದ್ದವಾಗಿಯೂ ಅಗಲವಾಗಿಯೂ ಇವೆ ಎಂದು ಮುಂತಾಗಿ ವರದಿ ಮಾಡಿದ್ದಾನೆ.[೩೯] ದೇವರಾಯನ ಕಾಲದ ಇನ್ನೊಬ್ಬ ವಿದೇಶಿ ಪ್ರವಾಸಿಗ ನಿಕೊಲ-ದೆ-ಕೊಂತಿ. ಈತನು ವಿಜಯನಗರದ ಸುತ್ತಳತೆ ಅರುವತ್ತು ಮೈಲಿ. ಈ ನಗರದಲ್ಲಿ ಶಸ್ತ್ರಾಸ್ತ್ರಗಳಲ್ಲಿ ಪ್ರವೀಣರಾದ ತೊಂಬತ್ತು ಸಾವಿರ ಜನರಿದ್ದಾರೆಂದು ಹಾಗೂ ಇಲ್ಲಿಯ ರಾಜನು ಇಂಡಿಯಾ ದೇಶದ ರಾಜರೆಲ್ಲರಿಗಿಂತ ಬಹಳ ಬಲಾಢ್ಯನಾಗಿದ್ದಾನೆಂದು ಹೇಳುವುದರೊಂದಿಗೆ

ಇಲ್ಲಿಯ ಉತ್ಸವ, ಮದುವೆ ಸಂದರ್ಭ ಹಾಗೂ ಅಪರಾಧಿಗೆ ವಿಧಿಸುವ ಶಿಕ್ಷೆಯ ಕುರಿತು ಮತ್ತು ಇನ್ನೂ ಹಲವು ವಿಷಯಗಳನ್ನು ತನ್ನ ಪ್ರವಾಸ ಕಥನದಲ್ಲಿ ಹೇಳಿರುವನು.[೮೦]

ಹೀಗೆ ಶಾಸನ ಹಾಗೂ ವಿದೇಶಿ ಪ್ರವಾಸಿಗರ ಕಥನಗಳು ಇಮ್ಮಡಿ ದೇವರಾಯನ ಆಳ್ವಿಕೆಯ ಕಾಲವನ್ನು ಬಹು ವಿಸ್ತಾರವಾಗಿ ತಿಳಿಸಿಕೊಡುತ್ತವೆ. ದೇವರಾಯನಿಗೆ ಇಬ್ಬರು ಹೆಂಡಂದಿರು. ಪೊನ್ನಲದೇವಿ, ಭೀಮಾದೇವಿ. ಪೊನ್ನಲದೇವಿಗೆ ಮಲ್ಲಿಕಾರ್ಜುನನೆಂಬ ಮಗನಿದ್ದನು. ಸಂಗಣ್ಣ ದಣ್ಣಾಯಕ, ಲಕ್ಕಣ್ಣ ದಣ್ಣಾಯಕರು ರಾಯನ ಮಂತ್ರಿಗಳಾಗಿದ್ದರು. ಕ್ರಿ.ಶ.೧೪೪೬ರಲ್ಲಿ ಇಮ್ಮಡಿ ದೇವರಾಯನ ಮರಣವಾಯಿತು.

**ಮಲ್ಲಿಕಾರ್ಜುನ (ಕ್ರಿ.ಶ.೧೪೪೬-೧೪೬೫)**

ಇಮ್ಮಡಿ ದೇವರಾಯ ಮತ್ತು ಪೊನ್ನಲಾದೇವಿಗೆ ಜನಿಸಿದ ಮಲ್ಲಿಕಾರ್ಜುನ ತಂದೆಯ ಮರಣದ ತರುವಾಯ ಪಟ್ಟಕ್ಕೆ ಬಂದನು. ಈತನಿಗೂ ತಂದೆಯಂತೆಯೇ ಮುಮ್ಮಡಿ ದೇವರಾಯ ಹಾಗೂ ಪ್ರೌಢದೇವರಾಯ ಎಂದು ಕರೆಯಲಾಯಿತು. ಅಲ್ಲದೆ ಗಜಬೇಂಟೆಕಾರ ಎಂಬ ವಿಶಿಷ್ಟ ಬಿರುದನ್ನು ಮುಂದುವರೆಸಿದನು. ಈತ ತನ್ನ ವಂಶಜರಿಂದ ದೊರೆತ ಸಿಂಹಾಸನವನ್ನು ಕಾಪಾಡಿಕೊಳ್ಳುವಷ್ಟು ಸಮರ್ಥನಾಗಿರಲಿಲ್ಲ. ಇಂತಹ ಅವಕಾಶವನ್ನೇ ಕಾಯುತ್ತಿದ್ದ ಶತ್ರು ಬಹಮನಿಗಳು ಹಾಗೂ ಗಜಪತಿಗಳು ಕ್ರಿ.ಶ.೧೪೫೦ರಲ್ಲಿ ರಾಜಧಾನಿಗೆ ಏಕಕಾಲಕ್ಕೆ ಆಕ್ರಮಣ ವೆಸಗಿದವು. ಆದರೆ ಈ ಆಕ್ರಮಣವು ಹಿಮ್ಮೆಟ್ಟಲ್ಪಟ್ಟಿತು. ಆದರೂ ಶತ್ರುಗಳ ಈ ದಾಳಿಯಿಂದ ವಿಜಯನಗರ ಸಾಮ್ರಾಜ್ಯದ ವಿಧಿ ದುರದೃಷ್ಟಕರವಾಯಿತು. ಈ ಸೋಲಿನಿಂದಾಗಿ ವಿಜಯನಗರದಲ್ಲಿ ಗೊಂದಲ, ಅಧಿಕಾರಿಗಳಲ್ಲಿ ಅವಿಧೇಯತೆ, ವಿಘಟನೆಗಳು ಉದ್ಭವಗೊಂಡವು. ಈ ಪರಿಣಾಮದಿಂದಾಗಿ ಮಲ್ಲಿಕಾರ್ಜುನನು ತನ್ನ ಅಧಿಕಾರ, ಘನತೆ ಮತ್ತು ಸ್ಥಾನಗಳನ್ನು ಕಳೆದುಕೊಂಡನು.

**ವಿರೂಪಾಕ್ಷ (ಕ್ರಿ.ಶ.೧೪೬೫-೧೪೮೫)**

ಇಂತಹ ಸಂದಿಗ್ಧ ಪರಿಸ್ಥಿತಿಯನ್ನು ಉಪಯೋಗಿಸಿಕೊಂಡು ಮಲ್ಲಿಕಾರ್ಜುನನ ದಾಯಾದಿಯಾದ ವಿರೂಪಾಕ್ಷನು ಸಿಂಹಾಸನವನ್ನು ಆಕ್ರಮಿಸಿ ಕ್ರಿ.ಶ.೧೪೬೫ರಲ್ಲಿ ಅಧಿಕಾರರೂಢನಾದನು. ವಿರೂಪಾಕ್ಷನೂ ಸಹ ಅಸಮರ್ಥ ರಾಜನಾಗಿದ್ದನು. ಮಿಗಿಲಾಗಿ ಆಡಳಿತಕ್ಕೆ ಗಮನ ನೀಡದೆ ಸುಖಲೋಲುಪ್ತನಾಗಿದ್ದನು. ಬಹಮನಿಯ ಮೂರನೇ ಮಹಮದ್‌ನ ಪ್ರಧಾನಿಯಾಗಿದ್ದ ಮಹಮದ್ ಗವಾನನು ಪಶ್ಚಿಮ ಕರಾವಳಿಯ ಮೇಲೆ ಆಕ್ರಮಣ ಮಾಡಿ ಗೋವ, ಕೊಂಕಣ, ಮೊದಲಾದ ಪ್ರದೇಶಗಳನ್ನು ವಶಪಡಿಸಿಕೊಂಡನು. ಒರಿಸ್ಸಾದ ಕಪಿಲೇಂದ್ರನು ಸಾಮ್ರಾಜ್ಯದ ಭಾಗಗಳ ಮೇಲೆ ಪುನಃ ಪುನಃ ಆಕ್ರಮಣಗಳನ್ನು ಮುಂದುವರೆಸಿದನು. ವಿಜಯನಗರದ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಗಳು ತುಂಬಾ ಶೋಚನೀಯವಾಗಿದ್ದವು. ಅಂತಹ ದುರ್ಬರ ಸನ್ನಿವೇಶದಲ್ಲಿ ಚಂದ್ರಗಿರಿಯ ಮಾಂಡಲೀಕನಾಗಿದ್ದ ಸಾಳುವ ನರಸಿಂಹನು ತನ್ನ ದಂಡನಾಯಕನಾದ ನರಸ ನಾಯಕನೊಡಗೂಡಿ ಶತ್ರುಗಳೊಡನೆ ಶೌರ್ಯದಿಂದ ಹೋರಾಟದಲ್ಲಿ ತೊಡಗಿದ್ದನು. ಕ್ರಿ.ಶ.೧೪೮೫ರಲ್ಲಿ

ಅಂತಃಪುರದ ಕಲಹಗಳಿಂದ ವಿರೂಪಾಕ್ಷನು ಕೊಲೆಯಾದನು. ಆ ವೇಳೆಗೆ ರಾಜಧಾನಿಯನ್ನು ತಲುಪಿದ ನರಸಿಂಹನು ಪರಿಸ್ಥಿತಿಯನ್ನು ಹತೋಟಿಗೆ ತಂದು ತಾನೇ ಸಿಂಹಾಸನವನ್ನು ಪಡೆದನು. ಹೀಗೆ ವಿಜಯನಗರವನ್ನು ಸ್ಥಾಪಿಸಿದ ಸಂಗಮ ಸಂತತಿಯು ಈ ರೀತಿಯಾಗಿ ಸಮಾಪ್ತಿ ಹೊಂದಿತು.[೪೧]

**ಸಾಳುವ ಮನೆತನ(ಕ್ರಿ.ಶ.೧೪೮೫–೧೫೦೫)**

**ಸಾಳುವ ಅರಸರ ವಂಶಾವಳಿ**




**ಕೃಪೆ:** ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ

ಮೂರನೇ ವಿರೂಪಾಕ್ಷನ ಆಳ್ವಿಕೆಯಿಂದಲೇ ಸಂಗಮ ವಂಶ ಕೊನೆಗೊಂಡಿತು. ಹಾಗೂ ಸಾಳುವ ವಂಶದ ಆಳ್ವಿಕೆ ಆರಂಭವಾಯಿತು. ಸಾಳ್ವರು ಮೊದಲಿನಿಂದಲೂ ಸಂಗಮರ ಸೇವೆಯಲ್ಲಿದ್ದವರು. ಇವರು ತಾವು ಯಾದವ ಕುಲದವರೆಂದು ಹೇಳಿಕೊಂಡಿರುವರು. ವಂಕಿದೇವನು ಈ ಮನೆತನದ ಮೂಲಪುರುಷನು. ಸಂಗಮ ವಂಶದ ಮೂರನೇ ವಿರೂಪಾಕ್ಷನ ನಂತರ ಸಾಳುವ ಮನೆತನದ ಒಂದನೇ ನರಸಿಂಹನು ವಿಜಯನಗರದ ಅಧಿಕಾರದ ಚಿಕ್ಕಾಣಿಯನ್ನು ಹಿಡಿದನು.

**ಒಂದನೇ ನರಸಿಂಹ (ಕ್ರಿ.ಶ.೧೪೮೫–೧೪೯೧)**

ಈತನು ಕ್ರಿ.ಶ.೧೪೫೬ ರಲ್ಲಿಯೇ ಮಲ್ಲಿಕಾರ್ಜುನನ ಆಳ್ವಿಕೆಯಲ್ಲಿ ಆಂಧ್ರಪ್ರದೇಶದ ತಿರುಪತಿಯ ಸಮೀಪವಿರುವ ಚಂದ್ರಗಿರಿ ರಾಜ್ಯದ ಮಹಾಮಂಡಲೇಶ್ವರನಾಗಿದ್ದನು. ಈತನಿಗೆ ವಿಜಯನಗರ ಅರಸರ ಅಧೀನದಲ್ಲಿ ಮೂವತ್ತು ವರ್ಷಗಳ ಪ್ರಶಂಸಾರ್ಹ ಕಾರ್ಯ ಮಾಡಿದ ಅನುಭವವಿತ್ತು. ಮೂರನೇ ವಿರೂಪಾಕ್ಷನ ಕಾಲದಲ್ಲಿ ಸಾಮ್ರಾಜ್ಯದ ಪರಿಸ್ಥಿತಿ ದಾರುಣ ದುರ್ದೆಸೆಗೀಡಾಗಿತ್ತು. ಸಾಮ್ರಾಜ್ಯದ ಒಳಗೆ ಕಲಹಗಳು, ಹೊರಗೆ ಶತ್ರುಗಳು ಅವಕಾಶದ ಹೊಂಚಿನಲ್ಲಿದ್ದರು. ಸಾಮಾನ್ಯ ಅಧಿಕಾರಿಯಾದ ನರಸಿಂಹನು ಇವೆಲ್ಲವುಗಳನ್ನೂ ಸಮರ್ಥವಾಗಿ ಎದುರಿಸಿ ಸಾಮ್ರಾಜ್ಯವನ್ನು ರಕ್ಷಿಸಿದನು. ಸಿಂಹಾಸನಾಧಿಕಾರಿಯೆನಿಸಿಕೊಂಡ ವಿರೂಪಾಕ್ಷನು ಕರ್ತವ್ಯ ಮೂಢನಾಗಿ ದುವ್ಯಸನಗಳಿಗೆ ಅಂಟುಕೊಂಡಿದ್ದನು. ಆದ್ದರಿಂದ ಇಂತಹ ಒಡೆಯನು ಇರುವುದಕ್ಕಿಂತ ಹೋಗುವುದೇ ಸಾಮ್ರಾಜ್ಯಕ್ಕೆ ಲೇಸೆಂದು ಬಗೆದು ಕ್ರಿ.ಶ.೧೪೮೫ರಲ್ಲಿ ವಿರೂಪಾಕ್ಷನನ್ನು ತಳ್ಳಿ ಸಿಂಹಾಸನವನ್ನೇರಿದನು. ನರಸಿಂಹನ ಆಳ್ವಿಕೆಯು ಬಲಶಾಲಿಯಾಯಿತು. ಆತನು ಬಹುದಕ್ಷತೆಯಿಂದ ರಾಜ್ಯಯಂತ್ರವನ್ನು

ನಡೆಸಿದನು. ಬಹಮನಿ ರಾಜ್ಯದಲ್ಲಿ ಆಗಲೇ ಒಳಜಗಳಗಳು ಉದ್ಭವಿಸಿದ್ದವು. ಬೀದರದ ಅರಸನಾದ ಕಾಸೀಮ್ ಬರೀದ ಶಹನು ತನ್ನ ಶತ್ರುವಾದ ವಿಜಾಪುರದ ಯೂಸುಫ್ ಆದಿಲ್‌ಶಹನೊಡನೆ ಹೋರಾಡಲು ನರಸಿಂಹನ ನೆರವನ್ನು ಬೇಡಿದನು. ಸಮಯಸಾಧಕನಾದ ನರಸಿಂಹನು ಸಿಕ್ಕ ಅವಕಾಶವನ್ನು ಉಪಯೋಗಿಸಿಕೊಳ್ಳಲು ಕೂಡಲೇ ಕ್ರಿ.ಶ.೧೪೮೯ರಲ್ಲಿ ಮುದಗಲ್, ರಾಯಚೂರು, ಪ್ರಾಂತಗಳಲ್ಲಿ ನುಗ್ಗಿ ಆ ಕೋಟೆಗಳನ್ನು ವಶಪಡಿಸಿಕೊಂಡನು. ಆದರೆ ಮುಂದೆ ನಾಲ್ಕು ವರ್ಷಗಳಾಗುವಷ್ಟರಲ್ಲಿ ಮತ್ತೆ ಕ್ರಿ.ಶ.೧೪೯೩ರಲ್ಲಿ ಬರೀದಶಹನು ದಾಳಿಯಿಟ್ಟು ಮುದಗಲ್, ರಾಯಚೂರು ಕೋಟೆಗಳನ್ನು ಮರು ವಶಪಡಿಸಿಕೊಂಡನು. ಈ ಯುದ್ಧ ಪ್ರಸಂಗವೊಂದನ್ನು ಹೊರತುಪಡಿಸಿ ಮತ್ತಾವುದೇ ಹೋರಾಟಗಳು ನರಸಿಂಹನ ಆಳ್ವಿಕೆಯಲ್ಲಿ ನಡೆಯಲಿಲ್ಲ. ಈತನು ಸಾಮ್ರಾಜ್ಯದಲ್ಲಿ ಮೊದಲಿನ ಶಕ್ತಿಯನ್ನು ತುಂಬಿದನು. ಆಡಳಿತದಲ್ಲಿ ಸುಧಾರಣೆಗಳನ್ನು ತಂದನು. ಈತನ ಕಾಲದಲ್ಲಿ ಕುದುರೆಯ ವ್ಯಾಪಾರಕ್ಕೆ ಮಿತಿಮೀರಿ ಪ್ರೋತ್ಸಾಹ ದೊರೆಯಿತು. ಓರ್ಮುಜ, ಏಡನ ಮುಂತಾದ ಸೀಮೆಗಳಿಂದ ಪರಕೀಯ ವರ್ತಕರ ಮುಖಾಂತರವಾಗಿ ಕುದುರೆಗಳನ್ನು ತರಿಸಿ ಬೇಡಿದಷ್ಟು ಬೆಲೆಯನ್ನು ಕೊಟ್ಟು ಕೊಂಡುಕೊಳ್ಳುತ್ತಿದ್ದನು. ಮಹಾಪ್ರಧಾನ ಅಣ್ಣಮರಸಯ್ಯ, ಈಶ್ವರನಾಯಕ, ನರಸಿಂಹನ ರಾಜ್ಯಾಡಳಿತದಲ್ಲಿ ಸಹಾಯ ಮಾಡಿದರು. ಈತನು ಸಾಹಿತ್ಯಕ್ಕೂ ಪ್ರೋತ್ಸಾಹ ನೀಡಿದನು. 'ಸಾಳುವಾಭ್ಯುದಯಂ' ಕಾವ್ಯವನ್ನು ರಚಿಸಿದ ರಾಜನಾಥ ಡಿಂಡಿಮ ಈತನ ಆಸ್ಥಾನ ಕವಿಯಾಗಿದ್ದನು. ರಾಜನೀತಿ ವಿಶಾರದನಾದ ಪೀನವೀರಭದ್ರನು ತಾನು ಬರೆದ 'ಜೈಮಿನಿ ಭಾರತಮು' ಎಂಬ ತೆಲಗು ಕಾವ್ಯವನ್ನು ನರಸಿಂಹನಿಗೆ ಅರ್ಪಿಸಿದನು. ನರಸಿಂಹನು ಸ್ವತಃ ವಿದ್ಯಾವಂತನಾಗಿದ್ದು ರಾಮಾಭ್ಯುದಯಂ ಎಂಬ ಸಂಸ್ಕೃತ ಕಾವ್ಯವನ್ನು ರಚಿಸಿದನು. ಈತನಿಗೆ ಮೇದಿನೀ ಮೀಸರ ಗಂಡ, ಕಠಾರಿ ಸಾಳುವ, ಮೂವರು ರಾಯರ ಗಂಡಭೇರುಂಡ, ಚೌಹಟ್ಟಿ ಮಲ್ಲ, ಧರಣೀ ವರಾಹ ಎಂಬ ಮುಂತಾದ ಬಿರುದುಗಳಿದ್ದವು. ನರಸಿಂಹನಿಗೆ ಶ್ರೀರಂಗಮಾಂಬೆ ಎಂಬ ಮಡದಿಯೂ ಹಾಗೂ ಇಬ್ಬರು ಮಕ್ಕಳಿದ್ದರು. ಒಬ್ಬನು ಅಪಮೃತ್ಯವಿಗೆ ಗುರಿಯಾದನು. ಎರಡನೆಯವನೇ ಇಮ್ಮಡಿ ನರಸಿಂಹ. ಈತನೇ ಮುಂದಿನ ಅರಸನಾದನು.

### ಇಮ್ಮಡಿ ನರಸಿಂಹ (ಕ್ರಿ.ಶ.೧೪೯೧-೧೫೦೬)

ತಂದೆಯ ತರುವಾಯ ಇಮ್ಮಡಿ ನರಸಿಂಹನು ಪಟ್ಟಕ್ಕೆ ಬಂದನು. ಈತನಿಗೆ ಭುಜಬಲರಾಯ, ತಮ್ಮರಾಯ, ಧರ್ಮರಾಯ ಎಂಬ ಬೇರೆ ಹೆಸರುಗಳು ಇದ್ದವು. ಒಂದನೇ ನರಸಿಂಹನು ತಾನು ಇರುವಾಗಲೇ ಈತನಿಗೆ ಸಾಮ್ರಾಜ್ಯದ ಅಧಿಕಾರವನ್ನೂ ಸಾಮ್ರಾಜ್ಯದ ಬಿರುದುಗಳನ್ನು ಕೊಟ್ಟು ತನಗೆ ಸಮಾನವಾದ ಅಧಿರಾಜನಾಗಿ ಮಾಡಿಕೊಂಡಿದ್ದನು.[೨೨] ಇಮ್ಮಡಿ ನರಸಿಂಹನು ಹದಿನೈದು ವರ್ಷಗಳ ಕಾಲ ತುಳುವ ಸೇನಾಪತಿಯಾದ ನರಸನಾಯಕನ ಪ್ರತಿನಿಧಿತ್ವದಲ್ಲಿ ಆಳ್ವಿಕೆ ನಡೆಸಿದನು. ರಾಜಪ್ರತಿನಿಧಿಯಾದ ನರಸನಾಯಕನು ಮೊದ-ಮೊದಲು ನರಸಿಂಹನ ಹೆಸರಿನಿಂದ ಆಡಳಿತವನ್ನು ನಡೆಸುತ್ತ ಮುಂದೆ ಆತನನ್ನು ಬದಿಗೊತ್ತಿ ತಾನೇ ಸರ್ವಾಧಿಕಾರಿಯಾಗಿ ರಾಜ್ಯವಾಳತೊಡಗಿದನು. ಈತನ ಕಾಲದಲ್ಲಿ ವಿಜಯನಗರವನ್ನು ಸಂದರ್ಶಿಸಿದ ಇಟಲಿಯ ಪ್ರವಾಸಿ ಲೊಡೊವಿಕೊ ದಿ

ವರ್ತೆಮಾ ವಿಜಯನಗರವನ್ನು ಕುರಿತಂತೆ ನಗರ ಬಹಳ ದೊಡ್ಡದು. ಸುತ್ತಲೂ ಭದ್ರವಾದ ಕೋಟೆ ಇದೆ. ಏಳು ಮೈಲು ಸುತ್ತಳತೆಯ ಮೂರು ಕೋಟೆಗೋಡೆಗಳಿವೆ. ಇಲ್ಲಿ ಭಾರಿ ವ್ಯಾಪಾರ ನಡೆಯುತ್ತದೆ. ಬಹುಫಲವತ್ತಾದ ಭೂಮಿ, ನಾನಿಲ್ಲಿಯವರೆಗೆ ಕಂಡ ಸ್ಥಳಗಳಲ್ಲೆಲ್ಲಾ ಬಹು ಒಳ್ಳೆಯ ಹವೆಯ ಊರೆಂದರೆ ಇದೇ. ಎರಡನೇ ಸ್ವರ್ಗವೋ ಎನ್ನುವಂತಿದೆ ಈ ನಗರ. ಪ್ರಜೆಗಳೆಲ್ಲ ವಿಗ್ರಹಾರಾಧಕರು. ನಾನು ಕಂಡು ಕೇಳಿದ ರಾಜರುಗಳಲ್ಲೆಲ್ಲ ನರಸಿಂಗರಾಜನೇ ಅತ್ಯಂತ ಶ್ರೀಮಂತನೆಂದು ಹೇಳಬೇಕು. ಚಿನ್ನದ 'ಪರ್ದಾಯ್' ಬೆಳ್ಳಿಯ 'ತಾರೆ' ಮತ್ತು ಚಿನ್ನದ ಸಣ್ಣ ನಾಣ್ಯವಾದ 'ಫನಂ' ಇವು ಇಲ್ಲಿಯ ನಾಣ್ಯಗಳು. 'ಕಾಸ್' ಎಂಬ ಸಣ್ಣ ನಾಣ್ಯವೂ ಉಂಟು"[೪೪] ಎಂದೆಲ್ಲ ವರ್ಣಿಸಿರುವನು. ಇಮ್ಮಡಿ ನರಸಿಂಹನಿಗೆ ನರಸಿಂಹರಾಯ ಮತ್ತು ದೇವಪ್ಪರಾಯ ಎಂಬ ಇಬ್ಬರು ಮಕ್ಕಳಿದ್ದರು. ಇಮ್ಮಡಿ ನರಸಿಂಹನು ೧೫೦೬ರಲ್ಲಿ ಮರಣ ಹೊಂದಿದನು. ಈತನ ತರುವಾಯ ನರಸನಾಯಕನ ಮಗನಾದ ವೀರನರಸಿಂಹನು ಸಿಂಹಾಸನವನ್ನು ಸೆಳೆದುಕೊಂಡು ಆಳತೊಡಗಿದುದರಿಂದ ಸಾಳುವ ಮನೆತನದ ಆಳ್ವಿಕೆ ಕೊನೆಗೊಂಡಿತು.

**ತುಳುವ ಮನೆತನ**




ಕೃಪೆ: ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ)

ತುಳುವ ಮನೆತನದ ಹೆಸರನ್ನು ಮೊದಲು ಮುಂದೆ ತಂದವನು ಸಾಳುವ ನರಸಿಂಹನ ದಂಡನಾಯಕನಾಗಿದ್ದ ಈಶ್ವರ ನಾಯಕ. ಈ ಈಶ್ವರ ನಾಯಕನ ಮಗನೇ ನರಸನಾಯಕನು. ನರಸನಾಯಕನು ಸಹ ಇಮ್ಮಡಿ ಸಾಳುವ ನರಸಿಂಹನ ಸೇನಾಪತಿಯಾಗಿ ಕಾರ್ಯನಿರ್ವಹಿಸಿ ಕೊನೆಗೆ ಅವನನ್ನು ಬದಿಗೊತ್ತಿ ತಾನೇ ಸರ್ವಾಧಿಕಾರಿಯಾಗಿ ಆಳ್ವಿಕೆ ನಡೆಸಿದನು. ಈತನಿಗೆ ನರಸಣ್ಣ ಹಾಗೂ ನರಸ ಒಡೆಯನೆಂದೂ ಕರೆಯುತ್ತಿದ್ದರು. ಗಜಪತಿರಾಯೇಭಗಂಡ ಭೇರುಂಡ, ದುಷ್ಪರಾಣ್ ಮೃಗಶಾರ್ದೂಲ ಮುಂತಾದವು ಈತನ ಬಿರುದುಗಳಾಗಿದ್ದವು.[೪೫] ಈತನಿಗೆ ಮೂವರು ಹೆಂಡಂದಿರು ಹಾಗೂ ನಾಲ್ಕು ಮಕ್ಕಳಿದ್ದರು. ತಿಪ್ಪಾಂಬಿಕೆಯಲ್ಲಿ ವೀರನರಸಿಂಹನು, ನಾಗಲಾದೇವಿಯಲ್ಲಿ

ಕೃಷ್ಣದೇವರಾಯನು, ಓಬಾಂಬಿಕೆಯಲ್ಲಿ ಅಚ್ಯುತರಾಯ ಮತ್ತು ರಂಗರಾಯರು ಜನಿಸಿದ್ದರು. ಹಂಪೆಯ ಕ್ರಿ.ಶ.೧೫೧೦ರ ಶಾಸನ[೪೬]ದಲ್ಲಿ ನರಸನಾಯಕರ ತಾಯಿಯ ಉಲ್ಲೇಖವಿದೆ. ಈ ಶಾಸನದಲ್ಲಿ ನರಸನಾಯಕರ ತಾಯಿ ಬುಕ್ಕಾಜಿಅಮ್ಮನು ಹಂಪೆಯ ತಿರುಮಲಭಟ್ಟನ ಮಗ ಸಾಇಭಟ್ಟನಿಗೆ ವಿರೂಪಾಕ್ಷದೇವರ ನೈವೇದ್ಯಕ್ಕಾಗಿ ಭೂದಾನ ಮಾಡಿದ ವಿಷಯವಿದೆ. ಆದ್ದರಿಂದ ನರಸನಾಯಕನ ತಾಯಿಯ ಹೆಸರು ಬುಕ್ಕಾಜಿಅಮ್ಮನವರು ಎಂದು ತಿಳಿಯಬಹುದು. ನರಸನಾಯಕನು ಮರಣ ಹೊಂದಲು ವೀರ ನರಸಿಂಹನು ವಿಜಯನಗರದ ಸಿಂಹಾಸನಾಧಿಕಾರಿಯಾದನು.

## ವೀರನರಸಿಂಹ (ಕ್ರಿ.ಶ.೧೫೦೫–೧೫೦೯)

ಈತನ ತಂದೆಯು ಸರ್ವಾಧಿಕಾರಿಯಾಗಿ ಆಳ್ವಿಕೆ ನಡೆಸಿದರೂ ಅಧಿಕೃತ ವಿಜಯನಗರದ ಅರಸ ಎಂದೆನಿಸಿಕೊಂಡಿರಲಿಲ್ಲ. ಆದ್ದರಿಂದ ವೀರನರಸಿಂಹನು ತಂದೆಯ ಮರಣ ನಂತರ ಇಮ್ಮಡಿ ಸಾಳುವ ನರಸಿಂಹನನ್ನು ಬದಿಗೊತ್ತಿ ವಿಜಯನಗರದ ಸಿಂಹಾಸನವನ್ನೇರುವುದರೊಂದಿಗೆ ತುಳುವ ವಂಶದ ಮೊದಲ ಅರಸನೆನಿಸಿಕೊಂಡರು. ಈತನ ಅಲ್ಪಕಾಲಿಕ ಆಳ್ವಿಕೆ ಗಲಭೆಯಲ್ಲಿಯೇ ಕಳೆಯಿತು. ಹಂಪೆಯ ಕ್ರಿ.ಶ.೧೫೦೫ರ ಶಾಸನ[೪೭] ವೀರನರಸಿಂಹನ ಆಳ್ವಿಕೆಯನ್ನು ತಿಳಿಸುತ್ತದೆ. ಕ್ರಿ.ಶ.೧೫೦೯ರಲ್ಲೇ ಈತನು ಮರಣ ಹೊಂದಿದ್ದರಿಂದ ಈತನ ಮಲಸಹೋದರ ಕೃಷ್ಣದೇವರಾಯನು ವಿಜಯನಗರದ ಸಿಂಹಾಸನಾರೂಢನಾದನು.

## ಕೃಷ್ಣದೇವರಾಯ (ಕ್ರಿ.ಶ.೧೫೦೯–೧೫೨೯)

ವಿಜಯನಗರ ಸಾಮ್ರಾಜ್ಯವನ್ನು ಆಳಿದ ತುಳುವ ವಂಶದ ಪ್ರಖ್ಯಾತ ಅರಸನೆಂದರೆ ಕೃಷ್ಣದೇವರಾಯ. ತಂದೆ ನರಸನಾಯಕ, ತಾಯಿ ನಾಗಲಾದೇವಿ. ತನ್ನ ಮಲ ಸಹೋದರನಾದ ವೀರನರಸಿಂಹನ ಮರಣಾನಂತರ ಕ್ರಿ.ಶ.೧೫೦೯ ಆಗಸ್ಟ್ ೮ರಂದು ಕೃಷ್ಣಜನ್ಮಾಷ್ಟಮಿ ದಿನದಂದು ಪಟ್ಟವೇರಿದನು. ಈ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ಒಳ–ಹೊರ ಶತ್ರುಗಳಿಂದ ಹಾಗೂ ದೀರ್ಘಕಾಲದ ದುರಾಡಳಿತದಿಂದ ದುರ್ಬಲವಾಗಿತ್ತು. ಕೃಷ್ಣದೇವರಾಯನು ಮೊದಲು ರಾಜ್ಯದ ಆಂತರಿಕ ಸುವ್ಯವಸ್ಥೆ ಹಾಗೂ ಸಂಪನ್ಮೂಲಗಳ ಅಭಿವೃದ್ಧಿಯ ಕಾರ್ಯಗಳನ್ನು ಕೈಗೊಂಡನು. ಮದುವೆ ಸುಂಕ ಮೊದಲಾದ ಕಿರುಕುಳದ ರೀತಿಯ ಕೆಲವು ತೆರಿಗೆಗಳನ್ನು ರದ್ದುಮಾಡಿ, ಜನರ ವಿಶ್ವಾಸ ಗಳಿಸಿದ. ಹೊಸ ಭೂಮಿಗಳನ್ನು ವ್ಯವಸಾಯಕ್ಕೆ ಒಳಪಡಿಸಿ ರಾಜ್ಯಾದಾಯವನ್ನು ಹೆಚ್ಚಿಸಿದ. ಪ್ರಾಂತಾಧಿಕಾರಿಗಳು ಮತ್ತು ಸಾಮಂತರು ನಿರ್ದಿಷ್ಟ ಸಂಖ್ಯೆಯ ಸೈನಿಕರನ್ನು ರಾಜನಿಗೆ ಒದಗಿಸಬೇಕೆಂಬ ಕಟ್ಟುಪಾಡು ಮಾಡಿ ರಾಜ್ಯದ ಸೇನಾಬಲವನ್ನು ಹೆಚ್ಚಿಸಿದನು. ಇದರ ನಂತರ ಶತ್ರುನಿಗ್ರಹ ಕಾರ್ಯಗಳನ್ನು ಕೈಗೊಂಡನು. ಆಗ ಉತ್ತರ, ಪೂರ್ವ, ಪಶ್ಚಿಮ ಗಡಿ ಭಾಗಗಳಲ್ಲಿ ಬಹಮನಿ ಸುಲ್ತಾನರು, ಒರಿಸ್ಸಾದ ಗಜಪತಿರಾಯ ಮತ್ತು ವಿಜಾಪುರ ಸುಲ್ತಾನರ ಒತ್ತಡ ಬಲವಾಗಿತ್ತು. ಈ ಸಮಯದಲ್ಲಿ ಕೃಷ್ಣದೇವರಾಯ ಚಾಣಾಕ್ಷತನದಿಂದ ಪೋರ್ಚುಗೀಸರ ಸ್ನೇಹವನ್ನು ಮಾಡಿ ಮುಸಲ್ಮಾನರ ಬಲವನ್ನು ಮುರಿಯಲು ಸೈನ್ಯವನ್ನು ಸಂಘಟಿಸಿದ. ಇದೇ ಸಮಯದಲ್ಲಿ ಗುಲ್ಬರ್ಗದ

ಮಹಮದ್ ಷಾ ವಿಜಾಪುರದ ಯೂಸುಫ್ ಆದಿಲ್ ಷಾ ನೊಡಗೂಡಿ ದಾಳಿ ಮಾಡಿದನು. ಈ ಯುದ್ಧದಲ್ಲಿ ಮಹಮದ್ ಷಾ ಗಾಯಗೊಂಡು ಪಲಾಯನ ಮಾಡಿದ. ಆದಿಲ್ ಷಾ ಮರಣ ಹೊಂದಿದ. ದಕ್ಷಿಣದಲ್ಲಿ ತೊಂದರೆ ಕೊಡುತ್ತಿದ್ದ ಉಮ್ಮತ್ತೂರು ಪಾಳೆಗಾರರನ್ನು ಸದೆಬಡಿದು ಉಮ್ಮತ್ತೂರು, ಶಿವನಸಮುದ್ರ ಶ್ರೀರಂಗಪಟ್ಟಣದ ಭಾಗಗಳನ್ನು ತನ್ನ ರಾಜ್ಯದಲ್ಲಿ ಸೇರಿಸಿಕೊಂಡನು. ಓರಿಸ್ಸಾದ ಗಜಪತಿ ಪ್ರತಾಪರುದ್ರನು ಕೃಷ್ಣದೇವರಾಯನನ್ನು ಎದುರಿಸಲಾಗದೆ ಒಪ್ಪಂದ ಮಾಡಿಕೊಂಡು ತನ್ನ ಮಗಳು ಜಗನ್ಮೋಹಿನಿಯನ್ನು ಇವನಿಗೆ ಮದುವೆ ಮಾಡಿಕೊಟ್ಟ. ರಾಯಚೂರು ಮತ್ತು ಮುದಗಲ್ ಕೋಟೆಗಳಿಗಾಗಿ ಗುಲ್ಬರ್ಗ, ಬಿಜಾಪುರ ಮತ್ತು ವಿಜಯನಗರದವರ ನಡುವೆ ಯಾವಾಗಲು ಕದನಗಳಾಗುತ್ತಿದ್ದವು. ರಾಯನು ವಿಜಾಪುರದ ಇಸ್ಮಾಯಿಲ್ ಆದಿಲ್ ಷಾನನ್ನು ಸೋಲಿಸಿ ರಾಯಚೂರನ್ನು ವಿಜಯನಗರಕ್ಕೆ ವಿಲೀನಗೊಳಿಸಿದ. ಮುಂದೆ ಸಂಧಾನಕ್ಕೆಂದು ಮುದಗಲ್ಲಿಗೆ ಬರಲು ಒಪ್ಪಿದ್ದ ಬಿಜಾಪುರದ ಸುಲ್ತಾನ ಬಾರದಿದ್ದಾಗ ರಾಯನು ಕೋಪಗೊಂಡು ಗಡಿ ದಾಟಿ ಬಿಜಾಪುರದ ಮೇಲೆ ದಾಳಿ ಕೈಗೊಂಡು ಸುಲ್ತಾನನ್ನು ಸೋಲಿಸಿದನು. ಇವನು ಗುಲ್ಬರ್ಗದವರೆಗೆ ಸಾಗಿ ಅದನ್ನೂ ವಶಪಡಿಸಿಕೊಂಡನು. ಅಲ್ಲಿ ಬಂಧಿತರಾಗಿದ್ದ ಬಹಮನಿ ರಾಜಕುಮಾರರನ್ನು ಬಿಡಿಸಿ ಅದರಲ್ಲಿಯೇ ಹಿರಿಯನಿಗೆ ರಾಜ್ಯಾಧಿಕಾರ ಕೊಟ್ಟು ಮರಳಿದ. ಈ ಸಾಧನೆಯ ಕುರುಹಾಗಿ 'ಯವನರಾಜ್ಯ ಪ್ರತಿಷ್ಠಾಪನಚಾರ್ಯ' ಎಂಬ ಬಿರುದನ್ನು ಧರಿಸಿದನು.

ರಾಯನಿಗೆ ಚಿನ್ನಾದೇವಿ, ತಿರುಮಲಾದೇವಿ ಹಾಗೂ ಜಗನ್ಮೋಹಿನಿ ಎಂಬ ಮೂವರು ರಾಣಿಯರಿದ್ದರು. ಹಾಗೂ ಇಬ್ಬರು ಹೆಣ್ಣು ಮಕ್ಕಳು ಮತ್ತು ಇಬ್ಬರು ಗಂಡು ಮಕ್ಕಳಿದ್ದರು. ಹಿರಿಯ ಮಗ ತಿರುಮಲನು ಆರು ವರ್ಷದವನಿರುವಾಗ ಯುವರಾಜನಾಗಿ ಪಟ್ಟಾಭಿಷಕ್ತನಾದನು. ಆದರೆ ಪಟ್ಟವನ್ನೇರಿದ ಎಂಟು ತಿಂಗಳ ನಂತರ ಆತ ವಿಷಪ್ರಾಶನದಿಂದ ತೀರಿ ಹೋಗಿದ್ದನೆಂದು ತಿಳಿಯಲಾಗಿತ್ತು. ಆದರೆ ಕೆ.ಜಿ.ಗೋಪಾಲಕೃಷ್ಣರಾಯರು ಕೆಲವು ಶಾಸನಾಧಾರಗಳಿಂದ ತಿರುಮಲನು ಏಳು ತಿಂಗಳಿಗೆ ಜನಿಸಿದ ಅಸಾಮಾನ್ಯ ಹಾಗೂ ಅನಾರೋಗ್ಯ ಮಗುವಾಗಿದ್ದರಿಂದ ಸತತವಾಗಿ ಎಂಟು ತಿಂಗಳುಗಳ ಕಾಲ ನಡೆದ ಪಟ್ಟಾಭಿಷೇಕ ಉತ್ಸವಗಳ ಆಯಾಸವನ್ನು ತಾಳಲಾರದೆ ಕೊನೆಯುಸಿರೆಳೆದಿರಬೇಕು ಎಂದು ತಿಳಿಸಿದ್ದಾರೆ.[೮೮] ಇನ್ನೊಬ್ಬ ಮಗನು ಕೃಷ್ಣದೇವರಾಯ ಸಾಯುವ ಕಾಲದಲ್ಲಿ ಹದಿನೆಂಟು ತಿಂಗಳ ಮಗುವಾಗಿದ್ದನು. ಹಿರಿಯ ಮಗಳು ತಿರುಮಲಾಂಬಾ ಹಾಗೂ ಕಿರಿಯ ಮಗಳು ವೇಂಗಳಾಂಬಾ ಇವರು ಅರವೀಡು ಮನೆತನದ ಅಳಿಯ ರಾಮರಾಯ ಮತ್ತು ಈತನ ಸೋದರ ತಿರುಮಲನನ್ನು ವಿವಾಹವಾಗಿದ್ದರು.

ಕೃಷ್ಣದೇವರಾಯನು ಕವಿಪೋಷಕನು ಹಾಗೂ ಸ್ವತಃ ಕವಿಯೂ ಆಗಿದ್ದನು. 'ಜಾಂಬವತಿ ಕಲ್ಯಾಣ' ಎಂಬ ನಾಟಕ, 'ಅಮುಕ್ತಮಾಲ್ಯದಾ' ಎಂಬ ತೆಲುಗು ಕಾವ್ಯ ಹಾಗೂ ಇತರ ಸಂಸ್ಕೃತ ಗ್ರಂಥಗಳನ್ನೂ ರಚಿಸಿರುವನು. ಇವನ ಆಸ್ಥಾನದಲ್ಲಿ ಅಷ್ಟದಿಗ್ಗಜರೆನಿಸಿಕೊಂಡ ವಿವಿಧ ಭಾಷಾವಿದ್ವಾಂಸರಿದ್ದರು. ಅವರಲ್ಲಿ ತೆಲುಗು ಮಹಾಕವಿ ಅಲ್ಲಸಾನಿ ಪೆದ್ದನ ಹಾಗೂ ಕನ್ನಡ ಕವಿ ತಿಮ್ಮಣ್ಣ ಪ್ರಮುಖರು. ಮಧ್ವ ಸಂಪ್ರದಾಯದ ಪ್ರಸಿದ್ಧ ಯತಿಗಳಾದ ವ್ಯಾಸರಾಯರು

ರಾಜಗುರುಗಳಾಗಿದ್ದರು. ದಾಸಶ್ರೇಷ್ಠರಾದ ಪುರಂದರದಾಸರು ಮತ್ತು ಕನಕದಾಸರೂ ಈ ಕಾಲದ ಶ್ರೇಷ್ಠ ಕೀರ್ತನಕಾರರಾಗಿದ್ದರು. ಅನೇಕ ಊರು, ಅಣೆಕಟ್ಟು, ನಾಲೆ, ಕೆರೆ, ದೇವಾಲಯ ಮತ್ತು ಇತರ ಕಟ್ಟಡಗಳು ಕೃಷ್ಣದೇವರಾಯನ ಕಾಲದಲ್ಲಿ ನಿರ್ಮಿತಗೊಂಡವು. ಈತನು ತನ್ನ ತಾಯಿಯಾದ ನಾಗಲಾದೇವಿ ಮತ್ತು ತನ್ನ ರಾಣಿಯಾದ ತಿರುಮಲ ದೇವಿಯ ಹೆಸರಿನಲ್ಲಿ ನಗರಗಳನ್ನೂ ನಿರ್ಮಿಸಿದನು.

ಈತನು ಆಗಿನ ಭಾರತದಲ್ಲಿಯೇ ಶೂರ, ಸಮರ್ಥ, ಶ್ರೀಮಂತ, ಮುತ್ಸದ್ಧಿ ಸಾಹಿತ್ಯ-ಸಂಸ್ಕೃತಿ ಪ್ರಿಯ ಸಾಮ್ರಾಟರಲ್ಲಿ ಅಗ್ರಗಣ್ಯ. ಕನ್ನಡರಾಜ್ಯ ರಮಾರಮಣ, ಆಂಧ್ರ ಭೋಜ, ಚತುಸ್ಸಮಯ ಸಮುದ್ಧರಣರಾಯ, ಯವನರಾಜ್ಯ ಪ್ರತಿಷ್ಠಾಪನಾಚಾರ್ಯ ಎಂಬ ಮುಂತಾದ ಬಿರುದುಗಳಲ್ಲಿ ಕೃಷ್ಣದೇವರಾಯನ ಬಹುಮುಖ ವ್ಯಕ್ತಿತ್ವ ಕಾಣಸಿಗುತ್ತದೆ ಎಂದು ಹೇಳಬಹುದು. ವಿದೇಶಿ ಪ್ರವಾಸಿಗರು ಈತನ ಆಳ್ವಿಕೆಯಲ್ಲಿ ವಿಜಯನಗರಕ್ಕೆ ಭೇಟಿ ನೀಡಿ ಇಲ್ಲಿನ ವರ್ಣನೆ ಮಾಡಿರುವರು. ಅಂತಹವರಲ್ಲಿ ಪೋರ್ಚುಗೀಸ್‌ನ ಬರ್ಬೋಸಾ ಪೇಸ್ ಪ್ರಮುಖರು. ಇವರೆಲ್ಲರೂ ಇಲ್ಲಿನ ಕೋಟೆ, ಅರಮನೆಗಳು, ಬಜಾರುಗಳು, ಬೀದಿಗಳು ಮುಂತಾದವುಗಳ ಕುರಿತು ವರ್ಣನೆ ಮಾಡಿರುವರು. ಹಾಗೆಯೇ ಈತನ ಶಾಸನಗಳಿಂದಲೂ ಹಲವು ವಿಚಾರಗಳನ್ನು ತಿಳಿಯಬಹುದು. ಕೃಷ್ಣದೇವರಾಯನ ಕಾಲದ ಕರ್ನಾಟಕ, ಆಂಧ್ರ ಪ್ರದೇಶ, ತಮಿಳುನಾಡು ಮತ್ತು ಮಹಾರಾಷ್ಟ್ರಗಳನ್ನು ಒಳಗೊಂಡಂತೆ ಕನ್ನಡ-ಸಂಸ್ಕೃತ ಭಾಷೆಯಲ್ಲಿ ದೊರೆತ ಒಟ್ಟು ಶಾಸನಗಳ ಸಂಖ್ಯೆ ೩೬೩. ಹಾಗೂ ಕೇವಲ ಕರ್ನಾಟಕದಲ್ಲಿ ದೊರೆತ ಶಾಸನಗಳು ೨೮೯[೪೯]. ಹಂಪಿಯೊಂದರಲ್ಲೇ ಈತನಿಗೆ ಸಂಬಂಧಿಸಿದ ೨೦ ಶಾಸನಗಳು ದೊರೆತಿವೆ.[೫೦] ಹಂಪಿಯಲ್ಲಿ ದೊರೆತ ಶಾಸನಗಳಲ್ಲಿ ಕೆಲವು ಪ್ರಮುಖ ಶಾಸನಗಳನ್ನು ಹೇಳುವುದಾದರೆ, ಕ್ರಿ.ಶ.೧೫೧೦ರ ಶಾಸನ[೫೧] ಈತನನ್ನು ಉಲ್ಲೇಖಿಸುವ ಹಂಪೆಯ ಮೊದಲ ಶಾಸನ. ಈ ಶಾಸನದಲ್ಲಿ ಕೃಷ್ಣದೇವರಾಯನವರೆಗಿನ ವಂಶಾವಳಿಯನ್ನು ಹೇಳಿದೆ. ಅಲ್ಲದೆ ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ದಿನ ವಿರೂಪಾಕ್ಷದೇವರ ಅಮೃತಪಡಿ ಮತ್ತು ನೈವೇಧ್ಯ ಸೇವೆಗಾಗಿ ಸಿಂಗನಾಯಕನಹಳ್ಳಿಯನ್ನು ದಾನವಾಗಿ ನೀಡುತ್ತಾನೆ. ವಿರೂಪಾಕ್ಷ ದೇವರ ಮುಂದಿನ ರಂಗಮಂಟಪವನ್ನು ಹಾಗೂ ಅದರ ಮುಂದಿನ ಗೋಪುರವನ್ನೂ ಕಟ್ಟಿಸುತ್ತಾನೆ. ದೇವಾಲಯದ ಹಿರಿಯ ಗೋಪುರವನ್ನು ಜೀರ್ಣೋದ್ಧಾರ ಮಾಡಿಸುತ್ತಾನೆ. ಹಾಗೂ ಚಿನ್ನದ ಆಭರಣಗಳು ಮತ್ತು ಪೂಜಾ ಸಾಮಗ್ರಿಗಳನ್ನು ದೇವರ ಸೇವೆಗೆ ನೀಡಿದ್ದನ್ನು ಈ ಶಾಸನ ತಿಳಿಸುತ್ತದೆ. ಇನ್ನೊಂದು ಮುಖ್ಯ ಶಾಸನವೆಂದರೆ ಕ್ರಿ.ಶ.೧೫೧೩ರ ಶಾಸನ.[೫೨] ಈ ಶಾಸನದಲ್ಲಿ ಕೃಷ್ಣದೇವರಾಯ ಮಹಾರಾಯನು ಉದಯಗಿರಿಯಿಂದ ತೆಗೆದುಕೊಂಡು(ಬಿಜೆ ಮಾಡಿಸಿಕೊಂಡ) ಬಂದಂಥಾ ಶ್ರೀ ಬಾಲಕೃಷ್ಣದೇವರ ಪ್ರತಿಷ್ಠೆ ಮಾಡಿಸಿ ಆ ಸಂದರ್ಭದಲ್ಲಿ ಅನೇಕ ಅಭರಣಗಳನ್ನು ಪೂಜಾ ಸಾಮಗ್ರಿಗಳನ್ನು ಸಮರ್ಪಿಸುತ್ತಾನೆ. ಹಾಗೂ ದೇವರ ನಿತ್ಯನೈಮಿತ್ತಿಕ ಕಾರ್ಯಗಳಿಗೆ ಇನ್ನೂ ಹಲವು ದಾನಗಳನ್ನು ನೀಡಿದುದನ್ನು ತಿಳಿಸುತ್ತದೆ. ಇನ್ನೊಂದು ಕ್ರಿ.ಶ.೧೫೨೯ರ ಶಾಸನದಲ್ಲಿ ಕೃಷ್ಣದೇವರಾಯನ ಆಳ್ವಿಕೆಯ ಉಲ್ಲೇಖವಿದ್ದು, ರಾಜನು ಆರ್ಯಕೃಷ್ಣಭಟನ ಕೈಯಲ್ಲಿ ಕೃಷ್ಣಾಪುರದಲ್ಲಿ

ಶ್ರೀ ಲಕ್ಷ್ಮೀನರಸಿಂಹದೇವರನ್ನು ಪ್ರತಿಷ್ಠಾಪನೆ ಮಾಡಿಸಿದ ಹಾಗೂ ಅದಕ್ಕೆ ಗ್ರಾಮದಾನಗಳನ್ನು ಮಾಡಿರುವ ವಿಷಯಗಳು ತಿಳಿಯುತ್ತವೆ. ಅಲ್ಲದೆ ಈ ಶಾಸನದಲ್ಲಿ ಕೃಷ್ಣರಾಯನನ್ನು ಅರಿರಾಯವಿಭಾಡ ಮೂರುರಾಯರಗಂಡ, ಸಾಹಿತ್ಯ, ಸಂಗೀತ ಸಮರಾಂಗಣ ಸಾರ್ವಭೌಮವೆಂದು ಕರೆದಿದೆ. ಹೀಗೆ ಕೃಷ್ಣದೇವರಾಯನ ಹಲವು ಶಾಸನಗಳು ಲಭ್ಯವಿದ್ದು, ಅವನ ಆಳ್ವಿಕೆ, ದಾನ–ದತ್ತಿ ಹಾಗೂ ಇತರ ಕಾರ್ಯಗಳ ಕುರಿತು ಪ್ರಸ್ತಾಪಿಸುತ್ತವೆ.

ಹೀಗೆ ಕೃಷ್ಣದೇವರಾಯನು ಕ್ರಿ.ಶ.೧೫೦೯ ರಿಂದ ೧೫೨೯ರವರೆಗೆ ದಕ್ಷಿಣ ಭಾರತದಲ್ಲಿಯೇ ದೇದಿಪ್ಯಮಾನವಾಗಿ ಬೆಳಗಿ ವಿಜಯನಗರ ಸಾಮ್ರಾಜ್ಯವನ್ನು ಉನ್ನತ ಶಿಖರಕ್ಕೇರಿಸಿ ವೈಭವದ ಕಾಲಮಾನವನ್ನು ನೀಡಿದನು. ಕ್ರಿ.ಶ.೧೫೨೯ರಲ್ಲಿ ಈತನ ಮರಣದೊಂದಿಗೆ ವಿಜಯನಗರ ಸಾಮ್ರಾಜ್ಯವು ಪತನದೆಡೆಗೆ ಮುಖ ಮಾಡಲಾರಂಭಿಸಿತು.

### ಅಚ್ಚುತರಾಯ (ಕ್ರಿ.ಶ.೧೫೨೯–೧೫೪೨)

ಕೃಷ್ಣದೇವರಾಯನ ಮರಣಾನಂತರ ಅಚ್ಯುತರಾಯ ಅಧಿಕಾರ ವಹಿಸಿಕೊಂಡನು. ಈತನು ಕೃಷ್ಣದೇವರಾಯನ ಮಲಸಹೋದರ. ಕೃಷ್ಣದೇವರಾಯನು ತನ್ನ ಆಳ್ವಿಕೆ ಸಂದರ್ಭದಲ್ಲಿ ಅರಮನೆಯಲ್ಲಿ ಪಿತೂರಿಗಳನ್ನು ತಪ್ಪಿಸಲು ಈತನನ್ನು ಕೆಲಕಾಲ ಚಂದ್ರಗಿರಿಯಲ್ಲಿ ಬಂಧನದಲ್ಲಿಟ್ಟಿದ್ದನು. ಆದರೆ ತನ್ನ ಕೊನೆ ದಿನಗಳಲ್ಲಿ ಇವನನ್ನು ಸಿಂಹಾಸನಕ್ಕೆ ಉತ್ತರಾಧಿಕಾರಿಯೆಂದು ನೇಮಿಸಿದ್ದರಿಂದ ಅವನ ಆಳ್ವಿಕೆಯ ಕೊನೆಯಲ್ಲಿ ಇವನೂ ಆಡಳಿತದಲ್ಲಿ ಸಹಕರಿಸುತ್ತಿದ್ದನೆಂದು ತಿಳಿದುಬರುತ್ತದೆ. ಈತನ ಆಳ್ವಿಕೆಯ ಆರಂಭ ಕಾಲದಲ್ಲೇ ಅಂತರ್‌ಯುದ್ಧಗಳು ಆರಂಭವಾದವು. ಈ ಕಲಹಗಳ ಜೊತೆಗೆ ಕೃಷ್ಣದೇವರಾಯನ ಮರಣದ ನಂತರ ಬಿಜಾಪುರದ ಸುಲ್ತಾನನಾಗಿದ್ದ ಆದಿಲ್ ಷಹ ಕ್ರಿ.ಶ.೧೫೩೦–೩೧ರಲ್ಲಿ ವಿಜಯನಗರದ ಮೇಲೆ ದಂಡೆತ್ತಿ ಬಂದು ರಾಯಚೂರು ಮತ್ತು ಮುದುಗಲ್ ಪ್ರದೇಶಗಳನ್ನು ಆಕ್ರಮಿಸಿದನು. ಆದರೆ ಕ್ರಿ.ಶ.೧೫೩೪ರಲ್ಲಿ ಆದಿಲ್ ಷಹನ ಮರಣಾನಂತರ ಅಚ್ಯುತರಾಯ ರಾಯಚೂರು ಪ್ರದೇಶವನ್ನು ಆಕ್ರಮಿಸಿ ಪುನಃ ವಶಪಡಿಸಿಕೊಂಡನು. ಹೀಗೆ ತನ್ನ ಆಳ್ವಿಕೆಯ ಉದ್ದಕ್ಕೂ ಇವನು ರಾಜಕೀಯ ಪ್ರಕ್ಷುಬ್ಧತೆಯ ಮಧ್ಯೆ ತೊಳಲಾಡಿದರೂ ರಾಜ್ಯ ಒಟ್ಟು ಕ್ಷೇಮಕ್ಕೆ ಭಂಗ ಬರದಂತೆ ಧೈರ್ಯ ಹಾಗೂ ಉಪಾಯದಿಂದ ಆಡಳಿತ ನಿರ್ವಹಿಸಿದನೆಂದು ಹೇಳಬಹುದು. ಕೃಷ್ಣದೇವರಾಯನ ಕಾಲದಲ್ಲಿ ಸ್ನೇಹಿತರಾಗಿದ್ದ ಪೋರ್ಚುಗೀಸರು ಇವನ ಕಾಲದಲ್ಲಿ ವಿರೋಧಿಗಳಾಗಿ ಮಾರ್ಪಟ್ಟು ತೀರ ಪ್ರದೇಶದಲ್ಲಿ ವಸಾಹತುಗಳನ್ನು ಸ್ಥಾಪಿಸಿ ದೇವಸ್ಥಾನಗಳನ್ನು ಕೊಳ್ಳೆ ಹೊಡೆದು ಜನರ ಕಗ್ಗೊಲೆ ಮಾಡಿದರು.

ಅಚ್ಚುತರಾಯನಿಗೆ ಇಬ್ಬರು ರಾಣಿಯರು. ಮೊದಲನೆಯವಳು ವರದಾಂಬಿಕಾ ಇನ್ನೋರ್ವಳು ಪಾಂಡ್ಯ ರಾಜ್ಯದ ರಾಜ್ಯಕನ್ಯೆ. ವರದಾಂಬಿಕೆಗೆ ವೆಂಕಟಾದ್ರಿ ಎಂಬ ಮಗನಿದ್ದನು. ಅಚ್ಯುತರಾಯ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿದನು. ಈತನ ಆಸ್ಥಾನ ಕವಿಯಾದ ರಾಜನಾಥ ಡಿಂಡಿಮನು ಅಚ್ಯುತರಾಯಾಭ್ಯುದಯಮು ಹಾಗೂ ಭಾಗವತ ಚಂಪೂ ಎಂಬ ಕೃತಿಗಳನ್ನು ರಚಿಸಿದನು.

ಈತನ ಕಾಲದಲ್ಲಿ ಕೃಷ್ಣದೇವರಾಯನ ಮಗಳಾದ ತಿರುಮಲಾಂಬೆಯು ವರದಾಂಬಿಕಾ ಪರಿಣಯಮು ಎಂಬ ಕೃತಿಯನ್ನು ರಚಿಸಿದಳು. ಈತನ ಆಳ್ವಿಕೆಯ ಕಾಲಕ್ಕೆ ಸುಮಾರು ಕ್ರಿ.ಶ.೧೫೩೬–೩೭ರಲ್ಲಿ ವಿದೇಶಿ ಪ್ರವಾಸಿಗ ಪೋರ್ಚುಗೀಸರ ಫರ್ನಾಓ ನ್ಯೂನಿಜ್ ವಿಜಯನಗರಕ್ಕೆ ಭೇಟಿ ನೀಡಿ ತನ್ನ ಬರಹಗಳಲ್ಲಿ ವಿಜಯನಗರದ ಇತಿಹಾಸವನ್ನು ತಿಳಿಸಿರುವನು. ಈತನು ಸಾಳುವ ನರಸಿಂಹನನ್ನು ನರಸಿಂಗುವಾ ಎಂದು ಕರೆದು ಬಿಸ್ನಗ್ರ ರಾಜ್ಯವನ್ನು ನರಸಿಂಗುವಾ ರಾಜ್ಯವೆಂದಿದ್ದಾನೆ. ಕೃಷ್ಣದೇವರಾಯನ ದಂಡಯಾತ್ರೆಗಳ ವಿವರಗಳನ್ನು ನೀಡಿದ್ದಾನೆ. ಮತ್ತು ಅಚ್ಯುತರಾಯ ಅನೀತಿ ಹಾಗೂ ದಬ್ಬಾಳಿಕೆಗಳಿಗೆ ಕೈ ಹಾಕಿದನು. ಪ್ರಾಮಾಣಿಕತೆ ಎನ್ನುವುದೇ ಇರಲಿಲ್ಲ. ಈತನ ನಡತೆಯ ಬಗ್ಗೆ ಯಾರಿಗೂ ಗೌರವವಿಲ್ಲ. ತನ್ನ ರಾಜ್ಯಭಾರದ ವಿಚಾರದಲ್ಲಿ ಈತನಿಗೆ ಕಿಂಚಿತ್ತೂ ಆಸಕ್ತಿಯಿಲ್ಲ ಎಂದು ಹೇಳಿದ್ದಾನೆ. ಜೊತೆಗೆ ರಾಜ್ಯದಲ್ಲಿ ಪ್ರಜೆಗಳ ಆಚಾರ ವ್ಯವಹಾರಗಳು, ಸಾಮಾಜಿಕ ಪದ್ಧತಿಗಳು ಇಂತಹ ಇತರ ವಿಷಯಗಳನ್ನೂ ಸಹ ಈ ಬರೆಹಗಳಲ್ಲಿ ತಿಳಿಸಿರುವನು. ಅಚ್ಯುತರಾಯನು ತನ್ನ ಆಳ್ವಿಕೆ ಸಂದರ್ಭದಲ್ಲಿ ದೇವಾಲಯಗಳಿಗೆ ಮತ್ತು ಬ್ರಾಹ್ಮಣರಿಗೆ ಅನೇಕ ದಾನಗಳನ್ನು ನೀಡಿರುವನು. ಇವನು ಅನೇಕ ಉಪಾಯಗಳಿಂದ ಬೊಕ್ಕಸವನ್ನು ತುಂಬಿಸಿದ್ದರಿಂದ ನವಕೋಟಿ ನಾರಾಯಣನೆಂದು ಕರೆಯಲ್ಪಟ್ಟಿದ್ದಾನೆ. ಈತನು ವೈಷ್ಣವ ಮತದ ಆರಾಧಕನಾಗಿದ್ದನು.

ಹಂಪಿಯಲ್ಲಿ ಅಚ್ಯುತರಾಯನ ಕಾಲದ ಸುಮಾರು ೩೪ ಶಾಸನಗಳು ದೊರೆತಿವೆ. ಅವುಗಳಲ್ಲಿ ನೇರವಾಗಿ ಅಚ್ಯುತರಾಯನಿಗೆ ಸಂಬಂಧಿಸಿದ ಶಾಸನಗಳು ಹದಿಮೂರು. ಹನ್ನೊಂದು ಶಾಸನಗಳು ಅಚ್ಯುತರಾಯನ ಮಹಾಮಂಡಳೇಶ್ವರರು ಹಾಗೂ ಇವನ ಅಧಿಕಾರಿಗಳು ಅವನ ಹೆಸರಿನಲ್ಲಿ ಹಾಕಿಸಿದವುಗಳು. ಉಳಿದ ಹತ್ತು ಶಾಸನಗಳಲ್ಲಿ ಅಚ್ಯುತರಾಯನ ಕುರಿತು ಉಲ್ಲೇಖವಿದ್ದರೂ ಅಸ್ಪಷ್ಟವಾಗಿರುವುದನ್ನು ಕಾಣಬಹುದು.[೫೪] ಈತನ ಆಳ್ವಿಕೆಯನ್ನು ಉಲ್ಲೇಖಿಸುವ ಮೊದಲ ಶಾಸನವೆಂದರೆ ಹಂಪೆಯ ಕ್ರಿ.ಶ.೧೫೩೧ರ ಶಾಸನ.[೫೫] ಮತ್ತು ಕ್ರಿ.ಶ.೧೫೩೩ರ ಹಂಪೆಯ ಶಾಸನದಲ್ಲಿ[೫೬] ಅಚ್ಚುತದೇವರಾಯನು ಆಳುತ್ತಿದ್ದಾಗ ವಿಠಲೇಶ್ವರನ ಸನ್ನಿಧಿಯಲ್ಲಿ ಅವನು ಮಾಡಿದ ಸುವರ್ಣ ಮೇರುದಾನದ ಬಗ್ಗೆ ವೋದುವ ತಿರುವಲಮ್ಮ ಶ್ಲೋಕವನ್ನು ರಚಿಸಿದ ವಿಷಯವನ್ನು ತಿಳಿಸುತ್ತದೆ. ಹಾಗೆಯೇ ಕ್ರಿ.ಶ.೧೫೩೯ರ ಶಾಸನದಲ್ಲಿ[೫೭] ಅಚ್ಯುತದೇವರಾಯನು ಬ್ರಾಹ್ಮಣರಿಗೆ ಆನಂದನಿಧಿ[೫೮] ಎಂಬ ದಾನವನ್ನು ಮಾಡಿದ್ದನ್ನು ಉಲ್ಲೇಖಿಸುತ್ತದೆ. ಹೀಗೆ ಅಚ್ಯುತದೇವರಾಯನಿಗೆ ಸಂಬಂಧಿಸಿದ ಇನ್ನೂ ಹಲವಾರು ಶಾಸನಗಳು ಲಭ್ಯವಿದ್ದು, ಅವುಗಳಲ್ಲಿ ಹೆಚ್ಚಿನವು ವಿಠಲದೇವಾಲಯಕ್ಕೆ ನೀಡಿದ ದಾನಗಳ ಉಲ್ಲೇಖಗಳನ್ನು ಒಳಗೊಂಡಿವೆ.

**ಸದಾಶಿವರಾಯ (ಕ್ರಿ.ಶ.೧೫೪೨–೧೫೭೦)**

ಅಚ್ಚುತರಾಯನ ನಂತರ ಆತನ ಮಗನಾದ ವೆಂಕಟಾದ್ರಿಗೆ ಪಟ್ಟವಾಯಿತು. ಆದರೆ ಬಾಲಕನಾದ ವೆಂಕಟಾದ್ರಿಯು ಅಲ್ಪಕಾಲದಲ್ಲಿಯೇ ತೀರಿಹೋಗಿದ್ದರಿಂದ ಸದಾಶಿವರಾಯನು ಪಟ್ಟಕ್ಕೆ ಬಂದನು. ಆದರೆ ಈತನು ನಾಮಮಾತ್ರ ರಾಜನಾಗಿದ್ದು ರಾಜ್ಯದ ಎಲ್ಲ ಅಧಿಕಾರ

ರಾಮರಾಯನ ಕೈಯಲ್ಲಿತ್ತು. ಕ್ರಿ.ಶ.೧೫೪೨ ರಿಂದ ೧೫೫೦ರ ವರೆಗೆ ಶಾಂತಿಯುತವಾಗಿ ಈತನ ಆಳ್ವಿಕೆ ನಡೆಯಿತು. ರಾಮರಾಯನು ಸದಾಶಿವರಾಯನ ಪ್ರತಿನಿಧಿಯಾಗಿ ಹಲವು ದಾನಗಳನ್ನು ನೀಡಿದನು. ಆದರೆ ಆನಂತರದ ಅವಧಿಯಲ್ಲಿ ಸದಾಶಿವರಾಯನು ಪ್ರಬುದ್ಧನಾಗಿ ರಾಜ್ಯಾಡಳಿತಲ್ಲಿ ಹೆಚ್ಚು ಆಸಕ್ತಿ ತೋರಲು ರಾಮರಾಯನು ಆತನನ್ನು ಬಂಧನದಲ್ಲಿರಿಸಿ ಅಧಿಕಾರದ ಚುಕ್ಕಾಣಿಯನ್ನು ತಾನೇ ಹಿಡಿದನು. ಅಲ್ಲದೆ ಸದಾಶಿವರಾಯನ ಸಮಾನವಾಗಿ ಆಡಳಿತವನ್ನು ನಿರ್ವಹಿಸತೊಡಗಿದನು. ತನ್ನ ಹಾಗೂ ಸದಾಶಿವರಾಯ ಇಬ್ಬರ ಹೆಸರಿನಲ್ಲಿಯೂ ಶಾಸನಗಳನ್ನು ಹೊರಡಿಸತೊಡಗಿದನು. ಹಾಗೂ ಅದರಲ್ಲಿ ತಮ್ಮಿಬ್ಬರ ವಂಶಾವಳಿಯನ್ನೂ ಹೇಳತೊಡಗಿದನು. ಮತ್ತು ಸಾಂದರ್ಭಿಕವಾಗಿ ಕೆಲವು ದಾನಗಳನ್ನು ತನ್ನೊಬ್ಬನ ಹೆಸರಿನಲ್ಲಿಯೇ ನೀಡಿರುವನು. ಕ್ರಿ.ಶ.೧೫೬೩ರ ಸುಮಾರಿನಲ್ಲಿ ರಾಮರಾಯನು ಸದಾಶಿವರಾಯನ ಅಧಿಕಾರವನ್ನು ಪೂರ್ಣವಾಗಿ ಮೊಟಕುಗೊಳಿಸಿ ಅರಸನ ಸಕಲ ವೈಭವವನ್ನೂ, ಬಿರುದುಗಳನ್ನೂ ಧರಿಸಿ ತನ್ನೊಬ್ಬನ ಹೆಸರಿನಿಂದಲೇ ರಾಜ್ಯಕಾರ್ಯಗಳನ್ನು ನಡೆಸಲಾರಂಭಿಸಿದನು. ಈತನಿಗೆ ರಾಜಕಾರ್ಯದಲ್ಲಿ ಸಹೋದರರಾದ ತಿರುಮಲ ಹಾಗೂ ವೆಂಕಟಾದ್ರಿಯು ನೆರವಾದರು. ಈ ಮಧ್ಯೆದಲ್ಲಿ ಉತ್ತರದಲ್ಲಿ ಮಹಮ್ಮದೀಯ ರಾಜ್ಯಗಳಲ್ಲಿ ಅಂತಃಕಲಹಗಳು ಉಂಟಾಗಿ ಅದರಲ್ಲಿ ರಾಮರಾಯ ತಲೆಹಾಕಿ ಅವರನ್ನು ತನ್ನ ಕೈಗೊಂಬೆಗಳಂತೆ ಆಡಿಸಿದನು. ಈ ಸಂದರ್ಭದಲ್ಲಿ ವಿಜಯನಗರ ಸಾಮ್ರಾಜ್ಯದ ಮೇರೆಯು ಹಿಂದೆ ಎಂದೂ ಪಡೆಯದಷ್ಟು ಉತ್ತರದಲ್ಲಿ ವಿಸ್ತಾರ ಪಡೆಯಿತು. ಅದು ಕೃಷ್ಣೆಯನ್ನು ದಾಟಿ ಭೀಮಾ ನದಿಯವರೆಗೆ ಕಲಬುರ್ಗಿ–ಕಲ್ಯಾಣ ಪ್ರಾಂತದಲ್ಲಿಯೂ ಹಬ್ಬಿತು. ಈ ಒಂದು ವಿಚಾರದಲ್ಲಿ ರಾಮರಾಯನ ಈ ವಿಜಯವೈಭವವು ಕೃಷ್ಣದೇವರಾಯನ ವೈಭವಕ್ಕಿಂತ ಮಿಗಿಲಾಗಿದೆ ಎನ್ನಬಹುದು.[೫೯] ಈ ರೀತಿಯಾಗಿ ವಿಜಯನಗರ ಸಾಮ್ರಾಜ್ಯದ ಅನಭಿಷಕ್ತ ಅಧಿಪತಿಯಾದ ರಾಮರಾಯನು ದಕ್ಷಿಣ ಭಾರತದ ರಾಜಕೀಯ ಕ್ಷೇತ್ರದಲ್ಲಿ ಪ್ರಧಾನ ಪುರುಷನಾಗಿ ಮೆರೆದನು. ಈ ಕಾಲದಲ್ಲಿ ವಿಜಯನಗರದ ವ್ಯಾಪಾರವೂ ವೃದ್ಧಿಯಾಯಿತು. ಆದರೆ ಕ್ರಿ.ಶ.೧೫೬೪ರ ಹೊತ್ತಿಗೆ ಮಹಮದೀಯರಲ್ಲಿ ವೈಮನಸ್ಸು ದೂರವಾಗಿ ಎಲ್ಲರೂ ಒಂದುಗೂಡಿ ವಿಜಯನಗರದ ವಿರುದ್ಧ ಯುದ್ಧ ಹೂಡಿದರು. ಕ್ರಿ.ಶ.೧೫೬೫ ಜನವರಿ ೨೩ ರಂದು ಎರಡೂ ಬಣಗಳು ರಕ್ಕಸಗಿ–ತಂಗಡಗಿ ಎಂಬ ರಣಭೂಮಿಯಲ್ಲಿ ಎದುರಾದವು. ಈ ಯುದ್ಧದಲ್ಲಿ ವಿಜಯನಗರಕ್ಕೆ ಸೋಲುಂಟಾಗಿ ರಾಮರಾಯನನ್ನು ಬಂಧಿಸಿ ಶಿರಚ್ಛೇದನ ಮಾಡಲಾಯಿತು. ಇದರಿಂದ ಪುನಃ ಚೇತರಿಸಿಕೊಳ್ಳಲಾಗದ ಸ್ಥಿತಿಗೆ ಬಂದು ತಲುಪಿತು. ಇಡೀ ಸಾಮ್ರಾಜ್ಯವು ಶತ್ರುಗಳ ಕೈಗೆ ಸಿಕ್ಕು ಲೂಟಿಗೊಳ್ಳಲ್ಪಟ್ಟಿತು. ಈ ನಿರ್ಣಾಯಕ ಯುದ್ಧವು ವಿಜಯನಗರವನ್ನು ಸಂಪೂರ್ಣ ನಾಶಪಡಿಸಿತು. ತಿರುಮಲ ಹಾಗೂ ವೆಂಕಟಾದ್ರಿಯರು ಸಾಧ್ಯವಾದಷ್ಟು ಮಟ್ಟಿಗೆ ವಿಜಯನಗರದ ಸಂಪತ್ತನ್ನು ಉಳಿಸಲೋಸುಗ ಅರಮನೆಯ ಸ್ತ್ರೀ ಬಂಧುವರ್ಗ ಹಾಗೂ ನಾಮಮಾತ್ರ ಅರಸನಾದ ಸದಾಶಿವರಾಯ ಮತ್ತು ವಿಜಯನಗರದ ರತ್ನ ಸಿಂಹಾಸನ, ವಿಪುಲವಾದ ಸಂಪತ್ತಿನೊಂದಿಗೆ ಪೆನುಗೊಂಡೆಗೆ ಪಲಾಯನ ಮಾಡಿದರು. ಮಹಮ್ಮದೀಯರು ಸತತ ಆರು ತಿಂಗಳ ಲೂಟಿಯ ನಂತರ ಬಿಟ್ಟುಹೋದ ವಿಜಯನಗರಕ್ಕೆ ತಿರುಮಲನು ಮತ್ತೆ

ಬಂದು ಅದನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅದರ ವೈಭವವನ್ನು ಮತ್ತೆ ಬೆಳಗಿಸಬೇಕೆಂದು ಪ್ರಯತ್ನಿಸಿದನು. ಆದರೆ ಮತ್ತೆ ಮಹಮ್ಮದೀಯರು ಬಲವಿಲ್ಲದ ವಿಜಯನಗರಕ್ಕೆ ಭಯವನ್ನು ಒಡ್ಡಿದವು. ಆದ್ದರಿಂದ ತಿರುಮಲನು ವಿಜಯನಗರದ ಅಭಿಲಾಷೆಯನ್ನು ಪೂರ್ತಿಯಾಗಿ ಬಿಟ್ಟು ಭದ್ರವಾದ ಕೋಟೆಯ ಸ್ಥಳವಾಗಿರುವ ಪೆನುಗೊಂಡೆಗೆ ರಾಜಧಾನಿಯನ್ನು ಸ್ಥಳಾಂತರಿಸಿದನು. ರಕ್ಕಸಗಿ–ತಂಗಡಗಿ ಯುದ್ಧವಾದ ಬಳಿಕ ಸುಮಾರು ಐದು ವರ್ಷಗಳವರೆಗೆ ಸದಾಶಿವನು ಬಾಳಿದನು. ಈ ಅವಧಿಯಲ್ಲಿ ಆತನ ಪೂರ್ವಸ್ಥಿತಿಯಲ್ಲಿ ಯಾವುದೇ ವ್ಯತ್ಯಾಸವಾಗಲಿಲ್ಲ. ಹಿಂದಿನಂತೆಯೇ ಈತನು ಪ್ರತಿಬಂಧದಲ್ಲಿಯೇ ಕಾಲ ಕಳೆದನು. ಈಗ ಆತನ ಕಾರಾಗೃಹದ ಅಧ್ಯಕ್ಷನ ಸ್ಥಳದಲ್ಲಿ ರಾಮರಾಯನ ಬದಲು ತಿರುಮಲನು ಬಂದಿದ್ದನು. ಹೀಗೆ ರಾಜನೆನಿಸಿಯೂ ರಾಜ್ಯವಾಳದ ಸದಾಶಿವರಾಯನು ಕ್ರಿ.ಶ.೧೫೭೮ರಲ್ಲಿ ಕೊಲೆಯಾದನು. ಈತನ ಮರಣದೊಂದಿಗೆ ವಿಜಯನಗರದ ಮೂರನೆಯ ಅರಸು ಮನೆತನವಾದ ತುಳುವಂಶವು ಕಣ್ಮರೆಯಾಯಿತು. ಹೀಗೆ ರಕ್ಕಸಗಿ–ತಂಗಡಗಿಯ ತರುವಾಯ ವಿಜಯನಗರ ಸಾಮ್ರಾಜ್ಯ ಕೆಲಕಾಲ ಬಾಳಿತು. ಆದರೆ ಅದಕ್ಕೆ ಮೊದಲಿನ ಸಾಮರ್ಥ್ಯವು ವೈಭವವೂ ಪ್ರಾಪ್ತವಾಗಲಿಲ್ಲ.

ಸದಾಶಿವರಾಯನ ಶಾಸನಗಳನ್ನು ಗಮನಿಸುವುದಾದರೆ ಈತನಿಗೆ ಸಂಬಂಧಿಸಿದಂತೆ ಹಂಪಿಯಲ್ಲಿ ದೊರೆತ ಶಾಸನಗಳು ೨೪. ಇದರಲ್ಲಿ ಯಾವ ಶಾಸನಗಳೂ ಸದಾಶಿವರಾಯನು ಸ್ವತಃ ಹೊರಡಿಸಿದ ಶಾಸನಗಳಿಲ್ಲ. ಎಲ್ಲ ಶಾಸನಗಳು ಆತನ ಮಾಂಡಳಿಕರು, ಮಂಡಲೇಶ್ವರರು ಮುಂತಾದವರು ದಾನ ನೀಡಿದ ಹಾಗೂ ದೇವಾಲಯ ನಿರ್ಮಿಸಿದ ಉಲ್ಲೇಖಗಳನ್ನು ಒಳಗೊಂಡಿವೆ. ಇದರಲ್ಲಿನ ಕೆಲವು ಪ್ರಮುಖವೆನಿಸಿದ ಶಾಸನಗಳನ್ನು ಮಾತ್ರ ಕೆಳಗೆ ಉಲ್ಲೇಖಿಸಲಾಗಿದೆ. ಕ್ರಿ.ಶ.೧೫೪೨ರ ಶಾಸನವು[೬೦] ಸದಾಶಿವರಾಯನನ್ನು ಹಾಗೂ ಆತನ ಆಳ್ವಿಕೆಯನ್ನು ಉಲ್ಲೇಖಿಸುವ ಮೊದಲ ಶಾಸನವಾಗಿದೆ. ಇನ್ನೊಂದು ಕ್ರಿ.ಶ.೧೫೪೫ರ ಶಾಸನವು[೬೧] ಸದಾಶಿವರಾಯನು ವಿದ್ಯಾನಗರದಲ್ಲಿ ರತ್ನಸಿಂಹಾಸನಾರೂಢನಾಗಿ ಆಳುತ್ತಿರುವಾಗ, ಜಂಗಮಯ್ಯನು ಸದಾಶಿವರಾಯನಿಗೂ, ರಾಮರಾಯನಿಗೂ ಮತ್ತು ಪ್ರಧಾನಿ ಎರತಿಂಮರಾಜನಿಗೂ ಪುಣ್ಯವಾಗಲೆಂದು ಕೃಷ್ಣಪುರಪೇಟೆಯ ಹಿರಿಯ ಕಾಲುವೆಯ ಛತ್ರದ ಬಳಿಯಲ್ಲಿ ಮುದುವೀರಣ್ಣ ದಾನವನ್ನು ನೀಡಿದ ವಿವರವನ್ನು ಒಳಗೊಂಡಿದೆ. ಈ ಶಾಸನದಲ್ಲಿ ಉಲ್ಲೇಖಿತ ಮುದುವೀರಣ್ಣನು ಇಂದು ಕರೆಯಲ್ಪಡುವ ಉದ್ದಾನ ವೀರಭದ್ರನೇ ಆಗಿರುವನು. ಇನ್ನೊಂದು ಗಮನಿಸಬೇಕಾದ ಶಾಸನವೆಂದರೆ ಕ್ರಿ.ಶ.೧೫೫೯ರ ಶಾಸನ.[೬೨] ಈ ಶಾಸನದಲ್ಲಿ ಸದಾಶಿವರಾಯನು ವಿದ್ಯಾನಗರದಲ್ಲಿ ಆಳುತ್ತಿದ್ದಾಗ ವಿಠಲದ ನಂಮಾಳುವಾರನು ಪರಾಂಕುಶ ಮಂಟಪದಲ್ಲಿ ವಿಠಲದೇವರಿಗೆ ನಡೆಯುವ ಪೂಜಾದಿಕಾರ್ಯ ಗಳಿಗಾಗಿ ಭೂದಾನ ನೀಡಿದ ವಿಷಯ ಹಾಗೂ ನೀಡಿದ ದಾನದಲ್ಲಿ ವರುಷದಲ್ಲಿ ಒಟ್ಟು ತಿರುನಕ್ಷತ್ರದಂದು ದೇವಾಲಯದ ಗಂಡುಮೇಳ ಹೆಂಣುಮೇಳವನ್ನು ಕುಳುಹಿಸಿ ವೈಭವ ಮಾಡಿಸುವುದನ್ನು ಉಲ್ಲೇಖಿಸುತ್ತದೆ. ಅಲ್ಲದೇ ವರ್ಷದಲ್ಲಿ ಬರುವ ಎಲ್ಲ ಉತ್ಸವಗಳನ್ನು ಉಲ್ಲೇಖಿಸಿರುವುದು ವಿಶೇಷವಾಗಿದೆ.

## ಅರವೀಡು ವಂಶ (ಕ್ರಿ.ಶ.೧೫೫೫–೧೬೪೬)

### ಅರವೀಡು ಅರಸರ ವಂಶಾವಳಿ




**ಕೃಪೆ:** ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ)

ಈ ಮನೆತನದವರು ತಾವು ಚಂದ್ರವಂಶೀಯರೆಂದು ಹೇಳಿಕೊಂಡಿರುವರು. ತಾತ ಪಿನ್ನಮನು ಈ ವಂಶದ ಮೂಲ ಪುರುಷ. ಈತನ ಮಗ ಸೋಮದೇವನು ಶೂರನಾಗಿದ್ದು, ಇಮ್ಮಡಿ ಹರಿಹರನ ಸಮಕಾಲೀನನಾಗಿದ್ದನು. ಈತನ ಮಗನಾದ ಅರವೀಟಿ ಬುಕ್ಕನು ಹಿರಿಯ ಸಾಳುವ ನರಸಿಂಹನ ಬಲಿಷ್ಠ ಸೇನಾಪತಿಯಾಗಿದ್ದವನು. ಈತನ ಮಗನು ರಾಮರಾಜನು. ಈ ರಾಮರಾಜ ಮಗ ಶ್ರೀರಂಗ, ಶ್ರೀರಂಗನ ಮಕ್ಕಳಲ್ಲಿ ಅಳಿಯ ರಾಮರಾಯ, ತಿರುಮಲ, ವೆಂಕಟಾದ್ರಿ ಈ ಮೂವರು ಪ್ರಖ್ಯಾತರಾಗಿದ್ದವರು.

### ತಿರುಮಲ(ಕ್ರಿ.ಶ.೧೫೭೦–೭೮)

ರಾಮರಾಯನು ವಿಜಯನಗರ ಸಾಮ್ರಾಜ್ಯದ ಸರ್ವಾಧಿಕಾರಿಯಾಗಿ ರಾಜ್ಯವಾಳುತ್ತಿರುವಾಗ, ತಿರುಮಲನು ಆತನ ಪ್ರಧಾನಮಂತ್ರಿಯಾಗಿದ್ದನು. ರಕ್ಕಸಗಿ–ತಂಗಡಗಿ ಯುದ್ಧದಲ್ಲಿ ರಾಮರಾಯನ ವಧೆಯಾದ ಬಳಿಕ ಸಾಮ್ರಾಜ್ಯದ ಎಲ್ಲ ಆಡಳಿತವನ್ನು ತಿರುಮಲನು ಪ್ರತ್ಯಕ್ಷವಾಗಿ ತನ್ನ ಕೈಯಲ್ಲಿ ತೆಗೆದುಕೊಂಡು, ಸದಾಶಿವರಾಯನ ಮರಣದ ನಂತರ ರಾಜ್ಯಾಭಿಷೇಕವನ್ನು ಮಾಡಿಸಿಕೊಂಡು ವಿಜಯನಗರ ಸಾಮ್ರಾಜ್ಯದ ಅಧಿಪತಿಯಾದನು. ಹಲವು ನಾಯಕರು, ಅರಸರು, ಅಧಿಕಾರಿಗಳು ಈತನ ಪ್ರಭುತ್ವವನ್ನು ಒಪ್ಪಿಕೊಳ್ಳದೆ ವಿರೋಧಿಸಿದರು. ಹಾಗೂ ಅತ್ತ ಉತ್ತರದಲ್ಲಿ ಬಲಗೊಂಡ ಶತ್ರುಗಳಾದ ಮಹಮ್ಮದೀಯರ ಭಯವೂ ಇತ್ತು. ಇದರಿಂದಾಗಿ ಶತ್ರುಗಳ ದಾಳಿಗಳನ್ನು

ಎದುರಿಸಬೇಕಾದ ರಾಯನು ಆಡಳಿತಕ್ಕೆ ಸುಲಭವೂ ಹಾಗೂ ಸುರಕ್ಷತೆಯ ದೃಷ್ಟಿಯಿಂದ ಸಾಮ್ರಾಜ್ಯವನ್ನು ಮೂರು ಭಾಗಗಳನ್ನಾಗಿ ಮಾಡಿ ಅವುಗಳಿಗೆ ತನ್ನ ಮೂವರು ಮಕ್ಕಳನ್ನು ಮಹಾಮಂಡಲೇಶ್ವರರನ್ನಾಗಿ ನೇಮಿಸಿದನು. ಶ್ರೀರಂಗನು ಆಂಧ್ರವನ್ನು, ರಾಮದೇವನು ಕರ್ನಾಟಕ ಪ್ರಾಂತವನ್ನು ಹಾಗೂ ವೆಂಕಟಪತಿಯು ಚಂದ್ರಗಿರಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ತಮಿಳು ಪ್ರದೇಶಗಳಿಗೆ ಒಡೆಯನಾದನು. ಶ್ರೀರಂಗನು ಯುವರಾಜನಾಗಿಯೂ ನೇಮಕಗೊಂಡಿದ್ದನು. ತಿರುಮಲನಿಗೆ ಧರಣಿ ವರಾಹ ಎಂಬ ಬಿರುದಿತ್ತು.[೩] ಈತನು ಶ್ರೀ ವೈಷ್ಣವ ಮತಾರಾಧಕನೂ ಆಗಿದ್ದನು ಹಾಗೂ ಅನ್ಯಧರ್ಮಗಳ ಮೇಲೂ ಸಹಾನುಭೂತಿಯುಳ್ಳವನಾಗಿದ್ದನು. ತಿರುಮಲನು ಕ್ರಿ.ಶ.೧೫೭೮ರಲ್ಲಿ ಕಾಲಾಧೀನನಾದನು.

## ಇಮ್ಮಡಿ ಶ್ರೀರಂಗರಾಯ(ಕ್ರಿ.ಶ.೧೫೭೮-೮೬)

ಶ್ರೀರಂಗನು ತಂದೆ ತಿರುಮಲರಾಯನ ಆಳ್ವಿಕೆಯ ಆರಂಭ ಕಾಲದಿಂದಲೇ ಯುವರಾಜನಾಗಿ ರಾಜ್ಯಕಾರ್ಯದಲ್ಲಿ ಪ್ರಮುಖ ಪಾತ್ರ ವಹಿಸಿದ್ದನು. ತಿರುಮಲನ ಆಳ್ವಿಕೆಯಲ್ಲಿಯೇ ಕಂಡುಬಂದ ಅಂತಃಕಲಹಗಳಿಂದ ಸಾಮ್ರಾಜ್ಯದಲ್ಲಿ ಒಡಕು ಹಾಗೂ ಉತ್ತರದ ಮಹಮ್ಮದೀಯ ರಾಜ್ಯಗಳ ಆಕ್ರಮಣ ಇವು ಈತನ ಕಾಲದಲ್ಲಿಯೂ ಮುಂದುವರೆಯಿತು. ರಾಜಧಾನಿಯಾದ ಪೆನುಗೊಂಡವನ್ನು ವಿನಾಶಗೊಳಿಸಬೇಕೆಂಬ ಬಿಜಾಪುರದ ಅಲಿ ಆದಿಲ್ ಷಹನು ಮಾಡಿದ ಪ್ರಯತ್ನಗಳು ವಿಫಲವಾದವು. ಕ್ರಿ.ಶ.೧೫೮೬ರಲ್ಲಿ ಶ್ರೀರಂಗನು ಮರಣ ಹೊಂದಿದನು.

## ಒಂದನೇ ವೆಂಕಟಪತಿರಾಯ(ಕ್ರಿ.ಶ.೧೫೮೬-೧೬೧೪) ಮತ್ತು ನಂತರದ ಅರಸರು

ಶ್ರೀರಂಗರಾಯನು ಮರಣಹೊಂದಿದ ಬಳಿಕ ಆತನ ತಮ್ಮನಾದ ರಾಮದೇವನು ಮೊದಲೇ ತೀರಿಕೊಂಡುದುದರಿಂದಲೂ ಆತನ ಮಕ್ಕಳು ಚಿಕ್ಕವರಾಗಿದ್ದುದರಿಂದಲೂ, ತಿರುಮಲನ ಕೊನೆಯ ಮಗನೂ, ಶ್ರೀರಂಗರಾಯನ ಕಿರಿಯ ಸಹೋದರನೂ ಆದ ಒಂದನೇ ವೆಂಕಟಪತಿಯು ಸಿಂಹಾಸನವನ್ನೇರಿದನು. ಈತನು ತನ್ನ ಅವಧಿಯಲ್ಲಿ ಗೋಲ್ಕಂಡ ಮತ್ತು ಬಿಜಾಪುರದ ಶಾಹಿಗಳನ್ನು ಎದುರಿಸಬೇಕಾಯಿತು. ಉತ್ತರ ಭಾರತದಲ್ಲಿ ಆಗ ಆಳುತ್ತಿದ್ದ ಮೊಗಲ್ ಸಾಮ್ರಾಜ್ಯದ ಅಕ್ಬರನು ಕ್ರಿ.ಶ.೧೬೦೦ರಲ್ಲಿ ಅಹಮದ್ ನಗರವನ್ನು ಜಯಿಸಿ ಅನಂತರ ಎರಡುಬಾರಿ ವೆಂಕಟಪತಿಯ ರಾಜ್ಯಕ್ಕೆ ರಾಯಭಾರಿಗಳನ್ನು ಕಳುಹಿಸಿದ. ಆದರೆ ಇದು ಮುಂದಿನ ಆಕ್ರಮಣಗಳಿಗೆ ನಾಂದಿಯಾಗಬಾರದೆಂದು ವೆಂಕಟಪತಿ ಅಕ್ಬರನೊಡನೆ ಹೆಚ್ಚಿನ ಸಂಬಂಧಗಳನ್ನು ಇಟ್ಟುಕೊಳ್ಳಲಿಲ್ಲ. ಈತ ರಾಜ್ಯದ ಗತ ವೈಭವವನ್ನು ಪುನರುಜ್ಜೀವನಗೊಳಿಸಿದನಾದರೂ ಇದು ಬಹುಕಾಲ ಉಳಿಯಲಿಲ್ಲ.

ವೆಂಕಟಪತಿ ವೈಷ್ಣವ ಧರ್ಮದ ಆರಾಧಕನಾಗಿದ್ದನು. ಈತನಿಗೆ ಶ್ರೀ ವೆಂಕಟೇಶನಲ್ಲಿ ಅತಿಯಾದ ಭಕ್ತಿಯಿದ್ದಿತು. ಸಂಗಮ ಅರಸರ ಕಾಲದಲ್ಲಿ ಪ್ರಬಲವಾಗಿದ್ದ ಶಿವನಿಷ್ಠೆಯು ಮುಂದಿನ ಮನೆತನಗಳಲ್ಲಿ ಕಡಿಮೆಯಾಗಿ ಅದರ ಸ್ಥಳಗಳಲ್ಲಿ ವಿಷ್ಣು ನಿಷ್ಠೆಯೂ, ವೆಂಕಟೇಶನಲ್ಲಿ ಭಕ್ತಿಯು ಪ್ರಬಲವಾದುದನ್ನು ನೋಡಬಹುದಾಗಿದೆ. ಹೀಗಿದ್ದರೂ ವಿಜಯನಗರ ಸಾಮ್ರಾಜ್ಯದ ಅಧಿದೈವನಾಗಿ

ವಿರೂಪಾಕ್ಷನೇ ಉಳಿದುಕೊಂಡಿದ್ದನು. ಅರವೀಡು ಮನೆತನದ ಇಮ್ಮಡಿ ಶ್ರೀರಂಗರಾಯನವರೆಗಿನ ಎಲ್ಲ ಶಾಸನಗಳಲ್ಲಿ ಎಂದಿನಂತೆ 'ಶ್ರೀವಿರೂಪಾಕ್ಷ'ವೇ ವಿಜಯನಗರದ ಅಂಕಿತವಾಗಿದ್ದಿತು. ಆದರೆ ವೆಂಕಟಪತಿರಾಯನು ಮಾತ್ರ ಅದನ್ನು ಬಿಟ್ಟು 'ಶ್ರೀ ವೆಂಕಟೇಶ' ಎಂಬ ಹೊಸ ಮುದ್ರಿಕೆಯೊಂದಿಗೆ ತನ್ನ ಶಾಸನಗಳನ್ನು ಹೊರಡಿಸತೊಡಗಿದನು. ಈತನು ಧರ್ಮ, ವಿದ್ಯೆ, ಸಾಹಿತ್ಯ, ಕಲೆಗಳಿಗೆ ಪ್ರೋತ್ಸಾಹವಿತ್ತನು. ವೇದ, ಶಾಸ್ತ್ರ, ಸಾಹಿತ್ಯ ಮೊದಲಾದ ವಿದ್ಯೆಗಳಲ್ಲಿ ಪಾರಂಗತರಾದ ಅನೇಕ ಪಂಡಿತರಿಗೆ ಹೇರಳವಾಗಿ ವೃತ್ತಿಗಳನ್ನು ಕಲ್ಪಿಸಿಕೊಟ್ಟನು. ಕ್ರಿ.ಶ.೧೬೧೨ರ ಶಾಸನವೊಂದು[೪೪] ಹಂಪಿಯಲ್ಲಿ ದೊರೆತಿದ್ದು ಇದು ಅರವೀಡು ಸಂತತಿಯನ್ನು ತಿಳಿಯಲು ಸಹಾಯಕವಾಗಿದೆ.

ವೆಂಕಟಪತಿಯ ಅನಂತರ ಅಧಿಕಾರಕ್ಕಾಗಿ ಅಂತಃಕಲಹಗಳು ಪ್ರಾರಂಭವಾದವು. ಆತನಿಗೆ ಗಂಡು ಮಕ್ಕಳಿಲ್ಲದ ಕಾರಣ ಆತನ ಸಹೋದರನಾದ ರಾಮರಾಯನ ಮಗ ಮುಮ್ಮಡಿ ಶ್ರೀರಂಗನು ಸಿಂಹಸನಾಧಿಕಾರಿಯಾದನು. ಈತನ ನಂತರದಲ್ಲಿ ಹನ್ನೆರಡು-ಹದಿಮೂರು ವರ್ಷಗಳ ಬಾಲಕನಾದ ರಾಮದೇವ ಅರಸನಾದ ಈತ ಕ್ರಿ.ಶ.೧೬೧೭-೩೨ ರವರೆಗೆ ಆಳಿದನು. ಆನಂತರ ಅಳಿಯ ರಾಮರಾಯನ ಮೊಮ್ಮಗ ಇಮ್ಮಡಿ ವೆಂಕಟಪತಿ ಯುವರಾಜನಾದ. ಅಂತಿಮವಾಗಿ ಇಮ್ಮಡಿ ವೆಂಕಟಪತಿರಾಯನ ತರುವಾಯ ಆರನೇ ಶ್ರೀರಂಗರಾಯನು ವಿಜಯನಗರದ ಪಟ್ಟವೇರಿದನು. ಈತನು ಇಮ್ಮಡಿ ವೆಂಕಟಪತಿರಾಯನ ತಮ್ಮನ ಕಿರಿಯ ಮಗನೂ ಹಾಗೂ ಅಳಿಯ ರಾಮರಾಯನ ತಮ್ಮನಾದ ವೆಂಕಟಾದ್ರಿಯ ಮೊಮ್ಮಗನಾದ ಗೋಪಾಲನ ದತ್ತಕ ಪುತ್ರನೂ ಆಗಿದ್ದನು. ಹೀಗೆ ಒಂದನೇ ವೆಂಕಟಪತಿರಾಯನ ನಂತರವೂ ಬಂದಂತಹ ಎಲ್ಲ ಅರಸರೂ ಅಸಮರ್ಥರಾಗಿದ್ದರಿಂದ ವಿಜಯನಗರದ ಶಕ್ತಿಯೂ ವರ್ಧಿಸಲಿಲ್ಲ. ಕ್ರಿ.ಶ.೧೬೮೧ರಲ್ಲಿ ಆರನೇ ಶ್ರೀರಂಗನ ಮರಣದೊಂದಿಗೆ ವಿಜಯನಗರ ಸಾಮ್ರಾಜ್ಯದ ಕೊನೆಯಾಯಿತು. ಹೀಗೆ ದಕ್ಷಿಣ ಭಾರತದಲ್ಲಿ ಸುಮಾರು ಮೂರು ಶತಮಾನಗಳಿಗೂ ಹೆಚ್ಚು ಕಾಲ(೧೪-೧೭ನೇಯ ಶತಮಾನಗಳು) ಆಳ್ವಿಕೆ ನಡೆಸಿದ ವಿಶಾಲ ಸಾಮ್ರಾಜ್ಯವೊಂದು ಅಸ್ತಂಗತವಾಯಿತು.

**ಅಡಿಟಿಪ್ಪಣಿಗಳು**

೧. ಶ್ರೀನಿವಾಸ ಎಲ್., *ಹಂಪಿ ಪರಿಸರದ ಆದಿಮಾನವನ ನೆಲೆಗಳು*, ಪು.೭

೨. ಅದೇ, ಪು.೮

೩. ಶರಣಬಸಪ್ಪ ಕೋಲ್ಕಾರ, *ಶಿಲಾಯುಗದ ಗವಿಚಿತ್ರಗಳು*, ಪು.೪೫

೪. ಸಿದ್ಧಲಿಂಗೇಶ್ವರ ಸ್ವಾಮಿಗಳು (ಸಂ.), *ಶ್ರೀಪಂಪಾ ಮಹಾತ್ಮೆ*, ಪು.೩೨

೫. Krisnasastri H.(Ed.), *Hydrabad Archaeological Series-5*, pp.12

೬. ಶ್ರೀನಿವಾಸ ಎಲ್., *ಪೂರ್ವೋಕ್ತ*, ಪು.೧೩-೧೪

೭. ಶರಣಬಸಪ್ಪ ಕೋಲ್ಕಾರ, *ಪೂರ್ವೋಕ್ತ,* ಪು.೬೨-೧೫೦

೮. ಕೊಟ್ರಯ್ಯ ಸಿಟಿಯಂ, *ಚಾಲುಕ್ಯ ಅರಸರ ಶಾಸನಗಳು ಮತ್ತು ಹಂಪೆ,* ವಿಜಯನಗರ ಅಧ್ಯಯನ, ಸಂ.೨, ಪು.೫೪

೯. ಸಿದ್ಧಲಿಂಗೇಶ್ವರ ಸ್ವಾಮಿಗಳು (ಸಂ.), *ಪೂರ್ವೋಕ್ತ,* ಪು.೧೫

೧೦. ದೇವರಕೊಂಡಾರೆಡ್ಡಿ, *ಪಂಪಾತೀರ್ಥ,* ವಿಜಯನಗರ ಅಧ್ಯಯನ, ಸಂ.೩, ಪು.೮೯

೧೧. ಅದೇ, ಪು.೮೯-೯೨

೧೨. ಕೊಟ್ರಯ್ಯ ಸಿ.ಟಿ.ಯಂ. *ಹಂಪೆ ಶಿಲಾಯುಗ ಸಂಸ್ಕೃತಿ: ಕ್ರಿಸ್ತಶತಾಬ್ದಿ ಆರಂಭ ಶಾಸನಗಳಲ್ಲಿ,* ಪು.೯-೧೩

೧೩. ಕೊಟ್ರಯ್ಯ ಸಿ.ಟಿ.ಯಂ, *ಚಾಲುಕ್ಯ ಅರಸರ ಶಾಸನಗಳು ಮತ್ತು ಹಂಪೆ, ವಿಜಯನಗರ ಅಧ್ಯಯನ,* ಸಂ.೨., ಪು.೫೪

೧೪. ದೇವರಕೊಂಡಾರೆಡ್ಡಿ, *ಹಂಪೆಯಲ್ಲಿ ಬಾದಾಮಿ ಚಾಲುಕ್ಯರ ಕಾಲದ ದೇವಾಲಯ, ವಿಜಯನಗರ ಅಧ್ಯಯನ,* ಸಂ.೧, ಪು.೩೮-೪೧

೧೫. Channabasappa S.Patil, 'Pre-Vijayanagara Temples at Hampi', *Vijayanagara Progress of Research, 1987-88,* pp.113-119

೧೬. ಕೃಷ್ಣಮೂರ್ತಿ ಎಂ.ಎಸ್., *ಹಂಪೆಯ ವಿರೂಪಾಕ್ಷ ಸಂಕೀರ್ಣದ ಮಹಿಷಮರ್ದಿನಿ ದೇವಾಲಯ, ವಿಜಯನಗರ ಅಧ್ಯಯನ,* ಸಂ.೧, ಪು.೪೨-೪೮.

೧೭. ಕೊಟ್ರಯ್ಯ ಸಿ.ಟಿ.ಯಂ., *ಚಾಲುಕ್ಯ ಅರಸರ ಶಾಸನಗಳು ಮತ್ತು ಹಂಪೆ, ವಿಜಯನಗರ ಅಧ್ಯಯನ,* ಸಂ.೩, ಪು.೫೫

೧೮. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೧, *ಬಳ್ಳಾರಿ ಜಿಲ್ಲೆ,* ಶಾ.ಸಂ.೪೦

೧೯. ಅದೇ, ಶಾ.ಸಂ.೯೭

೨೦. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩, *ಹಂಪಿ ಶಾಸನಗಳು,* ಶಾ.ಸಂ.೫೫

೨೧. ಅದೇ, ಶಾ.ಸಂ.೫೪

೨೨. ಮಹದೇವ ಸಿ. *ಕುಮ್ಮಟದುರ್ಗದ ಅರಸರು,* ಪು.೨೩

೨೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩, *ಹಂಪಿ ಶಾಸನಗಳು,* ಶಾ.ಸಂ.೫೯

೨೪. ದೇಸಾಯಿ ಪಿ.ಬಿ., *ವಿಜಯನಗರದ ಸಾಮ್ರಾಜ್ಯ,* ಪು.೨೩-೨೭

೨೫. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩, *ಹಂಪಿ ಶಾಸನಗಳು,* ಶಾ.ಸಂ.೫೩

೨೬. ದೇಸಾಯಿ ಪಿ.ಬಿ., *ಪೂರ್ವೋಕ್ತ*, ಪು.೨೭

೨೭. ಕನ್ನಡ ವಿಷಯ ವಿಶ್ವಕೋಶ, *ಇತಿಹಾಸ ಮತ್ತು ಪುರಾತತ್ವ*, ಪು.೯೬೧

೨೮. ದೇಸಾಯಿ ಪಿ.ಬಿ., *ಪೂರ್ವೋಕ್ತ*, ಪು.೩೦-೩೧

೨೯. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩, *ಹಂಪಿ ಶಾಸನಗಳು*, ಶಾ.ಸಂ.೨೫೧

೩೦. ಕನ್ನಡ ವಿಷಯ ವಿಶ್ವಕೋಶ, *ಪೂರ್ವೋಕ್ತ*, ಪು.೯೬೨

೩೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩, *ಹಂಪಿ ಶಾಸನಗಳು*, ಶಾ.ಸಂ.೧೪೫

೩೨. ಅದೇ, ಶಾ.ಸಂ.೩೫೦

೩೩. ಅದೇ, ಶಾ.ಸಂ.೬೯

೩೪. ದೇಸಾಯಿ ಪಿ.ಬಿ., *ಪೂರ್ವೋಕ್ತ*, ಪು.೪೮-೪೯

೩೫. ಪರಮಶಿವಮೂರ್ತಿ ಡಿ.ವಿ. (ಸಂ.), *ಪ್ರೌಢದೇವರಾಯನದ ಶಾಸನಗಳು*, ಪು.೧೫

೩೬. ಅದೇ, ಪು.೪-೨, ಶಾ.ಸಂ.೧೯

೩೭. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩, *ಹಂಪಿ ಶಾಸನಗಳು*, ಶಾ.ಸಂ.೩೨೭

೩೮. ಅದೇ, ಶಾ.ಸಂ.೩೧೧೧

೩೯. ವಿವೇಕ ರೈ ಬಿ.ಎ. (ಸಂ.), *ಪ್ರವಾಸಿ ಕಂಡ ವಿಜಯನಗರ*, ಪು.೯-೨೮

೪೦. ಅದೇ, ಪು.೩-೮

೪೧. ರಂಗಸ್ವಾಮಿಯ್ಯ ಜಿ.ಆರ್., *ಕರ್ನಾಟಕದ ಸಂಕ್ಷಿಪ್ತ ಚರಿತ್ರೆ*, ಪು.೨೧೪-೧೫

೪೨. ದೇಸಾಯಿ ಪಿ.ಬಿ., *ಪೂರ್ವೋಕ್ತ*, ಪು.೬೧-೬೬

೪೩. ಅದೇ, ಪು.೬೬

೪೪. ವಿವೇಕ ರೈ ಬಿ.ಎ. (ಸಂ)., *ಪೂರ್ವೋಕ್ತ*, ಪು.೨೦೫

೪೫. ದೇಸಾಯಿ ಪಿ.ಬಿ., *ಪೂರ್ವೋಕ್ತ*, ಪು.೭೨

೪೬. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩, *ಹಂಪಿ ಶಾಸನಗಳು*, ಶಾ.ಸಂ.೩೨

೪೭. ಅದೇ, ಶಾ.ಸಂ.೨೨೮

೪೮. ಗೋಪಾಲಕೃಷ್ಣರಾವ್ ಕೆ.ಜಿ., 'ಚಕ್ರವರ್ತಿ ತಿರುಮಲನ ಜನನ ಮತ್ತು ಮರಣ-ಒಂದಿಷ್ಟು ಹೊಸ ವಿಚಾರಗಳು', *ವಿಜಯನಗರ ಅಧ್ಯಯನ*, ಸಂ.೧೧, ಪು.೧೭೭-೮೨

೪೯. ಪರಮಶಿವಮೂರ್ತಿ ಡಿ.ವಿ. (ಸಂ.), *ಕೃಷ್ಣದೇವರಾಯನ ಶಾಸನಗಳು*, ಪು.೧೬

೫೦. ಕಲಬುರ್ಗಿ ಎಂ.ಎಂ., 'ಕೃಷ್ಣದೇವರಾಯನ ಹಂಪಿ ಶಾಸನಗಳು', ಮುರಿಗೆಪ್ಪ ಎ.(ಪ್ರಸಂ), *ಕೃಷ್ಣದೇವರಾಯ ಆಯ್ದ ಲೇಖನ ಸಂಪುಟ*, ಪು.೧೬೧

೫೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩, *ಹಂಪಿ ಶಾಸನಗಳು*, ಶಾ.ಸಂ.೩೪

೫೨. ಅದೇ, ಶಾ.ಸಂ.೭೩

೫೩. ಅದೇ, ಶಾ.ಸಂ.೮೧

೫೪. ಮಹಾಂತೇಶ ಎನ್.ಎಸ್., 'ಅಚ್ಯುತದೇವರಾಯನ ಹಂಪಿ ಶಾಸನಗಳು', *ವಿಜಯನಗರ ಅಧ್ಯಯನ*, ಸಂ.೧೬, ಪು.೬೭

೫೫. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩, *ಹಂಪಿ ಶಾಸನಗಳು*, ಶಾ.ಸಂ.೩೨೨

೫೬. ಅದೇ, ಶಾ.ಸಂ.೫೦



೫೭. ಅದೇ, ಶಾ.ಸಂ.೧೩೩

೫೮. ರಮೇಶನಾಯಕ, 'ಆನಂದನಿಧಿ ದಾನ', *ವಿಜಯನಗರ ಅಧ್ಯಯನ*, ಸಂ.೮, ಪು.೧೩೬-೧೪೩

೫೯. ದೇಸಾಯಿ ಪಿ.ಬಿ., *ಪೂರ್ವೋಕ್ತ*, ಪು.೧೨೫

೬೦. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩, *ಹಂಪಿ ಶಾಸನಗಳು*, ಶಾ.ಸಂ.೧೯೫

೬೧. ಅದೇ, ಶಾ.ಸಂ.೮೪

೬೨. ಅದೇ, ಶಾ.ಸಂ.೧೯೧

೬೩. ದೇಸಾಯಿ ಪಿ.ಬಿ., *ಪೂರ್ವೋಕ್ತ*, ಪು.೧೫೫

೬೪. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩, *ಹಂಪಿ ಶಾಸನಗಳು*, ಶಾ.ಸಂ.೩೯೬

## ಅಧ್ಯಾಯ ಮೂರು

# ಶೈವ ಧರ್ಮದ ಪ್ರಾಚೀನತೆ

ಮಾನವನ ವಿಕಾಸದ ಹಾದಿಯಲ್ಲಿ ಧರ್ಮವು ಪ್ರಮುಖ ಪಾತ್ರ ನಿರ್ವಹಿಸಿದೆ. ಧರ್ಮವೆಂಬುದು ಮಾನವನ ಇತಿಹಾಸದುದ್ದಕ್ಕೂ ಆತನೊಂದಿಗೆ ಅಂಟಿಕೊಂಡು ಬಂದಿರುವಂತದ್ದು. ಮಹಾಭಾರತದ ಕರ್ಣಪರ್ವದಲ್ಲಿ "ಧಾರಣಾತ್ ಧರ್ಮ ಇತ್ಯಾಹುಃ ಧರ್ಮೋ ಧಾರಯತಿ ಪ್ರಜಾಃ" ಎನ್ನುವ ಮಾತು ಬರುತ್ತದೆ. ಯಾವುದು ಇನ್ನೊಂದನ್ನು ಎತ್ತಿ ಹಿಡಿಯುವುದೋ ಅಥವಾ ಇನ್ನೊಂದಕ್ಕೆ ಆಧಾರವಾಗಿ ಅದನ್ನು ರಕ್ಷಿಸುವುದೋ ಅದು "ಧರ್ಮ" ಅನ್ನಿಸಿಕೊಳ್ಳುತ್ತದೆ.[೧] ಈ ಹಿನ್ನೆಲೆಯಲ್ಲಿ ಮಾನವ ಧರ್ಮವನ್ನು ಹಾಗೂ ಧರ್ಮ ಮಾನವನನ್ನು ಹೀಗೆ ಒಂದನ್ನೊಂದು ರಕ್ಷಿಸುತ್ತಲೇ ಬಂದಿವೆ. ಧರ್ಮ ಎಂಬುದು ವಿಶಾಲ ಅರ್ಥವನ್ನು ಹೊಂದಿರುವ ಪದ. ಒಂದೇ ವಾಕ್ಯದಲ್ಲಿ ಧರ್ಮ ಪದದ ಅರ್ಥವನ್ನು ತಿಳಿಸುವುದು ಕಷ್ಟ. ಮಾನವ ಪ್ರಕೃತಿಯ ಅನನ್ಯ ಶಕ್ತಿಗಳನ್ನು ಜಯಿಸಲಾಗದೆ ಇರುವಂತಹ ಸ್ಥಿತಿಯಲ್ಲಿ ಮತ್ತು ತನ್ನ ನೆಮ್ಮದಿಯ ಜೀವನಕ್ಕೆ ಪೂರಕವಾಗಿ ಕಂಡುಕೊಂಡ ಮಾರ್ಗವೆಂದರೆ ದೇವತಾರಾಧನೆ. ಈ ದೈವ ಎಂಬ ಅಮೂರ್ತ ಶಕ್ತಿಗೆ ಮೂರ್ತ ರೂಪ ನೀಡಿ ಅದನ್ನು ಆರಾಧಿಸತೊಡಗಿದನು. ಅಲ್ಲದೆ ಇಷ್ಟಕ್ಕೆ ಸೀಮಿತಗೊಳಿಸದೆ, ಅದಕ್ಕೊಂದು ಚೌಕಟ್ಟು ಕೊಟ್ಟು, ನಂಬಿಕೆ ಆಚರಣೆಗಳ ಹಿನ್ನೆಲೆಯಲ್ಲಿ ಧರ್ಮ ಎಂಬುದನ್ನು ಕಂಡುಕೊಂಡನು. ಆದ್ದರಿಂದ ಧರ್ಮಕ್ಕೆ ಮಾನವ ಸಂಸ್ಕೃತಿಗಿರುವಷ್ಟೆ ಪ್ರಾಚೀನತೆ ಇದೆ. ಇದು ಮುಂದೆ ಬೆಳವಣಿಗೆ ಹೊಂದಿದಂತೆಲ್ಲ ಜಗತ್ತಿನಾದ್ಯಂತ ಕಾಲದೇಶಗಳಿಗನುಗುಣವಾಗಿ ಕವಲೊಡೆದು ಒಂದೇ ಧರ್ಮ ಎನಿಸದೆ, ಹಲವಾರು ಧರ್ಮಗಳು ಉದಯಿಸಿದವು. ಅವುಗಳನ್ನೇ ಇಂದು ನಾವು ಶೈವ, ವೈಷ್ಣವ, ಬೌದ್ಧ, ಜೈನ, ಇಸ್ಲಾಂ, ಸಿಖ್, ಪಾರಸಿ ಮುಂತಾದ ಹೆಸರುಗಳಿಂದ ಗುರುತಿಸುತ್ತೇವೆ. ಇವುಗಳಲ್ಲಿ ಅತ್ಯಂತ ಪುರಾತನ ಹಾಗೂ ವ್ಯಾಪಕವಾಗಿ ಹರಡಿದ ಧರ್ಮವೆಂದರೆ ಶೈವ ಧರ್ಮ. ಶೈವ ಧರ್ಮಕ್ಕೆ ಶಿವನೇ ಅಧಿಪತಿ. ಶಿವನ ಆರಾಧಕರನ್ನು ಶೈವರೆಂದು ಹಾಗೂ ಅವರು ಅನುಸರಿಸುವ ಧರ್ಮವನ್ನು ಶೈವ ಧರ್ಮವೆಂದು ಕರೆಯಲಾಯಿತು. ಶಿವ ಶಬ್ದಕ್ಕೆ ಮಂಗಳ ಎಂಬ ಅರ್ಥವಿದೆ. ಶಿವನು ಈಶ, ಈಶ್ವರ, ಮಹೇಶ್ವರ, ಮಹೇಶ, ಮಹಾದೇವ, ಸದಾಶಿವ, ಶರ್ವ, ಶಂಕರ ಮುಂತಾದ ಅನೇಕ ಹೆಸರುಗಳಿಂದ ಕರೆಯಲ್ಪಟ್ಟಿರುವನು. ಪುರಾಣಗಳಲ್ಲಿ

ಇವನನ್ನು ಸೃಷ್ಟಿಕರ್ತ, ಸ್ಥಿತಿಕರ್ತ, ಲಯಕರ್ತ ಅಥವಾ ಪ್ರಳಯಕರ್ತ ಎಂದು ಕರೆದಿರುವರು. ಒಟ್ಟಾರೆ ಶೈವ ಧರ್ಮದಲ್ಲಿ ಶಿವನೇ ಕೇಂದ್ರ ಬಿಂದು. ಈ ಶೈವ ಧರ್ಮದಲ್ಲಿ ಲಕುಲೀಶ, ಪಾಶುಪತ, ಕಾಪಾಲಿಕ, ಕಾಳಾಮುಖ ಎಂಬ ಶೈವ ಪಂಥಗಳಿವೆ. ಅಲ್ಲದೆ, ಕಾಶ್ಮೀರ ಶೈವರು, ತಮಿಳು ಶೈವರು ಹಾಗೂ ವೀರಶೈವರೆಂಬ ಅನುಯಾಯಿಗಳು ಕಂಡುಬರುವರು. ಪ್ರಸ್ತುತ ಈ ಅಧ್ಯಾಯದಲ್ಲಿ ಮೊದಲು ಶೈವ ಧರ್ಮದ ಪ್ರಾಚೀನತೆಯನ್ನು ಹಾಗೂ ಕೊನೆಯಲ್ಲಿ ಶೈವ ಪಂಥಗಳ ಕುರಿತು ಬರೆಯಲಾಗಿದೆ.

**ಪ್ರಾಚೀನತೆ**

ಶೈವ ಧರ್ಮದ ಅಸ್ತಿತ್ವ ಉಳಿದೆಲ್ಲ ಧರ್ಮಗಳಿಗಿಂತ ಪ್ರಾಚೀನವಾದುದು. ಹಾಗೂ ಹೆಚ್ಚು ವಿಸ್ತಾರವಾಗಿ ಹರಡಿಕೊಂಡ ಧರ್ಮವಾಗಿದೆ. ಶೈವ ಧರ್ಮದ ಮೂಲ ಮತ್ತು ಅದು ಬೆಳೆದು ಬಂದ ಬಗೆ ಇನ್ನೂ ಅಸ್ಪಷ್ಟವಾಗಿದೆ. ಒಂದೆಡೆ ಪುರಾತತ್ವ ಆಕರಗಳು ಇನ್ನೊಂದೆಡೆ ವಿವಿಧ ಮಾದರಿಯ ಸಾಹಿತ್ಯಿಕ ಆಕರಗಳು ಈ ಕುರಿತು ಅಲ್ಪ-ಸ್ವಲ್ಪ ಚಿತ್ರಣ ನೀಡುತ್ತವೆ.[೨] ಸಿಂಧೂ ನಾಗರಿಕತೆ ಮತ್ತು ವೇದ ಸಂಹಿತೆಗಳು ಶೈವ ಧರ್ಮದ ಪ್ರಾಚೀನತೆಯನ್ನು ಅರಿಯಲು ಪ್ರಮುಖ ಮೂಲಾಧಾರಗಳಾಗಿವೆ. ಮುಖ್ಯವಾಗಿ ವೇದಗಳು ಸಾಹಿತ್ಯಿಕ ರೂಪದ ಆಕರಗಳಾಗಿದ್ದು, ಪ್ರಾಚೀನವೆನಿಸಿವೆ. ಇಲ್ಲಿಯವರೆಗೂ ವಿವಾದಿತವಾಗಿದ್ದ ಹಾಗೂ ವೇದಗಳಲ್ಲಿಯೇ ಪ್ರಾಚೀನವೆನಿಸಿರುವ ಋಗ್ವೇದದ ಕಾಲವನ್ನು ಇತ್ತೀಚೆಗೆ ಅಂದರೆ ೧೯-೨೦ನೇ ಶತಮಾನಗಳಲ್ಲಿ ವಿದ್ವಾಂಸರು ಕ್ರಿ.ಪೂ. ೧೫೦೦ ಅಥವಾ ೧೨೦೦ ಎಂದು ಒಪ್ಪಿಕೊಂಡಿರುತ್ತಾರೆ. ಆದರೆ ಸಿಂಧೂ-ಸರಸ್ವತಿ ನಾಗರೀಕತೆಗೆ ಸಂಬಂಧಿಸಿದಂತೆ C-೧೪ರ ಮಾಪನಾಂಕದ ಪ್ರಕಾರ ಅದರ ಕಾಲವನ್ನು ಕ್ರಿ.ಪೂ.೩೩೦೦-೧೫೦೦ ಎಂದು ನಿರ್ಧರಿಸಲಾಗಿದೆ. ಇದರಿಂದ ವೇದಗಳ ಕಾಲವು ಸಿಂಧೂ ನಾಗರೀಕತೆಯ ಕಾಲಕ್ಕಿಂತ ನಂತರದ್ದು ಎಂದು ತಿಳಿದುಬರುತ್ತದೆ.[೩] ಆದ್ದರಿಂದ ಭಾರತದ ಪ್ರಾಚೀನತೆಯನ್ನು ಸಿಂಧೂ ಬಯಲಿನ ನಾಗರೀಕತೆಯಿಂದ ಅಧ್ಯಯನಕ್ಕೆ ಒಳಪಡಿಸಲಾಗುತ್ತದೆ. ಹಾಗೆಯೇ ಶೈವಧರ್ಮದ ಪ್ರಾಚೀನತೆಯನ್ನು ಇಲ್ಲಿಂದಲೇ ಗುರುತಿಸಲಾಗಿದೆ.

ಸಿಂಧೂ ನಾಗರೀಕತೆಯ ಪ್ರಧಾನ ನೆಲೆಗಳಾದ ಹರಪ್ಪ ಮತ್ತು ಮೆಹೆಂಜೊದಾರೊ ನಗರಗಳ ಅವಶೇಷಗಳನ್ನಾಧರಿಸಿ ಜಾನ್ ಮಾರ್ಷ್‌ಲ್ ಮೊದಲ ಬಾರಿಗೆ ಧರ್ಮದ ಕುರಿತು ದೀರ್ಘವಾಗಿಯೇ ವಿವರಿಸಿದ್ದಾರೆ. ಇವರು ಶಿಲೆಯ ಮತ್ತು ಸುಡಾವೆಮಣ್ಣಿನ ಲಿಂಗ ಮತ್ತು ಯೋನಿಯನ್ನು ಹೋಲುವ ಕುರುಹುಗಳನ್ನು ಗುರುತಿಸಿರುವರು. ಹಾಗೂ ಇಲ್ಲಿ ದೊರೆತ ಲಿಂಗಗಳ ಕುರಿತು ಚರ್ಚಿಸಿರುವರು. ಇವರ ಮುಖ್ಯ ಕೊಡುಗೆಯೆಂದರೆ ಈ ಎರಡು ನೆಲೆಗಳಲ್ಲಿ ದೊರೆತಿರುವ ಹಲವು ಮುದ್ರೆಗಳಲ್ಲಿ ಮ್ಯಾಕೆರವರು ಶೋಧಿಸಿದ ಒಂದು ಮುದ್ರೆಯನ್ನು ಪಶುಪತಿ ಮುದ್ರೆ ಎಂದು ಗುರುತಿಸಿರುವರು. ಇವರು ಈ ಮುದ್ರೆಯಲ್ಲಿ ಮೂರು ಮುಖವುಳ್ಳ ಯೋಗಮುದ್ರೆಯಲ್ಲಿ ಪೀಠಾಸೀನನಾಗಿರುವ ವ್ಯಕ್ತಿಯನ್ನು ಶಿವನ ಪ್ರಾಚೀನ ರೂಪ ಪಶುಪತಿ ಎಂದು ಹೇಳಿರುವರು.

ಪಶುಪತಿ ಎನ್ನಲು ಕಾರಣ ಈ ಶಿವನ ಸುತ್ತಲೂ ಅಂದರೆ ಮುದ್ರೆಯಲ್ಲಿ ಬಲಕ್ಕೆ ಆನೆ ಮತ್ತು ಹುಲಿ ಹಾಗೂ ಎಡಕ್ಕೆ ಖಡ್ಗಮೃಗ ಮತ್ತು ಕೋಣ ಹಾಗೂ ಪೀಠದ ಕೆಳಗೆ ಕತ್ತನ್ನು ಮೇಲೆತ್ತಿ ನೋಡುತ್ತಿರುವ ಕೊಂಬುಗಳುಳ್ಳ ಎರಡು ಜಿಂಕೆಗಳನ್ನು ತೋರಿಸಿರುವರು. ಈ ಎಲ್ಲ ಲಕ್ಷಣಗಳಿಂದ ಮಾರ್ಷಲ್‌ರವರು ಇದನ್ನು ಶಿವನ ಪ್ರಾಚೀನ ರೂಪವಾದ ಪಶುಪತಿ ಎಂದು ಗುರುತಿಸಿರುವರು.[೪] ಹರಪ್ಪಾದಲ್ಲಿ ಇನ್ನೂ ಎರಡು ಶಿಲಾಶಿಲ್ಪಗಳು ದೊರೆತಿದ್ದು, ಅದರಲ್ಲಿ ಒಂದು ಬೂದು ಬಣ್ಣದ ೧೦.ಸೆಂ.ಮೀ. ಎತ್ತರದ ಎರಡು ಬಾಹುಗಳನ್ನು ತಿರುಗಿಸಿರುವ ನೃತ್ಯ ಭಂಗಿಯಲ್ಲಿರುವ ಮತ್ತು ಎಡಗಾಲನ್ನು ಮೇಲಕ್ಕೆತ್ತಿರುವ ಶಿಲ್ಪವಿದೆ. ಆರ್.ಇ.ಎಮ್. ವ್ಹೀಲರ್‌ರವರು ಹರಪ್ಪದ ಈ ಭಗ್ನ ಶಿಲ್ಪವು ಶಿವ–ನಟರಾಜನ ಪ್ರಾರಂಭಿಕ ರೂಪ. ಇದರ ಭಂಗಿಯು ಭುಜಂಗತ್ರಾಸಿತ ಭಂಗಿಯನ್ನು ಹೋಲುತ್ತದೆ ಎಂದಿರುವರು. ಕಪಿಲ ವಾತ್ಸಾಯನರು ಇದು ಭೂಜಂಗಾಚಿತ ಪ್ರಕಾರದ್ದೆಂದು ಗುರುತಿಸಿರುವರು.[೫] ಈ ಎಲ್ಲಾ ವಿವರಗಳಿಂದ ಸಿಂಧೂ ಸಂಸ್ಕೃತಿಯಲ್ಲಿ ಶೈವರಾಧನೆ ಇತ್ತು ಎಂಬುದನ್ನು ತಿಳಿಯಬಹುದು. ಹಾಗೆಯೇ ಶಿವನನ್ನು ಮೂರ್ತಿರೂಪದಲ್ಲಿ ಅಥವಾ ವ್ಯಕ್ತ ರೂಪದಲ್ಲಿ ಗುರುತಿಸಲು ಪ್ರಯತ್ನಿಸಿರುವುದು ವಿಶೇಷವೆನ್ನಬಹುದು.

## ವೇದಗಳಲ್ಲಿ ಶಿವ

ಸಿಂಧೂ ನಾಗರಿಕತೆಯ ನಂತರ ಹಾಗೂ ಮೌರ್ಯರ ಕಾಲದವರೆಗಿನ ಮಧ್ಯದಲ್ಲಿನ ಇತಿಹಾಸ ಕೇವಲ ಸಾಹಿತ್ಯಿಕ ಆಧಾರಗಳನ್ನು ಅವಲಂಬಿಸಿದೆ. ಸಿಂಧೂ ನಾಗರಿಕತೆಯ ನಂತರದ ಕಾಲಘಟ್ಟದ ಯಾವುದೇ ಕುರುಹುಗಳು ಇಲ್ಲಿಯವರೆಗೂ ದೊರೆಯದ ಕಾರಣ ನಂತರದಲ್ಲಿ ದೊರೆತ ವೇದಗಳಿಂದ ಭಾರತದ ಇತಿಹಾಸ ಮತ್ತೆ ಆರಂಭವಾಗುತ್ತದೆ. ವೇದಗಳು ನಮ್ಮ ದೇಶದ ಅತ್ಯಂತ ಪ್ರಾಚೀನ ಸಾಹಿತ್ಯಿಕ ಆಕರಗಳು ಎಂದು ಅಭಿಪ್ರಾಯಿಸಲಾಗಿದೆ. ಇದನ್ನು ಹಲವು ವಿದ್ವಾಂಸರು ಸಹ ಒಪ್ಪಿಕೊಂಡಿರುತ್ತಾರೆ. ವೇದಗಳಲ್ಲಿ ಸಮಗ್ರ ರಾಶಿ ಅಡಗಿದೆ. ವೇದವೇ ಜ್ಞಾನ, ವಿದ್ ಎಂದರೆ 'ತಿಳಿ' ಎಂದರ್ಥ. ಧರ್ಮಕ್ಕೆ ವೇದವೇ ಮೂಲ.[೬] ವೇದಗಳಲ್ಲಿ ಋಗ್ವೇದ ಯಜುರ್ವೇದ, ಅಥರ್ವವೇದ ಎಂಬ ನಾಲ್ಕು ವೇದಗಳಿವೆ. ಈ ಎಲ್ಲವುಗಳಲ್ಲಿ ಇತರ ದೇವತೆಗಳೊಂದಿಗೆ ಶಿವನನ್ನು ಕುರಿತು ಉಲ್ಲೇಖಗಳಿರುವುದು ಕಂಡುಬರುತ್ತದೆ. ಅತ್ಯಂತ ಪ್ರಾಚೀನವಾದುದು ಋಗ್ವೇದ. ಇದು ಭಗವಂತನ ಸ್ತುತಿ ಪಾಠಗಳನ್ನು ಒಳಗೊಂಡಿದುದಾಗಿದೆ. ಋಗ್ವೇದದಲ್ಲಿ ಶಿವನನ್ನು ರುದ್ರ ಎಂದು ಸಂಬೋಧಿಸಲಾಗಿದ್ದು, ಕೇವಲ ಮೂರು ಸೂಕ್ತಗಳು(೧–೧೧೪, ೨–೩೩, ೭–೪೬) ರುದ್ರನನ್ನು ಪೂರ್ತಿಯಾಗಿ ಸ್ತುತಿಸುತ್ತವೆ. ಸುಮಾರು ೭೫ ಬಾರಿ ರುದ್ರನ ಉಲ್ಲೇಖವಿದೆ. ಋಗ್ವೇದದಲ್ಲಿಯೇ ರುದ್ರನ ಭೀಷಣ ರೂಪವು ಅಲ್ಲಲ್ಲಿ ವರ್ಣಿತವಾಗಿದೆ.[೭] ಋಗ್ವೇದದಲ್ಲಿ(೧೦–೯೨–೯) ಕೇವಲ ಒಂದು ಮಂತ್ರದಲ್ಲಿ ಮಾತ್ರ ಶಿವ ಎಂಬ ವಿಶೇಷಣವನ್ನು ರುದ್ರನಿಗೆ ಅನ್ವಯಿಸಿ ಹೇಳಲಾಗಿದೆ. ಆದರೆ ನಂತರದ ಶ್ವೇತಾಶ್ವತರ ಉಪನಿಷತ್ತಿನಲ್ಲಿ ಮಾತ್ರ ಶಿವ ಶಬ್ದವನ್ನು ಅಂಕಿತ ನಾಮವೆಂದು ಹೇಳಲಾಗಿದೆ. ಅಲ್ಲಿಯವರೆಗೆ ಶಿವ ಶಬ್ದವು ಕೇವಲ ವಿಶೇಷಣದಂತೆ ಬಳಸಲ್ಪಡುತ್ತಿತ್ತು.[೮]

ಎರಡನೇ ವೇದವು ಯಜುರ್ವೇದ, ಯಜುರ್ವೇದದಲ್ಲಿ ಕೃಷ್ಣಯಜುರ್ವೇದ ಮತ್ತು ಶುಕ್ಲ ಯಜುರ್ವೇದ ಎಂದು ಎರಡು ರೂಪಗಳಿವೆ. ಇವು ಯಜ್ಞಯಾಗಾದಿಗಳಿಗೆ ಸಂಬಂಧಪಟ್ಟಿದೆ. ಋಗ್ವೇದದಲ್ಲಿ ರುದ್ರನನ್ನು ಮೂರೇ ಸೂಕ್ತಗಳಲ್ಲಿ ವರ್ಣಿಸಿದ್ದರೆ ಕೃಷ್ಣಯಜುರ್ವೇದದಲ್ಲಿ ರುದ್ರಾಧ್ಯಾಯ ಎಂಬ ವಿಶೇಷ ಅಧ್ಯಾಯವೇ ಇದೆ. ರುದ್ರಾಧ್ಯಾಯದಲ್ಲಿ ಪರಮೇಶ್ವರನಾದ ರುದ್ರನನ್ನು ನಾನಾ ರೂಪಗಳಲ್ಲಿ ಸ್ತುತಿಸಿರುವುದರಿಂದ ಅದನ್ನು ಶತರುದ್ರೀಯ ಎಂದೂ ಕರೆಯಲಾಗಿದೆ. ಈ ಅಧ್ಯಾಯವು 'ನಮಃ' ಎಂಬ ಶಬ್ದದಿಂದ ಆರಂಭವಾಗಿ ಉದ್ದಕ್ಕೂ ತುಂಬಿರುವುದರಿಂದ ಇದನ್ನು 'ನಮಕ' ಎಂದೂ ಕರೆಯುತ್ತಾರೆ. ಯಜುರ್ವೇದದಲ್ಲಿ ಶಿವನಿಗೆ ಎಂತಹ ಉನ್ನತ ಸ್ಥಾನವನ್ನು ನೀಡಲಾಗಿದೆ ಎಂಬುದು ರುದ್ರಾಧ್ಯಾಯದ ಸಾರಾಂಶವನ್ನು ತಿಳಿದುಕೊಂಡರೆ ಗೊತ್ತಾಗುತ್ತದೆ. ರುದ್ರಾಧ್ಯಾಯದಲ್ಲಿ ಸ್ತುತಿಸಲ್ಪಟ್ಟಿರುವ ರುದ್ರ ಕೇವಲ ಲಯಕಾರನಲ್ಲ, ಮಂಗಲನೂ, ತ್ರೀಗುಣಾತೀತ, ತ್ರಿಗುಣಮೂರ್ತಿಯೂ ಆಗಿದ್ದಾನೆ.[೯] ಸಾಮವೇದದಲ್ಲಿಯೂ ರುದ್ರನ ಸ್ತುತಿ ಕಂಡುಬರುತ್ತದೆ. ಋಙ್ಮಂತ್ರಗಳು ಛಂದಶಾಸ್ತ್ರದ ವ್ಯವಸ್ಥೆಯನ್ನು ಅವಲಂಭಿಸಿದರೆ ಯಜಸ್ಸುಗಳು ಗದ್ಯರೂಪ ಉಳ್ಳವು ಸಾಮಗಳು. ಋಕ್‌ಗಳ ಮೇಲೆ ಆರೂಢವಾಗಿದ್ದು, ಗಾನಾತ್ಮಕಗಳಾಗಿವೆ. 'ವೇದಾನಾಂ ಸಾಮವೇದೊಸ್ಮಿ' ಎಂಬುದಾಗಿ ಸಾಕ್ಷಾತ್ ಭಗವಂತನೇ ಸಾಮವೇದವನ್ನು ಪ್ರಶಂಸಿಸಿದ್ದಾನೆ.[೧೦]

ಅಥರ್ವಣವೇದದಲ್ಲಿ ರುದ್ರನನ್ನು ಮಹಾದೇವ ಎಂದು ಉಲ್ಲೇಖಿಸುತ್ತ 'ಭವ' ಮತ್ತು 'ಶರ್ವ' ಇವು ಮಹಾದೇವನ ಎರಡು ಬಾಹುಗಳು ಎಂದು ಹೇಳಿದೆ. ದುಷ್ಟ ಶಕ್ತಿಗಳ ನಿಗ್ರಹಕ್ಕಾಗಿ ಮಹಾದೇವನನ್ನು ಆರಾಧಿಸಲಾಗುತ್ತಿತ್ತೆಂದು ಉಲ್ಲೇಖಿಸಲಾಗಿದೆ. ಭೂತಪತಿ(ಆತ್ಮಗಳ ದೇವತೆ) ಪಶುಪತಿ(ಜೀವಿಗಳ ದೇವತೆ) ರುದ್ರನು ಪೃಥ್ವಿ ಮತ್ತು ಅಂತರಿಕ್ಷಗಳಿಗೆ ಒಡೆಯ ಎಂದು ಹೇಳಿದೆ. ಅಥರ್ವಣ ವೇದದಲ್ಲಿ ಆಕಳು, ಕುದುರೆ, ಮನುಷ್ಯ, ಆಡು ಮತ್ತು ಕುರಿ ಈ ಐದು ಪ್ರಾಣಿಗಳು ಪಶುಪತಿಗೆ ಸೇರಿದವುಗಳೆಂದು ಉಲ್ಲೇಖಿಸಲಾಗಿದೆ. ಭವನು ಭೂಮಿಯ ಎಲ್ಲಾ ಆಗುಹೋಗುಗಳನ್ನು ನೋಡಿಕೊಳ್ಳುವವನಾಗಿದ್ದು, ದೂರ ಮತ್ತು ಸಮೀಪ ಎಂಬ ಅಂತರ ಇವನಿಗಿಲ್ಲ. ಇವನು ಸಮುದ್ರದ ಮೇಲೂ ಮತ್ತು ಒಳಗೂ ದುಷ್ಟಶಕ್ತಿಗಳನ್ನು ನಾಶಮಾಡುವ ಸಾಮರ್ಥ್ಯವುಳ್ಳವನಾಗಿದ್ದಾನೆ. ಇವುಗಳಿಂದ 'ರುದ್ರ ಪಶುಪತಿ'ಯು ಪಶುಗಳ ರಕ್ಷಕ ಎಂಬುದು ಸ್ಪಷ್ಟವಾಗಿದೆ.[೧೧] ವೇದಗಳಂತೆಯೇ ಉಪನಿಷತ್ತುಗಳಲ್ಲಿಯೂ ಶಿವ ಪರ ವಿಚಾರಗಳನ್ನು ಒಳಗೊಂಡಿವೆ. ೧೦೮ ಉಪನಿಷತ್ತುಗಳಲ್ಲಿ ೧೫ ಶಿವಪರವಾದ ಶೈವ ಉಪನಿಷತ್ತುಗಳಿವೆ. ಈ ಶೈವೋಪನಿಷತ್ತುಗಳು ಶಿವನ ಹಾಗೂ ಶಿವ ಸಂಬಂಧಿ ವಿಚಾರಗಳ ಮಹತ್ವ ವೈಶಿಷ್ಟ್ಯಾದಿಗಳನ್ನು ತಿಳಿಸುವುದಲ್ಲದೆ ಜಗತ್ತಿನ ವಿವಿಧ ವಿಚಾರಗಳ ವಿವೇಚನೆ ಮಾಡಿ ಅಧ್ಯಾತ್ಮಿಕ ತತ್ವದ ಸಾಕ್ಷಾತ್ಕಾರಕ್ಕೆ ಸಹಾಯಕವಾಗಿವೆ.[೧೨]

**ಶೈವಾಗಮಗಳಲ್ಲಿ ಶಿವ**

ಆಗಮಗಳನ್ನು ವೇದಗಳಷ್ಟೆ ಪ್ರಾಚೀನವೆಂದು ಹೇಳಲಾಗುತ್ತದೆ. ಆಗಮಗಳಲ್ಲಿ ಶೈವಗಮ, ವೈಷ್ಣವಾಗಮ ಮತ್ತು ಶಾಕ್ತಾಗಮಗಳೆಂಬ ಮೂರು ಪ್ರಕಾರಗಳಿದ್ದು, ಅವುಗಳಲ್ಲಿ ಶೈವಾಗಮಗಳೇ ಪ್ರಾಚೀನವಾದವುಗಳು. ಇವುಗಳು ಸಂಪೂರ್ಣವಾಗಿ ಶಿವನ ತತ್ವಗಳನ್ನೊಳಗೊಂಡಿವೆ. ಶೈವಾಗಮಗಳು

ಶೈವ ಧರ್ಮದ ಪ್ರಮಾಣ ಗ್ರಂಥಗಳೆನಿಸಿಕೊಂಡಿವೆ. ಇವುಗಳನ್ನು ಸಿದ್ಧಾಂತಗಳೆಂದೂ ಕರೆಯುವರು. ಇವುಗಳು ಶೈವ ಧರ್ಮದ ಆಚಾರ, ವಿಚಾರ, ನೀತಿ–ನಿಯಮಗಳನ್ನು ವಿವರಿಸುತ್ತವೆ. ಶೈವಾಗಮಗಳ ಸಂಖ್ಯೆ ೨೮ ಹಾಗೂ ಈ ೨೮ ಶೈವಾಗಮಗಳಿಗೆ ೨೦೭ ಉಪಾಗಮಗಳೂ ಇವೆ. ಇವೆಲ್ಲವೂ ಕ್ರಿಯಾಪಾದ, ಚರ್ಯಾಪಾದ, ಯೋಗಪಾದ, ಜ್ಞಾನಪಾದವೆಂಬ ನಾಲ್ಕು ಪಾದಗಳನ್ನು ಹೊಂದಿದ್ದು, ಅವುಗಳಲ್ಲಿ ಶೈವ ವಿಗ್ರಹಗಳ ರಚನೆ, ಅವುಗಳ ಲಕ್ಷಣಗಳು ಹಾಗೂ ಶೈವ ದೇವಾಲಯಗಳ ರಚನೆ ಮತ್ತು ಪೂಜಾ ವಿಧಿ–ವಿಧಾನಗಳು, ನಿತ್ಯ ನೈಮಿತ್ತಿಕ ಆಚರಣೆಗಳು ಹಾಗೂ ಧ್ಯಾನ, ಯೋಗ ಸಾಧನಾ ಮಾರ್ಗಗಳ ವಿವರ ಮತ್ತು ಶೈವ ತತ್ವಜ್ಞಾನದ ಪ್ರತಿಪಾದನೆಯ ವಿಚಾರಗಳನ್ನು ಒಳಗೊಂಡಿವೆ. ಹೀಗೆ ಸಂಪೂರ್ಣವಾಗಿ ಶೈವ ವಿಚಾರಗಳನ್ನು ಒಳಗೊಂಡಿದ್ದು, ಶೈವ ಧರ್ಮವನ್ನು ಹಾಗೂ ಅದರ ಪ್ರಾಮುಖ್ಯತೆ ಮತ್ತು ಮಹತ್ವವನ್ನು ತಿಳಿಸುತ್ತವೆ ಎಂದು ಹೇಳಬಹುದು. ಪ್ರಸ್ತುತ ಮಹಾಪ್ರಬಂಧದ ಮುಂದಿನ ಅಧ್ಯಾಯವು ಶೈವಾಗಮಗಳ ಕುರಿತಾಗಿದ್ದು, ಅದರಲ್ಲಿ ಶೈವಾಗಮಗಳ ಕುರಿತು ದೀರ್ಘವಾಗಿ ವಿವರಿಸಲಾಗಿದೆ.

**ರಾಮಾಯಣ ಹಾಗೂ ಮಹಾಭಾರತ ಮಹಾಕಾವ್ಯಗಳಲ್ಲಿ ಶಿವನ ಉಲ್ಲೇಖ**

ಭಾರತದ ಪ್ರಾಚೀನ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳು ಭಾರತೀಯ ಸಂಸ್ಕೃತಿ ಹಾಗೂ ಚರಿತ್ರೆಯನ್ನು ತಿಳಿಯುವಲ್ಲಿ ಮಹತ್ವದ ಆಕರಗಳೆನಿಸಿವೆ. ಈ ಮಹಾಕಾವ್ಯಗಳಲ್ಲಿ ಅಂದಿನ ಧಾರ್ಮಿಕ ಸ್ಥಿತಿಯನ್ನು ತಿಳಿಯಬಹುದು. ರಾಮಾಯಣದಲ್ಲಿ ಶಿವನ ಚಿತ್ರಣವು ಅನೇಕ ಕಡೆಗಳಲ್ಲಿ ಲಭ್ಯವಿದ್ದು, ಆ ದಿನಗಳಲ್ಲಿ ಶಿವನನ್ನೇ ಪರಮದೇವನೆಂದು ಸ್ವೀಕರಿಸಿದ್ದ ಅಂಶ ಸ್ಪಷ್ಟವಾಗುತ್ತದೆ. ಮಿಶ್ವಾಮಿತ್ರರು ರಾಮನಿಗೆ, ಶಿವನು ಮನ್ಮಥನನ್ನು ತನ್ನ ಫಾಲನೇತ್ರದಿಂದ ಭಸ್ಮ ಮಾಡಿದ ವರ್ಣನೆ, ಮಿಥಿಲಾ ಪಟ್ಟಣದ ಜನಕ ಮಹಾರಾಜನಲ್ಲಿದ್ದ ಶಿವಧನಸ್ಸಿನ ವರ್ಣನೆ, ಗಂಗಾ–ಉಮೆಯ ಜನ್ಮಕಥನ ಹಾಗೂ ಉಮೆಯ ತಪಸ್ಸಿನಿಂದ ಪರಮೇಶ್ವರನನ್ನು ಪಡೆದುದು, ಉಮಾಮಹೇಶ್ವರರ ವಿವಾಹ ಹಾಗೂ ಕಾರ್ತಿಕೇಯನ ಜನನದೊಂದಿಗೆ ದೇವತೆಗಳಿಗೆ ಉಮೆಯ ಶಾಪ, ಗಂಗೆಯಿಂದ ಕಾರ್ತಿಕೇಯನ ಉತ್ಪತ್ತಿ ಪ್ರಸಂಗ, ಭಗೀರಥನ ತಪಸ್ಸಿನಿಂದ ಶಂಕರನು ಗಂಗೆಯನ್ನು ತನ್ನ ಶಿರಸ್ಸಿನಲ್ಲಿ ಧಾರಣೆ ಮಾಡಿ ನಂತರ ಭೂಮಿಗೆ ಬಿಟ್ಟುದರ ವರ್ಣನೆ, ದೇವ–ದಾನವರಿಂದ ಸಮುದ್ರ ಮಂಥನ, ಶಿವನಿಂದ ಹಾಲಾಹಲ ವಿಷದ ಪಾನ ಮಾಡಿದುದರ ವರ್ಣನೆಗಳು,[೧೩] ಶಿವನ ಕುರಿತಾದ ಕಥೆಗಳನ್ನು ತಿಳಿಸುತ್ತವೆ. ಇದಲ್ಲದೆ ಕುಬೇರನು ರೌದ್ರ ಎಂಬ ವ್ರತವನ್ನು ಕೈಗೊಂಡು ಶಿವನ ಗೆಳೆತನವನ್ನು ಪಡೆದದ್ದು, ದಶಾನನಿಗೆ ನಂದೀಶ್ವರನ ಶಾಪ, ದಶಾನನು ಕೈಲಾಸ ಪರ್ವತವನ್ನು ಎತ್ತಿದ್ದುದು ಮತ್ತು ಭಗವಾನ್ ಶಂಕರನಿಂದ ಮಾನಭಂಗವಾಗಿ ರಾವಣನೆಂಬ ನಾಮಧೇಯ ಹಾಗೂ ಚಂದ್ರಹಾಸ ಖಡ್ಗ ಪಡೆದುದು. ನರ್ಮದಾ ತೀರದಲ್ಲಿ ರಾವಣನಿಂದ ಆತನ ಸ್ವರ್ಣ ಲಿಂಗದ ಆರಾಧನೆ ಮಾಡಿದುದರ ವರ್ಣನೆಗಳೂ[೧೪] ರಾಮಾಯಣದಲ್ಲಿ ಕಂಡುಬರುತ್ತವೆ. ಈ ಎಲ್ಲ ವರ್ಣನೆಗಳಲ್ಲೂ ಶಿವನನ್ನು ಸ್ತುತಿಸಿದುದು, ಆರಾಧಿಸಿದುದು ಗಮನಿಸಿದರೆ

ಶಿವನನ್ನು ಪರಮಶ್ರೇಷ್ಠನೆಂದು ಪರಿಗಣಿಸಿದುದು ತಿಳಿದುಬರುತ್ತದೆ. ಮಹಾಭಾರತದಲ್ಲಿಯೂ ಶಿವನ ವರ್ಣನೆಗಳಿದ್ದು, ಶಿವಪಾರಮ್ಯತೆಯನ್ನು ಸ್ವೀಕರಿಸಿರುವ ಅನೇಕ ಉದಾಹರಣೆಗಳು ನಮಗೆ ಕಂಡುಬರುತ್ತವೆ. ಇಲ್ಲಿಯೂ ಸಮುದ್ರಮಂಥನ ಸಂದರ್ಭದಲ್ಲಿ ಕಾಲಕೂಟ ವಿಷ ಉದ್ಭವಿಸಿ ಅದನ್ನು ಶಿವನು ಪ್ರಾಶನ ಮಾಡಿದುದರ ವಿವರಣೆ.[೧೫] ಅರ್ಜುನನ ಉಗ್ರ ತಪಸ್ಸು, ಕಿರಾತಾರ್ಜುನೀಯ ಪ್ರಸಂಗ ಅಥವಾ ಶಂಕರಾರ್ಜುನರ ಯುದ್ಧ, ಶಿವನು ಅರ್ಜುನನಿಗೆ ಪ್ರಸನ್ನನಾಗಿ ಪಾಶುಪತಾಸ್ತ್ರದಾನ ಮಾಡಿದುದು,[೧೬] ಭಗೀರಥನು ಹಿಮವತ್ಪರ್ವತದಲ್ಲಿ ತಪಶ್ಚರಣೆಯಿಂದ ಗಂಗೆಯನ್ನು, ಶಿವನನ್ನು ಪ್ರಸನ್ನಗೊಳಿಸಿ ವರಪಡೆದು ಭೂಮಿಗೆ ಗಂಗಾವತರಣ ಆದುದರ ವರ್ಣನೆ,[೧೭] ಶ್ರೀಕೃಷ್ಣನು ಅರ್ಜುನನು ಕನಸಿನಲ್ಲಿ ಶ್ರೀಕೃಷ್ಣನೊಡನೆ ಶಿವನ ಸಮೀಪಕ್ಕೆ ಹೋದುದು ಮತ್ತು ಶಿವನನ್ನು ಸ್ತುತಿಸಿದುದು.[೧೮] ವ್ಯಾಸರು ಅರ್ಜುನನಿಗೆ ಶಿವ ಮಹಿಮೆಯನ್ನು ಹೇಳಿದುದು, ಯುದಿಷ್ಠಿರನು ಎಲ್ಲ ಮಕ್ಕಳೂ ಮತ್ತು ಸೈನಿಕರೂ ಒಂದೇ ರಾತ್ರಿಯಲ್ಲಿ ಮರಣ ಹೊಂದುದಕ್ಕೆ ಕಾರಣವನ್ನು ಪ್ರಶ್ನಿಸಿದುದಕ್ಕಾಗಿ ಶ್ರೀಕೃಷ್ಣನು ಮಹಾದೇವನ ಮಹಿಮೆಯನ್ನು ಪ್ರತಿಪಾದಿಸಿದುದು ಹಾಗೂ ಮಹಾದೇವನ ರೋಷದಿಂದ ದೇವತೆಗಳು, ಯಜ್ಞ ಮತ್ತು ಜಗತ್ತುಗಳು ಅಸ್ತವ್ಯಸ್ತಗೊಂಡುದು; ಅವನ ಪ್ರಸಾದದಿಂದಾಗಿ ಎಲ್ಲವೂ ಸುವ್ಯವಸ್ಥಿತವಾದುದು.[೧೯] ಇವೆಲ್ಲವೂ ಮಹಾಭಾರತದಲ್ಲಿ ಬರುವ ಪ್ರಸಂಗಗಳು. ಇವುಗಳಲ್ಲಿ ಶಿವನ ಆರಾಧನೆ ಕಂಡುಬರುವುದರಿಂದ ಶಿವನಿಗೆ ಪ್ರಮುಖ ಸ್ಥಾನ ನೀಡಿರುವುದು ತಿಳಿದುಬರುತ್ತದೆ. ಇವುಗಳೇ ಇಂದು ಶಿವನ ಲೀಲಾಮೂರ್ತಿಗಳಾಗಿ ಶಿಲ್ಪಗಳಲ್ಲಿ ಕಂಡುಬರುತ್ತವೆ.

**ಪುರಾಣಗಳಲ್ಲಿ ಶಿವ**

ಶಿವನ ಮೂರ್ತಿರೂಪಗಳು ವಿಪುಲವಾಗಿ ಬೆಳೆಯಲು ಸಾಮಗ್ರಿಯನ್ನು ಒದಗಿಸುವಲ್ಲಿ ಪುರಾಣಗಳ ಪಾತ್ರ ಬಹು ಮುಖ್ಯವಾದುದು. ವೈದಿಕ ಯಜ್ಞಯಾಗಗಳು ಕಡಿಮೆಯಾಗುತ್ತಾ ಬಂದು ಭಕ್ತಿ ಮತ್ತು ಪೂಜಾವಿಧಾನಗಳು ನಂತರದ ಕಾಲದಲ್ಲಿ ಅಪಾರವಾಗಿ ಬೆಳೆಯಲು ಪುರಾಣಗಳು ನೀರೆರೆದವು. ಪುರಾಣಗಳು ದೇವರ ಕಥೆಗಳು. ಪುರಾಣಗಳಲ್ಲಿ ಶೈವ, ವೈಷ್ಣವ ಮತ್ತು ಶಾಕ್ತ ಎಂಬ ಮೂರು ಪ್ರಭೇದಗಳಿವೆ. ವೇದವ್ಯಾಸರ ಹದಿನೆಂಟು ಮಹಾಪುರಾಣಗಳು ಎಲ್ಲರಿಗೂ ಚಿರಪರಿಚಿತ. ಹಾಗೆಯೇ ಹಲವು ಉಪಪುರಾಣಗಳು ಇವೆ. ಆಯಾಯ ಪುರಾಣಗಳಲ್ಲಿ ಆಯಾಯ ದೇವರ ಪಾರಮ್ಯವನ್ನೆ ವೈಭವೀಕರಿಸಿ ವರ್ಣಿಸಲಾಗಿರುತ್ತದೆ. ಶಿವನ ವರ್ಣನೆ ಎಲ್ಲಾ ಪುರಾಣಗಳಲ್ಲಿಯೂ ದೊರೆಯುತ್ತಾದರೂ ಶಿವಮಹಾಪುರಾಣದಲ್ಲಿ ಸಂಪೂರ್ಣವಾಗಿ ಶಿವನನ್ನು ಆತನ ಹಲವು ರೂಪ ಲಕ್ಷಣಗಳನ್ನು, ಪಂಚವಿಂಶತಿ ಲೀಲೆಗಳನ್ನು ಹಾಗೂ ಅವುಗಳ ಧಾರಣೆಯ ಹಿಂದಿರುವ ಕಥಾಕಾರಣವನ್ನು ಅಲ್ಲದೆ ಆತನ ಪರಿವಾರ ದೇವತೆಗಳ ವರ್ಣನೆಯೂ ದೊರೆಯುತ್ತದೆ. ಲಿಂಗಪುರಾಣದಲ್ಲಿಯೂ ಶಿವನು ಅವ್ಯಕ್ತ ರೂಪವಾದ ಲಿಂಗ ಸ್ವರೂಪವನ್ನು ಪಡೆಯಲು ಕಾರಣ, ಅವುಗಳ ವಿಧಗಳು, ಅವುಗಳ ಸ್ಥಾಪನೆ ಹಾಗೂ ಧಾರಣೆ, ಅವನ್ನು ಪೂಜಿಸುವ ವಿಧಾನ ಹಾಗೂ ಮಂತ್ರೋಚ್ಚಾರಣೆಗಳ ಕುರಿತು ಹೇಳುತ್ತದೆ.

**ಇತರ ಸಾಹಿತ್ಯದಲ್ಲಿ ಶಿವ**

ವೇದ–ಆಗಮಗಳು ಹಾಗೂ ಪುರಾಣಗಳಂತಹ ಸಾಹಿತ್ಯಿಕ ಆಕರಗಳಲ್ಲದೆ ಇನ್ನೂ ಹಲವು ಗ್ರಂಥ ರಚನೆಗಳಲ್ಲಿ ಶೈವ ಸ್ವರೂಪವನ್ನು ವಿವರಿಸಿರುವುದು ಕಾಣಬಹುದು. ವೈದಿಕ ಕಾಲದಲ್ಲಿ ವೈದಿಕ ಆರಾಧನಾ ಕ್ರಮವನ್ನು ಶಿವನ ಆರಾಧನೆಯು ಬೆಳೆದು ಬದಲಾಯಿಸಿತು. ಇದರ ಮೊದಲ ಉಲ್ಲೇಖವನ್ನು ಪಾಣಿನಿ ಮಾಡುತ್ತಾನೆ.[೨೦] ಮಹಾಭಾಷ್ಯದ ಕರ್ತೃವಾದ ಪತಂಜಲಿಯು ಶಿವನ ಭಕ್ತರಾದ ಶಿವಭಾಗವತರನ್ನು ಉಲ್ಲೇಖಿಸಿರುವನು. ಅಥರ್ವ ಶಿರಸೊಪನಿಷತ್‌ನಲ್ಲಿ ಶಿವನನ್ನು ಭಾಗವತ ಎಂದು ಕರೆದಿರುವರು. ಶಿವಭಾಗವತರು ತಮ್ಮ ಆರಾಧನಾ ದೇವತೆಯ ಚಿಹ್ನೆಯಾದ ಕಬ್ಬಿಣದ ಶೂಲವನ್ನು ಹಿಡಿಯುತ್ತಿದ್ದರು ಎಂಬುದನ್ನು ಉಲ್ಲೇಖಿಸಿರುವನು.[೨೧] ಇದರಿಂದ ಪತಂಜಲಿಯ ಕಾಲಕ್ಕಾಗಲೇ ಶೈವ ಪಂಥವೊಂದು ಇದ್ದುದು ಅಲ್ಲದೆ ಅವರಿಗೆ ಶಿವಭಾಗವತರು ಎಂದು ಸಂಬೋಧಿಸುತ್ತಿದ್ದರೆಂದು ತಿಳಿದುಬರುತ್ತದೆ.

ಇವುಗಳಲ್ಲದೆ ಮಯಮತ, ಮಾನಸಾರ, ರೂಪಮಂಡನ, ಸಮರಾಂಗಣ ಸೂತ್ರಧಾರ, ಕಾಶ್ಯಪ ಶಿಲ್ಪಶಾಸ್ತ್ರ, ಶಿಲ್ಪರತ್ನ ಮುಂತಾದ ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ಹಾಗೂ ಮಾನಸೋಲ್ಲಾಸ, ಶಿವತತ್ವ ರತ್ನಾಕರ, ಶ್ರೀ ತತ್ವನಿಧಿ ಮುಂತಾದವುಗಳಲ್ಲಿ ಶಿವನ ರೂಪ ಮತ್ತು ಆಲಯಾದಿ ಲಕ್ಷಣಗಳನ್ನು ತಿಳಿಸುವ ಮೂಲಕ ಶೈವ ಧರ್ಮದ ಅಸ್ತಿತ್ವವನ್ನು ಗಟ್ಟಿಗೊಳಿಸಿದುವೆಂದು ಹೇಳಬಹುದು. ಹಾಗೆಯೇ ಸಿದ್ಧಾಂತ ಶಿಖಾಮಣಿ, ಸಿದ್ಧಾಂತ ಸಾರಾವಳಿ, ಸಿದ್ಧಾಂತ ಶೇಖರ ಮುಂತಾದವುಗಳು ಸಹ ಶಿವನ ಕುರಿತಾದ ಗ್ರಂಥಗಳಾಗಿವೆ. ಮತ್ತು ಕನ್ನಡ ಸಾಹಿತ್ಯ ಗ್ರಂಥಗಳಾದ ಪಂಪನ ವಿಕ್ರಮಾರ್ಜುನ ವಿಜಯ, ರನ್ನನ ಸಾಹಸಭೀಮ ವಿಜಯ, ನಾಗವರ್ಮನ ಛಂದೋಬುದಿ (ಕ್ರಿ.ಶ.೧೦ನೇ ಶತಮಾನ), ರುದ್ರಭಟ್ಟನ ಜಗನ್ನಾಥವಿಜಯ(ಕ್ರಿ.ಶ.೧೨ನೇ ಶತಮಾನ) ಮುಂತಾದ ಕೃತಿಗಳಲ್ಲಿ ಕವಿಗಳು ಪರೋಕ್ಷವಾಗಿ ಶಿವನ ವರ್ಣನೆಯನ್ನು ಮಾಡಿರುವರು. ಹಾಗೂ ಹರಿಹರನ ಗಿರಿಜಾಕಲ್ಯಾಣ, ಪಾಲ್ಕುರಿಕೆ ಸೋಮನಾಥನ ಶತಕ, ಚೌಂಡರಸನ ನಳಚಂಪೂ(ಕ್ರಿ.ಶ.೧೨ನೇ ಶತಮಾನ), ವೀರಭದ್ರರಾಜನ ವೀರಭದ್ರವಿಜಯ(ಕ್ರಿ.ಶ.೧೬ನೇ ಶತಮಾನ), ಷಡಕ್ಷರಿದೇವನ ವೃಷಭೇಂದ್ರ ವಿಜಯ(ಕ್ರಿ.ಶ.೧೭ನೇ ಶತಮಾನ) ಮುಂತಾದ ಗ್ರಂಥಗಳಲ್ಲಿಯೂ ಶಿವನ ವರ್ಣನೆ ಕಂಡುಬರುತ್ತದೆ. ಈ ಎಲ್ಲ ಕನ್ನಡ ಸಾಹಿತ್ಯಗ್ರಂಥಗಳಲ್ಲಿ ಕೆಲವು ಪರೋಕ್ಷವಾಗಿ ಇನ್ನೂ ಕೆಲವು ಪ್ರತ್ಯಕ್ಷವಾಗಿ ಶಿವನ ವರ್ಣನೆಗಳನ್ನು ಹೊಂದಿರುವುದರಿಂದ ಶಿವನ ಹಾಗೂ ಶೈವ ಧರ್ಮದ ಪಾರಮ್ಯತೆಯನ್ನು ಗುರುತಿಸಬಹುದು. ಇವುಗಳಲ್ಲದೆ ಕನ್ನಡ ದೇಸಿ ಕಾವ್ಯಗಳೆನಿಸಿದ ಷಟ್ಪದಿ ಕಾವ್ಯಗಳು, ಸಾಂಗತ್ಯಗಳು, ವಚನಗಳು, ಕೀರ್ತನೆಗಳು ಶಿವನ ವರ್ಣನೆಗಳನ್ನು ಹೊಂದಿವೆ. ಪಂಪನಿಂದ ಮುದ್ದಣ್ಣನವರೆಗೆ ನಡೆದು ಬಂದ ವೃತ್ತಕಂದಗಳಿಂದ ತೊಡಗಿ ಕೀರ್ತನೆಯವರೆಗೆ ಕನ್ನಡ ಸಾಹಿತ್ಯ ಒಟ್ಟು ಮೊತ್ತದಲ್ಲಿ ಮೂರು ಮುಖಗಳಲ್ಲಿ ಅಂದರೆ ಶಿವನ ಆಕಾರಸ್ವರೂಪ, ಗುಣಸ್ವಭಾವ, ಮಹಿಮೆಗಳಲ್ಲಿ ಶಿವದರ್ಶನವನ್ನು ಮಾಡಿ ತೋರಿಸುತ್ತದೆ.[೨೨]

ಹೀಗೆ ಮೇಲಿನ ಎಲ್ಲ ಸಾಹಿತ್ಯ ಆಕರಗಳಲ್ಲಿ ಶಿವನ ವರ್ಣನೆಯಿಂದ ಶೈವ ಮತದ ಹರವು ಎಷ್ಟು ವಿಸ್ತಾರಗೊಂಡಿದೆ ಎಂಬುದನ್ನು ತಿಳಿಯಬಹುದು. ಇನ್ನು ಭಾರತವನ್ನು ಹಲವು ರಾಜ ಮನೆತನಗಳು ಆಳಿ ಹೋಗಿದ್ದು, ಅವುಗಳು ಸಹ ಶೈವ ಧರ್ಮವನ್ನು ಪೋಷಿಸಿ ಬೆಳೆಸಿದುದು ತಿಳಿದುಬರುತ್ತದೆ. ಅವುಗಳನ್ನು ಈ ಮುಂದಿನಂತೆ ತಿಳಿಯಬಹುದು.

## ಮೌರ್ಯ ಕಾಲದಲ್ಲಿನ ಶೈವಧರ್ಮ

ನಮ್ಮ ಭಾರತದ ಇತಿಹಾಸ ಆರಂಭಗೊಳ್ಳುವುದೇ ಮೌರ್ಯರ ಕಾಲದಿಂದ. ಇತಿಹಾಸಕ್ಕೆ ಶಾಸನಗಳು ಮತ್ತು ಪುರಾತತ್ವೀಯ ಆಕರಗಳು ಪ್ರಮುಖ ಆಧಾರಗಳು. ಸಿಂಧು ನಾಗರೀಕತೆಯಿಂದಲೂ ಬರವಣಿಗೆ ಕಂಡುಬಂದರೂ ಅದನ್ನು ಓದಲಾಗದೆ ಇರುವುದರಿಂದ ಮೌರ್ಯ ಚಕ್ರವರ್ತಿ ಅಶೋಕನ ಶಾಸನಗಳಿಂದಲೇ ಬರವಣಿಗೆಯ ಆರಂಭವನ್ನು ಗುರುತಿಸಲಾಗುತ್ತದೆ. ಈ ಕಾಲದಲ್ಲಿ ಬೌದ್ಧ ಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿದ್ದುದು ಕಂಡುಬಂದರೂ ಅದಕ್ಕೂ ಮೊದಲು ಶೈವ ಆರಾಧನೆ ಇದ್ದುದು ತಿಳಿದುಬರುತ್ತದೆ. ಒಂದು ಸಂಪ್ರದಾಯ ಹಾಗೂ ಪುರಾತತ್ವೀಯವಾಗಿ ದೃಢಪಟ್ಟಿರುವುದೆಂದರೆ ಬುದ್ಧನು ಸಹ ಮೊದಲು ಶಿವನ ಆರಾಧಕನಾಗಿದ್ದನೆಂಬುದು.[೨೩] ಶಾಕ್ಯರು ಶೈವ ಧರ್ಮೀಯರಾಗಿದ್ದರು. ಹ್ಯೂಯೆನ್ಸಾಂಗ್ ಕಪಿಲವಸ್ತುವಿನ ಪೂರ್ವದ್ವಾರದ ಬಳಿಯಲ್ಲಿರುವ ಹಳೆಯ ಈಶ್ವರ ದೇವಾಲಯಕ್ಕೆ ಶಾಕ್ಯ ಮಕ್ಕಳು ದೈವಿಕ ರಕ್ಷಣೆ ಯಾವಾಗಲೂ ಅವರ ಮೇಲಿರುವಂತೆ ಕೇಳಿಕೊಳ್ಳಲು ಹೋಗುತ್ತಿದ್ದರಿಂದ ಶಿಶುವಾದ ಸಿದ್ಧಾರ್ಥನು ಸಹ ತನ್ನ ತಂದೆಯೊಂದಿಗೆ ಈ ದೇವಾಲಯಕ್ಕೆ ಹೋಗುತ್ತಿದ್ದನು ಎಂದು ಉಲ್ಲೇಖಿಸಿರುವನು. ಒಂದು ಪ್ರಾಚೀನ ದಂತಕಥೆಯ ಪ್ರಕಾರ ನಿಸ್ಸಂದೇಹವಾಗಿ ಶಿವನು ಶಾಕ್ಯರ ಕುಲದೇವತೆಯಾಗಿದ್ದನೆಂದು ಬೇಲ್‌ರವರು ತಿಳಿಸುತ್ತಾರೆ. ಬಹುಶಃ ಇದರಿಂದಲೇ ಪ್ಯೂರೆಲ್‌ರವರು ಈ ದೇವಾಲಯಕ್ಕೆ ವಿಶೇಷ ಗಮನ ನೀಡಿ ನಿಸ್ಸಂಶಯವಾಗಿ ಇದು ವೈದಿಕ ಧರ್ಮದ ಇತಿಹಾಸದಲ್ಲಿ ಮುಖ್ಯ ಆಸಕ್ತಿ ಹೊಂದಿದ ಹಾಗೂ ಇದುವರೆಗಿನ ನಮ್ಮ ಅರಿವಿನ ಪ್ರಕಾರ ಪ್ರಾಚೀನ ಶೈವ ಸ್ಮಾರಕಗಳಲ್ಲಿ ಒಂದು ಎಂದು ಹೇಳಿರುವರು.[೨೪] ಕೌಟಿಲ್ಯನು ನಗರ ಮಧ್ಯದಲ್ಲಿ ಇತರ ದೇವತೆಗಳೊಂದಿಗೆ ಶಿವ ದೇವಾಲಯಗಳ ನಿರ್ಮಾಣದ ಕುರಿತು ಹೇಳಿರುವನು. ಚಂದ್ರಗುಪ್ತ ಮೌರ್ಯನ ಆಸ್ಥಾನದಲ್ಲಿ ಸೆಲ್ಯುಕಸ್‌ನ ರಾಯಭಾರಿಯಾಗಿದ್ದ ಮೆಗಸ್ತನೀಸ್‌ನು ಗುಡ್ಡಗಳಿರುವ ಪ್ರದೇಶದಲ್ಲಿ ಶಿವನ(ದಿಯೊನಿಸಸ್) ಆರಾಧನೆ ಇರುವುದನ್ನು ಸ್ಪಷ್ಟವಾಗಿ ಗುರುತಿಸಿರುವನು. ಅಲ್ಲದೆ ಕಲ್ಹಣನು ಅಶೋಕನ ಪೂರ್ವಕಾಲದಲ್ಲಿ ವಿಜಯೇಶ ಮತ್ತು ಭೂತೇಶ ಎಂಬ ಎರಡು ದೇವಾಲಯಗಳನ್ನು ಹಾಗೂ ಅಶೋಕನು ಕಾಶ್ಮೀರದ ಹಿಮಾಲಯಕ್ಕೆ ಭೇಟಿ ನೀಡಿದ್ದ ಸಂದರ್ಭದಲ್ಲಿ ಶಿವ ಅಶೋಕೇಶ್ವರ ಎಂಬ ದೇವಾಲಯ ನಿರ್ಮಿಸಿದುದನ್ನು ಉಲ್ಲೇಖಿಸುತ್ತಾನೆ. ಹಾಗೂ ಅಶೋಕನ ಮಗ ಜಲೌಕನು ಶಿವ ಭಕ್ತನಾಗಿದ್ದನು ಎಂದು ತಿಳಿಸುತ್ತಾನೆ.[೨೫]

**ಕುಷಾಣರ ಕಾಲದಲ್ಲಿ ಶಿವ**

ಭಾರತದ ಇತಿಹಾಸದಲ್ಲಿ ಕುಷಾಣರ ಕಾಲವೂ ಮಹತ್ವವಾದುದು. ಇವರ ಕಾಲದ ನಾಣ್ಯಗಳು ಮತ್ತು ವಾಸ್ತುಶಿಲ್ಪ ರಚನೆಗಳು ವಿಭಿನ್ನವಾಗಿದ್ದು ಪ್ರಮುಖವೆನಿಸಿವೆ. ಇವರು ಮೊದಲ ಬಾರಿಗೆ ಶಿಲ್ಪಗಳಲ್ಲಿ ಮಥುರಾ ಮತ್ತು ಗಾಂಧಾರ ಶೈಲಿಯನ್ನು ಪರಿಚಯಿಸಿದರು. ಕುಷಾಣ ದೊರೆ ಮೊದಲನೆ ಕಡಫಿಸಸ್‌ನ ಮಗ ವಿಮಾ ಕಾಡಫಿಸಸ್‌ನು ಹೊರಡಿಸಿದ ನಾಣ್ಯಗಳಲ್ಲಿ ಶಿವನ ಮತ್ತು ತ್ರಿಶೂಲದ ಚಿತ್ರಗಳಿರುವುದರಿಂದ ಈತ ಶೈವಮತಾನುಯಾಯಿಯಾಗಿದ್ದನೆಂದು ತಿಳಿದುಬರುತ್ತದೆ.[೨೬] ಹಾಗೆಯೇ ಎರಡನೇ ಕಾಡಫಿಸಸ್‌ನ ನಾಣ್ಯಗಳ ಮುಂಭಾಗದಲ್ಲಿ ಅರಸರ ಸುಂದರ ಚಿತ್ರವೂ ಹಿಂಭಾಗದಲ್ಲಿ ನಂದಿಯೊಡನಿದ್ದ ಜಟಾಧಾರಿ ಶಿವನ ಚಿತ್ರವೂ ಇರುವುದು ಇವನ ನಾಣ್ಯಗಳ ವೈಶಿಷ್ಟ್ಯ. ಕುಷಾಣರ ಪ್ರಸಿದ್ಧ ದೊರೆ ಕಾನಿಷ್ಕನು ತನ್ನ ನಾಣ್ಯಗಳ ಮೇಲೆ ಗ್ರೀಕರ ಮತ್ತು ಇರಾನಿನ ದೇವತೆಗಳೊಡನೆ ಬುದ್ಧ ಮತ್ತು ಈಶ್ವರ ಚಿತ್ರಗಳನ್ನು ಅಚ್ಚು ಹಾಕಿಸಿರುವನು. ಇದು ಮತೀಯ ವಿಚಾರಗಳಲ್ಲಿ ಆತ ಉದಾರ ನೀತಿ ತಳೆದಿದ್ದನೆಂಬುದಕ್ಕೆ ದೃಷ್ಟಾಂತ.[೨೭] ಹುವಿಷ್ಕನ ಕಾಲದ ಚಿನ್ನದ ನಾಣ್ಯಗಳಲ್ಲಿ ಲಿಂಗದ(ಊರ್ಧ್ವಲಿಂಗ) ಲಕ್ಷಣಗಳನ್ನು ಕಾಣಬಹುದು. ಇವರ ಉಜ್ಜೈನಿಯ ನಾಣ್ಯಗಳು ಮುಖ್ಯವಾದವು. ಏಕೆಂದರೆ ಶಿವನು ಬೇರೆಡೆಗಳಲ್ಲಿ ಲಿಂಗರೂಪದಲ್ಲಿ ಕಂಡುಬಂದರೆ, ಅಲ್ಲಿನ ಕೆಲವೊಂದು ನಾಣ್ಯಗಳಲ್ಲಿ ಶಿವನನ್ನು ಮಾನುಷರೂಪದಲ್ಲಿ ತೋರಿಸಿರುವರು. ಇದು ಶಿವನು ಏಕಕಾಲದಲ್ಲಿ ಎರಡೂ ರೂಪಗಳಲ್ಲಿ ಆರಾಧನೆಗೊಳ್ಳಲ್ಪಡುತ್ತಿದ್ದುದು ತಿಳಿದುಬರುತ್ತದೆ. ಹೀಗೆ ಉತ್ತರದಲ್ಲಿ ಮತ್ತು ಮೌರ್ಯ ಪೂರ್ವ ಕಾಲದಲ್ಲಿ ಶೈವ ಧರ್ಮವು ವೈವಿಧ್ಯವುಳ್ಳ ಬೆಳವಣಿಗೆ ಮತ್ತು ವಿಸ್ತರಣೆಗೊಂಡಿತ್ತೆಂಬುದು ತಿಳಿಯುತ್ತದೆ.[೨೮] ಕ್ರಿಪೂ.೧–೨ನೇ ಶತಮಾನದ ಔದುಂಬರದ್ದೆಂದು ಗೊತ್ತು ಮಾಡಲಾದ ಒಂದು ದೊಡ್ಡ ಬುಡಕಟ್ಟು ಗುಂಪಿನ ನಾಣ್ಯಗಳಲ್ಲಿ ಮಹಡಿಗಳುಳ್ಳ ಮತ್ತು ಗೋಪುರಗಳಂತಿರುವ ಚಿತ್ರಣಗಳು ಕಂಡುಬರುತ್ತವೆ. ಇದನ್ನು ಜೆ.ಎನ್.ಬೆನರ್ಜಿಯಾ ಅವರು 'ಇವು ಸ್ತೂಪಗಳಲ್ಲ, ಆದರೆ ಶೈವ ಚಿತ್ರಗಳನ್ನು ಅಥವಾ ಲಿಂಗದ ಚಿಹ್ನೆಗಳನ್ನು ಒಳಗೊಂಡಿರುವ ಶೈವ ದೇವಾಲಯಗಳು'. ಇವು ಹಿಂದೂ ದೇವಾಲಯಗಳ ಪ್ರಾಚೀನ ನಿರೂಪಣೆಗಳಾಗಿವೆ ಎಂದು ಹೇಳಿದ್ದಾರೆ.[೨೯]

ಕ್ರಿಪೂ.ಒಂದನೇ ಶತಮಾನಕ್ಕೆ ಸೇರಿದ ಲಿಂಗವೊಂದು ಭೀಟಾ ಎಂಬಲ್ಲಿ ದೊರೆತಿದ್ದು ಪ್ರಸ್ತುತ ಲಖನೌ ವಸ್ತುಸಂಗ್ರಹಾಲಯದ ಸಂರಕ್ಷಣೆಯಲ್ಲಿದೆ. ಇದನ್ನು ಆರ್.ಡಿ.ಬ್ಯಾನರ್ಜಿಯವರು ದೀರ್ಘ ವಿವರಣೆಯನ್ನು ನೀಡಿ ಇದೊಂದು ಪ್ರಮುಖ ಲಿಂಗವಾಗಿದ್ದು, ಶಿವನ ಈಶಾನ, ತತ್ಪುರುಷ, ಅಘೋರ, ವಾಮದೇವ ಮತ್ತು ಸದ್ಯೋಜಾತ ಎಂಬ ಪಂಚಮುಖ ಬಿಂಬಗಳನ್ನು ಹೊಂದಿರುವ ಲಿಂಗ ಹಾಗೂ ಇದರೊಂದಿಗೆ ಶಾಸನವಿರುವುದು ಅವರ ಪ್ರಾಮುಖ್ಯತೆಯನ್ನು ಹೆಚ್ಚಿಸಿದೆ ಎಂದು ಹೇಳಿದ್ದಾರೆ.[೩೦] ಈ ಶಿವಲಿಂಗದಿಂದ ಕ್ರಿ.ಶ.ಪೂ.೧ನೇ ಶತಮಾನದ ವೇಳೆಗಾಗಲೇ ಶಿವನ ಲಿಂಗರೂಪವಲ್ಲದೆ ಪಂಚಮುಖ ಲಿಂಗಗಳ ಆರಾಧನೆ ಇತ್ತು ಎಂಬುದು ಸ್ಪಷ್ಟವಾಗುತ್ತದೆ. ಹೀಗೆ ಈ ಮೇಲಿನ ಎಲ್ಲ ವಿವರಗಳಿಂದ ಕ್ರಿಪೂ.೧–೨ನೇ ಶತಮಾನಗಳಲ್ಲಿ ಶಿವನು ಲಿಂಗರೂಪದಲ್ಲಿ,

ಮಾನುಷರೂಪದಲ್ಲಿ ಹಾಗೂ ಪಂಚಮುಖಗಳನ್ನು ತೋರಿಸಿರುವುದಲ್ಲದೆ ಆತನನ್ನು ವಾಹನದೊಂದಿಗೆ ಮತ್ತು ಪತ್ನಿ ಸಮೇತನಾಗಿಯೂ ಕಂಡುಬಂದಿರುವನು. ಇದು ಶೈವಧರ್ಮದ ವ್ಯಾಪಕತೆ ಮತ್ತು ಪ್ರಾಮುಖ್ಯತೆಯನ್ನು ತಿಳಿಸುತ್ತದೆ.

## ಗುಪ್ತರ ಕಾಲದಲ್ಲಿ ಶಿವ

ಗುಪ್ತರು ಕ್ರಿ.ಶ.೪–೬ನೇ ಶತಮಾನದಲ್ಲಿ ಉತ್ತರಭಾರತವನ್ನು ಆಳಿದ ಪ್ರಮುಖ ಅರಸರು. ಇವರ ಕಾಲದಲ್ಲಿ ಎಲ್ಲ ಕ್ಷೇತ್ರಗಳಲ್ಲೂ ಅಭಿವೃದ್ಧಿ ಕಂಡುಬರುವುದರಿಂದ ಇವರ ಕಾಲವನ್ನು ಭಾರತ ಇತಿಹಾಸದ ಸುವರ್ಣಯುಗ ಎಂದು ಕರೆಯಲಾಗಿದೆ. ಗುಪ್ತರ ಕಾಲದಲ್ಲಿ ಜೈನ, ಬೌದ್ಧ, ಶೈವ ಮತ್ತು ವೈಷ್ಣವ ಧರ್ಮಗಳು ಪ್ರಾಮುಖ್ಯತೆ ಪಡೆದಿದ್ದವು. ಇವರು ಶೈವ ಮತಾವಲಂಬಿಗಳಾಗಿದ್ದರು ಎಂಬುದಕ್ಕೆ ಇವರ ನಾಣ್ಯಗಳು ಹಾಗೂ ಅರಸರ ಹೆಸರುಗಳು ಸಾಕ್ಷಿಯಾಗಿವೆ. ಗುಪ್ತ ಅರಸರಾದ ಕುಮಾರಗುಪ್ತ ಮತ್ತು ಸ್ಕಂದಗುಪ್ತರು ಶೈವ ಆರಾಧಕರಾಗಿದ್ದರು. ಇದನ್ನು ಇವರು ಟಂಕಿಸಿದ ನಾಣ್ಯಗಳಿಂದ ಸ್ಪಷ್ಟೀಕರಿಸಬಹುದು. ಕುಮಾರಗುಪ್ತನು ಕಾರ್ತಿಕೇಯನ ಚಿತ್ರವುಳ್ಳ ಚಿನ್ನದ ನಾಣ್ಯಗಳನ್ನು ಹೊರತಂದನು. ಹಾಗೂ ಬೆಳ್ಳಿಯ ನಾಣ್ಯಗಳ ಮೇಲೆ ಕಾರ್ತಿಕೇಯನ ವಾಹನವಾದ ನವಿಲಿನ ಚಿತ್ರವನ್ನು ಅಚ್ಚು ಹಾಕಿಸಿರುವನು.

ಉಳಿದಿರುವ ಗುಪ್ತರ ದೇವಾಲಯಗಳಲ್ಲಿ ಲಿಂಗವೇ ಪ್ರಧಾನ ವಿಗ್ರಹವಾಗಿದೆ. ಶೈವ ಧರ್ಮದ ಉಪಪಂಗಡವಾದ ಪಾಶುಪತದ ಅಭಿವೃದ್ಧಿಯಿಂದಾಗಿ ಶೈವಾರಾಧನೆಯು ಇನ್ನೂ ವಿಸ್ತಾರಗೊಂಡಿತು. ಮೊದಲನೇ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದ ಈ ಮತವು ಸ್ಥಾಪಕ ಲಕುಲೀಶನಿಂದ ಪ್ರಾಮುಖ್ಯತೆ ಪಡೆಯಿತು. ಶಿಲ್ಪಗಳಲ್ಲಿ ನವ ದೆಹಲಿಯ ವಸ್ತುಸಂಗ್ರಹಾಲಯದಲ್ಲಿ ಭೋಪಾಲದ ಪ್ರಾಂತೀಯ ಶೈಲಿಯಲ್ಲಿರುವ ಶಿವ–ವಿಷ್ಣುವಿನ ಸಂಯುಕ್ತ ಶಿಲ್ಪ(ಹರಿಹರ)ವೇ ಪ್ರಾಚೀನ ಶಿಲ್ಪವಾಗಿದೆ.[೨೦] ಈ ನಾಣ್ಯ ಹಾಗೂ ಶಿಲ್ಪಗಳಲ್ಲದೆ ಹಲವು ಶೈವ ದೇವಾಲಯಗಳು ಕಂಡುಬರುತ್ತವೆ. ಉದಾಹರಣೆಗೆ ನಾಚ್ನಾ ಕುಠಾರದ ಪಾರ್ವತಿ ದೇವಾಲಯ ಭೂಮಾರದ ಶಿವದೇವಾಲಯ, ಉದಯಗಿರಿಯ ದುರ್ಗ ಮತ್ತು ಮಹೀಷಮರ್ದಿನಿ ಶಿಲ್ಪ, ಉದಯಗಿರಿಯ ನಾಲ್ಕನೇ ಗುಹೆಯಲ್ಲಿ ಏಕಮುಖಲಿಂಗ ಕಂಡುಬರುತ್ತದೆ. ಹಾಗೆಯೇ ಬರೋಡದ ವಸ್ತುಸಂಗ್ರಹಾಲಯದಲ್ಲಿರುವ ಏಕಮುಖಲಿಂಗ, ಖೋಹ್ ಭೂಮಾರದ ಶಂಕರಗಡದ ಏಕಮುಖಲಿಂಗಗಳು ಗುಪ್ತರ ಕಾಲದ ಕುರುಹುಗಳಾಗಿವೆ. ಅಲ್ಲದೆ ವಿರಂಚಿಪುರಂನಲ್ಲಿರುವ ಪಂಚಮುಖಲಿಂಗ ಹಾಗೂ ಮುಖಲಿಂಗದ ಮುಖಲಿಂಗವು ಗುಪ್ತರ ನಂತರ ಕಾಲದ ಉದಾಹರಣೆಗಳಾಗಿವೆ.[೨೧] ಹೀಗೆ ಗುಪ್ತರ ಕಾಲದಲ್ಲಿ ಇನ್ನಿತರ ಧರ್ಮಗಳೊಂದಿಗೆ ಶೈವಧರ್ಮವು ತನ್ನದೇ ಆದ ಸ್ಥಾನವನ್ನು ಉಳಿಸಿಕೊಂಡು ಬಂದಿತೆಂದು ಹೇಳಬಹುದು.

## ದಕ್ಷಿಣ ಭಾರತದಲ್ಲಿ ಶೈವಧರ್ಮ

ಅಧ್ಯಯನ ಅನುಕೂಲಕ್ಕಾಗಿ ಹಾಗೂ ಭೌಗೋಳಿಕ ಭಿನ್ನತೆಯಿಂದಾಗಿ ಭಾರತವನ್ನು ಉತ್ತರ ಭಾರತ ಮತ್ತು ದಕ್ಷಿಣ ಭಾರತ ಎಂದು ವಿಂಗಡಿಸಿ ಅಧ್ಯಯನ ನಡೆಸಲಾಗುತ್ತದೆ. ದಕ್ಷಿಣ

ಭಾರತವು ಧಾರ್ಮಿಕ ಹಿನ್ನೆಲೆಯಲ್ಲಿ ಅತ್ಯಂತ ಪ್ರಾಮುಖ್ಯತೆ ಹೊಂದಿದೆ ಎಂದು ಹೇಳಬಹುದು. ಪ್ರಾಚೀನ ಭಾರತವು ಉತ್ತರದಲ್ಲಿ ಬೌದ್ಧ ಧರ್ಮದ ಪರಾಕಾಷ್ಠೆಯನ್ನು ಕಂಡಿದ್ದರೆ ದಕ್ಷಿಣದಲ್ಲಿ ಶೈವ, ವೈಷ್ಣವ ಹಾಗೂ ಜೈನ ಧರ್ಮಗಳು ತಮ್ಮ ಪರಮಾವಧಿಯ ಕಾಲವನ್ನು ಕಂಡವು. ಇವುಗಳ ಆಶ್ರಯದಾತರಾಗಿ ಹಾಗೂ ಅನುಸರಣೆಗಾರರಾಗಿ ಹಲವು ಅರಸುಮನೆತಗಳು ತಮ್ಮ ತಮ್ಮ ಆಳ್ವಿಕೆಯ ಕಾಲದಲ್ಲಿ ಅವರದ್ದೆಂದು ಹೇಳಿಕೊಳ್ಳುವಂತಹ ಭಿನ್ನ-ವಿಭಿನ್ನ ವಾಸ್ತುಶೈಲಿಯ ದೇವಾಲಯ ಹಾಗೂ ಶಿಲ್ಪಗಳನ್ನು ರಚಿಸಿ ಹೋಗಿರುವರು. ಇಂದು ವಿದ್ವಾಂಸರು ಆ ಶಿಲ್ಪಗಳನ್ನು ಹಾಗೂ ವಾಸ್ತುಶೈಲಿಯ ಆಧಾರದ ಮೇಲೆ ಇಂತಹುದೇ ಅರಸರ ಆಳ್ವಿಕೆಯಲ್ಲಿ ನಿರ್ಮಾಣ ಗೊಂಡಿದುದು ಎಂದು ಹೇಳುವಷ್ಟು ಅವುಗಳು ತಮ್ಮತನವನ್ನು ಹೊಂದಿವೆ. ಹಾಗೂ ಇವುಗಳ ಆಧಾರದ ಮೇಲೆಯೇ ಅಂದಿನ ಧಾರ್ಮಿಕ ಹಾಗೂ ಸಾಮಾಜಿಕ ಜೀವನವನ್ನು ತಿಳಿಸಿರುವರು. ದಕ್ಷಿಣದಲ್ಲಿ ಇಂತಹ ಹಲವು ಮನೆತನಗಳು ಕಂಡುಬರುತ್ತವೆ. ಅವುಗಳನ್ನು ಹಾಗೂ ಅಂದಿನ ಶೈವ ಧರ್ಮವನ್ನು ಈ ಕೆಳಗೆ ವಿವರಿಸಲಾಗಿದೆ.

**ಶಾತವಾಹನರ ಕಾಲದಲ್ಲಿ ಶಿವ**

ದಕ್ಷಿಣದಲ್ಲಿ ಮೌರ್ಯರ ನಂತರ ಆಳಿದ ಪ್ರಮುಖ ಅರಸು ಮನೆತನವೆಂದರೆ ಶಾತವಾಹನ. ಇವರನ್ನು ದಕ್ಷಿಣಾಪಥರೆಂದು ಹಾಗೂ ಆಂಧ್ರಭೃತ್ಯರೆಂದು ಕರೆಯುತ್ತಾರೆ. ಇವರ ಕಾಲದಲ್ಲಿ ಬೌದ್ಧಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿದ್ದರೂ ಶೈವ ಧರ್ಮವನ್ನು ಕಡೆಗಣಿಸಿರಲಿಲ್ಲ ಎಂಬುದು ಪುರಾತತ್ವ ಆಧಾರಗಳಿಂದ ತಿಳಿದುಬರುತ್ತದೆ. ಭಾರತದಲ್ಲಿಯೇ ಅತ್ಯಂತ ಪ್ರಾಚೀನ ಲಿಂಗಗಳಲ್ಲೊಂದು ಎಂದು ಹೇಳಲಾಗಿರುವ ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಕಾಳಹಸ್ತಿ ತಾಲೂಕಿನ ಗುಡಿಮಲ್ಲಂನ ಪರಶುರಾಮೇಶ್ವರ ದೇವಾಲಯದಲ್ಲಿನ ಶಿವನ ವ್ಯಕ್ತಾವ್ಯಕ್ತ ರೂಪವನ್ನು ಟಿ.ಎ.ಗೋಪಿನಾಥರಾವ್ ರವರು[೩೩] ಗುರುತಿಸಿ ಇದು ಕ್ರಿ.ಶ.ಸುಮಾರು ೧ನೇ ಶತಮಾನಕ್ಕೆ ಅಂದರೆ ಶಾತವಾಹನ ಕಾಲಕ್ಕೆ ಸೇರಿದುದಾಗಿದೆ ಎಂದು ಹೇಳಿರುವರು. ಅಲ್ಲದೆ ಈ ಲಿಂಗದ ಕುರಿತು "It is one of the most perfect pieces of sculpture of its class and is of great value in connection with the history and nature of the linga worship" ಎಂದು ಹೇಳಿರುವರು. ಇವರ ನಂತರ ಈ ದೇವಾಲಯ ಕುರಿತು ಸಂರಕ್ಷಣಾಕಾರ್ಯ ಹಾಗೂ ಹೆಚ್ಚಿನ ಅಧ್ಯಯನ-ಕೈಗೊಂಡ ಐ.ಕೆ.ಶರ್ಮಾರವರು ಈ ಲಿಂಗವು ಪುರಾತತ್ವೀಯ ಆಕರಗಳ ಆಧಾರದ ಮೇಲೆ ಕ್ರಿಪೂ.ಸುಮಾರು ೨ನೇ ಶತಮಾನದ್ದೆಂದು, ಇದರ ಕಾಲ ಅದಕ್ಕಿಂತ ಮುಂದೆ ಹೋಗಲಾರದೆಂದು ಹೇಳಿರುವರು.[೩೪]

ಇವರ ಕಾಲದ ಪ್ರಾಚೀನ ದೇವಾಲಯವೊಂದು ಗದಗ ಜಿಲ್ಲೆಯ ನರಗುಂದ ತಾಲೂಕಿನ ವಾಸನ ಗ್ರಾಮದಲ್ಲಿದ್ದುದರ ಬಗ್ಗೆ ಶಾಸನ ಉಲ್ಲೇಖವಿದೆ. ಈ ಪ್ರಾಕೃತ ಶಾಸನವು ವಾಸಿಷ್ಠಿಪುತ್ರ ಪುಳುಮಾವಿಯ ಕಾಲದ್ದಾಗಿದ್ದು ಇದರಲ್ಲಿ ಮಹಾದೇವ ಚಂಡಶಿವನ ದೇವಾಯತನ ಹಾಗೂ ಶಿಲ್ಪಿಯನ್ನು ಕುರಿತು ಉಲ್ಲೇಖಿಸುತ್ತದೆ. ಕರ್ನಾಟಕದಲ್ಲಿ ಇದುವರೆಗೂ ತಿಳಿದುಬಂದಿರುವ ಅತಿ

ಪ್ರಾಚೀನ ಶೈವ ದೇವಾಲಯದ ಉಲ್ಲೇಖ ಇದಾಗಿದೆ.[೩೫] ಹಾಗೆಯೇ ವಿಣ್ಣುಕಡ ಚುಟುಕುಲಾನಂದ ಸಾತಕರ್ಣಿಯ ಕ್ರಿ.ಶ.ಸುಮಾರು ೩ನೇ ಶತಮಾನದ ಶಾಸನವು ಮಲವಳ್ಳಿ ದೇವ ಎಂಬ ಶಿವ ದೇವಾಲಯದ ಉಲ್ಲೇಖ ಮಾಡುತ್ತದೆ.[೩೬] ಹಾಗೆ ಇದರಂತೆಯೇ ತಾಳಗುಂದದ ದೇವಾಲಯದಲ್ಲಿ ಶಾತವಾಹನರ ಸಾತಕರ್ಣಿಯು ಲಿಂಗವನ್ನು ಉಪಾಸಿಸಿದ್ದು ತಾಳಗುಂದ ಸ್ತಂಭಶಾಸನದಿಂದ ತಿಳಿದುಬರುತ್ತದೆ.[೩೭] ಶಾತವಾಹನರ ಇನ್ನೊಬ್ಬ ಅರಸ ಹಾಲನು ಸ್ವತಃ ಕವಿಯಾಗಿದ್ದು, ಶೈವ ಧರ್ಮೀಯನಾಗಿದ್ದನೆಂಬುದಕ್ಕೆ ಈತನು ರಚಿಸಿದ 'ಗಾಥಾಸಪ್ತಶತಿ'ಯಿಂದ ತಿಳಿಯಬಹುದು. ಈತನ ಸಪ್ತಶತಿಯು ಶಿವಸ್ತುತಿಯೊಂದಿಗೆ ಆರಂಭಗೊಂಡು ಶಿವಸ್ತುತಿಯೊಂದಿಗೆ ಕೊನೆಗೊಳ್ಳುತ್ತದೆ.[೩೮] ಹೀಗೆ ಶಾತವಾಹನರ ಕಾಲವು ಶೈವಾವಸ್ಥೆಯಲ್ಲಿದ್ದ ಶೈವ ಧರ್ಮ ಬೆಳೆಯಲು ಪ್ರೋತ್ಸಾಹಿಸಿದರೆಂದು ಈ ಮೇಲಿನ ವಿವರಣೆಗಳಿಂದ ತಿಳಿಯಬಹುದು.

## ಇಕ್ಷ್ವಾಕುಗಳ ಕಾಲದಲ್ಲಿನ ಶೈವ ಧರ್ಮ

ಶೈವ ಧರ್ಮವನ್ನು ಪ್ರೋತ್ಸಾಹಿಸಿ ಬೆಳೆಸಿದ ಪ್ರಾಚೀನ ಅರಸು ಮನೆತನಗಳಲ್ಲಿ ಇಕ್ಷ್ವಾಕುಗಳೂ ಪ್ರಮುಖರಾಗಿದ್ದಾರೆ. ಇಕ್ಷ್ವಾಕು ವಂಶದ ಸ್ಥಾಪಕನಾದ ಮಹಾರಾಜಾ ವಾಸಿಷ್ಠಿಪುತ್ರ ಶ್ರೀ ಚಂತಮೂಲನು ಮಹಾಸೇನ ಕಾರ್ತಿಕೇಯನ ಪರಮ ಭಕ್ತನಾಗಿದ್ದನು. ಇಕ್ಷ್ವಾಕುಗಳ ಮೂರನೇ ಅರಸನಾದ ವಾಸಿಷ್ಠಿಪುತ್ರ ಎಹವುಲ ಚಂತಮೂಲನ(ಕ್ರಿ.ಶ.೨೭೫–೩೪೦) ಕಾಲದಲ್ಲಿ ಶೈವಧರ್ಮವು ಹೆಚ್ಚು ಪ್ರಾಮುಖ್ಯತೆ ಪಡೆದು, ಹಲವು ದೇವಾಲಯಗಳು ನಿರ್ಮಾಣಗೊಂಡವು. ಇಕ್ಷ್ವಾಕುಗಳಲ್ಲಿಯೇ ಎಹವುಲನ ಕಾಲವು ಕಲೆ–ವಾಸ್ತುಶಿಲ್ಪಕ್ಕೆ ಸುವರ್ಣಯುಗ ಎನಿಸಿಕೊಂಡಿತು. ಇಲ್ಲಿ ಉತ್ತರವಾಹಿನಿಯಾಗಿ ಹರಿಯುತ್ತಿರುವ ಕೃಷ್ಣೆಯ ಬಲದಂಡೆಯಲ್ಲಿ ಶಾಸನಗಳು ಹಾಗೂ ನಾಣ್ಯಗಳ ಆಧಾರದ ಮೇಲೆ ಮಹಾದೇವ, ಪುಷ್ಪಭದ್ರ ನೋಡಗೀಶ್ವರ, ಅಷ್ಟಭುಜ, ಅಘೋರ ಮತ್ತು ಕಾರ್ತಿಕೇಯ ಹಾಗೂ ದೇವಸೇನೆಯರ ಒಟ್ಟು ಏಳು ಶೈವ ದೇವಾಲಯಗಳನ್ನು ಗುರುತಿಸಲಾಗಿದೆ. ಇವರು ಕಾರ್ತಿಕೇಯನಿಗೆ ಹೆಚ್ಚು ವಿಧೇಯರಾಗಿದ್ದು, ಆತನ ಆರಾಧಕರಾಗಿದ್ದರು. ಅಲ್ಲದೆ ನೊಡಗೀಶ್ವರ ದೇವಾಲಯದ ಸಂಕೀರ್ಣದಲ್ಲಿ ಹಲವು ಬಾಣಲಿಂಗಗಳು ದೊರೆತಿದ್ದು ಲಿಂಗಾರಾಧನೆಯನ್ನು ತಿಳಿಸುತ್ತವೆ.[೩೯] ಈ ವಿವರಗಳಿಂದ ಇಕ್ಷ್ವಾಕುಗಳ ಕಾಲದಲ್ಲೂ ಶೈವಧರ್ಮ ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿತ್ತೆಂದು ಹೇಳಬಹುದು. ಹಾಗೆಯೇ ಇವರ ನಂತರ ಕಾಲದಲ್ಲಿ ಕಂಡುಬರುವ ಚೆಜೆರ್ಲಾದಲ್ಲಿರುವ ಪ್ರಾಚೀನ ಗಜಪುಷ್ಠಾಕಾರದ ದೇವಾಲಯವು ಸಹ ಪ್ರಮುಖ ಶೈವ ದೇವಾಲಯಗಳಲ್ಲಿ ಒಂದು ಎಂದು ಪರಿಗಣಿಸಲ್ಪಟ್ಟಿದೆ. ಇಕ್ಷ್ವಾಕುಗಳ ನಂತರ ವಿಷ್ಣುಕುಂಡಿನ್ ಅರಸರು ಶೈವಧರ್ಮವನ್ನು ಮುಂದುವರಿಸಿಕೊಂಡು ಬಂದರು. ಎಲ್ಲೇಶ್ವರಂನ ಉತ್ಖನನದಲ್ಲಿ ದೊರೆತ ಶೈವ ದೇವಾಲಯ ಮತ್ತು ಹೈದರಾಬಾದ್‌ನ ಕೀಸರಿಗುಟ್ಟಾದಲ್ಲಿ ದೊರೆತ ಶೈವ ದೇವಾಲಯಗಳು[೪೦] ಇಟ್ಟಿಗೆಯ ರಚನೆಗಳಾಗಿದ್ದು ವಿಷ್ಣುಕುಂಡಿ ಅರಸು ಮನೆತನದ ಆಳ್ವಿಕೆಯ ಶೈವ ಧರ್ಮದ ಮೇಲೆ ಬೆಳಕು ಚೆಲ್ಲುತ್ತವೆ.

## ಪಲ್ಲವ ಕಾಲದಲ್ಲಿನ ಶೈವಧರ್ಮ

ಪಲ್ಲವ ದಕ್ಷಿಣದ ಪ್ರಾಚೀನ ಅರಸು ಮನೆತನಗಳಲ್ಲೊಂದು. ಬಾದಾಮಿ ಚಲುಕ್ಯರನ್ನು ಸೋಲಿಸಿದುದು ಇವರ ಇತಿಹಾಸದಲ್ಲಿ ಒಂದು ಮಹತ್ವದ ಸೈನಿಕ ಸಾಧನೆ ಎಂದು ಗುರುತಿಸಲ್ಪಡುತ್ತದೆ. ಹಾಗೂ ಇದು ಚಲುಕ್ಯರ ವಾಸ್ತುಶೈಲಿಯು ಪಲ್ಲವ ಕಲಾ ಶೈಲಿಗೆ ಪ್ರೇರಣೆ ನೀಡಿದವೆಂದು ಹೇಳಬಹುದು. ಇವರ ರಚನೆಗಳಲ್ಲಿ ಶೈವ ದೇವಾಲಯಗಳು ಸಾಕಷ್ಟು ಪ್ರಮಾಣದಲ್ಲಿ ಕಂಡುಬರುವುದರಿಂದ ಶೈವ ಧರ್ಮ ಇವರ ಕಾಲದಲ್ಲಿ ಪಾರಮ್ಯ ಪಡೆದಿತ್ತು ಎಂದು ತಿಳಿಯುತ್ತದೆ. ಅಲ್ಲದೆ ಇವರ ಕಾಲದಲ್ಲಿ ತಮಿಳು ಭಕ್ತಿಯುಗಕ್ಕೆ ಸೇರಿದ ನಾಯನ್ಮಾರರು ಇದ್ದುದು ಶೈವ ಧರ್ಮದ ಸ್ಥಿತಿಯನ್ನು ಗುರುತಿಸಬಹುದು. ಹಾಗೂ ಶಿವಸ್ಕಂದವರ್ಮ, ೨ನೇ ಸ್ಕಂದವರ್ಮ ಮುಂತಾದ ನಾಮಧೇಯ ಅರಸರು ಶೈವಧರ್ಮೀಯರಾಗಿದ್ದುದು ತಿಳಿದುಬರುತ್ತದೆ. ಇವರು ರಚಿಸಿದ ದೇವಾಲಯಗಳಲ್ಲಿ ಶೈವ ದೇವಾಲಯಗಳೇ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಮಾಮಲ್ಲನ ಕಾಲದ ಮಹಾಬಲಿಪುರಂನಲ್ಲಿರುವ ರಥಗಳೆಂದು ಕರೆಯುವ ಹಾಗೂ ಸ್ಥಳೀಯವಾಗಿ ಪಂಚ ಪಾಂಡವ ರಥಗಳೆಂದು ಕರೆಯಲ್ಪಡುವ ದೇವಾಲಯಗಳು ಶೈವ ಶಿಲ್ಪಗಳನ್ನು ಹೊಂದಿದುವಾಗಿವೆ. ಇವುಗಳಲ್ಲದೆ ಇಲ್ಲಿಯ ಬಯಲು ಬಂಡೆ ಶಿಲ್ಪಗಳು ಪ್ರಮುಖವಾಗಿದ್ದು, ಅದರಲ್ಲಿ ಭಗೀರಥನ ಅಥವಾ ಅರ್ಜುನನ ತಪಸ್ಸು(ಕಿರಾತಾರ್ಜುನೀಯ) ಎಂದು ಗುರುತಿಸಲಾಗಿರುವ ಶಿಲ್ಪ ಮುಖ್ಯವಾದುದು. ಮಾಮಲ್ಲನ ಕಾಲದ ನಂತರ ಗುಹಾವಾಸ್ತು ಕಡಿಮೆಯಾಗಿ ದೇವಾಲಯಗಳ ನಿರ್ಮಾಣ ಮಾಡಲಾರಂಭಿಸಿದರು. ಅದರಲ್ಲಿ ಮುಖ್ಯವಾದುವೆಂದರೆ ಮಹಾಬಲಿಪುರಂನ ಕಡಲತೀರ ದೇವಾಲಯ, ಕಂಚಿಯ ಕೈಲಾಸನಾಥ ಅಥವಾ ರಾಜಸಿಂಹೇಶ್ವರ ದೇವಾಲಯ, ಐರಾವತೇಶ್ವರ ದೇವಾಲಯ, ಮುಕ್ತೇಶ್ವರ ಮತ್ತು ಮಾತಂಗೇಶ್ವರ ದೇವಾಲಯಗಳು. ಪನೆಮಲೈನ ತಾಲಗೀರೀಶ್ವರ ದೇವಾಲಯ, ತಿರುತ್ತಣಿಯ ವಿರುತ್ತಾಣೇಶ್ವರ ದೇವಾಲಯ, ಪರಶುರಾಮೇಶ್ವರ, ಓರರಾಡಿನ ವಾಡಮಲ್ಲೇಶ್ವರ ದೇವಾಲಯ ಮುಂತಾದವು ಶೈವ ದೇವಾಲಯಗಳಾಗಿವೆ. ಇಷ್ಟು ಪ್ರಮಾಣದ ಶೈವ ದೇವಾಲಯಗಳ ನಿರ್ಮಾಣವು ಪಲ್ಲವರು ಶೈವಧರ್ಮಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿರುವುದನ್ನು ತಿಳಿಸುತ್ತವೆ. ಅಲ್ಲದೆ ಇವರ ರಚನಾ ಕ್ರಮವು ಮುಂದೆ ಚೋಳರಿಗೆ ಪ್ರೇರಣೆಯಾಯಿತೆಂದು ಹೇಳಬಹುದು.

ಪಲ್ಲವರ ಸಮಕಾಲೀನನಾದ ಅಥವಾ ಪಲ್ಲವರ ಕಾಲದಲ್ಲಿ ಜೀವಿಸಿದ್ದ ತಿರುಮೂಲರ್ ಎಂಬ ಲೇಖಕನು ತಿರುಮಂದಿರಮ್ ಎಂಬ ಕೃತಿಯನ್ನು ರಚಿಸಿರುವನು. ಇದರಲ್ಲಿ ಹಲವು ವಿಧದ ಶೈವ ಪ್ರಕಾರಗಳನ್ನು ತಿಳಿಸಿರುವನು. ಇದು ಪಲ್ಲವರ ಪೂರ್ವಕಾಲದ ಶೈವಾರಾಧನೆಯನ್ನು ತಿಳಿಸುತ್ತದೆಯಲ್ಲದೆ ವಿವಿಧ ಶೈವ ಶಾಖೆಗಳ ಮೂಲಕ ಶಿವಪೂಜೆಯು ಅಸ್ತಿತ್ವದಲ್ಲಿತ್ತೆಂಬುದನ್ನು ತಿಳಿಸುತ್ತದೆ. ಅಲ್ಲದೆ ಇದು ತಮಿಳು ದೇಶದ ಕತ್ತಲೆಯುಗವೆಂದು ಕರೆಯಲಾಗುವ ಕ್ರಿ.ಶ.೪, ೫, ೬ನೇ ಶತಮಾನಗಳಲ್ಲಿನ ಶೈವಧರ್ಮದ ಅಭಿವೃದ್ಧಿಯನ್ನು ತಿಳಿಯಲು ಬಹುತೇಕವಾಗಿ ಇರುವ ಏಕೈಕ ಆಕರವಾಗಿದೆ ಎಂಬ ಅಭಿಪ್ರಾಯವಿದೆ. ಹಾಗೂ ಪಲ್ಲವ ದೊರೆ ಮಹೇಂದ್ರವರ್ಮನ್

ನಿಂದ ಅಪರಾಜಿತವರ್ಮನವರೆಗೂ ಶೈವಾರಾಧನೆ ಇದ್ದುದನ್ನು ಕಾಣಬಹುದು. ಇವರು ನೀಡಿದ ಎಲ್ಲ ರಾಜದತ್ತಿಗಳಲ್ಲಿ ನಂದಿ ಮುದ್ರೆಯನ್ನು ಹಾಕಿಸಿರುವರು. ಇದು ಪಲ್ಲವರ ಕಾಲದ ಅಂತ್ಯದವರೆಗೂ ಮುಂದುವರೆಯಿತು. ಪಲ್ಲವ ಅರಸ ಮಹೇಂದ್ರವರ್ಮನ್ ಮೂಲತಃ ಒಬ್ಬ ಜೈನ. ಶೈವ ಸಂತ ಅಪ್ಪರ್ ಅವರ ಪ್ರಭಾವದಿಂದ ಶೈವಧರ್ಮಕ್ಕೆ ಮತಾಂತರ ಹೊಂದಿದನಲ್ಲದೆ ಅನೇಕ ಶೈವ ದೇವಾಲಯಗಳನ್ನು ನಿರ್ಮಿಸಿದನು. ಹಾಗೂ ಶೈವ ಧರ್ಮವು ರಾಜಧರ್ಮವಾಯಿತು.[೪೧] ಹೀಗೆ ದಕ್ಷಿಣದಲ್ಲಿ ಶೈವಧರ್ಮವು ಪಲ್ಲವ ಕಾಲದಲ್ಲಿ ಶೀಘ್ರಗತಿಯಿಂದ ಬೆಳೆಯಲು ಆರಂಭಿಸಿತೆಂದು ಹೇಳಬಹುದು. ಇದನ್ನು ಮುಂದೆ ಚೋಳರು ಸಹ ಮುಂದುವರೆಸಿದುದು ಅಧ್ಯಯನಗಳಿಂದ ತಿಳಿದುಬರುತ್ತದೆ.

## ಚೋಳರ ಕಾಲದಲ್ಲಿ ಶೈವಧರ್ಮ

ಚೋಳರದ್ದು ದಕ್ಷಿಣ ಭಾರತವನ್ನು ಆಳಿದ ಪ್ರಮುಖ ರಾಜಮನೆತನಗಳಲ್ಲೊಂದು. ಕಲೆ ಮತ್ತು ವಾಸ್ತುಶಿಲ್ಪಕ್ಕೆ ಇವರ ಕೊಡುಗೆ ಅಪಾರವಾದದ್ದು. ಅತಿ ಹೆಚ್ಚು ಹಾಗೂ ಬೃಹತ್ ದೇವಾಲಯಗಳನ್ನು ನಿರ್ಮಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಇವರು ಶೈವಾರಾಧಕರಾಗಿದ್ದರೆಂದು ಇವರ ಕಾಲದಲ್ಲಿ ನಿರ್ಮಿತವಾದ ದೇವಾಲಯಗಳಿಂದ ತಿಳಿಯಬಹುದು. ಇವರ ದೇವಾಲಯಗಳು ರಾಜಧಾನಿಯ ಕೇಂದ್ರಿತ ಪ್ರದೇಶದಲ್ಲಿ ಹೆಚ್ಚು ಕಂಡುಬರುತ್ತಿದ್ದು ತಮ್ಮ ಸಾಮ್ರಾಜ್ಯಾದ್ಯಂತ ಅಲ್ಲದೆ ಕೇರಳ, ಶ್ರೀಲಂಕ, ಕರ್ನಾಟಕ ಮತ್ತು ಆಂಧ್ರದೇಶಗಳಲ್ಲಿಯೂ ದೇವಾಲಯಗಳನ್ನು ನಿರ್ಮಿಸಿರುವುದನ್ನು ಕಾಣಬಹುದು. ಪೂರ್ವದ ಚೋಳದ ಅರಸರು ನಿರ್ಮಿಸಿದ ೮೦ ದೇವಾಲಯಗಳಲ್ಲಿ ೬೬ ದೇವಾಲಯಗಳು ಶಿವನಿಗೆ ಸಂಬಂಧಿಸಿದ್ದು. ಮಧ್ಯ ಚೋಳರ ಅರಸರು ನಿರ್ಮಿಸಿದ ೧೨೩ ದೇವಾಲಯಗಳಲ್ಲಿ ೧೦೨ ದೇವಾಲಯಗಳು ಶೈವಕ್ಕೆ ಸೇರಿದ್ದು, ಕೊನೆಯಲ್ಲಿನ ಚೋಳದ ಅರಸರು ೧೪೬ ದೇವಾಲಯಗಳನ್ನು ನಿರ್ಮಿಸಿದ್ದು, ಅದರಲ್ಲಿ ೧೧೯ ದೇವಾಲಯಗಳು ಶೈವದೇವಾಲಯಗಳಾಗಿವೆ. ಇದರಿಂದ ನಿರ್ಮಾಣಗೊಂಡ ಎಲ್ಲ ದೇವಾಲಯಗಳಲ್ಲಿ ೮೦% ರಷ್ಟು ದೇವಾಲಯಗಳು ಶಿವನಿಗೆ ಸಂಬಂಧಪಟ್ಟಂತಹುಗಳಿವೆ. ನಂತರದ ಸ್ಥಾನ ವಿಷ್ಣುವಿಗೆ ಸೇರಿದ್ದಾಗಿದ್ದು ೪೮ ದೇವಾಲಯಗಳು(೧೪.೬%) ಕಂಡುಬರುತ್ತವೆ. ಶೈವಧರ್ಮವನ್ನು ಉತ್ತುಂಗಕ್ಕೇರಿಸಿದ ಚೋಳ ರಾಜರುಗಳೆಂದರೆ ೧ನೇ ರಾಜರಾಜ, ೧ನೇ ಕುಲೋತ್ತುಂಗ, ೧ನೇ ಪಾರಾಂತಕ, ೩ನೇ ಕುಲೋತ್ತುಂಗ, ೧ನೇ ರಾಜೇಂದ್ರ, ಉತ್ತಮಚೋಳ ಮತ್ತು ವಿಕ್ರಮ ಚೋಳ, ಚೋಳರ ಶೈವ ದೇವಾಲಯಗಳು ಮಧ್ಯ ಮತ್ತು ನಂತರದ ಚೋಳರ ಕಾಲದಲ್ಲಿ ಅತ್ಯಂತ ಎತ್ತರ ಮತ್ತು ವಿಸ್ತಾರವಾಗಿ ನಿರ್ಮಾಣಗೊಂಡಿವೆ.(ಉದಾ: ತಂಜಾವೂರಿನ ರಾಜರಾಜೇಶ್ವರಂ, ಗಂಗೈಕೊಂಡ ಚೋಳಪುರಂ, ದಾರಾಸುರಂ, ತ್ರಿಭುವನಂನಲ್ಲಿರುವ ಕಂಪಹರೇಶ್ವರ) ಅಲ್ಲದೆ ಉರ್ಧ್ವಮುಖ ಮತ್ತು ತಿರ್ಯಙ್ಮುಖವಾಗಿ ವಿಸ್ತರಿಸಿರುವುದು ಹಾಗೂ ಅನೇಕ ಶೈವ ಮೂರ್ತಿಗಳನ್ನು ವಿವಿಧ ಭಾಗಗಳಲ್ಲಿ ಮುಖ್ಯವಾಗಿ ದೇವಕೋಷ್ಠಗಳಲ್ಲಿ ಬೃಹದಾಕಾರದ ಮೂರ್ತಿಗಳನ್ನು ಹೊಂದಿದ್ದರೆ ಉಳಿದ ಭಾಗಗಳಲ್ಲಿ ಸಣ್ಣ ಸಣ್ಣ ಶಿಲ್ಪಗಳನ್ನು ಕೆತ್ತಿರುವರು. ದೇವಾಲಯ ಮತ್ತು ಮೂರ್ತಿ ಶಿಲ್ಪಗಳ ಸಂಖ್ಯಾಶಾಸ್ತ್ರದ

ವಿಶ್ಲೇಷಣೆಯಿಂದಾಗಿ ಚೋಳರ ಧಾರ್ಮಿಕ ಇತಿಹಾಸದಲ್ಲಿ ಶೈವಧರ್ಮವು ಪ್ರಬಲ ಧರ್ಮವಾಗಿತ್ತೆಂಬುದು ತಿಳಿದುಬರುತ್ತದೆ. ವೈಷ್ಣವ ಗುರುಪರಂಪರೆ ಕಥೆಗಳು ರಾಮಾನುಜಚಾರ್ಯ ಮತ್ತು ಕುರುತ್ತಾಳ್ವಾರ್‌ಗೆ ಉಂಟಾದ ಶಿಕ್ಷೆಗಳು ಮತ್ತು ಚಿದಂಬರಂ ದೇವಾಲಯದಲ್ಲಿನ ವೈಷ್ಣವರ ಪದಚ್ಯುತಿ ಮಾಡಿದುದನ್ನು ಹೇಳುತ್ತವೆ. ಇದು ಪರೋಕ್ಷವಾಗಿ ಎರಡು ಪಂಥಗಳ ಜಗ್ಗಾಟ, ಎಂದರೆ ಶೈವಸಿದ್ಧಾಂತ ಮತ್ತು ಶ್ರೀವೈಷ್ಣವ ಪಂಥಗಳ ಆಚಾರ್ಯರುಗಳ ಮಧ್ಯೆ ನಡೆಯಿತೆಂಬುದನ್ನು ತಿಳಿಸುತ್ತದೆ. ಇದನ್ನು ರಾಮಾನುಜಚಾರ್ಯರು ಎದುರಿಸಲಾಗದೆ ಶ್ರೀರಂಗಂದಿಂದ ಹೊಯ್ಸಳ ದೇಶಕ್ಕೆ ವಲಸೆ ಹೋದರು.[೪೨] ಇಲ್ಲಿ ಶೈವಧರ್ಮವು ಎಷ್ಟು ಪ್ರಬಲವಾಗಿತ್ತೆಂದರೆ ಅನ್ಯಧರ್ಮದ ಏಳ್ಗೆಗೆ ಅವಕಾಶವನ್ನೇ ನೀಡಲಿಲ್ಲ. ಇದು ರಾಮಾನುಜಚಾರ್ಯರ ವಿಷಯದಲ್ಲಿ ಸ್ಪಷ್ಟವಾಗಿ ತಿಳಿಯುತ್ತದೆ. ಆಗಿನ ಶ್ರೀರಂಗಂನ ರಾಜನಾದ ಕುಲೋತ್ತುಂಗಚೋಳ ಶೈವಭಕ್ತನಾಗಿದ್ದನು. ಈತ ರಾಮಾನುಜರ ವೈಷ್ಣವ ಸಿದ್ಧಾಂತಕ್ಕೆ ಕೋಪಗೊಂಡ.[೪೩] ಈತನು ಶಿವನೇ ಶ್ರೇಷ್ಠನೆಂಬ ಮಾತನ್ನು ರಾಮನುಜರಿಂದ ಹೊರಡಿಸಬೇಕೆಂದು ಹಟತೊಟ್ಟು ಅವರಿಗೆ ಹೇಳಿ ಕಳುಹಿಸಿದಾಗ ರಾಜನ ದುರುದ್ದೇಶವನ್ನು ಅರಿತ ರಾಮಾನುಜರ ಶಿಷ್ಯ ಕೂರೇಶನು ತಾನೇ ರಾಮಾನುಜರೆಂದು ಹೇಳಿಕೊಂಡು ರಾಜನ ಆಸ್ಥಾನಕ್ಕೆ ಹೋಗುತ್ತಾನೆ. ಅಲ್ಲಿ ಶಿವಪಾರಮ್ಯವನ್ನು ಒಪ್ಪದ ಕೂರೇಶನ ಎರಡೂ ಕಣ್ಣುಗಳನ್ನು ರಾಜನು ಕೀಳಿಸಿಬಿಡುತ್ತಾನೆ. ಅಪಾಯವನ್ನರಿತ ರಾಮಾನುಜರು ಚೋಳನಾಡಿನಿಂದ ಹೊಯ್ಸಳನಾಡನ್ನು ಪ್ರವೇಶಿಸುತ್ತಾರೆ.[೪೪] ಹೀಗೆ ಅಲ್ಲಿ ವೈಷ್ಣವ ಧರ್ಮವನ್ನು ಹತ್ತಿಕ್ಕಿ ಶೈವಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ನೀಡಲಾಯಿತು. ಈ ಎಲ್ಲ ಅಂಶಗಳಿಂದ ಹೊಯ್ಸಳರ ಸಮಕಾಲೀನರಾದ ಚೋಳರ ಕಾಲದಲ್ಲಿ ಶೈವಧರ್ಮ ಉತ್ತುಂಗದ ಶಿಖರದಲ್ಲಿತ್ತು ಎಂದು ತಿಳಿಯುತ್ತದೆ.

### ಕರ್ನಾಟಕದಲ್ಲಿ ಶೈವಧರ್ಮ

ಕರ್ನಾಟಕವು ವಿವಿಧ ಭಿನ್ನತೆಗಳನ್ನು ಹಾಗೂ ವೈಶಿಷ್ಟ್ಯಗಳನ್ನು ಹೊಂದಿದ ರಾಜ್ಯ. ಪ್ರಾಗೀತಿಹಾಸ ಕಾಲದಿಂದಲೇ ಗುರುತಿಸಿಕೊಳ್ಳುವ ಪ್ರಾಚೀನತೆಯನ್ನು ಹೊಂದಿರುವ ಇದು ಭಾರತೀಯ ಚರಿತ್ರೆಯನ್ನು ಕಟ್ಟುವಲ್ಲಿ ಗಮನೀಯ ಪಾತ್ರವಹಿಸಿದೆ. ಇಲ್ಲಿ ಹಲವು ಅರಸು ಮನೆತನಗಳು ವಿವಿಧ ಕಾಲಘಟ್ಟಗಳಲ್ಲಿ ಆಳ್ವಿಕೆ ನಡೆಸಿದ್ದು, ಹಲವು ಧರ್ಮಗಳನ್ನು ಪೋಷಿಸಿ ಅವುಗಳ ಮೂಲಕ ಕಲೆ ಮತ್ತು ವಾಸ್ತುಶಿಲ್ಪಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದೆ. ವಿವಿಧ ಧರ್ಮಗಳು ಇಲ್ಲಿನ ಅರಸುವಂಶಗಳ ರಾಜಾಶ್ರಯದಲ್ಲಿ ಬೆಳೆದು ಸಮೃದ್ಧಿಯನ್ನು ಕಂಡಿವೆ. ಅದರಲ್ಲಿ ಶೈವಧರ್ಮವೂ ಒಂದು. ಕರ್ನಾಟಕದಲ್ಲಿ ವಿವಿಧ ಅರಸುಮನೆತನಗಳ ಕಾಲಘಟ್ಟದಲ್ಲಿ ಶೈವ ಧರ್ಮ ಬೆಳೆದುದನ್ನು ಈ ಕೆಳಗೆ ವಿವರಿಸಲಾಗಿದೆ.

### ಕದಂಬರ ಕಾಲದ ಶೈವಧರ್ಮ

ಕರ್ನಾಟಕದ ಇತಿಹಾಸವನ್ನು ಕದಂಬರ ಆಳ್ವಿಕೆಯಿಂದ ಗುರುತಿಸಲಾಗುತ್ತದೆ. ಇವರ ಕಾಲದಲ್ಲಿ ಜೈನ ಧರ್ಮಕ್ಕೆ ಹೆಚ್ಚು ಒತ್ತು ಕೊಟ್ಟಿದ್ದರೂ ಶೈವಾರಾಧಕರೂ ಆಗಿದ್ದರೆಂಬುದು ಕೆಲವೊಂದು ಆಧಾರಗಳಿಂದ ದೃಢಪಡುತ್ತದೆ. ಚಂದ್ರವಳ್ಳಿಯಲ್ಲಿ ದೊರೆತ ಶಿವಲಿಂಗ ಹಾಗೂ ಗೋವೆಯ ಮಪುಸಾ ತಾಲೂಕಿನ ಅರವೇಲಂನಲ್ಲಿ ದೊರೆತ ಲಿಂಗಗಳು ಇವರ ಕಾಲದ

ಪ್ರಮುಖ ಶಿವಲಿಂಗಗಳಾಗಿವೆ.[೪೫] ಈ ಹಿಂದೆ ಪ್ರಸ್ತಾಪಿಸಿದ ಮಳವಳ್ಳಿಯ ವಿಣ್ಣುಕಡ ಚುಟುಕುಲಾನಂದ ಸಾತಕರ್ಣಿಯ ಶಾಸನವಿರುವ ಸ್ತಂಭದ ಮೇಲೆ ಕದಂಬರನ್ನು ಉಲ್ಲೇಖಿಸುವ ಮತ್ತೊಂದು ಶಾಸನವಿದೆ. ಇದು ಪ್ರಾಕೃತ ಭಾಷೆಯಲ್ಲಿದೆ. ಇದರ ಕಾಲ ಕ್ರಿ.ಶ.ಸುಮಾರು ೩ ಅಥವಾ ೪ ಶತಮಾನವಿರಬೇಕೆಂದು ಭಾವಿಸಲಾಗಿದೆ.[೪೬] ಈ ಶಾಸನದಿಂದ ಕದಂಬ ಅರಸನೊಬ್ಬ ಮಳವಳ್ಳಿ ಎಂಬ ಶೈವ ದೇವಾಲಯವನ್ನು ಆರಾಧಿಸಿ ದಾನ ನೀಡಿರುವುದನ್ನು ತಿಳಿಯಬಹುದು. ಕದಂಬರ ಮೊದಲ ಅರಸನಾದ ಮಯೂರಶರ್ಮನ ಹೆಸರು ಸ್ಕಂದ(ಕಾರ್ತಿಕೇಯ)ನನ್ನು ಸೂಚಿಸುತ್ತದೆ.[೪೭] ಕದಂಬರ ಆಳ್ವಿಕೆಯ ಪ್ರದೇಶದಲ್ಲಿ, ಪ್ರಸಿದ್ಧವಾದ ಶಿವದೇವಾಲಯವೊಂದು ಶಿವಮೊಗ್ಗದ ತಾಳಗುಂದದಲ್ಲಿದೆ. ಇಂದು ಪ್ರಣವೇಶ್ವರ ದೇವಾಲಯವೆಂದು ಕರೆಯಲಾಗುವ ಈ ದೇಗುಲದ ಮುಂದೆ ಕಾಕುಸ್ಥವರ್ಮನ ಪ್ರಶಸ್ತಿಯಿರುವ (ಕ್ರಿ.ಶ.೫ನೇ ಶತಮಾನ) ಶಿಲಾಸ್ತಂಭ ಶಾಸನವಿದೆ. ಕಾಕುಸ್ಥವರ್ಮನ ಪ್ರಶಸ್ತಿಯೇ ಈ ಶಾಸನದ ಮುಖ್ಯ ವಿಷಯವಾಗಿದ್ದರೂ ಅಲ್ಲಿ ಪ್ರಸ್ತಾಪಿತವಾಗಿರುವ ಕೆಲವು ವಿಷಯಗಳು ತಾಳಗುಂದದ ಶೈವ ಪರಂಪರೆಯ ಕೆಲವು ಪ್ರಮುಖ ಮಾಹಿತಿಗಳನ್ನು ಹೊರಗೆಡಹುತ್ತವೆ. ದೇವತೆಯನ್ನು ಭಗವತ್ ಮಹಾದೇವ ಎಂಬ ಹೆಸರಿನಿಂದ ಕರೆಯಲಾಗಿದೆ. ಮುಂದೆ ಸಾತಕರ್ಣಿ ಮುಂತಾದ ಅರಸರು ಈ ದೇವತೆಯನ್ನು ಪೂಜಿಸಿದ್ದರೆಂದು ಹೇಳಿರುವುದರಿಂದ ಇದರ ಪ್ರಾಚೀನತೆಯೂ ಕನಿಷ್ಠ ಸಾತವಾಹನರ ಕಾಲಕ್ಕೆ ಹೋಗುತ್ತದೆ.[೪೮] ಈ ಸ್ತಂಭಶಾಸನದಲ್ಲಿ ಇಲ್ಲಿಯ ದೇವರನ್ನು ಶಿವ, ಸ್ಥಾಣು, ಭವ, ಮಹಾದೇವ, ಅದಿದೇವ, ಎಂದೆಲ್ಲಾ ಸಂಬೋಧಿಸಲಾಗಿದೆ. ಶಾಸನವು "ನಮಃ ಶಿವಾಯಃ" ಎಂಬ ಪಂಚಾಕ್ಷರದಿಂದ ಆರಂಭವಾಗುತ್ತದೆ. ಶಾಸನದಲ್ಲಿ ಶಿವನ ಸಂಕ್ಷಿಪ್ತ ಆದರೆ ಸುಂದರ ವರ್ಣನೆಯಿದೆ. ಕದಂಬ ಅರಸು ರವಿವರ್ಮನ ದೇಶಮಾತ್ಯನೂ ವೈದ್ಯ ಅಮಾತ್ಯನೂ ಆದ ನೀಲಕಂಠನು ಸಾರೆಯಲ್ಲಿ ಒಂದು ಮಹಾದೇವ ದೇವಾಲಯವನ್ನು ಕಟ್ಟಿಸಿದನು. ಈ ಸಂದರ್ಭದಲ್ಲಿ ರುದ್ರ–ಶಿವನನ್ನು ಭಿಷಜ್ ಅಂದರೆ ಸರ್ವರೋಗ ಪರಿಹಾರ ಮಾಡುವವನೆಂದು ವರ್ಣಿಸಿರುವುದು ಗಮನಾರ್ಹ. ಇನ್ನೊಂದು ಮಹಾದೇವ ದೇವಾಲಯವು ಇಂಗುಣಗ್ರಾಮದಲ್ಲಿದ್ದಿತು. ಗೋವೆಯ ಅರವೇಲಂದಲ್ಲಿ ಮೃಗೇಶವರ್ಮನ ಕಾಲದಲ್ಲಿ ಒಂದು ಹರ ದೇವಾಲಯವಿದ್ದಿತು. ಹೀಗೆ ಹಲವಾರು ಶಿವ ದೇವಾಲಯಗಳಿದ್ದುದಲ್ಲದೆ ಕೇಕೆಯ ಶಿವನಂದವರ್ಮ ಮತ್ತು ಕದಂಬ ಹರಿವರ್ಮರು ತಮ್ಮನ್ನು ಪರಮ ಮಾಹೇಶ್ವರರೆಂದು ಕರೆದುಕೊಂಡಿದ್ದರು. ಪಶುಪತಿ, ರುದ್ರಾರ್ಯ, ನಂದಾರ್ಯ, ಶಿವಶರ್ಮ, ಪಶುಪತಿ ಶರ್ಮ, ಶಿವನಂದವರ್ಮ, ಭವಸ್ವಾಮಿ, ತ್ರ್ಯಂಬಕಶರ್ಮ, ಭೂತಶರ್ಮ, ಮೊದಲಾದ ಹೆಸರುಗಳನ್ನು ಜನರಿಟ್ಟುಕೊಳ್ಳುತ್ತಿದ್ದುದು ಸಾಮಾನ್ಯ.[೪೯] ಹೀಗೆ ಈ ಎಲ್ಲಾ ದೇವಾಲಯಗಳ ಉಲ್ಲೇಖದಿಂದ ಕದಂಬರ ಕಾಲದಲ್ಲಿನ ಶೈವಧರ್ಮವನ್ನು ತಿಳಿಯಬಹುದು.

### ಗಂಗರ ಕಾಲದಲ್ಲಿನ ಶೈವಧರ್ಮ

ಗಂಗರು ಕರ್ನಾಟಕದ ದಕ್ಷಿಣ ಭಾಗದಲ್ಲಿ ಬಹು ದೀರ್ಘಕಾಲ ರಾಜ್ಯವಾಳಿದ ಮನೆತನವಾಗಿದೆ. ಇವರ ರಾಜಧಾನಿ ತಲಕಾಡು. ಗಂಗರ ಬಗ್ಗೆ ಅಧ್ಯಯನ ನಡೆಸಿರುವ ಬಹುತೇಕ ವಿದ್ವಾಂಸರು ಅವರನ್ನು ಜೈನರೆಂದೇ ಗುರುತಿಸಿ ಜೈನಧರ್ಮದ ಪೋಷಕರೆಂಬಂತೆ ಪರಿಗಣಿಸಿದ್ದಾರೆ. ಆದರೆ

ಪಲ್ಲವರ ಪ್ರಭಾವದಲ್ಲಿದ್ದಾಗ ಭಾಗವತ ಮತಕ್ಕೂ, ಚಾಳುಕ್ಯರ ಅಧೀನದಲ್ಲಿದ್ದಾಗ ಭಾಗವತ ಮತ್ತು ಶೈವಧರ್ಮಕ್ಕೂ, ರಾಷ್ಟ್ರಕೂಟರ ಅಧೀನದಲ್ಲಿದ್ದಾಗ ಜೈನ ಮತ್ತು ವೈಷ್ಣವ, ಶಾಕ್ತಮತಗಳಿಗೂ ಇವರು ಪ್ರೋತ್ಸಾಹ ನೀಡಿದರು. ಹಾಗೆಯೇ ಜೈನ ಧರ್ಮಕ್ಕೆ ಎಲ್ಲ ಕಾಲದಲ್ಲೂ ಪ್ರೋತ್ಸಾಹ ನೀಡಿದ ಇವರ ರಚನೆಗಳನ್ನು ಗಮನಿಸಿದಾಗ ಶೈವ ಮತ್ತು ವೈಷ್ಣವ ದೇವಾಲಯಗಳು, ಮೊದಲು ಜೈನ ಬಸದಿಗಳು ಅನಂತರದ ಸ್ಥಾನವನ್ನು ಪಡೆಯುತ್ತವೆ.[೫೦] ಹೀಗೆ ಇವರು ಶೈವ ಧರ್ಮಕ್ಕೂ ಮಾನ್ಯತೆ ನೀಡಿರುವುದನ್ನು ಇವರ ಶಾಸನಗಳಿಂದಲೂ ತಿಳಿಯಬಹುದು. ಗಂಗರ ಹಲವು ಶಾಸನಗಳಲ್ಲಿ ದೊರೆಗಳು ಶಿವ ಮತ್ತು ವಿಷ್ಣುವಿನ ಆರಾಧಕರಾಗಿದ್ದರೆಂದು ತಿಳಿಸುತ್ತದೆ. ಭೂವಿಕ್ರಮನ ಶಾಸನದಲ್ಲಿ ತಡಂಗಾಲ ಮಾಧವ ತ್ರೈಯಂಬಕ ಅಥವಾ ಶಿವನ ಆರಾಧಕನಾಗಿದ್ದನೆಂದು ಹೇಳುತ್ತವೆ. ಈ ವಿಷಯವು ತಾಮ್ರಪಟ ಶಾಸನವೊಂದರಿಂದಲೂ ತಿಳಿಯಬಹುದು. ಇಲ್ಲಿ ಮಾಧವ ಎಂಬ ಹೆಸರಿಗೆ ಪರಮೇಶ್ವರ ಮತ್ತು ಪರಮಭಟ್ಟಾರಕ ಎಂದೂ ಕರೆಯಲಾಗಿದೆ. ಹಾಗೆಯೇ ಹರಿವರ್ಮನು ಮೂಲಸ್ಥಾನೇಶ್ವರ ದೇವಾಲಯಕ್ಕೆ ಹೇರಳವಾದ ದಾನದತ್ತಿ ನೀಡಿದನು. ಮತ್ತು ಮುಂದೆ ಶೈವ ಧರ್ಮಕ್ಕೂ ಒಲವು ತೋರಿಸಿದರು ಎಂದು ತಿಳಿದುಬರುತ್ತದೆ. ಅಲ್ಲದೆ ಮತ್ತೆ ಅವನೀತನು ಸಹ ಹರ ಅಥವಾ ಶಿವನ ಆರಾಧಕನಾಗಿದ್ದನೆಂದು ಭಾವಿಸಲಾಗಿದೆ. ಅಲ್ಲದೆ ಗಂಗರ ಕಾಲದಲ್ಲಿ ಶೈವಧರ್ಮದ ಕಾಳಾಮುಖ ಪಂಥವು ಪ್ರಸಿದ್ಧಿ ಪಡೆದಿತ್ತು. ಹಾಗೂ ಬಳಕೆಯಲ್ಲಿರುವ ಪ್ರಬಲ ಪಂಥವಾಗಿತ್ತು.[೫೧] ಈ ಎಲ್ಲ ವಿವರಣೆಗಳಿಂದ ಗಂಗರ ಕಾಲದಲ್ಲಿ ಜೈನ ಧರ್ಮದೊಂದಿಗೆ ಶೈವಧರ್ಮವು ಬೆಳವಣಿಗೆ ಹೊಂದಿತು ಎನ್ನಬಹುದು.

## ಬಾದಾಮಿ ಚಲುಕ್ಯರ ಕಾಲದಲ್ಲಿನ ಶೈವಧರ್ಮ

ಬಾದಾಮಿ ಚಲುಕ್ಯರು ಕರ್ನಾಟಕವನ್ನು ಆಳಿದ ಮೊದಲ ಪ್ರಬಲ ಅರಸರು. ಕ್ರಿ.ಶ.೬ನೇ ಶತಮಾನ ಕರ್ನಾಟಕ ಇತಿಹಾಸದಲ್ಲಿ ಬಹು ಪ್ರಮುಖವಾದುದು. ಮುಖ್ಯವಾಗಿ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ನವೀನತೆ ಆರಂಭಗೊಂಡಿತು. ಬಾದಾಮಿಯನ್ನು ರಾಜಧಾನಿ ಯನ್ನಾಗಿಸಿಕೊಂಡು ಆಳ್ವಿಕೆ ನಡೆಸಿದ ಇವರು ಧರ್ಮಸಹಿಷ್ಣುಗಳಾಗಿದ್ದರು. ವೈಷ್ಣವ ಮತ್ತು ಶೈವ ಧರ್ಮಗಳು ಹೆಚ್ಚಿನ ಬೆಳವಣಿಗೆಯನ್ನು ಕಂಡವು. ರಾಜರ ಪ್ರೋತ್ಸಾಹದ ದೃಷ್ಟಿಯಲ್ಲಿ ಹೇಳುವುದಾದರೆ ಮೊದಲನೇ ಪುಲಕೇಶಿಯಿಂದ ಇಮ್ಮಡಿ ಪುಲಿಕೇಶಿಯವರೆಗೆ ಅರಸರ ವೈಯಕ್ತಿಕ ಮತವು ವೈಷ್ಣವ ಮತವಾಗಿತ್ತು. ಆದರೆ ಮಂಗಲೇಶನಂತೆ ಪರಮಭಾಗವತರಾಗಿದ್ದ ಅರಸರೂ ಶೈವ ಮತಕ್ಕೆ ದಾನದತ್ತಿಗಳನ್ನು ನೀಡುವುದರಲ್ಲಿ ತಾರತಮ್ಯ ತೋರಿಲ್ಲ. ಅಲ್ಲದೆ ಬಹುಶಃ ಒಂದನೆಯ ಪುಲಿಕೇಶಿಯ ಕಾಲದಿಂದಲೇ ಶೈವ ಮತದ ಪ್ರಾಬಲ್ಯ ಗುರುತರವಾಗಿದ್ದ ಸೂಚನೆ ದೊರೆಯುತ್ತದೆ. ಮಹಾಕೂಟದ ವಿಷ್ಣುತೀರ್ಥ ಪುಷ್ಕರಣಿಯಲ್ಲಿರುವ ಚತುರ್ಮುಖ ಲಿಂಗವನ್ನೊಳಗೊಂಡ ಸರ್ವತೋಭದ್ರ ದೇಗುಲವನ್ನು ಇತ್ತೀಚಿನ ಅಭಿಪ್ರಾಯದ ಮೇರೆಗೆ ಮೊದಲನೆಯ ಪುಲಿಕೇಶಿಯ ಕಾಲಕ್ಕೆ ಅನ್ವಯಿಸಲಾಗಿದೆ. ಅದರಲ್ಲಿರುವ ಚತುರ್ಮುಖ ಲಿಂಗವನ್ನು ಮೊದಲನೇ ಪುಲಕೇಶಿ ಸ್ಥಾಪಿಸಿದನೆಂದು ಅಭಿಪ್ರಾಯಿಸಲಾಗಿದೆ.[೫೨] ಅಲ್ಲದೇ ಇದೇ ದೇವಾಲಯದ ಪರಿಸರದಲ್ಲಿ ಆಕಾಶಕ್ಕೆ

ತೆರೆದುಕೊಂಡಿರುವ ಹಲವು ಪ್ರಾಚೀನ ರೂಪದ ಲಿಂಗಗಳು ಇಟ್ಟಿಗೆಯ ಕಟ್ಟಡದ ಅವಶೇಷಗಳೊಂದಿಗೆ ಕಂಡುಬರುತ್ತವೆ. ಇವು ಇಲ್ಲಿ ಶೈವರ ಚಟುವಟಿಕೆಗಳ ಪ್ರಾಚೀನತೆಯ ಪುರಾವೆಯಾಗಿದೆ ಮತ್ತು ಇಲ್ಲಿಯ ಮಹಾಕೂಟ ಸ್ತಂಭಶಾಸನವು ಚಲುಕ್ಯರ ಲಭ್ಯ ಶಾಸನಗಳಲ್ಲಿ ಶೈವ ದೇವಾಲಯಕ್ಕೆ ದಾನ-ದತ್ತಿಗಳನ್ನು ದಾಖಲಿಸುವ ಪ್ರಥಮ ಶಾಸನವಾಗಿದೆ. ಒಂದನೆಯ ಪುಲಿಕೇಶಿಗೆ ಬಹುಶಃ ಶೈವಮತದ ಕಡೆಗೆ ವೈಯಕ್ತಿಕ ಒಲವು ಇದ್ದಿರಬಹುದು. ವಿದ್ವಾಂಸರು ಸೂಚಿಸುವಂತೆ ಬಾದಾಮಿಯ ೧ನೇ ಶೈವ ಗುಹಾಲಯವು ಮೊದಲನೆ ಪುಲಿಕೇಶಿಯಿಂದ ನಿರ್ಮಿತವಾಗಿರಬೇಕು.[೫೩] ಹಾಗೆಯೇ ವಿಕ್ರಮಾದಿತ್ಯನ ಹೆಸರು ಶೈವ ಧರ್ಮದ ಇತಿಹಾಸದಲ್ಲಿ ಅಜರಾಮರವಾಗಿದೆ. ಇವನು ವೈಷ್ಣವ ಧರ್ಮವನ್ನು ತ್ಯಜಿಸಿ ಸುದರ್ಶನಾಚಾರ್ಯರಿಂದ ಶಿವಮಂಡಲ ದೀಕ್ಷೆ ಪಡೆದುದಲ್ಲದೆ ಪರಮ ಮಾಹೇಶ್ವರ ಎಂಬ ಬಿರುದನ್ನು ಪಡೆದುಕೊಂಡಿದ್ದನು. ಮತಾಂತರದಿಂದಾಗಿ ಇವನ ಹಾಗೂ ಇವನ ಅನಂತರದ ಅರಸರ ಕಾಲದಲ್ಲಿ ಶೈವಧರ್ಮಕ್ಕೂ ಶಿವಾಲಯಗಳಿಗೂ ಹೆಚ್ಚಿನ ಪ್ರೋತ್ಸಾಹ ಸಿಕ್ಕಿದುದಲ್ಲದೆ ಶೈವ ದೇವಾಲಯಗಳು ಹೆಚ್ಚಿನ ಪ್ರಮಾಣದಲ್ಲಿ ನಿರ್ಮಾಣಗೊಂಡವು.[೫೪] ಹೀಗೆ ವೈಷ್ಣವರಾಗಿದ್ದ ಚಲುಕ್ಯ ಅರಸರು ಮೊದಲನೆಯ ವಿಕ್ರಮಾದಿತ್ಯನ ಕಾಲದಲ್ಲಿ ಶೈವರಾದರು. ಇದರ ಪರಿಣಾಮ ದೊಡ್ಡ ಪ್ರಮಾಣದ ದೇಗುಲ ನಿರ್ಮಾಣದ ಪ್ರಕಿಯೆಗಳು ಆರಂಭವಾದವು. ವಿಕ್ರಮಾದಿತ್ಯ, ವಿನಯಾದಿತ್ಯ ಮತ್ತು ವಿಜಯಾದಿತ್ಯರ ಕಾಲದಲ್ಲಿ ಅವರ ಹೆಸರಿನಲ್ಲಿ ಹಾಗೂ ಅವರ ಸಂಬಂಧಿಕರ ಹೆಸರಿನಲ್ಲಿ ಶಿಲಾ ದೇವಾಲಯಗಳು ಆಲಂಪುರದಲ್ಲಿ ನಿರ್ಮಾಣವಾದವು. ಇದರ ವಿಸ್ತೃತಿ ಎಂಬಂತೆ ಪಟ್ಟದಕಲ್ಲು ಐಹೊಳೆಯಲ್ಲಿಯೂ ದೇವಾಲಯ ಸಂಸ್ಕೃತಿಯ ವಿಸ್ತರಣೆ ಗೋಚರಿಸುತ್ತದೆ.[೫೫] ಹೀಗೆ ಬಾದಾಮಿ ಚಲುಕ್ಯರ ಕಾಲದಲ್ಲಿ ಶೈವಧರ್ಮ ಉತ್ಕರ್ಷದ ಮೆಟ್ಟಿಲನ್ನೇರಿ ಮುಂದಿನ ರಾಜವಂಶಸ್ಥರಿಗೂ ನಾಂದಿ ಹಾಡಿತೆಂದು ಹೇಳಬಹುದು.

## ರಾಷ್ಟ್ರಕೂಟರ ಕಾಲದಲ್ಲಿನ ಶೈವಧರ್ಮ

೮ನೇ ಶತಮಾನದ ಮಧ್ಯಭಾಗದಿಂದ ೧೦ನೇ ಶತಮಾನದ ಕೊನೆಯವರೆಗೆ ಕರ್ನಾಟಕ ಮತ್ತು ಮಹಾರಾಷ್ಟ್ರದ ಬಹುಭಾಗಗಳನ್ನು ರಾಷ್ಟ್ರಕೂಟರು ಆಳಿದರು. ಇವರು ಮೊದಲು ಬಾದಾಮಿ ಚಲುಕ್ಯರ ಸಾಮಂತರಾಗಿದ್ದರೂ ನಂತರದಲ್ಲಿ ಸ್ವತಂತ್ರರಾಗಿ ಆಳ್ವಿಕೆ ನಡೆಸಿದರು ಹಾಗೂ ಚಲುಕ್ಯರ ಸಂಸ್ಕೃತಿಯನ್ನು ಮುಂದುವರೆಸಿದರು. ರಾಷ್ಟ್ರಕೂಟರು ಧಾರ್ಮಿಕ ಸಹಿಷ್ಣುಗಳಾಗಿದ್ದರು. ಇವರು ಶೈವ, ವೈಷ್ಣವ, ಜೈನ ಧರ್ಮಗಳಿಗೆ ಪ್ರೋತ್ಸಾಹ ನೀಡಿದರು. ಇವರ ಕಾಲಕ್ಕೆ ಸೇರಿದ ತಾಮ್ರಶಾಸನಗಳ ನಾಂದಿಪದ್ಯಗಳಲ್ಲಿ ವಿಷ್ಣುವಿನ ವಾಹನವಾದ ಗರುಡ ಅಥವಾ ಯೋಗಮುದ್ರೆಯಲ್ಲಿರುವ ಶಿವನ ಚಿತ್ರವಿರುತ್ತದೆ.[೫೬] ಇವರು ಶೈವಧರ್ಮಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದ್ದರೆಂಬುದಕ್ಕೆ ಇವರು ನಿರ್ಮಿಸಿದ ಹಲವು ಶಿವ ದೇವಾಲಯಗಳೇ ಸಾಕ್ಷಿಯಾಗಿವೆ. ಎಲ್ಲೋರ ಎಲಿಫೆಂಟಾ, ಉತ್ತರ ಕರ್ನಾಟಕದ ಹಲವು ಭಾಗಗಳಲ್ಲಿ, ದಕ್ಷಿಣ ಕರ್ನಾಟಕ ಮತ್ತು ಆಂಧ್ರಪ್ರದೇಶದ ಕೆಲವು ಭಾಗಗಳಲ್ಲಿ ಇವರ ದೇವಾಲಯಗಳು ಕಂಡುಬರುತ್ತವೆ. ಎಲ್ಲೋರದ ದಶಾವತಾರ ಗುಹಾಲಯ ರಾಷ್ಟ್ರಕೂಟ ಕಾಲದ ಗುಹಾದೇವಾಲಯಗಳಲ್ಲಿ ಅತಿ ಪ್ರಾಚೀನವೆನಿಸಿವೆ. ಇಲ್ಲಿಯ ಶೈವ ಶಿಲ್ಪಗಳಾದ

ಅಂಧಕಾಸುರಸಂಹಾರ, ಪಗಡೆಯಾಟದಲ್ಲಿ ನಿರತ ಶಿವ-ಪಾರ್ವತಿಯರು, ಲಿಂಗೋದ್ಭವ, ನಟರಾಜ ಹಾಗೂ ಅರ್ಧನಾರೀಶ್ವರ ಶಿಲ್ಪಗಳು ಪ್ರಸಿದ್ಧವಾದವು. ಎಲ್ಲೋರದ ೧೬ನೇ ಗುಹಾದೇವಾಲಯವೆಂದು ಕರೆಯಲ್ಪಡುವ ಕೈಲಾಸನಾಥ ದೇವಾಲಯ ಜಗತ್ಪ್ರಸಿದ್ಧವಾದುದು. ಇದೊಂದು ಶೈವ ದೇವಾಲಯವಾಗಿದ್ದು, ಇದನ್ನು ಏಕಶಿಲೆಯಲ್ಲಿ ನಿರ್ಮಿಸಲಾಗಿದೆ. ಅದ್ಭುತ ಸೌಂದರ್ಯದಿಂದ ಶೋಭಿಸುತ್ತಿರುವ ಈ ನಿರ್ಮಿತಿಯನ್ನು ಕುರಿತು ಬರೋಡ ತಾಮ್ರಶಾಸನ ಹೀಗೆ ಹೇಳುತ್ತದೆ. ಆಕಾಶದಲ್ಲಿ ಸಂಚಾರ ಮಾಡುವ ವಿದ್ಯಾಧರರು ಎಳಾಪುರದ ಈ ಅದ್ಭುತ ಸೃಷ್ಟಿಯನ್ನು ನೋಡಿ ಅಶ್ಚರ್ಯಪಡುತ್ತಾರೆ. ಇವು ಬ್ರಹ್ಮ ಮತ್ತು ಶಿವ ಇವರ ನಿವಾಸಗಳೇ ಸರಿ. ಇಂತಹ ಅಚ್ಚರಿಯನ್ನು ಈ ಮೊದಲು ಬೇರೆಲ್ಲೂ ನಾವು ಕಾಣಲಿಲ್ಲ ಎಂದು ಉದ್ಗರಿಸುತ್ತಾರೆ. ಅಷ್ಟೇಕೆ ಈ ದೇವಾಲಯದ ಶಿಲ್ಪಿಯೇ ಮತ್ತೆ ಇಂಥದೇ ಕೃತಿಯನ್ನು ತಾನು ನಿರ್ಮಿಸಬಲ್ಲನೆ ಎಂದು ತನ್ನ ಸಾಮರ್ಥ್ಯವನ್ನು ಕುರಿತೇ ಸಂದೇಹಪಡುತ್ತಾನೆ ಎಂದಿದ್ದಾನೆ, ವಾಸ್ತು ಇತಿಹಾಸ ತಜ್ಞ ಪರ್ಸಿಬ್ರೌನ್. ಹೀಗೆ ಇಂತಹ ಅದ್ಭುತ ಶಿವ ದೇವಾಲಯವನ್ನು ನಿರ್ಮಿಸಿದ ಕೀರ್ತಿ ರಾಷ್ಟ್ರಕೂಟರಿಗೆ ಸಲ್ಲುತ್ತದೆ. ಅಲ್ಲದೆ ಎಲಿಫೆಂಟಾದ ಶೈವ ಗುಹಾಲಯಗಳು ಕಲಾಭ್ಯಾಸಿಗಳ ಮನಸ್ಸನ್ನು ಹೆಚ್ಚು ಆಕರ್ಷಿಸಿವೆ. ಇಲ್ಲಿಯ ಮಹೇಶಮೂರ್ತಿ ಪ್ರಪಂಚ ಪ್ರಸಿದ್ಧವಾದುದು. ಇದು ಶಿವನ ವಾಮದೇವ, ಸದ್ಯೋಜಾತ ಮತ್ತು ಅಘೋರ ರೂಪಗಳನ್ನು ಬಿಂಬಿಸುತ್ತವೆ. ಅಲ್ಲದೆ ಇಲ್ಲಿನ ಶಿವಯೋಗೀಶ್ವರ, ಮಹಾನಟ, ಗಂಗಾಧರ ಶಿವ, ಅರ್ಧನಾರೀಶ್ವರ, ಕಲ್ಯಾಣಸುಂದರ ಮೂರ್ತಿ ರಾವಣನು ಕೈಲಾಸ ಪರ್ವತವನ್ನೇತ್ತುತ್ತಿರುವ ಶಿಲ್ಪಗಳೂ ಸಹ ಪ್ರಸಿದ್ಧಿ ಪಡೆದವುಗಳಾಗಿವೆ.[೫೭] ಅಲ್ಲದೆ ಕರ್ನಾಟಕದ ವಿವಿಧೆಡೆಗಳಲ್ಲಿ ಮುಖ್ಯವಾಗಿ ಉತ್ತರ ಕರ್ನಾಟಕದಲ್ಲಿ ಇವರ ಹಲವು ಶೈವ ದೇವಾಲಯಗಳು ಕಂಡುಬರುತ್ತವೆ. ಇಷ್ಟು ಸಂಖ್ಯೆಯ ಶೈವ ದೇವಾಲಯಗಳು ಇವರು ಶೈವ ಧರ್ಮಕ್ಕೆ ನೀಡಿದ ಪ್ರಾಮುಖ್ಯತೆಯ ಪ್ರತೀಕವಾಗಿವೆ.

ಅರಸ ನೃಪತುಂಗನಿಗೆ ಅತಿಶಯ ಧವಳ, ಅಮೋಘವರ್ಷ, ಶರ್ವ ಮುಂತಾದ ಹೆಸರುಗಳಿದ್ದವು. ಹಾಗೂ ರಾಷ್ಟ್ರಕೂಟ ಮನೆತನದ ಮೂಲ ಪುರುಷನಾದ ದಂತಿದುರ್ಗನು ಪ್ರಸಿದ್ಧ ಉಜ್ಜನಿಯ ಮಹಾಕಾಲನ ಭಕ್ತನಾಗಿದ್ದನು. ಅವನ ನಂತರ ಪಟ್ಟಕ್ಕೆ ಬಂದ ಮೊದಲನೆಯ ಕೃಷ್ಣನೂ ಎಲ್ಲೋರದಲ್ಲಿ ಲೋಕವಿಖ್ಯಾತವಾದ ಕೈಲಾಸ ದೇವಾಲಯವಲ್ಲದೆ, ಇನ್ನೂ ಹದಿನೆಂಟು ಶಿವಾಲಯಗಳನ್ನು ಕಟ್ಟಿಸಿದನು. ಹಾಗೂ ಒಂದು ವಿದ್ಯಾಮಂದಿರವನ್ನು ಸ್ಥಾಪಿಸಿದನು. ಇಲ್ಲಿ ಪಂಡಿತರೂ, ಶೈವ ಆಚಾರ್ಯರೂ ನೆಲೆಸಿ ಶೈವಧರ್ಮವನ್ನು ಪ್ರಸಾರಮಾಡುವುದರಲ್ಲಿ ಮತ್ತು ಅದು ಸಾಮಾನ್ಯ ಜನರಿಗೂ ತಿಳಿಯುವಂತೆ ಮಾಡುವುದರಲ್ಲಿ ನಿರತರಾಗಿದ್ದರು. ಅಲ್ಲದೆ ಇವರ ಶಾಸನಗಳಲ್ಲಿ ಜಿಂಕೆಯ ಮುಂದೆ ಹಂದಿಯು ನಿಲ್ಲಲಾರದೆ ಓಡುವುದರ ನಿರ್ದೇಶನವಿದೆ. ಜಿಂಕೆಯು ಶೈವಮತವನ್ನು ಸಂಕೇತಿಸುತ್ತದೆ.[೫೮] ಹೀಗೆ ರಾಷ್ಟ್ರಕೂಟ ಕಾಲವು ಶೈವಧರ್ಮಕ್ಕೆ ಮಹತ್ವ ನೀಡಿದ್ದರ ಜೊತೆಗೆ ಹಲವು ಪ್ರಸಿದ್ಧ ಶೈವ ವಾಸ್ತು ಮತ್ತು ಮೂರ್ತಿಶಿಲ್ಪಗಳ ರಚನೆಗಾರರೆಂಬ ಖ್ಯಾತಿಗಳಿಸಿದರು.

## ಕಲ್ಯಾಣ ಚಾಲುಕ್ಯ ಮತ್ತು ಕಲಚೂರಿಗಳ ಕಾಲದಲ್ಲಿನ ಶೈವಧರ್ಮ

ರಾಷ್ಟ್ರಕೂಟರ ನಂತರ ಕ್ರಿ.ಶ.೯೭೩ರಲ್ಲಿ ಕಲ್ಯಾಣ ಚಾಲುಕ್ಯರು ಆಡಳಿತಕ್ಕೆ ಬಂದರು. ಇವರು ಸುಮಾರು ಎರಡು ಶತಮಾನಗಳವರೆಗೆ ಕರ್ನಾಟಕವನ್ನು ಆಳಿದರು. ೧೧-೧೨ನೇ ಶತಮಾನಗಳಲ್ಲಿ ಕರ್ನಾಟಕದಲ್ಲಿ ಮತಧರ್ಮಗಳಿಗೆ ಸಂಬಂಧಪಟ್ಟಂತೆ ಹೊಸ ವಿಚಾರಗಳು ಉದ್ಭವವಾದವು. ಇವರ ಕಾಲದಲ್ಲಿಯೂ ಶೈವ ಧರ್ಮ ಪಾರಮ್ಯತೆಯನ್ನು ಪಡೆದಿತ್ತು. ಇವರ ಕಾಲದಲ್ಲಿ ಶೈವಧರ್ಮದ ಕಾಳಾಮುಖ ಮತ್ತು ಪಾಶುಪತ ಪಂಥಗಳು ಹೆಚ್ಚು ಪ್ರಬಲವಾಗಿದ್ದವು. ಬಳ್ಳಿಗಾವಿಯು ಇವರ ಕಾಲದ ಶೈವಧರ್ಮದ ಒಂದು ಪ್ರಮುಖ ಕೇಂದ್ರವಾಗಿತ್ತು. ಇಲ್ಲಿನ ಲೋಕೇಶ್ವರ ಮತ್ತು ಜೋಗೀಶ್ವರ ದೇವಾಲಯಗಳಿಗೆ ೬ನೇ ವಿಕ್ರಮಾದಿತ್ಯನ ಕಾಲದಲ್ಲಿ ಭೂದಾನ ನೀಡಿದ ಉಲ್ಲೇಖಗಳು ದೊರೆಯುತ್ತವೆ.[೫೯] ನಾಲ್ಕನೇ ಸೋಮೇಶ್ವರನ ಕ್ರಿ.ಶ.೧೧೮೪ರ ಶಾಸನದಲ್ಲಿ ಬೆಲ್ಲೆಸಂತಾನ ಮತ್ತು ಪರ್ವತಾವಳಿಯಲ್ಲಿಯ ಹಲವು ಕಾಳಾಮುಖ ಗುರುಗಳನ್ನು ಹೆಸರಿಸುತ್ತದೆ. ಅಲ್ಲದೆ ೨ನೇ ಜಯಸಿಂಹನ ಪೂರ್ವಾಧಿಕಾರಿಗಳು ತಮ್ಮ ರಾಜಸಭೆಯಲ್ಲಿ ಶೈವ ಉಪದೇಶಕರನ್ನು ಇರಿಸಿಕೊಂಡಿದ್ದರು.[೬೦] ಇವರು ಶೈವಧರ್ಮದ ಅನುಯಾಯಿಗಳಾಗಿದ್ದರೆಂಬುದಕ್ಕೆ ಇವರು ಹೊರಡಿಸಿದ ಶಾಸನಗಳೇ ಸಾಕ್ಷಿಯಾಗಿವೆ. ಇವರ ಹಲವು ಶಾಸನಗಳು ಶೈವರಿಗೆ ನೀಡಿದ ದಾನಗಳ ಕುರಿತದ್ದಾಗಿವೆ. ಇವರ ಕಾಲವು ಧಾರ್ಮಿಕ ಸಹಿಷ್ಣುತೆಯಿಂದ ಕೂಡಿತ್ತು. ಇವರು ಶೈವ, ಜೈನ ಮತ್ತು ವೈಷ್ಣವ ದೇವಾಲಯಗಳಿಗೆ ಸಾಕಷ್ಟು ದಾನಗಳನ್ನು ನೀಡಿದ್ದರೆಂಬುದಕ್ಕೆ ಆಧಾರಗಳಿವೆ. ಇದಕ್ಕೆ ೬ನೇ ವಿಕ್ರಮಾದಿತ್ಯನ ಮುಲ್ಗಿ ಶಾಸನ ಉತ್ತಮ ಉದಾಹರಣೆ. ಈ ಶಾಸನದಲ್ಲಿ ಗೋವಿಂದರಾಜನೆಂಬುವನು ತಾನೇ ಕಟ್ಟಿಸಿದ ರಾಮೇಶ್ವರ ದೇವಾಲಯಕ್ಕೆ ದತ್ತಿ ನೀಡಿದ ವಿಷಯವನ್ನು ಹೇಳುತ್ತದೆ. ಹಾಗೂ ಯೋಗೇಶ್ವರ ಪಂಡಿತನು ಈ ದೇವಾಲಯದ ಪಾರುಪತ್ಯಗಾರನಾಗಿದ್ದನು. ಅಲ್ಲದೆ ಇದು ಅರಸನ ಮತ್ತು ದಾನಿಯ ಹಾಗೂ ದಾನ ಪಡೆದವನ ವಂಶಾವಳಿಯನ್ನು ನೀಡುತ್ತದೆ. ಬಿಜ್ಜಳನ ಮನಗೋಳಿ ಶಾಸನದ ಪ್ರಾರಂಭ ಭಾಗದಲ್ಲಿ ಈಶ್ವರಘಲಿಸಾಸ ಎಂಬ ವ್ಯಕ್ತಿಯ ಉಲ್ಲೇಖವಿದ್ದು, ಇವನು ೨ನೇ ತೈಲನ ಕಾಲದಲ್ಲಿ ಜಗದ್ಗುರುವಾಗಿದ್ದನೆಂದು ತಿಳಿಸುತ್ತದೆ. ಮತ್ತು ತನ್ನ ಪಟ್ಟಾಭಿಷೇಕದ ಸಂದರ್ಭ ಮನಿಂಗವಳ್ಳಿಯನ್ನು ಕೊಟ್ಟಿರುವುದು ತಿಳಿಸುತ್ತದೆ.[೬೧]

ಇವರ ಕಾಲದಲ್ಲಿ ಶೈವ ಧರ್ಮದ ಉಪಪಂಥಗಳಾದ ಪಾಶುಪತ ಅಥವಾ ಲಾಕುಳ, ಕಾಳಾಮುಖ ಮತ್ತು ಕಾಪಾಲಿಕ ಪಂಥಗಳು ಅತ್ಯಂತ ಪ್ರಬಲವಾಗಿದ್ದವು. ಈ ಪಾಶುಪತ ಶಾಖೆಗಳೆಲ್ಲವೂ ಕರ್ನಾಟಕದಲ್ಲಿ ೧೦ನೇ ಶತಮಾನದ ನಂತರದಲ್ಲಿ ಸುಮಾರು ಎರಡು ಶತಮಾನಗಳ ಕಾಲ ಏಳಿಗೆಯನ್ನು ಪಡೆದವು. ಬಳ್ಳಿಗಾವಿ, ಸೂಡಿ, ಕುಕನೂರ, ಶ್ರೀಶೈಲ ಹಾಗೂ ಮತ್ತಿತರ ಸ್ಥಳಗಳೆಲ್ಲವೂ ಇವರ ಪ್ರಮುಖ ಕೇಂದ್ರಗಳಾಗಿದ್ದವು. ಹಾಗೂ ಇಲ್ಲಿ ಅವರ ಪ್ರಭಾವಶಾಲಿ ಮಠಗಳೂ ಮತ್ತು ದೇವಾಲಯಗಳೂ ಇದ್ದವು. ನಂತರದಲ್ಲಿ ಬಂದ ಬಸವೇಶ್ವರರು ಕರ್ನಾಟಕದಲ್ಲಿರುವ ಸಾಮಾಜಿಕ-ಧಾರ್ಮಿಕ ಪರಿಸ್ಥಿತಿಗಳ ಬದಲಾವಣೆಗಳನ್ನು ತರುವುದರ ಮೂಲಕ ಹೊಸ ಯುಗ ವೊಂದನ್ನು ಆರಂಭಿಸಿದರು. ಶೈವ ತತ್ವಗಳನ್ನು ಪ್ರಚಾರ ಮಾಡಿದರು. ಅದು ಅತಿ ವೀರತೆಯಿಂದ

ಕೂಡಿದ್ದರಿಂದ ಅದನ್ನು ವೀರಶೈವ ಎಂದು ಕರೆಯಲಾಯಿತು. ಇವರು ಬೋಧಿಸಿದ ತತ್ವಗಳು ರೂಢಿಯಲ್ಲಿ ಬಂದು ಅತ್ಯಂತ ಜನಪ್ರಿಯಗಳಿಸಿದವು. ಇವರ ಕಾಲದಲ್ಲಿ ಅರ್ಥಗರ್ಭಿತವಾದ ವಚನಗಳು ಕನ್ನಡದಲ್ಲಿ ರಚಿತವಾದವು. ಇವರ ಈ ಹೊಸ ನಂಬಿಕೆಗಳು ಜನರನ್ನು ಆಚರಣೆಗಳಿಂದ ದೂರ ಮಾಡಿದ್ದಲ್ಲದೆ ಜಾತಿ ವ್ಯವಸ್ಥೆಯನ್ನು ಹಾಗೂ ಸಾಮಾಜಿಕ ವ್ಯವಸ್ಥೆಯನ್ನು ಬದಲಾವಣೆ ಮಾಡಿದವು.[೬೨] ಹೀಗೆ ಈ ಕಾಲದಲ್ಲಿ ವೀರಶೈವ ಉಗಮದಿಂದ ಸಾಹಿತ್ಯದಲ್ಲಿ ಸಾಕಷ್ಟು ಅಭಿವೃದ್ಧಿ ಕಂಡಿತು. ಹಾಗೂ ವೀರಶೈವದ ಮೂಲಕ ಶೈವಾರಾಧನೆ ಮುಂದುವರಿಯಿತು ಎಂದು ಹೇಳಬಹುದು.

## ಹೊಯ್ಸಳರ ಕಾಲದಲ್ಲಿ ಶೈವಧರ್ಮ

೧೦ನೇ ಶತಮಾನದ ಮಧ್ಯಭಾಗದಿಂದ ೧೪ನೇ ಶತಮಾನದ ಮಧ್ಯ ಭಾಗದವರೆಗೆ ವಿಶೇಷವಾಗಿ ದಕ್ಷಿಣ ಕರ್ನಾಟಕ ಮತ್ತು ಸುತ್ತಲಿನ ಭಾಗಗಳನ್ನು ಆಳಿದ ರಾಜಮನೆತನ ಹೊಯ್ಸಳ. ಈ ವಂಶದ ರಾಜಧಾನಿ ಮೊದಲು ಶಶಕಪುರ ಅಥವಾ ಸೊಸೆಯೂರು. ಅನಂತರ ಬೇಲೂರು ಮತ್ತು ದೋರಸಮುದ್ರ. ಮೊದಲು ಕಲ್ಯಾಣ ಚಾಲುಕ್ಯರ ಸಾಮಂತರಾಗಿ ನಂತರದಲ್ಲಿ ಸ್ವಸಾಮರ್ಥ್ಯದಿಂದ ಸ್ವತಂತ್ರರಾಗಿ ಸುಮಾರು ಮೂರು ಶತಮಾನಗಳಿಗೂ ಹೆಚ್ಚು ಕಾಲ ವೈಭವೋಪೇತವಾದ ಆಡಳಿತ ನಡೆಸಿದ ರಾಜಮನೆತನ. ಇವರ ಕಾಲವು ಅತಿ ಸುಂದರ ಹಾಗೂ ಸೂಕ್ಷ್ಮ ಕೆತ್ತನೆಯ ರಚನೆಗಳಿಗೆ ಹೆಸರುವಾಸಿಯಾಗಿದೆ. ಇಲ್ಲದೆ ಇವರದು ಧಾರ್ಮಿಕ ಹಾಗೂ ಸಾಮಾಜಿಕ ವ್ಯವಸ್ಥೆಗಳ ಸಮನ್ವಯ ಕಾಲ. ಜೈನ, ವೈಷ್ಣವ, ಶೈವ ಮತ್ತು ವೀರಶೈವ ಧರ್ಮಗಳು ಕೂಡಿ ಬಾಳಿದುವಲ್ಲದೆ ಉನ್ನತಿಯಲ್ಲಿದ್ದವು. ಇವರು ಎಲ್ಲ ಧರ್ಮಗಳನ್ನು ಸಮಾನವಾಗಿ ನೋಡಿಕೊಂಡು ತಮ್ಮ ರಾಜಧರ್ಮ ನೀತಿಯನ್ನು ಯಶಸ್ವಿಯಾಗಿ ಪಾಲಿಸಿದರು.[೬೩]

ಒಂದನೇ ಬಲ್ಲಾಳನು ಶೈವನಾಗಿದ್ದು, 'ಮಾಹೇಶ್ವರ ಸಮಯಾಧಾರ'ನಾಗಿದ್ದನು. ಮತ್ತು 'ಶೈವರ ಶಿರೋಮಣಿ' ಎಂದು ಕರೆಸಿಕೊಂಡಿದ್ದನು. ಕ್ರಿ.ಶ.೧೧೦೧ರಲ್ಲಿ ತನ್ನ ಪೂರ್ವಜರ ವಾಸಸ್ಥಾನವಾದ ಸೋಸೆವೂರಿಗೆ ಹೋಗುವ ಹಾದಿಯಲ್ಲಿ ಒಂದು ಶಿವಾಲಯಕ್ಕೆ ದಾನಶಾಸನ ಹಾಕಿಸಿಕೊಟ್ಟಿರುವುದು ತಿಳಿದುಬರುತ್ತದೆ. ನರಸಿಂಹ ಮತ್ತು ಎರಡನೇ ಬಲ್ಲಾಳರು 'ವೈಷ್ಣವ ಚಕ್ರವರ್ತಿ' 'ವೈಷ್ಣವ ಧರ್ಮರಕ್ಷಕ'ವೆಂದು ಹೆಸರಾಗಿದ್ದರೂ 'ಮಾಹೇಶ್ವರ ಸಮಯ' ಅಥವಾ ಶೈವಧರ್ಮದ ಸಂರಕ್ಷಕರಾಗಿದ್ದರು. ಹೊಯ್ಸಳ ಸಾಮ್ರಾಜ್ಯದ ಅರಸರೂ ಹಾಗೆಯೇ ಸಾಮಂತರೂ ಸಹ ಚತುಸ್ಸಮಯ ಸಮುದ್ಧರಣ ಎಂಬ ಬಿರುದನ್ನು ಧರಿಸಿದ್ದರು. ರಾಜನು ತನ್ನ ದೇಶದಲ್ಲಿ ಬೌದ್ಧ, ಜೈನ, ಶೈವ ಮತ್ತು ವೈಷ್ಣವ ಎಂಬ ದಾರ್ಶನಿಕ ಪದ್ಧತಿ ಹಾಗೂ ಮತಧರ್ಮಗಳ ರಕ್ಷಕನೆಂದು ಆ ಬಿರುದು ಪ್ರಕಟಿಸಿತು. ವಿಷ್ಣುವರ್ಧನು ತಾನು ವೈಷ್ಣವನಾಗಿದರೂ ಶೈವಧರ್ಮವನ್ನು ಗೌರವಿಸಿದನು. ಉದಾಹರಣೆಗೆ ಲೆಕ್ಕವಿಲ್ಲದಷ್ಟು ಯುದ್ಧಗಳನ್ನು ಮಾಡಬೇಕಾಗಿ ಬಂದರೂ ಅವುಗಳ ಮಧ್ಯದಲ್ಲಿಯೇ ಬಂಕಾಪುರದಲ್ಲಿ ಹೊಯ್ಸಳೇಶ್ವರನಿಗೆ ಒಂದು ದೇವಾಲಯವನ್ನು ಸಮರ್ಪಿಸಲು ಸಮಯ ಮಾಡಿಕೊಂಡನು.[೬೪] ಅಲ್ಲದೆ ಇವರ ನಾಡಿನಲ್ಲಿ ಕಾಶ್ಮೀರಿ ಬ್ರಾಹ್ಮಣರ ನೆಲೆಸುವಿಕೆಯಿಂದಾಗಿ

ಕಾಶ್ಮೀರಿ ಶೈವಪಂಥ ಪ್ರಭಾವಶಾಲಿಯಾಗಿತ್ತು. ಲಕುಲೀಶಪಂಥ ಗುಜರಾತಿನಿಂದ ಕರ್ನಾಟಕಕ್ಕೆ ಪ್ರವೇಶ ಪಡೆದಿತ್ತಲ್ಲದೆ ಅಂದು ಶ್ರೀಶೈಲವು ಕಾಳಾಮುಖ, ಕಾಪಾಲಿಕ, ಲಕುಲೀಶ ಪಾಶುಪತ ವೀರಶೈವ ಪಂಥಗಳ ಸಹಬಾಳ್ವೆಯ ಕೇಂದ್ರವಾಗಿತ್ತು. ಕಲ್ಯಾಣ ವೀರಶೈವರ ಕೇಂದ್ರವಾಗಿತ್ತು.[೬೫] ಈ ಎಲ್ಲಾ ವಿವರಗಳು ಹೊಯ್ಸಳರ ಕಾಲದಲ್ಲಿಯೂ ಶೈವಧರ್ಮ ಉನ್ನತ ಸ್ಥಾನವನ್ನು ಉಳಿಸಿ ಕೊಂಡಿತ್ತೆಂದು ತಿಳಿಸುತ್ತದೆ.

## ವಿಜಯನಗರ ಕಾಲದಲ್ಲಿ ಶೈವಧರ್ಮ

ಕ್ರಿ.ಶ.೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯವು ಉದಯಿಸಿತು. ದಕ್ಷಿಣ ಭಾರತದಲ್ಲಿ ಸುಮಾರು ಮೂರು ಶತಮಾನಗಳಿಗೂ ಹೆಚ್ಚು ಕಾಲ ಇವರು ಆಳ್ವಿಕೆ ನಡೆಸಿದರು. ಇವರ ರಾಜಧಾನಿ ಹಂಪೆಯು ಬಹು ಪ್ರಸಿದ್ಧವಾದ ಧಾರ್ಮಿಕ ಕ್ಷೇತ್ರವಾಗಿತ್ತು. ವಿಜಯನಗರ ಅರಸರ ಆಳ್ವಿಕೆಯ ಕಾಲದಲ್ಲಿ ಹಲವು ಧರ್ಮಗಳು ನೆಲೆಗೊಂಡಿದ್ದವು. ಶೈವ, ವೈಷ್ಣವ, ಶ್ರೀವೈಷ್ಣವ, ವೀರಶೈವ, ಜೈನ ಹಾಗೂ ಇಸ್ಲಾಂ ಧರ್ಮವೂ ಇದ್ದುದು ಇಲ್ಲಿ ಉಳಿದು ಬಂದಿರುವ ಸ್ಮಾರಕಗಳಿಂದ ತಿಳಿಯುತ್ತದೆ. ಹಲವು ಧರ್ಮಗಳಿಗೆ ಆಶ್ರಯ ನೀಡಿದ ವಿಜಯನಗರದ ಅರಸರು ಧಾರ್ಮಿಕ ಸಹಿಷ್ಣುಗಳಾಗಿದ್ದರು. ಇದಕ್ಕೆ ಶಾಸನಾಧಾರಗಳು ದೊರೆಯುತ್ತದೆ. ೧೩೬೮ರ ಬುಕ್ಕರಾಯನ ಶ್ರವಣ ಬೆಳಗೊಳದ ಶಾಸನದಲ್ಲಿ[೬೬] ಜೈನರಿಗೂ ಶ್ರೀವೈಷ್ಣವರಿಗೂ ಕಲಹವಾದಾಗ ಅರಸನು ಎಲ್ಲ ಧರ್ಮಗಳೂ ಒಂದೇ ಎಂದು ಉಪದೇಶ ನೀಡಿ ಸಾಂತ್ವನಗೊಳಿಸಿದ ಉಲ್ಲೇಖ ದೊರೆಯುತ್ತದೆ. ಅಲ್ಲದೆ ಈ ಕಾಲದಲ್ಲಿ ಮತೀಯ ಸಂಘರ್ಷಗಳು ನಡೆದುದ್ದಕ್ಕೂ ಶಾಸನಾಧಾರಗಳಿವೆ. ಉದಾಹರಣೆಗೆ ಕೃಷ್ಣದೇವರಾಯನ ಕಾಲದ, ತಮಿಳುನಾಡಿನ ನಾಗಾಲಾಪುರಂದಲ್ಲಿ ದೊರೆತ ಕ್ರಿ.ಶ.೧೫೨೮ರ ಎರಡು ಶಾಸನಗಳು[೬೭] ಶೈವ ಮತ್ತು ವೈಷ್ಣವರ ಸಂಘರ್ಷವನ್ನು ಕುರಿತು ಉಲ್ಲೇಖಿಸುತ್ತವೆ. ಹೀಗೆ ಮತೀಯ ಸಂಘರ್ಷಗಳಿದ್ದರೂ, ಏಕ ಕಾಲದಲ್ಲಿ ಹಲವು ಧರ್ಮೀಯರು ಒಂದೇ ಸ್ಥಳದಲ್ಲಿ ಸಹಬಾಳ್ವೆ ನಡೆಸುತ್ತಿದ್ದರೆಂದು ತಿಳಿಯಬಹುದು. ಇದು ಅಂದಿನ ಅರಸರ ಧಾರ್ಮಿಕ ಸಹಿಷ್ಣುತೆ ಅಥವಾ ಧಾರ್ಮಿಕ ನೀತಿಯನ್ನು ತಿಳಿಸುತ್ತದೆ. ಹಂಪೆ ಅಥವಾ ಪಂಪಾ ಕೇತ್ರವು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಮೊದಲೇ ಒಂದು ಪ್ರಸಿದ್ಧ ಶೈವ ಕ್ಷೇತ್ರವಾಗಿತ್ತು. ಇಲ್ಲಿಯ ಸ್ಥಳಕ್ಕೆ ವಿರೂಪಾಕ್ಷನೇ ಆರಾಧ್ಯದೇವನಾಗಿದ್ದನು. ಹಂಪಿಯ ಆರಂಭದ ಶಾಸನಗಳು ವಿರೂಪಾಕ್ಷನಿಗೆ ದಾನ ನೀಡಿದ ಉಲ್ಲೇಖಗಳನ್ನು ನೀಡುತ್ತವೆ. ಇದರ ಜೊತೆಗೆ ಪಂಪಾದೇವಿ, ಭೈರವ, ಬ್ರಹ್ಮೇಶ್ವರ ಮುಂತಾದ ದೇವರುಗಳಿಗೂ ದಾನ ನೀಡಿದ ಉಲ್ಲೇಖಗಳು ದೊರೆಯುತ್ತವೆ. ಹಂಪಿಯಲ್ಲಿ ಅನೇಕ ಶಿವ ಬ್ರಾಹ್ಮಣರಿದ್ದ ಹಾಗೂ ಬ್ರಹ್ಮಪುರಿಯಾಗಿದ್ದ ಉಲ್ಲೇಖವಿದೆ. ಹೀಗಾಗಿ ಆರಂಭದಿಂದಲೂ ಶಿವಪಾರಮ್ಯವಿದ್ದುದು ಸ್ಪಷ್ಟವಾಗಿ ತಿಳಿಯುತ್ತದೆ. ವಿರೂಪಾಕ್ಷ ದೇವಾಲಯದ ಸುತ್ತಮುತ್ತ ನಿರ್ಮಿಸಿರುವ ನಿರ್ಮಿತಿಗಳೆಲ್ಲಾ ಶೈವಧರ್ಮದವೇ ಆಗಿವೆ. ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿ ಹಂಪೆಯು ಪರಿವರ್ತಿತವಾದ ಮೇಲೆ ಈ ಪ್ರದೇಶದಲ್ಲಿ ಮತ್ತೆ ದೇವಾಲಯ ರಚನೆಗಳು ಆರಂಭವಾಗುತ್ತವೆ. ವಿಜಯನಗರದ ಸಂಗಮ ಅರಸರು ಯಾದವ ವಂಶದವರಾದರೂ ವಿರೂಪಾಕ್ಷ

ದೇವಾಲಯಕ್ಕೆ ಅನೇಕ ಸವಲತ್ತುಗಳನ್ನು ಕಲ್ಪಿಸುತ್ತಾರೆ. ದೇವಾಲಯದ ವಿಸ್ತರಣೆಗೆ ಕಾರಣರಾಗುತ್ತಾರೆ.[೬೮] ನಂತರದಲ್ಲಿ ಆಳ್ವಿಕೆ ನಡೆಸಿದ ಸಾಳುವ, ತುಳುವ ವಂಶದವರು ವೈಷ್ಣವ ಧರ್ಮಕ್ಕೆ ಹೆಚ್ಚು ಮಾನ್ಯತೆ ನೀಡಿದರೂ ವಿರೂಪಾಕ್ಷನನ್ನೇ ಅಧಿದೈವನನ್ನಾಗಿ ಮುಂದುವರೆಸಿದರು ಹಾಗೂ ಆರಾಧಿಸಿದರು. ಇದಕ್ಕೆ ಇವರು ಶ್ರೀವಿರೂಪಾಕ್ಷನ ಹೆಸರಿನಲ್ಲಿಯೇ ಮಾಡುತ್ತಿದ್ದ ಹಸ್ತಾರಕ್ಷರವೇ ಮುಖ್ಯವಾದ ಉದಾಹರಣೆಯೆನ್ನಬಹುದು. ಹೀಗೆ ಆರಂಭದಿಂದಲೂ ಇಲ್ಲಿ ಶೈವ ಪಾರಮ್ಯತೆ ಇದ್ದು ನಂತರದಲ್ಲಿ ಕಡೆಗಣಿಸಲ್ಪಟ್ಟರೂ ವಿಜಯನಗರ ಸಾಮ್ರಾಜ್ಯದ ಕೊನೆಯವರೆಗೂ ಹಾಗೂ ಪ್ರಸ್ತುತದವರೆಗೆ ತನ್ನ ವರ್ಚಸ್ಸನ್ನು ಉಳಿಸಿಕೊಂಡು ಬಂದ ಶ್ರೇಯಸ್ಸು ಶೈವಧರ್ಮಕ್ಕೆ ಸಲ್ಲುತ್ತದೆ.

ಹೀಗೆ ಶೈವ ಧರ್ಮವು ಪ್ರಾಚೀನ ಕಾಲದಿಂದಲೂ ಕಂಡುಬರುತ್ತಿದ್ದು, ಭಾರತದಲ್ಲಿ ಹೆಚ್ಚು ವಿಸ್ತಾರಗೊಂಡು ಹಾಗೂ ಕಾಲಕಾಲಕ್ಕೆ ಏಳುಬೀಳುಗಳನ್ನು ಕಂಡರೂ ಪ್ರಸ್ತುತದವರೆಗೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿರುವ ಏಕೈಕ ಧರ್ಮವೆಂದು ಹೇಳಿದರೆ ತಪ್ಪಾಗಲಾರದು. ಇಂತಹ ಶೈವ ಧರ್ಮದಲ್ಲಿಯೂ ಉಪಪಂಥಗಳು ಇಲ್ಲದಿಲ್ಲ. ಈ ಮೊದಲೇ ಪೀಠಿಕೆಯಲ್ಲಿ ತಿಳಿಸಿರುವಂತೆ ಲಕುಲೀಶ, ಪಾಶುಪತ, ಕಾಳಾಮುಖ ಮುತ್ತು ಕಾಪಾಲಿಕ ಎಂಬ ಪಂಥಗಳು ಪ್ರಾಚೀನ ಶೈವಧರ್ಮದಲ್ಲಿ ಕಂಡುಬರುತ್ತವೆ. ಅವುಗಳ ಸಂಕ್ಷಿಪ್ತ ಪರಿಚಯ ಈ ಕೆಳಗಿನಂತಿರುವುದು.

**ಪಾಶುಪತ ಪಂಥ**

ಮಹಾಭಾರತದ ಶಾಂತಿಪರ್ವದಲ್ಲಿ ಪಾಶುಪತದ ಉಲ್ಲೇಖವಿದೆ. ಪ್ರಾರಂಭದಲ್ಲಿ ಇದಕ್ಕೆ ಪಶುಪತಿಯ ಮತವೆಂತಲೂ ಮುಂದೆ ಪುರಾಣಗಳಲ್ಲಿ ಉಲ್ಲೇಖವಾಗಿರುವಂತೆ ಶಿವ(ಪತಿ) ತನ್ನ ಸೃಷ್ಟಿಯಿಂದಾದ ಜೀವಿಗಳನ್ನು(ಪಶು) ಭವಬಂಧನದಿಂದ(ಪಾಶ) ಬಿಡಿಸುವ ಮತವೆಂತಲೂ, ಇದರ ಅನುಯಾಯಿಗಳೇ ಪಾಶುಪತರೆಂತಲೂ ಹೇಳಿದೆ. ಈ ಧರ್ಮದ ಸಂಸ್ಥಾಪಕ ಶಿವನೆಂದೂ, ಶ್ರೀಕಂಠನೆಂದೂ ಭಿನ್ನಾಭಿಪ್ರಾಯವಿದೆ. ಬಹುಜನ ವಿದ್ವಾಂಸರು ಶ್ರೀಕಂಠನೇ ಸ್ಥಾಪಿತನೆಂದು, ಲಕುಲೀಶನು ಅದನ್ನು ವ್ಯವಸ್ಥಿತವಾಗಿ ಪ್ರತಿಪಾದಿಸಿದವನೆಂದು ಹೇಳುತ್ತಾರೆ. ಇನ್ನು ಕೆಲವರು ಪಾಶುಪತ ಧರ್ಮದ ಸ್ಥಾಪಕ ಲಕುಲೀಶನೆಂದೂ ಚಿಂತ್ರಪ್ರಶಸ್ತಿಯಲ್ಲಿ ಬರುವಂತೆ(ರಚನೆ ಕ್ರಿ.ಶ.೧೨೭೪–೧೯೬) ಅವನು ಶಿವನ ಅವತಾರವೆಂದೂ ಅವತಾರ ಸ್ಥಳ ಲಾಟ ದೇಶದ ಕಾರೋಹಣವೆಂದೂ ಅಭಿಪ್ರಾಯಪಡುತ್ತಾರೆ. ಆ ಸ್ಥಳವನ್ನು ಅವರು ಬೂಲ್ಹರ್ ಈಗಿನ ಕಾರ್ವಾಣ್ ಎಂದು ಗುರುತಿಸಿದ್ದಾರೆ. ಲಕುಲೀಶನ ನಾಲ್ವರು ಶಿಷ್ಯರಾದ ಕುಶಿಕ ಗಾರ್ಗ್ಯ, ಕೌರುಷ ಮತ್ತು ಮೈತ್ರೇಯರಿಂದ ಆ ಧರ್ಮದ ನಾಲ್ಕು ಶಾಖೆಗಳು ಉಂಟಾದವು. ಲಕುಲೀಶನು ಆ ಧರ್ಮವನ್ನು ಸ್ಥಾಪಿಸಿದ್ದರಿಂದ ಅದಕ್ಕೆ ಲಕುಲೀಶ ಪಾಶುಪತದರ್ಶನವೆಂಬ ಹೆಸರು ಬಂದಿತು. ಲಕುಲೀಶನೆಂದರೆ ಲಾಕುಳ ಹೆಸರಿನ ದಂಡವನ್ನು ಹಿಡಿದವರ ಸ್ವಾಮಿ ಎಂದು ದಲಾಲ್ ಅವರು ಗಣಕಾರಿಕಕ್ಕೆ(ಕ್ರಿ.ಶ.೧೦ನೇ ಶತಮಾನದ ಕೃತಿ) ಮುನ್ನುಡಿ ಬರೆಯುತ್ತಾ ತಿಳಿಸಿದ್ದಾರೆ. ಲಕುಲೀಶನ ವಿಗ್ರಹ ಬಲಗೈಯಲ್ಲಿ ಮಾದಲ ಫಲ ವನ್ನು ಎಡಗೈಯಲ್ಲಿ ದಂಡವನ್ನು ಹಿಡಿದಂತೆ ರೂಪಿತವಾಗಿರುತ್ತದೆ.[೭೦] ಪ್ರಾಚೀನ

ಕಾಲದಲ್ಲಿಯೇ ಲಕುಲೀಶ ಪಾಶುಪತಧರ್ಮ ನಿಶ್ಚಿತ ಆಕಾರವನ್ನು ಪಡೆದು ಬೆಳೆಯಿತು. ಮುಂದೆ ಬಂದ ಅನೇಕ ಶೈವಶಾಖೆಗಳು ಈ ಧರ್ಮದಿಂದ ತತ್ವಗಳನ್ನು ಸ್ವೀಕರಿಸಿ ಬೇರೆ ಬೇರೆಯಾಗಿ ಬೆಳೆದವು. ಏನೇ ಅನ್ಯಶಾಖೆಗಳು ಬೆಳೆದು ಬಂದರೂ ಪಾಶುಪತವು ೧೨ನೇ ಶತಮಾನದವರೆಗೂ ಪ್ರಭಾವಿ ಧರ್ಮವಾಗಿಯೇ ಮುಂದುವರೆಯಿತು.[೨೧] ಪಾಶುಪತ ಪಂಥದ ಕಾಲದ ಕುರಿತು ಸ್ಪಷ್ಟತೆಯಿಲ್ಲ.

ಟಿ.ಎ.ಗೋಪಿನಾಥ ರಾವ್‌ರವರು, ಫ್ಲೀಟ್‌ರವರು ಲಕುಲೀಶನ ಕಾಲವನ್ನು ಮೆಲಪಾಡಿ ಮತ್ತು ಬಳ್ಳಿಗಾವಿ ಶಾಸನಗಳ ಆಧಾರಗಳಿಂದ ಕ್ರಿ.ಶ.೧೧ನೇ ಶತಮಾನದ ಆರಂಭಕಾಲ ಎಂದು ಹೇಳಿರುವರು. ಆದರೆ ಈ ಮುಂದೆ ತಿಳಿಸಿರುವ ಕಾರಣಗಳಿಂದಾಗಿ ಅದು ಸರಿಯಲ್ಲ ಎಂದು ಹೇಳಿರುವರು. ಅದೇನೆಂದರೆ, ಕ್ರಿ.ಶ.೮ನೇ ಶತಮಾನದ ಕೊನೆಯ ಕಾಲಾವಧಿಗೆ ಸೇರಿದವರೆನ್ನಲಾದ ಶಂಕರಾಚಾರ್ಯರು ತಮ್ಮ ಶಾರೀರಕ ಭಾಷ್ಯದಲ್ಲಿ ಪಾಶುಪತ ತತ್ವದ ವಿಮರ್ಶೆ ಮಾಡಿರುವರು. ಇದರಲ್ಲಿ ಇವರು "ಮಾಹೇಶ್ವರರು(ಶೈವರು) ಪಶುಪತಿ(ಶಿವ) ಬೋಧಿಸಿದ ಕಾರ್ಯ, ಕಾರಣ, ಯೋಗ, ವಿಧಿ, ದುಃಖಾಂತ ಎಂಬ ಐದು ವರ್ಗಗಳನ್ನು ಪಾಲಿಸಿ ಕೊನೆಯಲ್ಲಿ ಆತ್ಮದಿಂದ ಮುಕ್ತಿಯನ್ನು ಹೊಂದುವರು. ಇವರ ಪ್ರಕಾರ ಪಶುಪತಿಯೇ ದೇವರು ಹಾಗೂ ಕ್ರಿಯಾ ಕಾರಣ" ಎಂದು ಹೇಳಿರುವರು. ಇವರ ಕಾಲದಲ್ಲಿ ವಿಭಿನ್ನ ಪದ್ಧತಿಗಳನ್ನು ಒಳಗೊಂಡ ತತ್ವಗಳ ಕುರಿತ ಗ್ರಂಥ ಅಸ್ತಿತ್ವದಲ್ಲಿದ್ದಿತು. ವಿದ್ಯಾರಣ್ಯರು ಸಹ ಮೇಲೆ ಹೇಳಿದ ಇವೇ ವರ್ಗಗಳನ್ನು ಲಕುಲೀಶ ಪಾಶುಪತರು ಪಾಲಿಸುವರು ಎಂದು ಹೇಳಿರುವರು. ಹಾಗೆಯೇ ನಂತರದ ಬರಹಗಾರ ಮಧುಸೂಧನ ಸರಸ್ವತಿಯವರು ಸಹ ತಮ್ಮ ಪ್ರಸ್ತಾನಭೇದದಲ್ಲಿ ಇದೇ ಹೇಳಿಕೆಯನ್ನು ಪುನರುಚ್ಚರಿಸಿದ್ದಾರೆ. ಪಾಶುಪತ ಪಂಥವು ಲಕುಲೀಶ ಪಾಶುಪತ ಪಂಥ ಎಂದು ಕನಿಷ್ಟ ಶಂಕರಲಿಂಗರಿಗಿಂತ ಮುಂಚೆಯೇ ಅಥವಾ ಅಥರ್ವಶಿರಸೋಪನಿಷತ್‌ನಷ್ಟು ಹಿಂದೆಯೇ ಕರೆಯಲ್ಪಟ್ಟಿರಬಹುದು. ಹಾಗೆಯೇ ದೇವಾರಮ್ ಶ್ಲೋಕಗಳ ಪ್ರಸಿದ್ಧ ಲೇಖಕರು ಅಥವಾ ಕವಿಗಳು ನಾಗಪಟ್ಟಣಮ್ ಮತ್ತು ಕುಂಭಕೋಣಂನ ಶೈವ ದೇವಾಲಯಗಳನ್ನು ಹಾಡುಗಳಲ್ಲಿ ವರ್ಣಿಸಿರುವರು. ಅವರ ಕಾಲದಲ್ಲಿ ಈ ಸ್ಥಳಗಳು ಕಾಯಾರೋಹಣ ಅಥವಾ ಕಾರೋಣ ಎಂಬ ಹೆಸರಿನಿಂದ ಗುರುತಿಸಲ್ಪಡುತ್ತಿದ್ದವು. ಈ ಕವಿಗಳು ಏಳನೇ ಶತಮಾನದ ಮಧ್ಯಕಾಲದಲ್ಲಿ ನೆಲೆಸಿದ್ದರು. ಈ ಆಧಾರವು ಲಕುಲೀಶನ ಕಾಲವನ್ನು ಇನ್ನು ಒಂದು ಶತಮಾನ ಹಿಂದಕ್ಕೆ ತಳ್ಳುತ್ತದೆ[೨೨] ಎಂದು ಹೇಳಿರುವರು. ಈ ಮೂಲಕ ಟಿ.ಎ.ಗೋಪಿನಾಥರಾವ್‌ರವರು ಲಕುಲಶನ ಕಾಲವನ್ನು ಸೂಚ್ಯವಾಗಿ ಹೇಳಿರುವರು.

೭ನೇ ಶತಮಾನದ ಚೀನಾ ಪ್ರವಾಸಿ ಹುಯನ್‌ತ್ಸಾಂಗ್ ತನ್ನ ಪುಸ್ತಕದಲ್ಲಿ ಪಾಶುಪತರ ಹೆಸರನ್ನು ಹನ್ನೆರಡು ಸಾರಿ ಹೇಳುವುದಲ್ಲದೆ ಮಹೇಶ್ವರನ ದೇವಸ್ಥಾನಗಳು ಕೆಲವೆಡೆ ಇದ್ದುವೆಂದೂ ಅಲ್ಲಿ ಪಾಶುಪತರು ಧ್ಯಾನ ಮಾಡುತ್ತಿದ್ದರೆಂದೂ ಹೇಳುತ್ತಾನೆ. ದೇಹಕ್ಕೆ ಭಸ್ಮವನ್ನು ಬಳಿದು ಜಟೆಯನ್ನು ಗಂಟುಗಂಟಾಗಿ ಕಟ್ಟಿ ನಗ್ನವಾಗಿದ್ದುಕೊಂಡು ದೇವ(ಬಹುಶಃ ಶಿವ ಅಥವಾ ಮಹೇಶ್ವರ)ನನ್ನು ಉಪಾಸನೆ ಮಾಡುತ್ತಿದ್ದ ಸನ್ಯಾಸಿಗಳನ್ನು ವಾರಣಾಸಿಯಲ್ಲಿ ಕಂಡುದಾಗಿ ಹೇಳುತ್ತಾನೆ.

ಬಾಣನು ತನ್ನ ಕಾದಂಬರಿಯಲ್ಲಿ ತಾರಾಪೀಡನ ಮಂತ್ರಿ ಶುಕದಾಸನನ್ನು ಕಾಣಲು ಕೆಂಪು ವಸ್ತ್ರಗಳನ್ನು ಧರಿಸಿದ್ದ ಪಾಶುಪತರು ನಿಂತಿದ್ದರು ಎಂದು ವರ್ಣಿಸುತ್ತಾನೆ.

ಈ ಮೇಲಿನ ಎಲ್ಲ ಆಧಾರಗಳಿಂದ ಲಕುಲೀಶ ಪಾಶುಪತ ಪಂಥದ ಕಾಲವನ್ನು ಒಟ್ಟಾರೆಯಾಗಿ ೭ನೇ ಶತಮಾನ ಎಂದು ಹೇಳಬಹುದು. ಈಗಾಗಲೇ ತಿಳಿಸಿದಂತೆ ಕಾಳಾಮುಖರು ಸಹ ಪಾಶುಪತದ ಉಪಪಂಥವಾಗಿ ಕಾಣಿಸಿಕೊಳ್ಳುತ್ತಾರೆ. ಶೈವಾಗಮಗಳು ಕೆಲವೊಮ್ಮೆ ಶೈವ ಧರ್ಮವನ್ನು ಶೈವ, ಪಾಶುಪತ, ಸೋಮಸಿದ್ಧಾಂತ ಮತ್ತು ಲಾಕುಳ ಎಂದು ವಿಭಾಗಿಸುತ್ತದೆ. ಹಾಗೆಯೇ ಇನ್ನೂ ಕೆಲವು ಕಡೆ ಶೈವರನ್ನು ಶೈವ, ಪಾಶುಪತ, ಕಾಪಾಲಿಕ ಮತ್ತು ಕಾಳಾಮುಖ ಎಂಬ ವಿಭಾಗಗಳನ್ನಾಗಿ ಮಾಡಲಾಗಿದೆ. ಈ ಎರಡು ಗುಂಪುಗಳಲ್ಲಿ ಮೊದಲ ಎರಡು ಪಂಥಗಳು ಒಂದೇ ತೆರನಾಗಿವೆ. ಪ್ರಭೋಧ ಚಂದ್ರೋದಯಮ್‌ದಿಂದ ಸೋಮಸಿದ್ಧಾಂತವು ಕಾಪಾಲಿಕರ ಅಧಿಕೃತ ಪಠ್ಯಪುಸ್ತಕವಾಗಿದೆ ಎಂದು ತಿಳಿಸುತ್ತದೆ. ಉಳಿದಂತೆ ಲಾಕುಳ ಪಂಥವು ಬಹುಶಃ ಕಾಳಾಮುಖರ ವಿಚಾರಗಳನ್ನೇ ಒಳಗೊಂಡಿದೆ. ಬಳ್ಳಿಗಾವೆ ಶಾಸನಗಳಲ್ಲಿ ಕಾಳಾಮುಖ ಗುರುಗಳು "ಸಿದ್ಧಾಂತಗಳ ಅರಿವಿನಲ್ಲಿ ನಕುಲೀಶ್ವರ" ಎಂಬಂತಹ ಕೆಲವು ವ್ಯಾಖ್ಯಾನವನ್ನು ವರ್ಣಿಸಿದ್ದಾರೆ. ಇದು ಸ್ಪಷ್ಟವಾಗಿ ಕಾಳಾಮುಖರು ಮತ್ತು ಲಕುಲೀಶ ಪಾಶುಪತರು ಒಂದೇ ಎಂಬುದನ್ನು ದೃಢಪಡಿಸುತ್ತದೆ.[೭೪]

## ಕಾಳಾಮುಖರು

ಲಾಕುಳ ಅಥವಾ ಪಾಶುಪತರಿಗೆ ಕಾಳಾಮುಖರೆಂಬ ಹೆಸರೂ ಇದೆ. ಕಾಳಾಮುಖರು ಕಾಪಾಲಿಕರ ಗುಂಪಿಗೆ ಸೇರಿದಂತೆ ರಾಮಾನುಜರು ನಿರೂಪಿಸುವುದನ್ನು ಆಧಾರವಾಗಿಟ್ಟುಕೊಂಡು ಆರ್.ಜಿ.ಭಂಡಾರ್ಕರ್ ಅವರು ಕಾಳಾಮುಖರೂ ಕಾಪಾಲಿಕರೂ ಒಂದೇ ಎಂದು ಹೇಳುತ್ತಾರೆ. ಇದಕ್ಕೆ ಯಾವ ಆಧಾರವೂ ಇಲ್ಲ. ಕಾಪಾಲಿಕರದು ಸಂಪೂರ್ಣವಾಗಿ ವಾಮಾಚಾರಗಳ ಪಂಥವಾದರೆ ಕಾಳಾಮುಖರದು ಶುದ್ಧ ಸಾತ್ವಿಕಾಚರಣೆಗಳ ಪಂಥ. ಅಲ್ಲದೆ ಅವರು ಪಾಶುಪತ-ಲಾಕುಳ ವರ್ಗಕ್ಕೆ ಸೇರಿದವರೆಂಬುದು ಸ್ಪಷ್ಟವಾಗುತ್ತದೆ. ಇವರನ್ನು ಅಸಿತವಕ್ತ್ರರೆಂದು ತಮಿಳುನಾಡಿನ ಶಾಸನವೊಂದರಲ್ಲಿ ಕರೆದಿದೆ.[೭೫] ಕಾಳಾಮುಖರು ಹಣೆಗೆ ಕಪ್ಪು ಗೆರೆಗಳನ್ನು ಹಚ್ಚಿಕೊಳ್ಳುತ್ತಿದ್ದರು. ಮತ್ತು ಅವರು ನರ(ಮನುಷ್ಯ) ಮತ್ತು ರಾಕ್ಷಸರ ಮಕ್ಕಳಾಗಿ ಜನಿಸಿದವರು ಎಂದು ಹೇಳಿ ಕೊಳ್ಳುತ್ತಿದ್ದರು.[೭೬] ಕಾಳಾಮುಖರಲ್ಲಿ ಶಕ್ತಿಪರಿಷೆ ಹಾಗೂ ಸಿಂಹ ಪರಿಷೆ ಎಂಬ ಎರಡು ಮುಖ್ಯ ಶಾಖೆಗಳಿವೆ. ಎರಡನೆಯ ಶಾಖೆಯು ಆಂಧ್ರಪ್ರದೇಶ ಹಾಗೂ ಕರ್ನಾಟಕ ಪ್ರಾಂತಗಳನ್ನೊಳಗೊಂಡ ವಿಸ್ತೃತ ಭೂಭಾಗದಲ್ಲಿ ಕಂಡುಬರುತ್ತದೆ. ಮೊದಲ ಶಾಖೆಯು ಹೆಚ್ಚಾಗಿ ಧಾರವಾಡ ಹಾಗೂ ಮೈಸೂರು ಸೀಮೆಗೆ ಶಿವಮೊಗ್ಗ ಜಿಲ್ಲೆಗೆ ಸೀಮಿತಗೊಂಡಿದೆ. ಶಕ್ತಿ ಪರಿಷತ್ತಿನ ಬೇರೆ ಬೇರೆ ನಾಲ್ಕು ಶಾಖೆಗಳು ಪ್ರಸಿದ್ಧವಾದುವುಗಳೇ ಆಗಿದ್ದರೂ ಅಷ್ಟಾಗಿ ಪ್ರಸಿದ್ಧವಲ್ಲದ ಇನ್ನೂ ಕೆಲವು ಉಪಶಾಖೆಗಳಿದ್ದುವೆಂದು ಭಾವಿಸಬಹುದಾಗಿದೆ. ಇವುಗಳಲ್ಲಿ ಎಲ್ಲಕ್ಕೂ ಹೆಚ್ಚಿನ ಪ್ರಾಮುಖ್ಯತೆಯನ್ನು

ಹೊಂದಿದ ಶಾಖೆಯು ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆ ಊರಿನ ಕೇದಾರೇಶ್ವರ ದೇವಾಲಯದಲ್ಲಿ ತನ್ನ ಕೇಂದ್ರವನ್ನು ಹೊಂದಿದ್ದಿತು. ಇಲ್ಲಿಯ ಯತಿಗಳು ತಾವು ಶಕ್ತಿಪರ್ಷೆಯ(ಅಥವಾ ಶಕ್ತಿ ಪರಿಷತ್ತು) ಪರ್ವತಾವಳಿಯ(ಅಥವಾ ಪರ್ವತಾಮ್ನಾಯ) ಮೂವರ ಕೋಣೆಯ ಸಂತತಿಯವರೆಂದು (ಅಥವಾ ಸಂತಾನ) ಹೇಳಿಕೊಳ್ಳುತ್ತಿದ್ದರು. ಇಲ್ಲಿ ಬರುವ ಪರಿಷತ್ತು, ಆವಳಿ ಸಂತತಿ ಎಂಬ ಪದಗಳು ಕೆಲವು ಸೈದ್ಧಾಂತಿಕ ವ್ಯತ್ಯಾಸಗಳನ್ನು ಒಳಗೊಂಡಿರಬಹುದಾದರೂ ಅವು ಈ ಸಂಸ್ಥೆಯ ಶಾಖೆಗಳನ್ನು ಸ್ಪಷ್ಟವಾಗಿ ನಿರ್ದೇಶಿಸುತ್ತವೆ. 'ಪರ್ಷೆ' ಎಂಬುದು ಸಂಸ್ಕೃತದ ಪರಿಷತ್(ಗುಂಪು, ಸಭೆ, ಮಂಡಲಿ) ಪದದ ಕನ್ನಡ ರೂಪ. 'ಆವಳಿ'(ಸಾಲು, ಶ್ರೇಣಿ, ರಾಜವಂಶ) ಆಮ್ನಾಯ (ಪವಿತ್ರವಾದ ಸಂಪ್ರದಾಯ ಅಥವಾ ಗ್ರಂಥ ಪಾಠಗಳ ಬೋಧನೆ) ಹಾಗೂ ಸಂತತಿ ಅಥವಾ (ಮುಂದುವರಿಕೆ, ಪೀಳಿಗೆ, ವಂಶಕ್ರಮ) ನೇರವಾಗಿ ಸಂಸ್ಕೃತ ಪದಗಳಿದ್ದರೂ ಅವುಗಳ ಬಳಕೆಯು ತೀರ ಅಪರೂಪದ್ದು. ಶಕ್ತಿ ಪರಿಷತ್ತನ್ನು ಹೆಣ್ಣು ದೇವತೆಗಳ ಶ್ರೇಣಿ ಎಂದೂ ನಾವು ಅನುವಾದಿಸಬಹುದು. ಈ ಎರಡನೆಯ ಪದವು ಬಹುಮಟ್ಟಿಗೆ ಕನೋಜನ ಕರ್ನೂಲ್ ಜಿಲ್ಲೆಯ ಪವಿತ್ರವಾದ ಸ್ಥಳ ಶ್ರೀ ಪರ್ವತ ಅಥವಾ ಶ್ರೀಶೈಲವನ್ನು ನಿರ್ದೇಶಿಸುತ್ತದೆ. ಶ್ರೀ ಪರ್ವತವು ಕಾಳಾಮುಖರ ಒಂದು ಮಹತ್ವ ತೀರ್ಥಕ್ಷೇತ್ರವಾಗಿದ್ದು, ಶಾಸನಗಳಲ್ಲಿ ಇದನ್ನು ಕುರಿತು ಮತ್ತೆ ಮತ್ತೆ ಉಲ್ಲೇಖಿಸಿರುವುದು ಕಂಡುಬರುತ್ತದೆ. ಪರ್ವತ ಪದವು ಹಿಮಾಲಯದ ಪವಿತ್ರ ಕೇದಾರನಾಥ ಪರ್ವತವನ್ನು ಸೂಚಿಸುತ್ತಿದ್ದು, ಅದನ್ನು ಬಳ್ಳಿಗಾವೆಯಲ್ಲಿ ದೇವಾಲಯದ ಹೆಸರಿನಿಂದ ಅಥವಾ ಪರ್ವತದ ಸಂತಾನಳಾದ ಪಾರ್ವತಿಯ ಹೆಸರಿಂದ ನೆನಪಿನಲ್ಲಿ ಉಳಿಯುವಂತೆ ಮಾಡಿದ್ದಿರಬಹುದು. ಭುಜಂಗಾವಳಿ ಅಥವಾ ಸಂತತಿಯು ಶಿವ ಹಾಗೂ ನಾಗರ ಹಾವಿನ ಸಂಪರ್ಕವನ್ನು ಕುರಿತಾದ ಅಪ್ರತ್ಯಕ್ಷ ಸೂಚನೆ ಆಗಿರುವಂತಿದೆ.[೭೭] ಕಾಳಾಮುಖರ ಧರ್ಮವನ್ನು 'ಕಾಳಾಮುಖ ಸಮಯ' ಎಂದೂ ಕರೆಯಲಾಗಿದೆ. ಕಾಳಾಮುಖ ಎಂಬುದು ಆರು ಜ್ಯೋತಿರ್ಲಿಂಗಗಳಲ್ಲಿ ಒಂದು.[೭೮] ಪಾಶುಪತರು ಹೇಗೆ ಲಕುಲೀಶ್ವರನ ಮುಖದಿಂದ ಹೊರಟ ಶಾಸ್ತ್ರದ ಅನುಯಾಯಿಗಳೋ ಹಾಗೆಯೇ ಕಾಳಾಮುಖರೂ ಕೂಡ ಆಗಿದ್ದಾರೆ. ಲಾಕುಳರು ಮತ್ತು ಕಾಳಾಮುಖರು ನಡೆಯಿಸಿದ ಸಾಮಾಜಿಕ ಚಟುವಟಿಕೆಗಳು ಒಂದೇ ರೀತಿಯವು. ಕಾಳಾಮುಖವು ಒಂದು 'ಸಮಯ'(ಮತ) ಲಾಕುಲಾಗಮ ಅವರ ಗ್ರಂಥ ಕಾಳಾಮುಖ ಸಮಯವನ್ನು 'ಎಕ್ಕೋಟಿ ಸಮಯ'ವೆಂದೂ, ಕಾಳಾಮುಖ ಮಠವನ್ನು 'ಎಕ್ಕೋಟಿ ಮಠ'ವೆಂದೂ ಅನೇಕ ಶಾಸನಗಳು ಕರೆದಿವೆ. ಶಾಸನಗಳೂ ತಮ್ಮ ಫಲಶ್ರುತಿಯಲ್ಲಿ ಶಾಸನವನ್ನು ಮೀರಿದವರಿಗೆ 'ಎಳ್ಕೋಟಿ ಮುನೀಂದ್ರ'ರನ್ನು ಕೊಂದ ಪಾಪವು ಬರುತ್ತದೆ ಎಂದು ಹೇಳುತ್ತವೆ. ಈ 'ಏಳ್ಕೋಟಿ'ಯೇ 'ಎಕ್ಕೋಟಿ'.[೭೯] ಲಾಕುಳ-ಪಾಶುಪತ-ಕಾಳಾಮುಖ ಧರ್ಮವನ್ನು ಶಾಸನಗಳಲ್ಲಿ ಶಿವಸಮಯ, ಶಿವಧರ್ಮ, ಲಗುಡಿಗಳ ಧರ್ಮ, ಕಾಳಾಮುಖ ಸಮಯ ಎಂದು ಮುಂತಾಗಿ ಕರೆದಿದೆ. ಈ ಧರ್ಮದ ಅನುಯಾಯಿಗಳನ್ನು ಮಹೇಶ್ವರರು, ಮಾಹೇಶ್ವರರು ಎಂಬ ವಿಶಿಷ್ಟ ಹೆಸರಿನಿಂದ ಕರೆಯುತ್ತಿದ್ದರು.[೮೦]

ಇನ್ನು ಕನ್ನಡ ಸಂಸ್ಕೃತಿಗೆ ಲಾಕುಳ ಶೈವರ ಮುಖ್ಯ ಕೊಡುಗೆಗಳು ಎರಡು. ಒಂದು ಹಳ್ಳಿ ಹಳ್ಳಿಗಳಲ್ಲಿ ಕಂಡುಬರುವ ಶಿವ ದೇವಾಸ್ಥಾನಗಳು ಮತ್ತೊಂದು ಸಂಸ್ಕೃತ ಭಾಷೆಯಲ್ಲಿ ನಿಕ್ಷಿಪ್ತವಾಗಿದ್ದ ಜ್ಞಾನದ ಬೆಳಕು ಆರದಂತೆ ನೋಡಿಕೊಂಡದ್ದು. ಇವರು ಬಹುದೊಡ್ಡ ದೇವಾಸ್ಥಾನ ನಿರ್ಮಾಪಕರು ತಾವು ಕಟ್ಟಿಸಿದ ಅಥವಾ ತಮಗಾಗಿ ಕಟ್ಟಿಸಿದ ದೇವಸ್ಥಾನದಲ್ಲಿ ತಾವು ವಾಸಿಸುತ್ತಾ ಅಲ್ಲಿ ತಮ್ಮ ವೈಯಕ್ತಿಕ ಆಧ್ಯಾತ್ಮಿಕ ಸಾಧನೆಯ ಜೊತೆಗೆ ವಿದ್ಯಾಪುರದ ದೊಡ್ಡ ಹೊಣೆಯನ್ನು ಹೊತ್ತಿದ್ದರು. ಆ ಕಾಲದಲ್ಲಿ ದೇವಸ್ಥಾನವೇ ಮಠವಾಗಿ ಮಠವೇ ಶಾಲೆಯಾಗಿತ್ತು.[೮೧] ೭ನೇ ಶತಮಾನದಿಂದ ೫೦೦ ವರ್ಷಗಳ ಕಾಲ ಇದು ಕರ್ನಾಟಕದಲ್ಲಿ ಬೌದ್ಧ-ಜೈನ ಧರ್ಮಗಳ ವಿರುದ್ಧ ಸ್ಪರ್ಧಿಸುತ್ತ ಪ್ರಬಲವಾಗಿತ್ತು. ಅಲ್ಲದೆ ಇವರಿಗೆ ರಾಜಾಶ್ರಯ ದೊರೆತಿತ್ತು. ಚಾಳುಕ್ಯ ೨ನೇ ಜಯಸಿಂಹನ(೧೦೧೩-೪೨) ರಾಣಿ ಸುಗ್ಗಲೆ ಈ ಪಂಥದವಳಾಗಿದ್ದು ತನ್ನ ಪತಿಯನ್ನೂ ಇದಕ್ಕೆ ಪರಿವರ್ತಿಸಿದಳು. ೨ನೇ ಸೋಮೇಶ್ವರನ ಕಾಲದಲ್ಲಿ ಇದು ಬಹಳ ಪ್ರಬಲವಾಯಿತು. ಇವರ ಇತಿಹಾಸದಲ್ಲಿ ಪ್ರಮುಖನಾದವನೆಂದರೆ ಕೊನೆಯಲ್ಲಿ ಕಂಡುಬರುವ ಶಿವಗುರು, ವಾಣಿವಿಲಾಸ ಕಾಶೀವಿಲಾಸ ಕ್ರಿಯಾಶಕ್ತಿ(ಕ್ರಿ.ಶ.ಸುಮಾರು ೧೩೭೦). ರಾಜಗುರುವೆಂದು ಕೀರ್ತಿತನಾದ ಈತ ವಿದ್ಯಾರಣ್ಯರ ಸಮಕಾಲೀನ ಕ್ರಿಯಾಶಕ್ತಿಯೇ ವಿದ್ಯಾರಣ್ಯರೆಂದು ಹೇಳುವ ವಾದವು ಉಂಟು. ಈತನ ಅನಂತರ ಕಾಳಾಮುಖ ಪಂಥವು ಕ್ಷೀಣವಾದಂತೆ ಕಾಣುತ್ತದೆ.[೮೨] ಕಾಳಾಮುಖ ಪಂಥವನ್ನು ಕುರಿತಂತೆ ನಮ್ಮದೇ ವಿಶ್ವವಿದ್ಯಾಲಯ ಮತ್ತು ವಿಭಾಗದ ವಿದ್ಯಾರ್ಥಿನಿ ಮಂಜುಳಾ ಆಚಾರಿ ಅವರು ಇತ್ತೀಚೆಗಷ್ಟೆ ಪಿಎಚ್.ಡಿ ಮಹಾಪ್ರಬಂಧವನ್ನು ಸಲ್ಲಿಸಿರುವರು. ಇವರ ಪ್ರಬಂಧದಿಂದ ಕಾಳಾಮುಖರ ಕುರಿತು ಇನ್ನೂ ಹೆಚ್ಚಿನ ವಿಷಯಗಳನ್ನು ತಿಳಿಯಬಹುದು.

**ಕಾಪಾಲಿಕರು**

ಕಾಪಾಲಿಕ ಪಂಥವು ಸಹ ಪ್ರಾಚೀನ ಮತ್ತು ಉಗ್ರಸ್ವಭಾವದ ಶೈವ ಪಂಥವಾಗಿದೆ. ಇವರನ್ನು ಮಹಾವ್ರತಿಗಳೆಂದೂ ಕರೆಯಲಾಗಿದೆ. ಕಪಾಲಿನ್(ತಲೆ ಬುರುಡೆ ಹಿಡಿದವನು) ಪದವು ಎಲ್ಲಕ್ಕೂ ಮೊದಲು ಬಹುಮಟ್ಟಿಗೆ ಯಾಜ್ಞವಲ್ಕ್ಯ ಸ್ಮೃತಿ iii ೨೪೩(ಕ್ರಿ.ಶ.೧೦೦೦-೩೦೦೦)ಯಲ್ಲಿ ಕಂಡುಬರುತ್ತವೆ. ಆದರೆ ಈ ಉದ್ಧರಣೆಯಲ್ಲಿ 'ಕಪಾಲಿನ್' ಪದಕ್ಕೆ ತಲೆಬುರುಡೆಯನ್ನು ಹಿಡಿದುಕೊಂಡವನು ಎಂಬ ಅರ್ಥವಷ್ಟೇ ಇದೆ. ಅದು ಕಪಾಲಿಗಳ ಒಂದು ಸಂಪ್ರದಾಯ ಇಲ್ಲವೆ ಪಂಗಡ ಇರುವುದನ್ನು ಸೂಚಿಸುವುದಿಲ್ಲ. ಆದರೆ ಕ್ರಿ.ಶ.೧ನೇ ಶತಮಾನದ ಶಾತವಾಹನ ಅರಸನಾದ ಹಾಲನ 'ಗಾಥಾಸಪ್ತಶತಿ'ಯಲ್ಲಿ ಒಬ್ಬಳು ಹೊಸ ಕಾಪಾಲಿಕಳನ್ನು ಬಣ್ಣಿಸುವ ಪದ್ಯವಿದೆ. ಈಕೆ ಎಡೆಬಿಡದೆ ತನ್ನ ನಲ್ಲನ ಚಿತಾಭಸ್ಮವನ್ನು ಬಳಿದುಕೊಳ್ಳುತ್ತಿರುತ್ತಾಳೆ. 'ಹೊಸ'(ನವ) ಪದದ ಅರ್ಥವೂ ಯುವ ಎಂದಿಷ್ಟೇ ಆಗಿರದಿದ್ದರೆ ಅವಳು ಅವನ ಸಾವಿನ ಸಮಯದಲ್ಲಿ ಕಾಪಾಲಿಕ ವ್ರತವನ್ನು ಸ್ವೀಕರಿಸಿದ್ದಳೆಂಬುದು ಸೂಚಿತವಾಗುತ್ತದೆ. ಇದು ಕಾಪಾಲಿಕ ಸಂಪ್ರದಾಯವನ್ನು ಕುರಿತಾದ ತೀರ ಮೊದಲ ಒಳ್ಳೆಯ ಸಂದರ್ಭವಾಗಿದೆ. ಆದ್ದರಿಂದ ಏಳನೆಯ ಶತಮಾನದ ಹೊತ್ತಿಗೆ ಕಾಪಾಲಿಕ ಯತಿಗಳನ್ನು ಕುರಿತಾದ ಸಂದರ್ಭಗಳು ಬಹುಮಟ್ಟಿಗೆ ಎಲ್ಲರಿಗೂ ತಿಳಿದಿದ್ದವು.

ಜ್ಯೋತಿರ್ವಿಜ್ಞಾನಿ ಹಾಗೂ ಗಣಿತಿಯಾದ ವರಾಹಮಿಹಿರನು (ಇಸವಿ ೫೦೦-೫೭೫) ತನ್ನ ಬೃಹತ್ ಸಂಹಿತೆಯಲ್ಲಿ ix ೨೫ ಕಾಪಾಲಿಕರ ವ್ರತವನ್ನು ಕುರಿತು ನಮೂದಿಸುತ್ತಾನೆ.[೮೪] ಹೆಸರಾಂತ ಚೀನಿ ಪ್ರವಾಸಿಗ ಹುಯೇನ್‌ತ್ಸಾಂಗನು ದಕ್ಷಿಣ ಏಷ್ಯಾದ ತನ್ನ ಪ್ರಯಾಣದ ಕಾಲಕ್ಕೆ (ಕ್ರಿ.ಶ.೬೩೦-೬೪೪) ತಾನು ಬೆಟ್ಟಿಕೊಟ್ಟ ಊರುಗಳಲ್ಲಿ ವಾಸಿಸಿದ ಹಲವು ಬಗೆಯ ಬೌದ್ಧ ಹಾಗೂ ಇತರ ಸಂಪ್ರದಾಯಗಳ ತುಲನಾತ್ಮಕ ಸಾಮರ್ಥ್ಯಗಳನ್ನು ಕುರಿತು ಸಂಕ್ಷಿಪ್ತವಾಗಿ ಕಥನಮಾಡುತ್ತಾನೆ. ಅವನು ಪೂರ್ವ ಅಫಗಾನಿಸ್ತಾನದ ಆಧುನಿಕ ನುರಿಸ್ತಾದ ಕಾಪಿಶಾ ಎಂಬಲ್ಲಿ ಸುಮಾರು ಒಂದು ನೂರಕ್ಕಿಂತಲೂ ಹೆಚ್ಚು ಬೌದ್ಧ ಮಠಗಳಿರುವುದನ್ನು ಕಂಡು ದೇವತೆಗಳ ಸುಮಾರು ಹತ್ತು ದೇವಾಲಯಗಳಿವೆ. ಅಲ್ಲದೆ ಸುಮಾರು ಒಂದು ಸಾವಿರದಷ್ಟು ಪಾಷಂಡಿ ಸಂಪ್ರದಾಯಗಳಿವೆ(ಹಲವು ಬಗೆಯ ಮತಗಳು). ಬೆತ್ತಲೆ ಬೈರಾಗಿಗಳಾಗಿರುವರು. ಭಸ್ಮವನ್ನು ಬಳಿದುಕೊಳ್ಳುವ ಬೇರೆ ಬಗೆಯ ಜನ ಹಾಗೂ ಎಲುವುಗಳಿಂದ ಮಾಲೆಗಳನ್ನು ಮಾಡಿ ತಲೆಗೆ ಕಿರೀಟದ ಹಾಗೆ ಕಟ್ಟಿಕೊಳ್ಳುವ ಜನ ಕೂಡ ಇರುವರು. ಬೀಲ್ ಇವರು ಈ ಜನಗಳನ್ನು ದಿಗಂಬರ ಜೈನ, ಪಾಶುಪತ ಹಾಗೂ ಕಪಾಲಧಾರಿ ಅಂದರೆ ಕಾಪಾಲಿಕರೆಂದು ಗುರುತಿಸುತ್ತಾರೆ.[೮೫]

ದಕ್ಷಿಣಭಾರತದ ಎಲ್ಲಕ್ಕೂ ಹೆಚ್ಚು ಮುಖ್ಯವಾದ ಆಕರ ಎಂದರೆ ಮಹೇಂದ್ರವರ್ಮನ ಮತ್ತವಿಲಾಸ ಪ್ರಹಸನ. ಈ ನಾಟಕದ ಮುಖ್ಯ ಪಾತ್ರವಾದ ಒಬ್ಬ ಕಪಾಲಿನ್ ಯತಿಯು ರಾಜಧಾನಿಯ ಬಳಿಯಲ್ಲಿದ್ದ ಏಕಾಂಬಿರನಾಥನ ದೇವಾಲಯದಲ್ಲಿ ವಾಸಿಸಿದ್ದಾನೆ ಎಂದು ಹೇಳುತ್ತದೆ. ಇದರಿಂದ ತಿಳಿದುಬಂದಿರುವ ಸಂಗತಿಯೆಂದರೆ ಕ್ರಿ.ಶ.ಏಳನೆಯ ಶತಮಾನದ ಶುರುವಿನಿಂದಲೇ ಕಾಪಾಲಿಕರು ದಕ್ಷಿಣ ಭಾರತದಲ್ಲಿ ನೆಲೆಸಿದುದು.[೮೬] ಮಹೇಂದ್ರವರ್ಮನ್ ಸಮಕಾಲೀನನೂ, ಶೈವ ನಾಯ್ನಾರನೂ ಆದ ಅಪ್ಪರ್ ಎನ್ನುವನು ತನ್ನ ನಾಡುನುಡಿಯ ಹಾಡುಗಳಲ್ಲಿ ಶೈವರು, ಪಾಶುಪತರು ಹಾಗೂ ಕಾಪಾಲಿಕರನ್ನು ಕುರಿತು ಉಲ್ಲೇಖಿಸುತ್ತಾನೆ. ಮದ್ರಾಸಿನ ಉಪನಗರವಾದ ಮೈಲಾಪುರದಲ್ಲಿ ಇರುವ ಕಪಾಲೀಶ್ವರ ದೇವಾಲಯವು ಇನ್ನೊಬ್ಬ ನಾಯ್ನಾರನಾದ ಸಂಬಂಧರ್‌ನ(ಕ್ರಿ.ಶ.೬೪೪-೬೬೦) ಒಂದು ಹಾಡಿನ ವಿಷಯವಾಗಿದೆ. ೬ನೇ ಇಲ್ಲವೆ ೭ನೇ ಶತಮಾನದ ತಮಿಳು ಮಹಾಕಾವ್ಯವಾದ ಮಣಿಮೇಖಲೈದಲ್ಲಿ ಕಾಪಾಲಿಕ ಯತಿಗಳನ್ನು ಕುರಿತು ಇನ್ನೊಂದು ಕಿರಿದಾದ ಸಂದರ್ಭವು ಬರುತ್ತದೆ.[೮೭] ಕರ್ನಾಟಕದಲ್ಲಿ ಕಪಾಲಿಕರ ಕುರಿತಾದ ಮೂರು ಶಾಸನಗಳು ದೊರೆತಿವೆ. ಇದರಲ್ಲಿ ಎರಡು ಶ್ರವಣ ಬೆಳ್ಗೊಳದವಾದರೆ ಒಂದು ಮೈಸೂರು ಜಿಲ್ಲೆಯ ನರಸೀಪುರ ತಾಲೂಕಿನ ತಿರುಮಕೂಡಲದ್ದು. ಈ ಮೂರು ಶಾಸನಗಳು ಸೂಚಿಸುವುದೇನೆಂದರೆ ಕಾಪಾಲಿಕರು ಒಂಬತ್ತು ಹಾಗೂ ಹತ್ತನೆ ಶತಮಾನಗಳಲ್ಲಿ ದಕ್ಷಿಣ ಮೈಸೂರು ಪ್ರದೇಶದಲ್ಲಿ ನೆಲೆಸಿದ್ದರೆಂದು,[೮೮] ಈ ಎಲ್ಲ ವಿವರಣೆಗಳು ಕಾಪಾಲಿಕರ ಪ್ರಾಚೀನತೆ ಹಾಗೂ ಕಾಲವನ್ನು ಗುರುತಿಸುವಲ್ಲಿ ಸಹಾಯಕ ವಾಗಿವೆ.

ಶೈವಧರ್ಮದ ವಾಮಾಚಾರ ಪದ್ಧತಿಗೆ ಸೇರಿದ ಕಾಪಾಲಿಕ ಪಂಥವು ಶಿವನು ಬ್ರಹ್ಮ ಕಪಾಲವನ್ನು ಧರಿಸಿ, ಕಂಕಾಲಮೂರ್ತಿಯಾಗಿ ಪರ್ಯಟನೆ ಮಾಡಿದ ಸಂದರ್ಭವನ್ನು ಆಧರಿಸಿ

ರೂಪಗೊಂಡ ಪಂಥವಾಗಿದೆ. ಈ ಕಾಪಾಲಿಕರು ಶಿವನ ಘೋರ ರೂಪವಾದ 'ಉನ್ಮತ್ತ ಭೈರವ'ನನ್ನು ಪೂಜಿಸುತ್ತಾರೆ. ಆನಂದಗಿರಿಯ ಶಂಕರವಿಜಯದಲ್ಲಿ ಉನ್ಮತ್ತ ಭೈರವನನ್ನು ಕಾಪಾಲಿಕರ ಗುರುವೆಂದೂ ಅವನು ಶಂಭು, ಭೈರವ ಮತ್ತು ಕಪಾಲೀಕರ ಸ್ಮರಣೆ ಮಾಡುತ್ತಿದ್ದನೆಂದೂ ಹೇಳಿದೆ. ಇವರು ಉಮಾಸಹಿತನಾದ ಶಿವನನ್ನು ಆರಾಧಿಸಿ ಶಿವನ ಕೃಪೆಯಿಂದ ಕೈಲಾಸವನ್ನು ಸೇರಿ ಅಲ್ಲಿ ಉಮೆಯಷ್ಟೆ ಸುಂದರಿಯರಾದ ಸ್ತ್ರೀಯರೊಡನೆ ವಿಹರಿಸಬಹುದೆಂದು ತಿಳಿದಿದ್ದರು. ಕಾಪಾಲಿಕರು ಕಾಷಾಯವನ್ನು(ಕೆಂಪುವಸ್ತ್ರ) ಧರಿಸುತ್ತಿದ್ದರು. ಶಿರೋಮುಂಡನವನ್ನು ಮಾಡಿಕೊಂಡು ತ್ರಿದಂಡವನ್ನು ಧರಿಸಿ; ಕಮಂಡಲು ಕಪಾಲ ಮತ್ತು ಖಟ್ವಾಂಗಗಳನ್ನು ಧರಿಸುತ್ತಿದ್ದರು. ಯಜ್ಞೋಪವೀತ ಕರ್ಣಕುಂಡಲಗಳನ್ನು ಧರಿಸುತ್ತಿದ್ದ ಇವರು ಸೋಮರಸ(ಮಧ್ಯ)ವನ್ನು ಕುಡಿಯುತ್ತಿದ್ದರಲ್ಲದೆ, ಮಾಂಸ ಭಕ್ಷಣವೂ ಇತ್ತು ಕಪಾಲೀಶಕ್ತಿಯನ್ನು ಆಲಂಗಿಸಿಕೊಂಡು ಸ್ಮಶಾನದಲ್ಲಿ ಯೋಗಸಾಧನೆ ಮಾಡುತ್ತಿದ್ದರು. ಇವರು ನರಬಲಿಯನ್ನು ಕೊಡುತ್ತಿದ್ದರು. ಹಠಯೋಗದಿಂದ 'ಸಿದ್ಧಿ'ಗಳನ್ನು ಗಳಿಸುತ್ತಿದ್ದರು. ಅನೇಕ ಗ್ರಂಥಗಳಲ್ಲಿ ಕಾಪಾಲಿಕರ ತತ್ವಗಳನ್ನು ಸೋಮಸಿದ್ಧಾಂತ ಎಂದು ಕರೆದಿದೆ. ಉತ್ತರಭಾರತದಲ್ಲಿ ಹಲವೆಡೆ ಪ್ರಚಲಿತವಿದ್ದ ಈ ಪಂಥದ ಪ್ರಮುಖ ಕೇಂದ್ರಗಳೆಂದರೆ ನಾಸಿಕದ ಕಪಾಲೇಶ್ವರ ದೇವಾಲಯ, ಉಜ್ಜಿನಿಯ ಮಹಾಕಾಳೇಶ್ವರ ದೇವಾಲಯ ಮುಂತಾದವು. ಶಿವನ ಉಗ್ರರೂಪಗಳ ಉಪಾಸಕರಾಗಿದ್ದ ಇವರಿಗೆ ಶ್ರೀಶೈಲವು ಒಂದು ಪ್ರಮುಖ ಕೇಂದ್ರವಾಗಿತ್ತು. ಈ ಪಂಥವು ಮುಂದೆ ನಾಥಪಂಥದಲ್ಲಿ ಲೀನವಾಯಿತು. ಹೀಗಾಗಿ ನಂತರದಲ್ಲಿ ಇವರ ಪ್ರಭಾವವು ಅಷ್ಟಾಗಿ ಕಾಣಬರುವುದಿಲ್ಲ.[೮೯]

## ನಾಥಪಂಥ

ಈ ಪಂಥವೂ ಸಹ ಶಿವನ ಆರಾಧನೆಯನ್ನು ಒಳಗೊಂಡುದುದಾಗಿದೆ. ಗೋರಖ್‌ನಾಥ ಈ ವಿಶಿಷ್ಟ ಪಂಥದ ಪ್ರವರ್ತಕ. ಆತನ ಗುರು ಹಾಗೂ ಆದಿನಾಥನ ಶಿಷ್ಯ ಮತ್ಸ್ಯೇಂದ್ರನಾಥ ಇದರ ಸ್ಥಾಪಕ ಎನ್ನಲಾಗಿದೆ. ಇದೊಂದು ಪ್ರಸಿದ್ಧ ಯೋಗಪಂಥ. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳೆಂಬ ಅಷ್ಟಾಂಗಗಳಿಂದ ಕೂಡಿದ ಈ ಯೋಗ ಪಂಥಕ್ಕೆ ಬಹಳ ಪ್ರಾಚೀನ ಇತಿಹಾಸವಿದೆ.[೯೦] ಅಲ್ಲದೆ ಈ ಸಂಪ್ರದಾಯವನ್ನು ಸಿದ್ಧಮತ, ಸಿದ್ಧಿಮಾರ್ಗ, ಅವಧೂತ ಮತ, ಯೋಗಮಾರ್ಗ ಎಂದು ಕರೆಯುತ್ತಾರೆ. ಗೋರಖನಾಥನಿಂದ ಬಾರಹಪಂಥೀ ಮಾರ್ಗಗಳು ನಾಥ ಸಂಪ್ರದಾಯವೆನಿಸಿ ಪ್ರಸಿದ್ಧವಾದವು. ಈ ಸಂಪ್ರದಾಯದ ಸಾಧುಗಳು ಅಂಕಿತವಾಗಿ ತಮ್ಮ ಪಂಥದ ಹೆಸರಿನೊಂದಿಗೆ ನಾಥ ಪದವನ್ನು ಸೇರಿಸಿಕೊಳ್ಳುತ್ತಾರೆ. ಕಿವಿಯನ್ನು ಚುಚ್ಚಿಕೊಳ್ಳುವುದು ಮತ್ತು ದರ್ಶನ್ ಎಂಬ ಪವಿತ್ರದುಂಗುರವನ್ನು ಧರಿಸುವುದು ಇವರ ವಿಧಿಗಳಾಗಿದ್ದವು. ಇದರಿಂದಾಗಿ ಇವರನ್ನು ಕಾನಫಟೀಸಾಧು, ದರ್ಶನಿಸಾಧು ಎಂದೂ ಕರೆಯುತ್ತಾರೆ. ಇವರಲ್ಲಿ ಗೃಹಸ್ಥರೂ, ವಿರಕ್ತರೂ ಇದ್ದಾರೆ. ನಾಥ ಸಂಪ್ರದಾಯದ ಪರಂಪರೆಯು ಹಠಯೋಗದ ತಳಹದಿಯ ಮೇಲೆ ನಿಂತಿದೆ.[೯೧] ಈ ರೀತಿ ಹಠಯೋಗದ ಮೇಲೆ ಆಸ್ಥೆಯನ್ನು ಹೊಂದಿ ತಾಂತ್ರಿಕ ಪ್ರಕ್ರಿಯೆಗಳನ್ನು ಹೊಂದಿಸಿಕೊಂಡ ಈ ಮಾರ್ಗದ ಅನುಯಾಯಿಗಳು

ಅವರದೇ ಆದ ಲಾಂಛನವನ್ನು ರೂಪಿಸಿಕೊಂಡಿದ್ದಾರೆ. ಇವರು ಮೂವತ್ತೆರಡು ಲಕ್ಷಣಗಳುಳ್ಳ ಶಿಷ್ಯ ಮೂವತ್ತಾರು ಲಕ್ಷಣಗಳುಳ್ಳ ಗುರುವಿನಲ್ಲಿ ದೀಕ್ಷೆ ಪಡೆಯುತ್ತಾನೆ. ಜ್ಞಾನ, ವಿವೇಕ, ನಿರಾಲಂಬ, ಸಂತೋಷ ಮುಂತಾದ ಎಂಟು ಗುಣಗಳಲ್ಲಿ ನಾಲ್ಕು ವಿಭಾಗ ಮಾಡಿ ಮೂವತ್ತೆರಡು ಲಕ್ಷಣಗಳನ್ನು ಹೇಳಿದ್ದಾರೆ.[೨]

ನಾಥಪಂಥದ ಮಹಾನ್ ಸಂಘಟಕನಾದ ಗೋರಖನಾಥನು ಅತ್ಯಂತ ಪ್ರಭಾವಶಾಲಿ ಪುರುಷ. ಭಾರತದ ಎಲ್ಲ ಪ್ರಾಂತ್ಯಗಳಲ್ಲೂ ಇವನ ಪ್ರಭಾವದ ಮುದ್ರೆ ಇದೆ. ಕನ್ನಡನಾಡಿನಲ್ಲಿ ಜನಿಸಿದವರೆಂದು ನಂಬಿಕೆ ಇರುವ ಗೋರಖನಾಥನು ಮಧ್ಯಕಾಲೀನ ಸಮಾಜದಲ್ಲಿ ವಾಮಾಚಾರದ ಕೆಸರಿನಿಂದ ಧರ್ಮವನ್ನು ಮೇಲೆತ್ತಿದ ಮಹಾಪುರುಷ ಎನಿಸಿದ್ದಾನೆ. ಇವನಿಂದ ಪ್ರಚಲಿತಗೊಂಡ ನಾಥಪಂಥದ ಪ್ರಭಾವವು ಕರ್ನಾಟಕದ ಹಲವು ಭಾಗಗಳಲ್ಲಿ ಕಂಡುಬರುತ್ತದೆ. ಕೊಲ್ಹಾಪುರವು ನಾಥಪಂತದ ಪ್ರಸಿದ್ಧ ಕೇಂದ್ರವಾಗಿತ್ತು. ಗೋರಖನಾಥನು ಇಲ್ಲಿ ನೆಲೆಸಿದ್ದನೆಂದು ತಿಳಿದುಬರುತ್ತದೆ. ಅಲ್ಲದೆ ಗಾಣಿಗಪುರ, ಮಂಡ್ಯಜಿಲ್ಲೆಯ ಆದಿಚುಂಚನಗಿರಿ ಮಠ, ಚಿತ್ರದುರ್ಗದ ಅಂಕಲಗಿ ಮಠ, ಚಿಕ್ಕಮಗಳೂರಿನ ಬಾಬಾಬುಡನ್‌ಗಿರಿ, ಬೆಳಗಾವಿ ಜಿಲ್ಲೆಯ ಹಂಡಿಬಡಿಗನಾಥ, ನಿಪ್ಪಾಣಿ ಬಳಿಯ ಅಪ್ಪಾಚಿವಿಡಾ –ಇವೆಲ್ಲವೂ ಈ ಪಂಥದ ಪ್ರಮುಖ ಕೇಂದ್ರಗಳಾಗಿವೆ. ಹೀಗೆ ಕರ್ನಾಟಕದಾದ್ಯಂತ ನಾಥಪಂಥದ ಪ್ರಭಾವವು ಇಂದಿಗೂ ಪಸರಿಸಿದೆ.[೩] ನಾಥ ಪಂಥದ ಕುರಿತು ಇನ್ನೂ ಹೆಚ್ಚಿನ ವಿಷಯಗಳು 'ನಾಥಪಂಥ'[೪] ಎಂಬ ಗ್ರಂಥದಲ್ಲಿ ಲಭ್ಯವಾಗುತ್ತವೆ.

**ತಮಿಳುನಾಡಿನ ಶೈವಪಂಥ**

ತಮಿಳುನಾಡಿನಲ್ಲಿ ಪ್ರಾಚೀನ ಕಾಲದಿಂದಲೂ ಶೈವಮತವು ಪ್ರಚಲಿತದಲ್ಲಿತ್ತು. ಕ್ರಿ.ಶ.೨–೩ನೇ ಶತಮಾನದಲ್ಲಿದ್ದ ಕರಿಕಾಲಚೋಳನ ಕಾಲದಲ್ಲಿ ಶೈವಮತವು ತಮಿಳುನಾಡಿನಲ್ಲಿ ಪ್ರಮುಖವಾಗಿತ್ತು. 'ಶಿಲಪ್ಪದಿಕಾರಂ' ಕೃತಿಯು ಇವನನ್ನು ಉಲ್ಲೇಖಿಸಿರುವುದಾಗಿ ತಿಳಿಯುತ್ತದೆ. ವಿಶೇಷವಾಗಿ ಶೈವಮತವು ಎರಡು ಪ್ರಕಾರಗಳಲ್ಲಿ ಪ್ರಸಾರವಾಗಿತ್ತು. ಅವು ಸ್ತುತಿಗಳು ಮತ್ತು ಸಿದ್ಧಾಂತಗಳು. ತಮಿಳುನಾಡಿನಲ್ಲಿ ಶೈವಮತವು ಹೆಚ್ಚಾಗಿ ಸ್ತುತಿಗಳ ಮೂಲಕವೇ ಪಸರಿಸಿದ್ದು ಜನಮನವನ್ನು ಧರ್ಮದೆಡೆಗೆ ಸೆಳೆದಿತ್ತು. ಸಂಸ್ಕೃತ ಭಾಷೆಯ ವೇದಗಳಿಗಿದ್ದಷ್ಟೇ ಪ್ರಾಶಸ್ತ್ಯವನ್ನು ಇಲ್ಲಿ ಸ್ತುತಿಗಳಿಗೆ ನೀಡಿದ್ದರು. ತಮಿಳುನಾಡಿನಲ್ಲಿ ಕ್ರಿ.ಶ.೬ನೇ ಶತಮಾನದಲ್ಲಿ ನೆಲೆಸಿದ್ದ ಅಪ್ಪಾರ್ ಮತ್ತು ತಿರುಜ್ಞಾನ ಸಂಬಂಧರ್ ಎಂಬ ಶ್ರೇಷ್ಠ ಭಕ್ತರು ಪಲ್ಲವ ಮತ್ತು ಪಾಂಡ್ಯ ರಾಜ್ಯಗಳಲ್ಲಿ ಶೈವ ಮತವನ್ನು ಪ್ರಸಾರ ಮಾಡಿದರು. ಈ ಇಬ್ಬರು ಭಕ್ತರ ಜೊತೆಗೆ ಸುಂದರರು ರಚಿಸಿದ ಶಿವಸ್ತುತಿಗಳೂ ಒಟ್ಟಾಗಿ ಸೇರಿ 'ತೇವಾರಂ' ಎಂದು ಪ್ರಸಿದ್ಧವಾಗಿವೆ. ಕ್ರಿ.ಶ.ಐದನೇ ಶತಮಾನದಲ್ಲಿ ತಿರುಮೂಲರ್ ಎಂಬುವನು ಉತ್ತರಭಾರತದಲ್ಲಿ ಸಂಚರಿಸಿ ಕಾಶ್ಮೀರದ ಪ್ರತ್ಯಭಿಜ್ಞ ಪಂಥವನ್ನು ಸೇರಿದ್ದನು. ಇವನು ತಮಿಳುನಾಡಿಗೆ ಹಿಂತಿರುಗಿದಾಗ ಇಪ್ಪತ್ತೆಂಟು ಶೈವ ಆಗಮಗಳನ್ನು ಕಾಶ್ಮೀರದಿಂದ ತಂದನೆಂದು ತಿಳಿದುಬರುತ್ತದೆ.

ತಮಿಳುನಾಡಿನಲ್ಲಿ ಶೈವಭಕ್ತಿ ಪ್ರಸಾರ ಮಾಡಿದವರು ಶ್ರೇಷ್ಠ ಶಿವಭಕ್ತರಾದ ನಾಯನಾರ್‌ರು ಇವರ ಕಾಲ ಸು.ಕ್ರಿ.ಶ.೫–೬ನೇ ಶತಮಾನ. ಇವರನ್ನು ಅರವತ್ತಮೂರು ಪುರಾತನರೆನ್ನುವರು. ಈ ಪುರಾತನರ ಬಗೆಗೆ ಕ್ರಿ.ಶ.೧೧ನೇ ಶತಮಾನದ ಕೊನೆಯಲ್ಲಿದ್ದ ಶೇಕ್ಕಿಳಾರ್ ಎಂಬುವನು ತಮಿಳಿನಲ್ಲಿ ಪೆರಿಯಪುರಾಣವನ್ನು ರಚಿಸಿದನು. ಕ್ರಿ.ಶ.೯ನೇ ಶತಮಾನದಲ್ಲಿದ್ದ ಮಾಣಿಕ್ಯವಾಚಕರ್‌ರು ತಮಿಳು ಸಿದ್ಧಾಂತವನ್ನು ಬೋಧಿಸಿದ್ದರು. ಇವರು ತಿರುವಾಚಕರ್ ಮತ್ತು ತಿರುಕ್ಕೋವೈ ಎಂಬ ಕೃತಿ ರಚಿಸಿದರು. ಇವರ ಶಿಷ್ಯರಾಗಿದ್ದ ಹದಿನಾಲ್ಕು ಜನ ಶಿವಭಕ್ತರು ಸನಾತನ ಗುರುಗಳೆನಿಸಿದ್ದಾರೆ. ಇವರು ವಾಯವೀಯ ಸಂಹಿತೆಯನ್ನು ಬೋಧಿಸಿ ಶೈವ ಭಕ್ತಿ ಸಿದ್ಧಾಂತವನ್ನು ಪ್ರಸಾರ ಮಾಡಿದರು. ತಮಿಳುನಾಡಿನ ಶೈವ ಸಿದ್ಧಾಂತದ ಕೇಂದ್ರಗಳೆಂದರೆ ತಿರುನಲ್ವೇಲಿ, ಮಧುರೈ ಮತ್ತು ತಿರುವಣ್ಣಾಮಲೈಗಳು. ಇಲ್ಲಿ ಶಿವಾಲಯಗಳಲ್ಲಿ ಪೂಜಾರಾಧನೆಯು ಒಂದು ಭಾಗವಾಗಿ ಸಂಸ್ಕೃತದ ಆಗಮಗಳ ಒಂದು ಭಾಗವೆಂದೇ ಭಾವಿಸಿರುವ ತಿರುಮುರೈಯನ್ನು ಪಠಿಸಲಾಗುತ್ತದೆ.

ಕರ್ನಾಟಕ ಮತ್ತು ತಮಿಳುನಾಡಿನ ನಡುವೆ ನಾನಾ ಕಾರಣಗಳಿಗಾಗಿ ಸಂಪರ್ಕವು ಬೆಳೆದಿತ್ತು. ಇದರಂತೆ ತಮಿಳು ನಾಡಿನ ಅರವತ್ತಮೂರು ಪುರಾತನರ ಪ್ರಭಾವವು ಕರ್ನಾಟಕದ ಶೈವರ ಮೇಲೂ ಆಗಿತ್ತು. ಹನ್ನೆರಡನೇ ಶತಮಾನದಲ್ಲಿದ್ದ ಹರಿಹರ ಕವಿಯು ಬೇಡರ ಕಣ್ಣಪ್ಪ, ತಿರುನೀಲಕಂಠ, ನಂಬಿಯಣ್ಣ ಮೊದಲಾದವರ ಬಗೆಗೆ ರಗಳೆಗಳನ್ನು ರಚಿಸಿದ್ದಾನೆ. ಮೈಸೂರು ಜಿಲ್ಲೆಯ ನಂಜನಗೂಡು, ಚಾಮರಾಜನಗರ, ಕೃಷ್ಣಗಿರಿ ಜಿಲ್ಲೆಯ ಹೊಸೂರು ಬೆಟ್ಟದ ಚಂದ್ರಮೌಳೇಶ್ವರ ದೇವಾಲಯ ಮುಂತಾದೆಡೆಗಳಲ್ಲಿ ಅರವತ್ತಮೂರು ಪುರಾತನರ ಶಿಲ್ಪಗಳಿದ್ದು, ಪೂಜೆಗೊಳ್ಳುತ್ತಿವೆ.[೫]

## ಕಾಶ್ಮೀರ ಶೈವ ಧರ್ಮ

ಕಾಶ್ಮೀರದಲ್ಲಿ ಕ್ರಿ.ಶ.೯ನೇ ಶತಮಾನದಲ್ಲಿ ಕಾಶ್ಮೀರ ಶೈವಧರ್ಮದ ಪುನರುತ್ಥಾನವಾಯಿತು. ಈ ಶೈವಧರ್ಮ ಅದ್ವೈತ ತತ್ವವನ್ನಾಧರಿಸಿದ್ದು. ಇದು ಕೇವಲ ಯುಕ್ತವಾದವಲ್ಲ; ಬರಿ ಶಾಸ್ತ್ರಗ್ರಂಥಗಳನ್ನೇ ಆಶ್ರಯಿಸುದುದಲ್ಲ; ಇದಕ್ಕೆ ೬೪ ಶೈವಾಗಮಗಳೇ ಮುಖ್ಯ ಆಧಾರಗ್ರಂಥಗಳು. ಈ ಧರ್ಮ ಅನೇಕ ಸಾಧಕರ ಸಾಧನೆಯುಂಟಾದ ಅನುಭವ ಸಿದ್ಧವಾದ ವಿಷಯಗಳಿಂದ ಕೂಡಿದ ಸಮನ್ವಯ ಪಂಥ, ಈ ಸಂಪ್ರದಾಯದಲ್ಲಿ ಯಜ್ಞಯಾಗಾದಿಗಳಿಗೆ ಸ್ಥಾನವಿಲ್ಲ. ಜಾತಿಭೇದಗಳ ನಿರ್ಬಂಧವಿಲ್ಲ. ಈ ಶೈವಧರ್ಮವನ್ನು ಸ್ವತಂತ್ರವಾದುದೆಂದು ಹೇಳುತ್ತಾರೆ. ಏಕೆಂದರೆ, ಇಲ್ಲಿ ಪರಶಿವನಿಗೆ ಪೂರ್ಣ ಸ್ವಾತಂತ್ರ್ಯವಿದೆ. ಪತಿ, ಪಶು, ಪಾಶ ಎಂಬ ಮೂರು ತತ್ವಗಳನ್ನೊಳಗೊಂಡಿರುವುದರಿಂದಲೂ ಭೇದ, ಭೇದಾಭೇದ, ಅಭೇದ ಎಂಬ ದೃಷ್ಟಿಗಳನ್ನು ಸಮನ್ವಯಗೊಳಿಸಿರುವುದರಿಂದಲೂ ಈ ಮತವನ್ನು ತ್ರಿಕಶಾಸ್ತ್ರವೆಂದೂ ಕರೆಯುತ್ತಾರೆ.[೬]

ಈ ಧರ್ಮದ ಆಧಾರಗ್ರಂಥವಾದ 'ಶಿವಸೂತ್ರ'ಗಳನ್ನು ವಸ್ತುಗುಪ್ತನು ಸಿದ್ಧನಿಂದ ಅಥವಾ ಶಂಕರನಿಂದ ಕಂಡುಕೊಂಡಿದ್ದಾನೆ. ಈ ವಿಷಯವಾಗಿ ಕಾಶ್ಮೀರ ದೇಶದಲ್ಲಿ ಹಲವು ಕಥೆಗಳು ಪ್ರಚಾರದಲ್ಲಿವೆ. ಅವುಗಳಲ್ಲೊಂದು ಕೆಳಗಿನಂತಿದೆ.

ಲೋಕದಲ್ಲಿ ಅಧ್ಯಾತ್ಮಿಕ ಅವನತಿಯು ಬೆಳೆಯಹತ್ತಿತ್ತು. ಅದನ್ನು ಕಂಡು ಮರುಕಗೊಂಡು ಮಹಾದೇವನು, ಮಹಾದೇವಗಿರಿಯಲ್ಲಿ ತಪಸ್ಸು ಮಾಡುತ್ತಿರುವ ವಸ್ತುಗುಪ್ತನ ಕನಸಿನಲ್ಲಿ ಬಂದು ಸಮೀಪದಲ್ಲಿರುವ ಬಂಡೆಗಲ್ಲಿನ ಮೇಲೆ ಶಿವಸೂತ್ರಗಳು ಬರೆಯಲ್ಪಟ್ಟಿರುವವೆಂದೂ, ಬರೆದ ಭಾಗವು ಪಾಪಿಗಳ ದೃಷ್ಟಿಗೆ ಬೀಳಬಾರದೆಂದು ನೆಲದೊಳಗೆ ಮುಚ್ಚಿರುವುದೆಂದೂ, ಮುಂಜಾನೆ ಆತನು ಅಲ್ಲಿಗೆ ಹೋಗಿ ಕಲ್ಲನ್ನು ಮುಟ್ಟಿದರೆ ಅದು ಅಕ್ಷರಗಳುಳ್ಳ, ಸ್ಥಾನವು ಮೇಲಾಗುವಂತೆ ಹೊರಳುವದೆಂದೂ, ಓದಿದ ಕೂಡಲೇ ಆತನಿಗೆ ಅವುಗಳ ಅರ್ಥವು ಭಾಗವಾಗುವದೆಂದೂ, ಅವನ್ನು ಯೋಗ್ಯ ಶಿಷ್ಯನಿಗೆ ಉಪದೇಶಿಸಬೇಕೆಂದೂ ಅಪ್ಪಣೆಯನ್ನಿತ್ತನು. ಅದೇ ಪ್ರಕಾರ ವಸ್ತುಗುಪ್ತನು ಮುಂಜಾನೆ ನಿರ್ದಿಷ್ಟ ಸ್ಥಳಕ್ಕೆ ಹೋಗಿ ನೋಡಲು ಸ್ವಪ್ನದಲ್ಲಿ ಕಂಡಂತೆ ಶಿವಸೂತ್ರಗಳು ದೊರಕಿದವು. ಅವನ್ನು ಕಲ್ಲಟ, ಸೋಮಾನಂದ ಮೊದಲಾದ ಶಿಷ್ಯರಿಗೆ ಉಪದೇಶಿಸಿದನು.

ಆದಿಯಲ್ಲಿ ಸರ್ವ ಶೈವಶಾಸ್ತ್ರಗಳು ಅರುವತ್ತು ನಾಲ್ಕು ಶೈವದರ್ಶನಗಳಾಗಿದ್ದವು. ಆದರೆ ಅವೆಲ್ಲವು ದ್ವೈತ, ಅದ್ವೈತ, ದ್ವೈತಾದ್ವೈತ ಅಥವಾ ಅಭೇದ, ಭೇದ, ಭೇದಾ ಭೇದಗಳೆಂದು ಮೂರು ಮುಖ್ಯ ಭಾಗಗಳಾಗಿದ್ದವು. ಕಲಿಕಾಲಮಹಿಮೆಯಿಂದ ೬೪ ಶೈವದರ್ಶನಗಳಲ್ಲಿ ಅನೇಕ ದರ್ಶನಗಳು ಅವುಗಳನ್ನು ಬಲ್ಲ ಋಷಿಗಳೂ ಮಾಯವಾದರು. ಆದುದರಿಂದ ಲೋಕದಲ್ಲಿ ಜನರು ಆಧ್ಯಾತ್ಮಿಕ ಅವನತಿ ಹೆಚ್ಚಿತು. ಶಿವನು ಕೈಲಾಸಪರ್ವತದಲ್ಲಿ ಶ್ರೀಕಂಠರೂಪದಿಂದ ದೂರ್ವಾಸನಿಗೆ ಪ್ರತ್ಯಕ್ಷನಾಗಿ ಶಿವಶಾಸ್ತ್ರಗಳನ್ನು ಲೋಕದಲ್ಲಿ ಹಬ್ಬಿಸೆಂದು ಅನುಜ್ಞೆಯಿತ್ತನು. ದುರ್ವಾಸ, ತ್ರ್ಯಂಬಕ, ಅಮರ್ದಕ, ಶ್ರೀನಾಥರೆಂದು ಮೂವರು ಮಾನಸಪುತ್ರರನ್ನು ನಿರ್ಮಿಸಿ, ಅಭೇದ, ಭೇದ, ಭೇದಾಭೇದವೆಂದು ಮೂರು ರೂಪುಗಳಲ್ಲಿರುವ ಅನಾದಿ ಮತ್ತು ನಿತ್ಯವಾದ ಶೈವಧರ್ಮವನ್ನು ಹಬ್ಬಿಸಬೇಕೆಂದು ಅವರಿಗೆ ಅಪ್ಪಣೆಯಿತ್ತನು. ತ್ರ್ಯಂಬಕನು ಅಭೇದಶೈವನನ್ನೂ, ಅಮರ್ದಿಕನು ಭೇದ ಶೈವವನ್ನೂ, ಶ್ರೀನಾಥನು ಭೇದಾಭೇದ ಶೈವನ್ನೂ ಬೋಧಿಸಿದರು. ತ್ರ್ಯಂಬಕನಿಂದ ಹರಡಿಸಲ್ಪಟ್ಟ ಅಭೇದ ಅಥವಾ ಅದ್ವಯಶೈವವು ತ್ರಿಕವೆಂದು ಪ್ರಸಿದ್ಧಿ ಹೊಂದಿತು.[೯೨]

ಕಾಶ್ಮೀರ ಶೈವ ದರ್ಶನಕ್ಕೆ ಸಂಬಂಧಪಟ್ಟ ಸಾಹಿತ್ಯ ವಿಫುಲವಾಗಿದೆ. ಆಗಮಕ್ಕೆ ಸೇರಿದ ಮುಖ್ಯವಾದ ತಂತ್ರಗಳಿಗೆ ದ್ವೈತದ ಕಡೆ ಒಲವು ಇದ್ದುದರಿಂದ ಶಿವ ಇದನ್ನು ತಡೆಗಟ್ಟಲು ವಸುಗುಪ್ತನಿಗೆ ಶಿವಸೂತ್ರಗಳನ್ನು ರಚಿಸಿದ. ಇವನ ಶಿಷ್ಯನಾದ ಕಲ್ಲಟ ಸ್ಪಂದಸೂತ್ರಗಳ ಮೇಲೆ ಒಂದು ವೃತ್ತಿಯನ್ನು ರಚಿಸಿದ. ಈತ ರಚಿಸಿದ ಭಾಷ್ಯಗಳಲ್ಲಿ ತತ್ವಾರ್ಥ ಚಿಂತಾಮಣಿ ಮಧುವಾಹಿನಿಗಳು ಖಿಲವಾಗಿವೆ. ಭಾಸ್ಕರ ಬರೆದ ಶಿವಸೂತ್ರವಾರ್ತಿಕದಲ್ಲಿ ಪಲ್ಲಟನ ಭಾಷ್ಯ ಉಳಿದಿದೆ. ಪ್ರತ್ಯಾಭಿಜ್ಞಾದರ್ಶನದ ಸ್ಥಾಪಕನಾದ ಸೋಮಾನಂದ(ಕ್ರಿ.ಶ.೮೫೦-೯೦೦) ಶಿವದೃಷ್ಟಿಯನ್ನು ರಚಿಸಿ ಅದರ ಮೇಲೆ ಒಂದು ವೃತ್ತಿಯನ್ನು ಬರೆದ. ಇವನ ಶಿಷ್ಯನಾದ ಉತ್ಪಲಾಚಾರ್ಯ ಪ್ರತ್ಯಭಿಜ್ಞಾ ಸೂತ್ರವನ್ನು ರಚಿಸಿದ. ಇವನ ಮಗ ಲಕ್ಷ್ಮಣನ(ಕ್ರಿ.ಶ.೮೫೦-೧೦೦೦) ಶಿಷ್ಯನಾದ ಅಭಿನವಗುಪ್ತ (ಕ್ರಿ.ಶ.೯೫೩-೧೦೧೫) ಮಾಲಿನೀ ವಿಜಯವಾರ್ತಿಕ, ಪರಾತ್ರಿಂಶಿಕಾ ವಿವರಣ ಶಿವದೃಷ್ಟ್ಯಾಲೋಚನ

ಪ್ರತ್ಯಾಭಿಜ್ಞಾವಿವೃತ್ತಿ ವಿಮರ್ಶಿನಿ, ಬೃಹದ್ವೃತ್ತಿ, ಲಘುವೃತ್ತಿ ತಂತ್ರಾಲೋಕ ತಂತ್ರಸಾರ, ಪರಮಾರ್ಥಸಾರ ಮುಂತಾದ ಗ್ರಂಥಗಳನ್ನು ರಚಿಸಿದ. ಇವನ ಶಿಷ್ಯನಾದ ಕ್ಷೇಮರಾಜ(೧೧ನೇ ಶತಮಾನ) ಶಿವಸೂತ್ರ ವೃತ್ತಿ, ಶಿವಸೂತ್ರ ವಿಮರ್ಶಿನಿ, ಪ್ರತ್ಯಭಿಜ್ಞಾಹೃದಯ, ಸ್ಪಂದಸಂದೋಹ, ಸ್ಪಂದ ನಿರ್ಣಯಗಳನ್ನು ರಚಿಸಿದನು.[೯೮] ಹೀಗೆ ಇನ್ನೂ ಅನೇಕ ಗ್ರಂಥಗಳು ಕಾಶ್ಮೀರ ಶೈವಧರ್ಮವನ್ನು ತಿಳಿಸುತ್ತದೆ.

## ವೀರಶೈವ ಮತ

ಈ ಮತ ಕರ್ನಾಟಕದಲ್ಲಿ ಈಗ ಪ್ರಚಲಿತವಿರುವ ಮತಗಳಲ್ಲಿ ಒಂದು. ಮೊದಲೇ ಇದ್ದ ಈ ಮತವು ಕ್ರಿ.ಶ.೧೨ನೇ ಶತಮಾನದ ಕಾಲಕ್ಕೆ ಅತ್ಯಂತ ಶೀಘ್ರವಾಗಿ ಪ್ರಚಾರಪಡೆಯಿತು. ಈ ಮತದ ಉಗಮವನ್ನು ಈಗ ನಮಗೆ ದೊರೆತ ಆಧಾರಗಳಿಂದ ಕಂಡುಹಿಡಿಯಲು ಸಾಧ್ಯವಿಲ್ಲ. ವೀರಶೈವ ಮತದ ಕೆಲವು ಗ್ರಂಥಗಳಲ್ಲಿ ಇದರ ಉಗಮ ಐದು ಆಚಾರ್ಯರಿಗೆ ಅನ್ವಯಿಸಿದೆ ಎಂದು ಉಲ್ಲೇಖಿಸಿದೆ. ಇವರು ಪರಮೇಶ್ವರನ ಪಂಚಮುಖಗಳಿಂದ ಉದ್ಭವಿಸಿದ ಪಂಚಗಣಾಧೀಶ್ವರರೆಂದೂ ಯುಗಯುಗಾಂತಗಳಲ್ಲಿ ಬೇರೆ ಬೇರೆ ನಾಮಗಳಿಂದ ಭೂಮಿಗೆ ಅವತರಿಸಿ ವೀರಶೈವ ಮಾರ್ಗವನ್ನು ಸ್ಥಾಪಿಸಿದರೆಂದೂ ಕಲಿಯುಗದಲ್ಲಿ ಕೊಲ್ಲಿಪಾಕಿ, ವಟಕ್ಷೇತ್ರ, ಸುಧಾಕುಂಡ, ದ್ರಾಕ್ಷಾರಾಮ, ವಾರಣಾಸಿಗಳೆಂಬ ಭರತಖಂಡದ ಪ್ರಸಿದ್ಧ ಕ್ಷೇತ್ರಗಳಲ್ಲಿ ಲಿಂಗಗಳಿಂದುದ್ಭವಿಸಿ ಸರ್ವತ್ರ ಸಂಚರಿಸಿ, ಬಾಳೆಹಳ್ಳಿ, ಉಜ್ಜಯಿನಿ, ಶ್ರೀಶೈಲ, ಹಿಮವತ್ ಕೇದಾರ, ಕಾಶಿ ಕ್ಷೇತ್ರಗಳಲ್ಲಿ ಮಠಗಳನ್ನು ಸ್ಥಾಪಿಸಿದರೆಂದೂ ಪ್ರತೀತಿ ಇದೆ. ಇವರಿಗೆ ಕಲಿಯುಗದಲ್ಲಿ ರೇವಣಸಿದ್ಧ, ಮರುಳಸಿದ್ಧ, ಪಂಡಿತಾರಾಧ್ಯ, ಏಕೋರಾಮ, ವಿಶ್ವಾರಾಧ್ಯರೆಂದು ಹೆಸರು. ಇವರಿಂದ ಸ್ಥಾಪಿಸಲ್ಪಟ್ಟವೆಂದು ಪ್ರತೀತಿಯಿದ್ದ ಮಠಗಳು ಈಗಲೂ ಅಸ್ತಿತ್ವದಲ್ಲಿವೆ.[೯೯]

ವೀರಶೈವಾಚರಣೆಯನ್ನು ಶೈವಾಚರಣೆಯಿಂದ ಬೇರ್ಪಡಿಸುವ ಮುಖ್ಯವಾದ ಕೆಲವು ವ್ಯತ್ಯಾಸಗಳೆಂದರೆ ಅಂಗದ ಮೇಲೆ ಲಿಂಗ ಧರಿಸಿರುವುದು. ಇಷ್ಟಲಿಂಗ ಪೂಜೆ, ಷಟ್‌ಸ್ಥಲ ಮಾರ್ಗಾನುಸರಣೆಗಳು. ಇವು ಅನ್ಯ ಶೈವ ಮಾರ್ಗಗಳಲ್ಲಿ ಕಂಡುಬರುವ ಅಂಶಗಳಾಗಿಲ್ಲ. ಕರ್ನಾಟಕದ ಮಧ್ಯಯುಗದಲ್ಲಿ ಅತ್ಯಂತ ಪ್ರಬಲ ಶೈವ ಶಾಖೆಯಾಗಿದ್ದ ಕಾಳಮುಖರಲ್ಲಿ ಲಿಂಗಧಾರಣೆ ಯಾವ ಶಾಸನದಲ್ಲಿಯೂ ಕಂಡುಬರುವುದಿಲ್ಲ. ಅವರು ಮುಖ್ಯವಾಗಿ ಸ್ಥಾವರ ಲಿಂಗಾರಾಧಕರು. ಇನ್ನು ಹರಿಹರನ ಕೃತಿಗಳಲ್ಲಿ ವಿಶೇಷವಾಗಿ ಮಾನ್ಯರಾದ ತಮಿಳುನಾಡಿನ ಶಿವಭಕ್ತರು ವೀರಶೈವರಿಂದ ಭಿನ್ನರಾಗಿಯೇ ಕಂಡುಬರುತ್ತಾರೆ. ಅವರೂ ಮುಖ್ಯವಾಗಿ ಸ್ಥಾವರ ಲಿಂಗಾರಾಧಕರು. ಆಚರಣೆಯಲ್ಲಿ ಪರಸ್ಪರ ವಿರುದ್ಧಾಂಶಗಳು ಮೂಲಭೂತವಾಗಿ ಇದ್ದರೂ ವಚನಕಾರರು ಕನ್ನಡ ವೀರಶೈವ ಕವಿಗಳು ಇವರನ್ನು ಮನಸಾರೆ ಸ್ತುತಿಸಿದ್ದಾರೆ. ತಮಿಳುನಾಡಿನ ಶಿವಭಕ್ತರಿಗೂ ವೀರಶೈವರಿಗೂ ಇದ್ದ ಸಮಾನ ಭೂಮಿಕೆ ಎಂದರೆ ಮುಖ್ಯವಾಗಿ ಶಿವಭಕ್ತಿಯೊಂದೇ ಎಂದು ಹೇಳಬಹುದು.[೧೦೦] ಆದರೆ ವೀರಶೈವಮತದಲ್ಲಿ ಲಿಂಗವೇ ಸರ್ವಸ್ವವಾಗಿದೆ. ಇವರು ಯಾವಾಗಲೂ ಶರೀರದ ಮೇಲೆ ಲಿಂಗ ಧರಿಸಿರುವುದರಿಂದ, ದೇಹವು ಶುದ್ಧವಾಗುವುದೆಂದೂ, ಶರೀರ ಶುದ್ಧಿಗೆ ಕರ್ಮಾಡಿಗಳ

ಅಗತ್ಯವಿಲ್ಲವೆಂದೂ ನಂಬಿದ್ದಾರೆ. ವೀರಶೈವರು ಅಗತ್ಯವಾಗಿ ಆಚರಿಸತಕ್ಕವುಗಳಲ್ಲಿ ಅಷ್ಟಾವರಣಗಳು ಮುಖ್ಯವಾದವು. ಅವುಗಳೆಂದರೆ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ ಮತ್ತು ಮಂತ್ರಗಳು. ವೀರಶೈವ ದೀಕ್ಷೆ ಪಡೆದ ಶರಣನು 'ಲಿಂಗಪತಿ ಶರಣಸತಿ' ತತ್ವವನ್ನು ಅನುಸರಿಸಿ ಏಕನಿಷ್ಠೆಯಿಂದ ಶಿವಪೂಜೆಯಲ್ಲಿ ತೊಡಗುವನು. ಬಾಹ್ಯಾಚಾರಗಳಿಗೆ ಹೆಚ್ಚು ಮಹತ್ವ ನೀಡದ ವೀರಶೈವಧರ್ಮವು ಮಾನಸಪೂಜೆಯನ್ನು ಗುಪ್ತ ಭಕ್ತಿಯಿಂದ ಶಿವನನ್ನು ಅರ್ಚಿಸುತ್ತಿದ್ದ ವೀರಶೈವರು ತಮ್ಮ ಶೈವ ನಿಷ್ಠೆಗೆ ಭಂಗ ಬಂದಾ ಹಿಂಸಾವೃತ್ತಿಗಿಳಿದು ವೀರಶೈವರೆನಿಸಿದರು. ಶರಣರು ಸ್ಥಾವರಲಿಂಗವನ್ನು ವಿರೋಧಿಸಿ ಇಷ್ಟಲಿಂಗ ಪೂಜೆಯನ್ನು ಪ್ರಚುರಗೊಳಿಸಿದರು. ದೇವಾಲಯ ನಿರ್ಮಾಣವನ್ನು ಖಂಡಿಸಿದರು. ಆದರೆ ಚಿಕ್ಕ ಚಿಕ್ಕ ಲಿಂಗಗಳನ್ನು ದೇಹದ ಮೇಲೆ ಧರಿಸುವ ಪದ್ಧತಿ ರೂಢಿಗೆ ಬಂದಿತು.[೧೦೧]

ಬಸವಣ್ಣನವರಿಂದಲೇ ವೀರಶೈವ ಮತ ಸ್ಥಾಪಿತವಾಯಿತೆಂದು ಕೆಲವರ ಗ್ರಹಿಕೆ. ಆದರೆ ಬಸವಣ್ಣನವರ ಚರಿತ್ರೆಯನ್ನು ವಿವರಿಸಿರುವ ಗ್ರಂಥಗಳ ಅಧ್ಯಯನದಿಂದ ಅವರು ಮತಸ್ಥಾಪಕರಿದ್ದಂತೆ ತೋರುವುದಿಲ್ಲ. ಭೀಮಕವಿಯಂತೂ ಅವರು ವೀರಶೈವ ದೀಕ್ಷೆಯನ್ನು ಪಡೆದರೆಂದು ಹೇಳಿರುವನು. ಬಸವಣ್ಣನವರ ಭಕ್ತಿ ಮತ್ತು ಧರ್ಮದ ಮೇಲಿನ ಪ್ರೇಮವನ್ನು ಕೇಳಿ ದೇಶ ದೇಶಗಳಿಂದ ಶರಣರು ಅವರ ಹತ್ತಿರಕ್ಕೆ ಬರಲಾರಂಭಿಸಿದರೆಂದು ಸ್ಪಷ್ಟವಾಗಿ ಉಲ್ಲೇಖವಿದೆ. ಈ ಎಲ್ಲ ಶರಣರಿಗೆ ಬಸವಣ್ಣನವರು ಗುರುಗಳಾಗಿಲ್ಲ, ಬದಲಾಗಿ ಬಸವಣ್ಣನವರೇ ಅವರೆಲ್ಲರನ್ನು ಪೂಜಿಸುತ್ತಿದ್ದರು. ಬಸವಣ್ಣನವರೇ ಮತಸ್ಥಾಪಕರಾಗಿದ್ದರೆ ಹೀಗಾಗುತ್ತಿರಲಿಲ್ಲ. ಬೇರೆ ಬೇರೆ ಭಾಗಗಳಿಂದ ಶರಣರು ಬಂದು ಬಸವಣ್ಣನವರ ಹತ್ತಿರ ಕಲೆಯಹತ್ತಿದ್ದುದರಿಂದ ಆಯಾ ಭಾಗಗಳಲ್ಲಿ ವೀರಶೈವ ಮತ ಅಲ್ಪ ಪ್ರಮಾಣದಲ್ಲಿಯಾದರೂ ಇತ್ತೆಂದು ನಂಬಬೇಕಾಗುವುದು. ವೀರಶೈವ ಮತ ಕ್ರಿ.ಶ.೧೨ನೇ ಶತಮಾನದಲ್ಲಿ ಬಹಳವಾಗಿ ಮಾರ್ಪಾಟು ಆಗಿರಬೇಕು. ಇದು ಕ್ರಿ.ಶ.೧೧ನೇ ಶತಮಾನಕ್ಕೂ ಪೂರ್ವದಲ್ಲಿ ಇದ್ದಿರಬೇಕು. ಎಷ್ಟು ಶತಮಾನಗಳ ಪೂರ್ವದಲ್ಲಿ ಇತ್ತೆಂಬುದನ್ನು ಹೇಳಲು ಈಗ ಸಾಧ್ಯವಿಲ್ಲ. ಆದರೂ ಮಹಾಭಾರತದ ಕಾಲದಲ್ಲಿ ಈ ಮತದ ವಿಚಾರಗಳನೇಕ ಅಸ್ತಿತ್ವದಲ್ಲಿದ್ದುವೆಂದು ಊಹಿಸಲು ಅವಕಾಶವಿದೆ. ವೀರಶೈವ ತತ್ವಜ್ಞಾನ ಶಾಸ್ತ್ರವಾದ ಚೆನ್ನಬಸವಣ್ಣನವರೇ ಬರೆದಿರುವರೆಂದು ಪ್ರತೀತಿ ಇರುವ ಕರಣ ಹಸುಗೆಯಲ್ಲಿಯ ಅನೇಕ ವಿಷಯಗಳು ಮಹಾಭಾರತದಲ್ಲಿಯವುಗಳಿಗೆ ಹೋಲಿಕೆಯಾಗುವುದರಿಂದ ವೀರಶೈವರು ತಮ್ಮ ತತ್ವಜ್ಞಾನವೆಂದು ತಿಳಿಯುವ ಕರಣ ಹಸುಗೆಯ ತತ್ವವಿವೇಚನೆ ಮಹಾಭಾರತ ಕಾಲದಷ್ಟು ಹಳೆಯದೆಂಬುದನ್ನು ಒಪ್ಪಿಕೊಳ್ಳಬೇಕಾಗುವುದು. ವೀರಶೈವರ ಅರ್ವಾಚೀನ ಪ್ರಸಿದ್ಧ ಗ್ರಂಥಕಾರನಾದ ನಿಷ್ಠೂರ ನಂಜಣಾಚಾರ್ಯನು (ಕ್ರಿ.ಶ.೧೭೫೫) ವೀರಶೈವರನ್ನು ಮಹಾಪಾಶುಪತರೆಂದು ಕರೆದಿದ್ದಾನೆ. ಮಹಾಭಾರತ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಪಾಶುಪತರ ಕೆಲವು ಆಚಾರ ವಿಚಾರಗಳು ಈಗಲೂ ವೀರಶೈವರಲ್ಲಿ ಕಂಡುಬರುವುದು. ಕ್ರಿ.ಶ.೧೧-೧೨ನೆಯ ಶತಮಾನಗಳಲ್ಲಿ ಪಾಶುಪತರೂ, ಕಾಶ್ಮೀರ ಶೈವರೂ, ಕಾಳಾಮುಖರು ನಮ್ಮ ಕನ್ನಡನಾಡಿನಲ್ಲಿ

ಇದ್ದರೆಂದು ಶಿಲಾಶಾಸನಗಳಿಂದ ಕಂಡುಬರುವುದು. ಆದುದರಿಂದ ಆ ಕಾಲದ ಶೈವಪಂಥಗಳನ್ನೆಲ್ಲ ಒಳಗೊಂಡ ಈಗಿನ ವೀರಶೈವ ಮತವು ಪ್ರಾಚೀನ ಕಾಲದಲ್ಲಿ ಪಾಶುಪತ ಪಂಥವಾಗಲಿ ಅದರ ಒಳಭೇದಗಳಲ್ಲೊಂದಾಗಲಿ ಆಗಿರಬಹುದೆಂದು ತರ್ಕಿಸಲಾವಕಾಶವಿದೆ.

ಬಸವಣ್ಣನವರಿಗೂ ಮೊದಲು ಹಲವರು ಈ ಮತ ಪ್ರಸಾರಕ್ಕೆ ಹೆಣಗಾಡಿದಂತೆ ಆಧಾರಗಳು ದೊರೆಯುತ್ತವೆ. ಅವರು ಜೇಡರ ದಾಸಿಮಯ್ಯ ಹಾಗೂ ಐತಿಹಾಸಿಕ ಪವಾಡ ಪುರುಷನಾದ ಏಕಾಂತದ ರಾಮಯ್ಯ ಇವರೇ ಮೊದಲಾದವರು. ಇವರ ನಂತರ ಬಸವಯುಗ ಪ್ರಾರಂಭ ವಾಗುವುದು. ಬಸವಯುಗದಲ್ಲಿ ಮಹತ್ವದ ವ್ಯಕ್ತಿಗಳು ಬಸವಣ್ಣನವರೇ ಆದಾಗ್ಯೂ ಧಾರ್ಮಿಕ ಕ್ರಾಂತಿಯ ಶ್ರೇಯಸ್ಸು ಬಸವಣ್ಣನವರ ಬೆಂಬಲಿಗರಾದ ಶರಣರಿಗೆ ಸಲ್ಲುತ್ತದೆ. ಕಲ್ಯಾಣವನ್ನೇ ಕೇಂದ್ರಸ್ಥಾನವಾಗಿ ಮಾಡಿಕೊಂಡು ಬಸವಣ್ಣನವರ ಆಶ್ರಯದಲ್ಲಿದ್ದ ಶರಣರೆಲ್ಲರೂ ಬಸವಣ್ಣನವರು ಕಲ್ಯಾಣವನ್ನು ಬಿಟ್ಟ ಮೇಲೆ ಮನಬಂದತ್ತ ಹೊರಟುಹೋಗಿ ಕಲ್ಯಾಣದಲ್ಲಿ ಆಚರಣೆಯಲ್ಲಿ ತಂದ ವೀರಶೈವ ತತ್ವಗಳನ್ನು ವಚನವಾಙ್ಮಯದ ಮೂಲಕ ಹೇಳತೊಡಗಿದರು. ತೀರ ಸುಲಭ ಮತ್ತು ಅಜ್ಞರಿಗೂ ಕೂಡ ತಿಳಿಯುವ ಮಾತುಗಳಲ್ಲಿ ತತ್ತ್ವಜ್ಞಾನದ ತಿರುಳನ್ನು ಹೇಳಹತ್ತಿದರು. ಇದರಿಂದಾಗಿ ಆ ಕಾಲದಲ್ಲಿದ್ದ ಅನೇಕ ಶೈವಪಂಥಗಳು ತಮ್ಮತಮ್ಮೊಳಗಿನ ವ್ಯತ್ಯಾಸಗಳನ್ನು ಹರಿದೊಗೆದು ಒಂದಾಗಿ ವೀರಶೈವ ಮಾರ್ಗವನ್ನೇ ಅನುಸರಿಸಿ ಅದರ ಬೆಳವಣಿಗೆಗೆ ಕಾರಣವಾದವು. ಬಸವಣ್ಣನವರ ತರುವಾಯ ಸುಮಾರು ನೂರು ವರ್ಷಗಳವರೆಗಾದರೂ ಧರ್ಮ ಪ್ರಸಾರದ ಕೆಲಸ ಸಾವಕಾಶವಾಗಿ ನಡೆದಿರಬಹುದು. ೧೩ನೇ ಶತಮಾನದ ಆದಿಯಲ್ಲಿ ಕಲಚೂರ್ಯರೂ ಚಾಲುಕ್ಯರೂ ಉರುಳಿ ಹೊಯ್ಸಳ ಮತ್ತು ಯಾದವರಿಬ್ಬರೇ ಉಳಿದರು. ಕೆಲ ವರ್ಷಗಳಲ್ಲಿ ಕರ್ನಾಟಕದ ಉತ್ತರ ಭಾಗವನ್ನು ಯಾದವರು ದಕ್ಷಿಣ ಭಾಗವನ್ನು ಹೊಯ್ಸಳರು ಆಕ್ರಮಿಸಿದರು. ಇದೇ ಕಾಲಕ್ಕೇ ಮುಸಲ್ಮಾನರು ಧಾಳಿ ಮಾಡಿ ತಮ್ಮ ವರ್ಚಸ್ಸನ್ನು ಹೆಚ್ಚಿಸತೊಡಗಿದರು. ಹೊಯ್ಸಳರು ಮುಸಲ್ಮಾನರನ್ನು ತಡೆಯಲು ಸಮರ್ಥರಾಗಿರಲಿಲ್ಲ. ಇದೇ ಸಂದರ್ಭದಲ್ಲಿ ವಿಜಯನಗರ ರಾಜ್ಯ ಸ್ಥಾಪನೆಯಾಗಿ ಹಿಂದಿನ ಸಂಸ್ಕೃತಿ ನಾಶವಾಗದಂತೆ ನೋಡಿಕೊಂಡಿತು. ವಿಜಯನಗರದ ರಾಜರಲ್ಲನೇಕರು ಶೈವ ಪಕ್ಷಪಾತಿಗಳಾಗಿದ್ದು ವೀರಶೈವರ ಆಶ್ರಯದಾತರೂ ಆಗಿದ್ದರು. ವಿಜಯನಗರ ಸಾಮ್ರಾಜ್ಯ ನಾಶವಾದರೂ ಈ ಮತ ಪ್ರಸಾರ ಮುಂದುವರೆಯಿತು.[೧೨] ಹೀಗೆ ಶೈವಧರ್ಮವು ಮೇಲಿನ ಎಲ್ಲ ಉಪಪಂಥಗಳನ್ನು ಒಳಗೊಂಡು ಇಂದಿಗೂ ನಿರಂತರವಾಗಿ ಸಾಗಿರುವುದು.

**ಅಡಿಟಿಪ್ಪಣಿಗಳು**

೧. ಯಳನಾಡು ಅಂಜನಪ್ಪ, *ಧರ್ಮ ಮತ್ತು ಮುಕ್ತ ವಿಚಾರ*, ಪು.೧೫

೨. ಕಡಪಟ್ಟಿ ಎಂ.ಎಸ್., *ಪ್ರಾಚೀನ ಕರ್ನಾಟಕದಲ್ಲಿ ಶೈವಧರ್ಮ*, ಪು.೯

೩. Sundara A., *Indus-Sarasvati civilization: Early saiva cult, Sri Pushpanjali*, Ramesh K.V.(chief editor) Subramonia iyers, Sharma M.J., Swaminathan S., Vasudevan C.S. (Ed.), p.13

೪. John Marshall, *Mohenjodaro and the Indus civilization,* pp.48-78

೫. Sarma I.K., *The Development of Early saiva Art and Architecture,* p.12

೬. ಭಟ್ ಜಿ.ಎನ್., 'ವೇದಗಳಲ್ಲಿ ರುದ್ರತತ್ವ, ಕೃಷ್ಣಮೂರ್ತಿ', ನಿಟಿಲಾಪುರ (ಸಂ.), *ಈಶ್ವರ ದರ್ಶನ,* ಪು.೫

೭. ಶೇಷನವರತ್ನ, *ನಾಲ್ಕು ವೇದಗಳು,* ಪು.೧೬೭

೮. ಅದೇ, ಪು.೧೮೩

೯. ಶಿವಶಂಕರ ಶರ್ಮ ಕೆ., ಯುಜುರ್ವೇದದಲ್ಲಿ ಶಿವ, ಕೃಷ್ಣಮೂರ್ತಿ ನಿಟಿಲಾಪುರ (ಸಂ.), *ಪೂರ್ವೋಕ್ತ,* ಪು.೩೬–೩೭

೧೦. ಅಗ್ನಿಜಿತ್ ದೀಕ್ಷಿತ್ ಅನಂತಕೃಷ್ಣ ಸೋಮಯಾಜಿ, *ಸಾಮವೇದದಲ್ಲಿ ಶಿವ,* ಕೃಷ್ಣಮೂರ್ತಿ ನಿಟಿಲಾಪುರ (ಸಂ.), ಪು.೩೮–೩೯

೧೧. ಕಡಪಟ್ಟಿ ಎಂ.ಎನ್., *ಪೂರ್ವೋಕ್ತ,* ಪು.೧೩–೧೪

೧೨. ರಾಧಾಕೃಷ್ಣಭಟ್ ಎನ್., *ಶೈವ ಉಪನಿಷತ್ತುಗಳ ಸಮೀಕ್ಷೆ,* ಕೃಷ್ಣಮೂರ್ತಿ ನಿಟಿಲಾಪುರ (ಸಂ.), *ಪೂರ್ವೋಕ್ತ,* ಪು.೫೬–೫೯

೧೩. *ಶ್ರೀ ಮದ್ವಾಲ್ಮೀಕಿ ರಾಮಾಯಣ* ಸಂ.೧, ಬಾಲಕಾಂಡ ೨೩, ೩೧, ೩೫, ೩೬, ೩೭, ೪೩, ೪೫ನೇ ಸರ್ಗಗಳು.

೧೪. ಅದೇ, ಸಂ.೧೦, *ಉತ್ತರಕಾಂಡ,* ೧೩, ೧೬, ೩೧ನೇ ಸರ್ಗಗಳು

೧೫. ಶ್ರೀಮನ್ಮಹಾಭಾರತ(ವ್ಯಾಸ ಭಾರತದ ಕನ್ನಡ ಸರಳಾನುವಾದ) ಸಂ.೧, *ಆದಿಪರ್ವ, ಆಸ್ತೀಕ ಪರ್ವ.*

೧೬. ಅದೇ, ಸಂ.೪, *ವನಪರ್ವ, ಕೈರಾತಪರ್ವ*

೧೭. ಅದೇ, ಸಂ.೫, *ವನಪರ್ವ, ತೀರ್ಥಯಾತ್ರಾ ಪರ್ವ*

೧೮. ಅದೇ, ಸಂ.೧೬, *ದ್ರೋಣಪರ್ವ*

೧೯. ಅದೇ, ಸಂ.೨೦, *ಸೌಪ್ತಿಕಪರ್ವ*

೨೦. Sarma I.K., *Op cit,* p.21

೨೧. Bhandarkar R.G., *Vaishnavism, Sivism and Minor Religious Systems,* pp.115-116

೨೨. ಸಿದ್ಧಮಾಲೆ ಶಂಕರ ನಾರಾಯಣಭಟ್ಟ, *ಕನ್ನಡ ಸಾಹಿತ್ಯದಲ್ಲಿ ಶಿವದರ್ಶನ,* ಕೃಷ್ಣಮೂರ್ತಿ ನಿಟಿಲಾಪುರ (ಸಂ.), *ಪೂರ್ವೋಕ್ತ,* ಪು.೧೨೨–೧೩೭

೨೩. Sarma I.K., *Op cit,* p.32

೨೪. *Epigraphia Indica,* Vol.V (1898-99) No.1, p.3

೨೫. Sarma I.K., *Op cit,* pp.21-22

೨೬. ಕನ್ನಡ ವಿಷಯವಿಶ್ವಕೋಶ, *ಇತಿಹಾಸ ಮತ್ತು ಪುರಾತತ್ವ,* ಪು.೨೫೫

೨೭. ಕನ್ನಡ ವಿಷಯವಿಶ್ವಕೋಶ, *ಪೂರ್ವೋಕ್ತ,* ಪು.೨೫೫-೫೬

೨೮. Sarma I.K., *Op cit,* p.33

೨೯. *Ibid* p.151

೩೦. Gopinath Rao T.A., *Elements of Hindu Iconography,* Vol.2, Part-I, pp.63-65

೩೧. Harle J.C., *The Art and Architecture of the Indian Subcontinent,* pp.87-88

೩೨. Sarma I.K., *Op cit,* p.81

೩೩. Gopinath Rao T.A., *Op cit,* p.69

೩೪. Sarma I.K., *Op cit,* pp.61-62

೩೫. ಬಾಲಸುಬ್ರಮಣ್ಯ, ವಾಸುದೇವನ್ ಸಿ.ಎಸ್., ರಮೇಶ ನಾಯಕ, *ಗದಗ ಜಿಲ್ಲೆ ದೇವಾಲಯ ಕೋಶ,* ಪು.೭-೮ ಮತ್ತು ಕಡಪಟ್ಟಿ ಎಂ.ಎನ್., *ಪೂರ್ವೋಕ್ತ,* ಪು.೩೩

೩೬. ಕಡಪಟ್ಟಿ ಎಂ.ಎಸ್., *ಪೂರ್ವೋಕ್ತ,* ಪು.೩೩-೩೪

೩೭. ಶೇಷಾದ್ರಿ ಎಂ. (ಮೂ.ಲೇ), ಕಿಟ್ಟಮ್ಮ ಎಸ್.ಕೆ. (ಅನು), *ಚಾರಿತ್ರಿಕ ಯುಗ, ಕರ್ನಾಟಕದ ಪರಂಪರೆ* ಸಂ.೧, ಪು.೧೧೯

೩೮. Sarma I.K., *Op cit,* p.22

೩೯. *Ibid,* pp.99-100

೪೦. *Ibid,* pp.146-147

೪೧. Siddalingaiah T.B., *Orign and Development of Saiva Siddanta upto 14th Century* pp.12-15

೪೨. Sita Narasimhan, *Saivism Under Imperial Cola As Revealed through their Monuments,* pp.160-161

೪೩. ಕನ್ನಡ ವಿಷಯ ವಿಶ್ವಕೋಶ, *ಪೂರ್ವೋಕ್ತ,* ಪು.೮೭೪

೪೪. ಚಿದಾನಂದಮೂರ್ತಿ ಎಂ., *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕ್ರಿ.ಶ.೪೫೦–೧೧೫೦,* ಪು.೧೮೫

೪೫. ಷೇಕ್‌ಅಲಿ ಬಿ. (ಸಂ.), *ಕರ್ನಾಟಕ ಚರಿತ್ರೆ,* ಸಂ.೧, ಪು.೪೧೪–೪೧೫

೪೬. ಕಡಪಟ್ಟಿ ಎಂ.ಎನ್., *ಪೂರ್ವೋಕ್ತ,* ಪು.೪೪–೪೫

೪೭. ಕನ್ನಡ ವಿಷಯ ವಿಶ್ವಕೋಶ, *ಪೂರ್ವೋಕ್ತ,* ಪು.೧೯೩

೪೮. ಕಡಪಟ್ಟಿ ಎಂ.ಎನ್., *ಪೂರ್ವೋಕ್ತ,* ಪು.೪–೩

೪೯. ಷೇಕ್‌ಅಲಿ ಬಿ. (ಸಂ.), *ಪೂರ್ವೋಕ್ತ,* ಪು.೩೯೭–೩೯೮

೫೦. ಕನ್ನಡ ವಿಷಯ ವಿಶ್ವಕೋಶ, *ಪೂರ್ವೋಕ್ತ,* ಪು.೩೦೮

೫೧. Shaik Ali B., *History of the western Gangas,* pp.313-314

೫೨. ಕಡಪಟ್ಟಿ ಎಂ.ಎನ್., *ಪೂರ್ವೋಕ್ತ,* ಪು.೬೮–೬೯

೫೩. ಅದೇ, ಪು.೫೪–೫೫

೫೪. ಈರಣ್ಣ ಕೆ.ಪಿ., *ಬಾದಾಮಿ ಚಲುಕ್ಯರ ಸಾಂಸ್ಕೃತಿಕ ಪರಂಪರೆ,* ಪು.೧೧೪–೧೧೫

೫೫. ಕಡಪಟ್ಟಿ ಎಂ.ಎನ್., *ಪೂರ್ವೋಕ್ತ,* ಪು.೬೯–೭೦

೫೬. ರಾಘವಾಚಾರ್ ಎಸ್.ಎಸ್. (ಮೂ.ಲೇ), ಮರುಳಸಿದ್ದಪ್ಪ ಕೆ. (ಅನು), 'ಧರ್ಮ ಮತ್ತು ಸಂಸ್ಕೃತಿ, ಧರ್ಮ ಮತ್ತು ತತ್ವಶಾಸ್ತ್ರ, ರಾಷ್ಟ್ರಕೂಟ ಕಾಲ', *ಕರ್ನಾಟಕ ಪರಂಪರೆ* ಸಂ.೧, ಪು.೨೯೦

೫೭. ಕನ್ನಡ ವಿಷಯ ವಿಶ್ವಕೋಶ, *ಪೂರ್ವೋಕ್ತ,* ಪು.೮೮೨–೮೩

೫೮. ಶೇಷಾದ್ರಿ ಎಂ. (ಮೂ.ಲೇ), ರಾಮಸ್ವಾಮಿ (ಅನು), 'ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ–ರಾಷ್ಟ್ರಕೂಟ ಕಾಲ', *ಕರ್ನಾಟಕ ಪರಂಪರೆ* ಸಂ.೧, ಪು.೩೨೫

೫೯. Gopal B.R., *The Chalukyas of Kalyana and Kalachuries,* p.414

೬೦. *Ibid,* p.415

೬೧. *Ibid,* pp.415-46

೬೨. *Ibid,* p.418

೬೩. ಕನ್ನಡ ವಿಷಯ ವಿಶ್ವಕೋಶ, *ಪೂರ್ವೋಕ್ತ,* ಪು.೧೧೪೬

೬೪. ಶಿವರುದ್ರಪ್ಪ ಎ.ಎಲ್. (ಮೂ.ಲೇ), ಮಹಾದೇವಪ್ಪ ಸಿ. (ಅನು), 'ಶೈವ ಮತ್ತು ವೀರಶೈವ ಧರ್ಮಗಳು', *ಕರ್ನಾಟಕ ಪರಂಪರೆ, ಸಂ.೧,* ಪು.೫೨೪–೫೨೫

೬೫. ಕನ್ನಡ ವಿಷಯ ವಿಶ್ವಕೋಶ, *ಪೂರ್ವೋಕ್ತ,* ಪು.೧೧೪೬

೬೬. *Epigraphia carnatica,* Vol.2, No.475

೬೭. ಪರಮಶಿವಮೂರ್ತಿ ಡಿ.ವಿ. (ಸಂ.), *ಕೃಷ್ಣದೇವರಾಯನ ಶಾಸನಗಳು, ಸಂ.೧,* ಶಾ.ಸಂ.೩೫೮, ೩೫೯, ಪು.೬೭೮–೬೮೧

೬೮. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ.೩, *ಹಂಪಿಯ ಶಾಸನಗಳು,* ಪು.XLiii

೬೯. ಕನ್ನಡ ವಿಷಯ ವಿಶ್ವಕೋಶ, *ಪೂರ್ವೋಕ್ತ,* ಪು.೫೪೯

೭೦. ಮಂಜುನಾಥ ಸಿ.ಯು., *ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಕ್ರಿ.ಶ.೧೧೫೦–೧೩೪೦,* ಪು.೫

೭೧. ಅದೇ, ಪು.೬

೭೨. Gopitnath Rao T.A., *Op cit,* pp.17-18

೭೩. ಚಿದಾನಂದಮೂರ್ತಿ ಎಂ., *ಪೂರ್ವೋಕ್ತ,* ಪು.೧೪೧

೭೪. Gopitnath Rao T.A., *Op cit,* pp.19-20

೭೫. ಚಿದಾನಂದಮೂರ್ತಿ ಎಂ., *ಪೂರ್ವೋಕ್ತ,* ಪು.೧೪೨

೭೬. Gopinath Rao T.A., *Op cit,* p.25

೭೭. ಡೆವಿಡ್ ಎನ್.ಲಾರೆಂಜನ್ (ಮೂಲ), ವಿರೂಪಾಕ್ಷ ಕುಲಕರ್ಣಿ (ಅನು), *ಕಾಪಾಲಿಕರು ಮತ್ತು ಕಾಳಾಮುಖರು,* ಪು.೧೩೨–೩೪

೭೮. ಚಿದಾನಂದಮೂರ್ತಿ ಎಂ., *ಪೂರ್ವೋಕ್ತ,* ಪು.೧೪೩

೭೯. ಅದೇ, ಪು.೧೪೮–೧೪೯

೮೦. ಅದೇ, ಪು.೧೫೦

೮೧. ಅದೇ, ಪು.೧೫೪

೮೨. ಕನ್ನಡ ವಿಷಯ ವಿಶ್ವಕೋಶ, *ಪೂರ್ವೋಕ್ತ,* ಪು.೨೪೭–೨೪೮

೮೩. ಮಂಜುಳಾ ಆಚಾರಿ, *ಕಾಳಾಮುಖ ಪರಂಪರೆ ಮತ್ತು ಮೂರು ಜಾವಿ ಪೀಠ ಸಾಂಸ್ಕೃತಿಕ ಅಧ್ಯಯನ (ಶಾಸನಗಳನ್ನು ಅನುಲಕ್ಷಿಸಿ),* ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೪. ಡೇವಿಡ್ ಲಾರೆಂಜನ್ (ಮೂಲ), ವಿರೂಪಾಕ್ಷ ಕುಲಕರ್ಣಿ (ಅನು), ಪೂರ್ವೋಕ್ತ, ಪು.೧೭–೧೮

೮೫. ಅದೇ, ಪು.೨೦-೨೧

೮೬. ಅದೇ, ಪು.೩೨-೩೭

೮೭. ಅದೇ, ಪು.೩೨

೮೮. ಅದೇ, ಪು.೩೩-೩೭

೮೯. ವಸಂತಲಕ್ಷ್ಮೀ ಕೆ., *ಕರ್ನಾಟಕದ ಶೈವ ಶಿಲ್ಪಗಳು*, ಪು.೧೬

೯೦. ಕನ್ನಡ ವಿಷಯ ವಿಶ್ವಕೋಶ, *ಪೂರ್ವೋಕ್ತ*, ಪು.೫೩೮

೯೧. ವಸಂತಲಕ್ಷ್ಮೀ ಕೆ., *ಪೂರ್ವೋಕ್ತ*, ಪು.೧೭

೯೨. ಕನ್ನಡ ವಿಷಯ ವಿಶ್ವಕೋಶ, *ಪೂರ್ವೋಕ್ತ*, ಪು.೫೩೮

೯೩. ವಸಂತಲಕ್ಷ್ಮೀ ಕೆ., *ಪೂರ್ವೋಕ್ತ*, ಪು.೧೮

೯೪. ರಹಮತ್ ತರೀಕೆರೆ, ನಾಥಪಂಥ

೯೫. ವಸಂತಲಕ್ಷ್ಮೀ ಕೆ., *ಪೂರ್ವೋಕ್ತ*, ಪು.೧೮-೨೦

೯೬. *ಕನ್ನಡ ವಿಷಯ ವಿಶ್ವಕೋಶ*, ಸಂ.೪, ಪು.೬೭೪

೯೭. ಶಿರೂರ ಬಿ.ವ್ಹಿ. (ಸಂ.), *ಎಸ್.ಸಿ.ನಂದಿಮಠರ ಲೇಖನಗಳು*, ಪು.೨೮೭-೨೮೮

೯೮. *ಕನ್ನಡ ವಿಷಯ ವಿಶ್ವಕೋಶ*, ಸಂ.೪, ಪು.೬೭೭

೯೯. ನಂದೀಮಠ ಎಸ್.ಸಿ., *ಕನ್ನಡನಾಡಿನ ಚರಿತ್ರೆ*, ಭಾಗ-೨, ಪು.೪೨

೧೦೦. ಮಂಜುನಾಥ ಸಿ.ಯು., *ಪೂರ್ವೋಕ್ತ*, ಪು.೨೬

೧೦೧. ವಸಂತಲಕ್ಷ್ಮೀ ಕೆ., *ಪೂರ್ವೋಕ್ತ*, ಪು.೨೩-೨೪

೧೦೨. ನಂದೀಮಠ ಎಸ್.ಸಿ., *ಪೂರ್ವೋಕ್ತ*, ಪು.೪೨-೫೪

## ಅಧ್ಯಾಯ ನಾಲ್ಕು

# ಶೈವ ಆಗಮಗಳು

ಭಾರತೀಯ ಸಂಸ್ಕೃತಿ ಅರ್ವಾಚೀನವಾದುದು. ಇಲ್ಲಿ ಹಲವು ಧರ್ಮಗಳು ಆಶ್ರಯ ಪಡೆದು ಪೋಷಿತವಾಗಿವೆ. ಇಲ್ಲಿಯ ಅತ್ಯಂತ ಪ್ರಾಚೀನ ಧರ್ಮವೆಂದರೆ ಶೈವಧರ್ಮ. ಶೈವ ಧರ್ಮದ ಕುರಿತು ಸವಿಸ್ತಾರವಾದ ಮಾಹಿತಿಯನ್ನು ಹಿಂದಿನ ಅಧ್ಯಾಯದಲ್ಲಿಯೇ ಹೇಳಲಾಗಿದೆ. ಅತ್ಯಂತ ಪ್ರಾಚೀನ ಗ್ರಂಥಗಳೆಂದು ಕರೆಯಲ್ಪಡುವ ವೇದಗಳಲ್ಲಿಯೇ ಶಿವನ ಉಲ್ಲೇಖಗಳು, ವರ್ಣನೆಗಳು ಇರುವುದನ್ನು ಈಗಾಗಲೇ ಹೇಳಲಾಗಿದೆ. ವೇದಗಳಷ್ಟೇ ಪ್ರಾಚೀನವಾದವುಗಳೆಂದು ಹೇಳಲಾಗುವ ಶೈವಾಗಮಗಳು ಶೈವಧರ್ಮವನ್ನು ಬೆಳೆಸುವಲ್ಲಿ ಪ್ರಮುಖ ಪಾತ್ರ ವಹಿಸಿವೆ. ಶೈವಾಗಮಗಳು ಶೈವ ಧರ್ಮದ ಪ್ರಮಾಣ ಗ್ರಂಥಗಳೆನಿಸಿವೆ ಹಾಗೂ ಇವುಗಳನ್ನು ಸಿದ್ಧಾಂತಗಳೆಂದೂ ಕರೆಯುವರು. ಶೈವಧರ್ಮದ ಆಚಾರ ವಿಚಾರಗಳನ್ನು, ನೀತಿ ನಿಯಮಗಳನ್ನು ವಿವರಿಸುವುದರಿಂದ ಇವುಗಳನ್ನು ಶೈವಾಗಮಗಳು ಎಂದು ಕರೆಯುವರು. ಶೈವರಿಗೆ ಶೈವಾಗಮಗಳು ಪ್ರಮಾಣ ಗ್ರಂಥಗಳಿದ್ದಂತೆ ವೈಷ್ಣವರಿಗೆ ವೈಷ್ಣವಾಗಮಗಳು, ಬೌದ್ಧರಿಗೆ ಬೌದ್ಧಾಗಮಗಳು, ಜೈನರಿಗೆ ಜೈನಾಗಮಗಳು ಹಾಗೂ ಶಾಕ್ತರಿಗೆ ಶಾಕ್ತಾಗಮಗಳು ಪ್ರಮಾಣಗ್ರಂಥಗಳಾಗಿವೆ. ವೇದಾಗಮಗಳು ಪರಸ್ಪರ ಪೂರಕವಾಗಿವೆ ಎಂದು ಹೇಳಲಾಗಿದೆ. ಭಾರತೀಯ ಪರಂಪರೆಯಲ್ಲಿ ವೇದ ಮತ್ತು ಆಗಮಗಳೆರಡಕ್ಕೂ ಸಮಾನವಾದ ಪ್ರಾಶಸ್ತ್ಯ ನೀಡಲಾಗಿದೆ. ಎರಡಕ್ಕೂ ಈಶ್ವರನೇ ಮೂಲ ಕರ್ತೃ. ವೇದಗಳಿಗೆ ನಿಗಮಗಳೆಂದೂ ಹಾಗೂ ಸಂಹಿತೆಗಳೆಂದೂ ಕರೆಯುತ್ತಾರೆ. ಆಗಮಗಳು ವೇದದ ಉದ್ದೇಶಗಳನ್ನು ಪೂರೈಸಲು ಸಹಾಯಕವಾಗಿವೆ. ವೇದಮಂತ್ರಗಳು ಫಲಪ್ರದವಾಗಬೇಕಾದರೆ ಅನುಷ್ಠಾನ ಬೇಕು. ಆಗಮಗಳು ಈ ಮಂತ್ರಗಳ ಅನುಷ್ಠಾನ ವಿಧಾನವನ್ನು ನಿರೂಪಿಸುತ್ತವೆ.[೧] ಹೀಗೆ ನಿಗಾಮಾಗಮಗಳೆರಡೂ ಪರಸ್ಪರ ಸಂಬಂಧವನ್ನು ಹೊಂದಿವೆ. ನಿಗಮಗಳು ಅಸ್ಪಷ್ಟವಾಗಿ ಹೊರಹೊಮ್ಮಿದ ಹಾಗೂ ಆಗಮವೆಂದರೆ ಸ್ಪಷ್ಟವಾಗಿ ವೈಖರಿ ವಾಣಿಯಲ್ಲಿ ಹೊರಹೊಮ್ಮಿದವು ಎಂದು ವಿದ್ವಾಂಸರ ಅಭಿಪ್ರಾಯ.[೨] ವೇದ, ಸ್ಮೃತಿ, ಪುರಾಣ, ಆಗಮಗಳು ಕ್ರಮವಾಗಿ ನಾಲ್ಕು ಯುಗಗಳಾದ ಕೃತ, ತ್ರೇತ, ದ್ವಾಪರ, ಕಲಿಯುಗಗಳಲ್ಲಿ ರೂಢಿಯಲ್ಲಿರುತ್ತವೆ ಎಂದು ಹೇಳಲಾಗುತ್ತದೆ. ನೇರವಾಗಿ ಶೈವಾಗಮಗಳ

ವಿವರಣೆಯನ್ನು ತಿಳಿಯುವುದಕ್ಕಿಂತ ಮೊದಲು ಆಗಮ ಎಂದರೇನು ಅದರ ಅರ್ಥ, ಭೇದ ಕಾಲದ ಬಗೆಗೆ ಕುರಿತು ತಿಳಿಯುವುದು ಮುಖ್ಯ.

### ಆಗಮದ ಪದದ ಅರ್ಥ

ವಿದ ಜ್ಞಾನೇ ಎಂಬಲ್ಲಿನ 'ವಿದ್' ಧಾತುವಿನಿಂದ ಸಿದ್ಧವಾದ ವೇದಶಬ್ದಕ್ಕೆ ಜ್ಞಾನ ಎಂದು ಅರ್ಥ. ಅದರಂತೆ ಗತಿ(ಗಮನ)ಎಂಬ ಅರ್ಥವನ್ನು ಕೊಡುವ 'ಗಮಲೃ' ಧಾತುವಿಗೆ 'ಆಙ್' ಉಪಸರ್ಗವು ಸೇರಿ 'ಆಗಮ' ಪದವು ಸಿದ್ಧವಾಗಿದೆ. ಸಂಸ್ಕೃತದಲ್ಲಿ ಗತಿ ಎಂಬ ಅರ್ಥವನ್ನು ಕೊಡುವ ಧಾತುಗಳಿಗೆ ಜ್ಞಾನವೆಂದೇ ಅರ್ಥ(ಯೇ ಗತ್ಯಾರ್ಥಕಾಃ ಧಾತವಃ ತೇ ಜ್ಞಾನರ್ಥಕಾಃ). ಆಙ್ ಎಂಬ ಉಪಸರ್ಗವು ಪರಂಪರೆಯಿಂದ ಒಬ್ಬರಿಂದೊಬ್ಬರಿಗೆ ಬಂದುದು ಎಂಬ ಅರ್ಥದಲ್ಲಿದೆ. ಎಂದರೆ ಪರಂಪರೆಯಿಂದ ಪರಿಷ್ಕೃತವಾಗಿ ಬಂದದ್ದರಿಂದ ಅದು ಪರಿಪೂರ್ಣಜ್ಞಾನವೂ ಆಯಿತು.[೩] ಹೀಗೆ ಆಗಮವೆಂದರೆ ಪರಂಪರಾಗತವಾದ ಜ್ಞಾನಪರಂಪರೆಯಿಂದ ಪರಿಷ್ಕೃತವಾಗಿ ಬಂದ ಜ್ಞಾನ. ಆಗಮಗಳಲ್ಲಿಯೇ ಆಗಮ ಶಬ್ದದ ನಿರ್ವಚನವು ಬಂದಿದೆ.

ಆಗತಂ ಪಂಚವಾಕ್ತ್ರಾತ್ತು ಗತಃ ಚ ಗಿರಿಜಾನನೇ।
ಮತಂ ಚ ವಾಸುದೇವಸ್ಯ ತಸ್ಮಾದಾಗಮ ಮುಚ್ಯತೇ॥[೪]

ಹೀಗೆ 'ಆಗತಂ ಗತಂ ಮತಂ ಚೇತಿ ಆಗಮಮ್' ಎಂದು ಆಗಮ ಶಬ್ದದ ನಿರ್ವಚನ[೫] 'ಆ'ಎಂಬುದು ಶಿವನ ಪಂಚಮುಖಗಳಿಂದ ಬಂದದ್ದೆಂದೂ 'ಗ' ಎಂಬುದು ಗಿರಿಜೆಗೆ ಹೇಳಲ್ಪಟ್ಟಿದ್ದೆಂದೂ 'ಮ' ಎಂಬುದು ವಾಸುದೇವನಿಗೆ ಸಮ್ಮತವಾದದ್ದೆಂದೂ ಆಗಮ ಶಬ್ದದ ಮೂರು ಅಕ್ಷರಗಳು ಸೂಚಿಸುತ್ತವೆ.[೬] ಒಟ್ಟಿನಲ್ಲಿ ಪರಮಾತ್ಮನಿಂದ ಪ್ರಣೀತವಾಗಿ ಉಪದೇಶಿಸಲ್ಪಟ್ಟು ಪರಂಪರೆಯಿಂದ ಪರಿಷ್ಕೃತವಾಗಿ ಬಂದುದೇ ಆಗಮಶಾಸ್ತ್ರ. ಆಗತ-ಗತ-ಮತ ಈ ಮೂರು ಪದಗಳ ಮೊದಲ ಅಕ್ಷರಗಳಿಂದ ಆಗಮ ಎಂಬ ಹೆಸರು ಬಂದಿದೆ. ಶೈವ ಶಾಸ್ತ್ರಗಳಲ್ಲಿ ಆ-ಜ್ಞಾನ, ಗ-ಬಿಡುಗಡೆ, ಮ-ಪಾಶಗಳಿಂದ ಮುಕ್ತ ಎಂಬ ಅರ್ಥವನ್ನು ಹೇಳಲಾಗುತ್ತದೆ.[೭] ಹಾಗೆಯೇ ಆಗಮಗಳಿಗೆ ತಂತ್ರಗಳೆಂದೂ ಕರೆಯುತ್ತಾರೆ. ತಂತ್ರ ಎಂದರೆ ವಿಸ್ತರಿಸುವುದು ಎಂಬ ಅರ್ಥವಿದೆ. ಸಾಮಾನ್ಯವಾಗಿ ಶೈವ ಮತೀಯ ಗ್ರಂಥಗಳನ್ನು ಆಗಮಗಳೆಂದು, ಶಾಕ್ತಮತೀಯ ಗ್ರಂಥಗಳನ್ನು ತಂತ್ರಗಳೆಂದು ವೈಷ್ಣವ ಮತೀಯ ಗ್ರಂಥಗಳನ್ನು ಸಂಹಿತೆಗಳೆಂದೂ ಕರೆದಿದ್ದಾರೆ. ಆದರೆ ಈ ಕೃತಿಗಳು ಈ ನಿಯಮವನ್ನು ಅಕ್ಷರಶಃ ಪಾಲಿಸಿಲ್ಲ.[೮] ಉದಾಹರಣೆಗೆ ಶೈವಾಗಮಗಳಾದ ಸೂಕ್ಷ್ಮಾಗಮವನ್ನು ಸೂಕ್ಷ್ಮ ತಂತ್ರವೆಂದು ಮತ್ತು ಅಜಿತಾಗಮವನ್ನು ಅಜಿತ ತಂತ್ರವೆಂದೂ ಕರೆಯಲಾಗಿದೆ. ಹಾಗೆಯೇ ಸಂಹಿತೆಗಳೆಂದು ಕರೆಯಲ್ಪಡುವ ವೈಷ್ಣವ ಗ್ರಂಥಗಳನ್ನು ಆಗಮಗಳು ಅಥವಾ ತಂತ್ರಗಳೆಂದೂ ಕರೆಯಲ್ಪಟ್ಟಿವೆ.

ನಿಗಮಾಗಮಗಳ ಕರ್ತೃ ಶಿವ. ಭಾರತದಲ್ಲಿ ವೇದ ವಾಙ್ಮಯಕ್ಕಿಂತ ವಿಸ್ತಾರವಾದುದು ಆಗಮ ವಾಙ್ಮಯ. ಪರಶಿವನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮುಖಗಳಿಂದ ಕ್ರಮವಿಡಿದು

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದಗಳು ಜನಿಸಿವೆ ಎಂದು, ಈಶಾನ ಮುಖದಿಂದ ಇಪ್ಪತ್ತೆಂಟು ಆಗಮಗಳು ಉದಿಸಿವೆ ಎಂಬುದು ಪುರಾತನರ ನಿರೂಪಣೆ. ಹಾಗೆಯೇ ವೇದಜ್ಞರು ಚಿತ್ತ ಶುದ್ಧಿಗೆ ಬೇಕಾದ ಧರ್ಮಗಳು. ಕಾಯ ಶುದ್ಧಿಗೆ ಬೇಕಾದ ಕ್ರಿಯೆಗಳು, ಪ್ರಾಣ ಶುದ್ಧಿಗೆ ಬೇಕಾದ ಯೋಗಗಳು, ಬುದ್ಧಿ ವಿಕಾಸಕ್ಕೆ ಬೇಕಾದ ಜ್ಞಾನ ವಿಜ್ಞಾನಗಳು, ಶಿಲ್ಪ-ಸಂಗೀತ, ಚಿತ್ರ ಮೊದಲಾದ ಚತುಷಷ್ಟೀ(೬೪) ಕಲೆಗಳು ಆಗಮಗಳಲ್ಲಿವೆ. ಜನನ-ಮರಣ; ಬಾಳು-ಬದುಕು; ಆಗು-ಹೋಗುಗಳ ವಿಫುಲ ಹಾಗೂ ವಿಸ್ಮಯ ವಿಚಾರ ಆಗಮಗಳಲ್ಲಿದೆ.[೯] ಆಗಮಗಳ ಕಾಲವನ್ನು ನಿಖರವಾಗಿ ಹೇಳಲಾಗಿಲ್ಲ. ಆದರೆ ಆಗಮಗಳ ಆರಂಭಕಾಲವನ್ನು ಸ್ಥೂಲವಾಗಿ ನಿರ್ಧರಿಸಲು ಕೆಲವು ಆಧಾರಗಳು ದೊರೆಯುತ್ತವೆ. ಮೊದಲನೆಯದಾಗಿ ಶೈವಾಗಮಗಳಲ್ಲಿ ಜೈನ ಮತ್ತು ಬೌದ್ಧಮತಗಳ ಉಲ್ಲೇಖ ಬರುತ್ತದೆ ಹಾಗೂ ವಿದ್ವಾಂಸರ ಹೇಳಿಕೆಯ ಪ್ರಕಾರ ಭಾಷೆಯ ದೃಷ್ಟಿಯಿಂದ ಆಗಮಗಳು ಪಾಣಿನಿಯ(ಕ್ರಿ.ಪೂ.೭೦೦) ಅನಂತರದ ಕಾಲಕ್ಕೆ ಸೇರಿದವುಗಳಾಗಿವೆ. ಹಾಗೆಯೇ ಕ್ರಿ.ಪೂ.೨೦೦ಕ್ಕೆ ಸೇರಿದ್ದೆಂದು ತಿಳಿದ ಮಹಾಭಾರತದಲ್ಲಿ ಪಾಶುಪತ ಮತ್ತು ಪಂಚರಾತ್ರಾಗಮಗಳ ಹೆಸರುಗಳನ್ನು ಉಲ್ಲೇಖಿಸಲಾಗಿದೆ. ಆದ್ದರಿಂದ ಯುದ್ಧಕ್ಕೂ ಮೊದಲೇ ಆಗಮಗಳು ಇದ್ದವು ಎಂದು ಹೇಳಿ ಆಗಮಗಳ ಕಾಲ ಅದೇ ಎಂದು ಹೇಳುವುದುಂಟು. ಬುದ್ಧನು ಸಿದ್ಧಾರ್ಥನಾಗಿದ್ದಾಗ ಆತನ ದೇಶದಲ್ಲಿ(ಪ್ರಸ್ತುತ ನೇಪಾಳದಲ್ಲಿ) ಪೂಜೆಗಳೆಲ್ಲ ಶೈವಾಗಮಗಳ ಪ್ರಕಾರವೇ ನಡೆಯುತ್ತಿದ್ದವು. ಬುದ್ಧನ ನಿರ್ವಾಣದ ನಂತರ(ಕ್ರಿ.ಪೂ.೫೬೩-೪೮೭) ಬೌದ್ಧ ಧರ್ಮದಲ್ಲಿ ಏಕೋತ್ತರಾಗಮ, ಮಾಧ್ಯಮಾಗಮ ಎಂಬುದನ್ನು ಹೇಳಲಾಗಿದೆ. ಆದ್ದರಿಂದ ಆಗಮ ಪದವು ಆಗ್ಗೇ ಇದ್ದ ವೈದಿಕ ಮತದ ಆಗಮಗಳಿಂದಲೇ ಪಡೆದುಕೊಂಡಿದ್ದಾರೆ ಎಂದು ಭಾವಿಸಬಹುದು.[೧೦] ಕ್ರಿ.ಪೂ.೫೦೦ ವರ್ಷಗಳಷ್ಟು ಹಿಂದಿನದೆಂದು ತಿಳಿದುಬಂದಿರುವ ಭಗವದ್ಗೀತೆಯಲ್ಲಿ ಪಾಂಚರಾತ್ರಾಗ ಮೋಕ್ತವಾದ ವಾಸುದೇವ ಮಹತ್ವ ಉಕ್ತವಾಗಿದೆ.[೧೧] ಇವೆಲ್ಲವು ಆಗಮದ ಆರಂಭ ಕಾಲವನ್ನು ಸೂಚಿಸುತ್ತವೆ ಎಂದು ಹೇಳಬಹುದು. ಕ್ರಿ.ಶ.೧೧ನೆಯ ಶತಮಾನದವರೆವಿಗೂ ಭಾರತದಲ್ಲಿ ಶ್ರುತಿ ಎಂದರೆ ಆಗಮಗಳನ್ನು ಗುರುವಿನಿಂದ ಶಿಷ್ಯನಿಗೆ ಮೌಖಿಕವಾಗಿ ಉಪದೇಶಿಸಲ್ಪಡುತ್ತಿದ್ದವು. ಕ್ರಿ.ಪೂ.೬ನೆಯ ಶತಮಾನಕ್ಕೆ ಕೆಲವು ಆಗಮಗಳು ಇದ್ದವು ಎಂಬುದನ್ನು ನಾವು ಖಚಿತವಾಗಿ ಹೇಳಬಹುದು. ಆದರೆ ವೇದಗಳಲ್ಲಿ ಮೂಲಪಾಠವನ್ನೇ ಕಾಪಾಡಬೇಕೆಂದು ಇರುವ ಕಟ್ಟುನಿಟ್ಟು ಆಗಮಗಳ ಬಗ್ಗೆ ಇದ್ದಂತೆ ತೋರುವುದಿಲ್ಲ. ಇಲ್ಲಿ ಶ್ಲೋಕಗಳಿರುತ್ತವೆ ಹಾಗೂ ಇಲ್ಲಿ ವಿಷಯ ಮುಖ್ಯ. ಹಾಗೆಯೇ ನೂತನ ಸಂಗತಿಗಳನ್ನು ಸೇರ್ಪಡೆ ಮಾಡಿಕೊಳ್ಳುವುದೂ ಮುಖ್ಯವೇ. ಆಗಮಗಳನ್ನು ಬರೆದಿರಿಸುವಾಗ ತರುವಾಯ ಸೂಕ್ತ ಕಂಡ ಬದಲಾವಣೆಗಳನ್ನು ಸೇರ್ಪಡೆಗಳನ್ನು ಮಾಡಿರುವುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಉಪ ಆಗಮಗಳು ಮೂಲ ಆಗಮಗಳ ನಂತರ ರೂಢಿಗೆ ಬಂದವು ಎನಿಸುತ್ತದೆ. ಈ ಬೆಳವಣಿಗೆ ಕ್ರಿ.ಶ.೧೦ನೇ ಶತಮಾನದವರೆಗೂ ನಡೆದು ಬಂದಿದೆ ಎಂದು ವಿದ್ವಾಂಸರು ಅನುಮಾನಿಸುತ್ತಾರೆ.[೧೨]

ಇನ್ನು ಶಾಸನಗಳೂ ಸಹ ಆಗಮ ಸಾಹಿತ್ಯದ ಕಾಲನಿರ್ಣಯ ಮಾಡುವಲ್ಲಿ ಸಹಾಯಕವಾಗಿವೆ. ಕಂಚಿಯ ಕೈಲಾಸನಾಥ ದೇವಾಲಯದಲ್ಲಿ ೫ನೇ ಶತಮಾನದ ಒಂದು ಶಿಲಾಲೇಖವಿರುವುದು.

ಅದರಲ್ಲಿ ೨೮ ಶೈವಾಗಮಗಳ ಪ್ರಥಮ ಐತಿಹಾಸಿಕ ಉಲ್ಲೇಖವು ಕಂಡುಬರುವುದು ಎಂಬ ಮಾತನ್ನು ಡಾ.ಎಸ್.ರಾಧಾಕೃಷ್ಣನ್ ಅವರ Indian Philosophy, Vol.II ಎಂಬುದರಲ್ಲಿ ಉಲ್ಲೇಖಿಸುತ್ತಾರೆ.[೧೩] ಈ ಎಲ್ಲ ಆಧಾರಗಳಿಂದ ಆಗಮ ಸಾಹಿತ್ಯವು ಪ್ರಾಚೀನವಾದುದೆಂದು ತಿಳಿಯಬಹುದು.

**ಶೈವಾಗಮಗಳು**

ಆಗಮಗಳಲ್ಲಿ ಶೈವ, ವೈಷ್ಣವ, ಶಾಕ್ತ, ಸೌರ, ಗಾಣಪತ್ಯ ಮತ್ತು ಕಾಪಾಲಿಕ ಎಂಬ ಆರು ಬಗೆ ಇವೆ. ಇದರಲ್ಲಿ ಶೈವಾಗಮಗಳು ಅತ್ಯಂತ ಪ್ರಾಚೀನವಾದುವುಗಳು. ಏಕೆಂದರೆ ವೈಷ್ಣವಾಗಮವಾದ ಪಂಚರಾತ್ರಾಗಮಗಳಲ್ಲಿ ಶೈವಾಗಮಗಳ ಪ್ರಸ್ತಾಪವಿರುವುದು. ಆದರೆ ವೈಷ್ಣವಾಗಮಗಳ ಉಲ್ಲೇಖವು ಶೈವಾಗಮಗಳಲ್ಲಿ ಇಲ್ಲದಿರುವುದು ಎಂಬ ಆಧಾರದಿಂದ ಶೈವಾಗಮಗಳು ವೈಷ್ಣವಾಗಮಗಳಿಗಿಂತ ಹಿಂದಿನವು ಎಂಬ ಅಭಿಪ್ರಾಯವಿದೆ. ಶಿವಾಗಮಗಳು ಶೈವ, ಪಾಶುಪತ, ಸೋಮ, ಲಾಕುಳ ಎಂದು ನಾಲ್ಕು ವಿಧ. ಅವುಗಳಲ್ಲಿ ಮೊದಲಿನದಾದ ಶೈವಾಗಮಗಳಲ್ಲಿ ವಾಮ, ದಕ್ಷಿಣ ಮತ್ತು ಸಿದ್ಧಾಂತವೆಂದು ಮೂರು ವಿಧ. ಇದು ಕಾಮಿಕಾಗಮದ ಪ್ರಕಾರ ಇನ್ನು ಸಿದ್ಧಾಂತ ಶಿಖಾಮಣಿಯ ಪ್ರಕಾರ ಶೈವಾಗಮ ಭೇದಗಳು ವಾಮ, ದಕ್ಷಿಣ ಮಿಶ್ರ ಮತ್ತು ಸಿದ್ಧಾಂತವೆಂದು ನಾಲ್ಕು ಇವೆ. ವಾಮತಂತ್ರವು ಶಕ್ತಿ ಪ್ರಧಾನ, ದಕ್ಷಿಣ ತಂತ್ರವು ಭೈರವಾತ್ಮಕ, ಮಿಶ್ರ ತಂತ್ರವು ಸಪ್ತಮಾತೃಪರ, ಸಿದ್ಧಾಂತ ತಂತ್ರವು ವೇದ ಸಮ್ಮತ, ಕಪಾಲ, ಕಾಲಾಮುಖ, ಅಘೋರ ಮುಂತಾದವು ವಾಮ ತಂತ್ರದಲ್ಲೂ ಕಾಶ್ಮೀರ ಶೈವ(ತ್ರಿಕ), ಸ್ವಚ್ಚಂದ, ಭೈರವೋತ್ತರ ಮುಂತಾದವು ದಕ್ಷಿಣ ತಂತ್ರದಲ್ಲೂ ಅಂತರ್ಭಾವವಾಗುತ್ತವೆ. ಕಾಮಿಕದಿಂದ ಹಿಡಿದು ವಾತುಲದವರೆಗಿನ ಇಪ್ಪತ್ತೆಂಟು ಶಿವಾಗಮಗಳು ಮತ್ತು ಅವುಗಳ ಉಪತಂತ್ರಗಳು ಸಿದ್ಧಾಂತ ಶೈವದ ಕಕ್ಷೆಯಲ್ಲಿ ಬರುತ್ತವೆ.[೧೪] ಆದರೆ ಎಚ್.ಗಂಗಾಧರನ್ ಎಂಬುವರು 'ಶಿವಾಗಮಗಳು'(ಒಂದು ಅಧ್ಯಯನ)ಎಂಬ ತಮ್ಮ ಲೇಖನದಲ್ಲಿ ನೇಪಾಳದ ದರ್ಬಾರ್ ಗ್ರಂಥಾಲಯದಲ್ಲಿ ದೊರೆತ ಅತ್ಯಂತ ಪ್ರಾಚೀನ ತಂತ್ರಗ್ರಂಥವಾದ 'ನಿಶ್ವಾಸತತ್ವ ಸಂಹಿತೆಯಲ್ಲಿ' ಐದು ಸೂತ್ರಗಳ ಆಧಾರದ ಮೇಲೆ ತಂತ್ರಶಾಸ್ತ್ರ ಬೆಳೆಯಿತೆಂದು ಹೇಳಿದೆ. ಲೌಕಿಕಧರ್ಮ, ಮೂಲಸೂತ್ರ, ಉತ್ತರ ಸೂತ್ರ, ನಯಸೂತ್ರ ಮತ್ತು ಗುಹ್ಯಸೂತ್ರ ಇವೇ ಐದು ಸೂತ್ರಗಳು ನಿಶ್ವಾಸ ತತ್ವ ಸಂಹಿತೆಯಲ್ಲಿ ವಿವರಿಸಲ್ಪಟ್ಟಿವೆ. ಇವುಗಳಲ್ಲಿ ಮೊದಲನೆಯದಾದ ಲೌಕಿಕ ಧರ್ಮದ ಕೃತಿಗಳು ಹೆಚ್ಚು ಪ್ರಚಲಿತವಾಗಿಲ್ಲ. ಆದುದರಿಂದ ಉಳಿದ ನಾಲ್ಕು ಸೂತ್ರಗಳನ್ನು ಅನುಸರಿಸಿ ೧೮ ಶಿವಶಾಸ್ತ್ರಗಳನ್ನು ವಿವರಿಸಿದೆ. ಬ್ರಹ್ಮಯಾಮಲ ಗ್ರಂಥದಲ್ಲೂ ಇದೇ ಹದಿನೆಂಟು ಕೃತಿಗಳ ಉಲ್ಲೇಖವಿದೆ. ಇವುಗಳ ಆಧಾರದಿಂದ ಕ್ರಿ.ಶ.೮ನೆಯ ಶತಮಾನದಲ್ಲಿ ೧. ವಿಜಯ, ೨. ನಿಶ್ವಾಸ, ೩. ಸ್ವಯಂಭುವ ಮತ, ೪. ವಾತುಲ, ೫. ವೀರಭದ್ರ, ೬. ರೌರವ, ೭. ಮಕುಟ, ೮, ವೀರಸ ಅಥವಾ ವೀರೇಶ, ೯. ಚಂದ್ರಹಾಸ ಅಥವಾ ಚಂದ್ರ, ೧೦. ಜ್ಞಾನ, ೧೧. ಮುಖಬಿಂಬ ಅಥವಾ ಬಿಂಬ, ೧೨. ಪ್ರೋದ್ಗೀತ, ೧೩, ಲಲಿತ, ೧೪. ಸಿದ್ಧಿ, ೧೫. ಸಂತಾನ, ೧೬. ಸರ್ವೋದ್ಗಿತ, ೧೭. ಕಿರಣ, ೧೮, ಪಾರಮೇಶ್ವರ ಎಂಬ ಹದಿನೆಂಟು ತಂತ್ರ ಗ್ರಂಥಗಳು ಪ್ರಚಲಿತವಿದ್ದುವೆಂದು ವ್ಯಕ್ತವಾಗುತ್ತದೆ. ಕಾಮಿಕಾಮಗದಲ್ಲೂ ಸಹ ಈ ಹದಿನೆಂಟು ಆಗಮಗಳ ಉಲ್ಲೇಖವಿದೆ. ಮದರಾಸಿನಲ್ಲಿ ಅಲಗಪ್ಪ

ಮೊದಲಿಯಾರ್‌ರವರು ಪ್ರಕಟಿಸಿದ ಕಾಮಿಕಾಗಮದಲ್ಲಿ ಇದೇ ವಿವರಣೆಯಿದೆ[೧೫] ಎಂದು ಬರೆದಿದ್ದಾರೆ. ನಂತರದಲ್ಲಿ ಇತ್ತೀಚಿನ ಸಾಹಿತ್ಯದಲ್ಲಿ ೨೮ ಶಿವಾಗಮಗಳು ಇರುವುದಾಗಿ ತಿಳಿದುಬರುತ್ತದೆ ಎಂದು ಹೇಳಿ ಅವುಗಳ ಹೆಸರನ್ನು ನೀಡಿದ್ದಾರೆ. ಇದರಿಂದಾಗಿ ಮೇಲಿನ ವಿವರಣೆಗಳೇನೇ ಇರಲಿ ಇಂದು ನಮಗೆ ಲಭ್ಯವಿರುವ ಶೈವಾಗಮಗಳು ಒಟ್ಟು ೨೮ ಅವು ೧. ಕಾಮಿಕ, ೨. ಯೋಗಜ, ೩. ಅಚಿಂತ್ಯ, ೪. ಕಾರಣ, ೫. ಅಜಿತ, ೬. ದೀಪ್ತ, ೭. ಸೂಕ್ಷ್ಮ, ೮. ಸಹಸ್ರ, ೯. ಅಂಶುಮಾನ್ ೧೦. ಸುಪ್ರಭೇಧ, ೧೧. ವಿಜಯ, ೧೨. ನಿಶ್ವಾಸ, ೧೩. ಸ್ವಾಯಂಭುವ, ೧೪. ಅನಿಲ, ೧೫. ವೀರ, ೧೬. ರೌರವ, ೧೭. ಮಕುಟ, ೧೮, ವಿಮಲ, ೧೯. ಚಂದ್ರಜ್ಞಾನ, ೨೦. ಬಿಂಬ, ೨೧. ಪ್ರೋದ್ಗೀತ, ೨೨. ಲಲಿತ, ೨೩. ಸಿದ್ಧ, ೨೪. ಶರ್ವೋಕ್ತ, ೨೫. ಸಂತಾನ, ೨೬. ಪಾರಮೇಶ್ವರ, ೨೭. ಕಿರಣ, ೨೮. ವಾತುಲ. ಇವುಗಳಲ್ಲಿ ಕಾಮಿಕದಿಂದ ಸುಪ್ರಭೇದದವರೆಗಿನ ಹತ್ತು ಆಗಮಗಳು ಶಿವಭೇದಗಳೆಂದು ಉಳಿದ ಹದಿನೆಂಟು ಆಗಮಗಳನ್ನು ರುದ್ರಭೇದಗಳೆಂದೂ ವಿಂಗಡಣೆ ಮಾಡಲಾಗಿದೆ. ಈ ೨೮ ಆಗಮಗಳು ಸದಾಶಿವನ ಪಂಚಮುಖದಿಂದ ಬಂದವುಗಳಾಗಿವೆ. ಮೊದಲಿನ ನಾಲ್ಕು ಮುಖಗಳಲ್ಲಿ ಪ್ರತಿಯೊಂದು ಐದೈದು ಆಗಮಗಳನ್ನು ಹಾಗೂ ಕೊನೆಯದಾದ ಈಶಾನ ಮುಖದಿಂದ ೮ ಆಗಮಗಳು ಹೇಳಲ್ಪಟ್ಟವು. ಸದ್ಯೋಜಾತ ಮುಖದಿಂದ ಕಾಮಿಕ, ಯೋಗಜ, ಅಚಿಂತ್ಯ, ಕಾರಣ ಮತ್ತು ಅಜಿತ ಆಗಮಗಳು ಕೌಶಿಕ ಋಷಿಗೆ, ವಾಮದೇವ ಮುಖದಿಂದ ದೀಪ್ತ, ಸೂಕ್ಷ್ಮ, ಸಹಸ್ರ, ಅಂಶುಮತ ಮತ್ತು ಸುಪ್ರಭೇದಾಮಗಳು ಕಾಶ್ಯಪ ಋಷಿಗೆ, ಅಘೋರ ಮುಖದಿಂದ ವಿಜಯ, ನಿಶ್ವಾಸ, ಸ್ವಯಂಭುವ, ಅನಿಲ ಮತ್ತು ವೀರಾಗಮಗಳನ್ನು ಭಾರದ್ವಾಜ ಋಷಿಗೆ ಹಾಗೂ ತತ್ಪುರುಷ ಮುಖದಿಂದ ರೌರವ, ಮಕುಟ, ವಿಮಲ, ಚಂದ್ರಜ್ಞಾನ ಮತ್ತು ಬಿಂಬ ಆಗಮಗಳನ್ನು ಗೌತಮ ಋಷಿಗೆ ಬೋಧಿಸಲ್ಪಟ್ಟುವು ಮತ್ತು ಕೊನೆಯದಾಗಿ ಈಶಾನ ಮುಖದಿಂದ ಉಳಿದ ಎಂಟು ಆಗಮಗಳಾದ ಪ್ರೋದ್ಗಿತ, ಲಲಿತ, ಸಿದ್ಧ, ಸಂತಾನ, ಶರ್ವೋಕ್ತ, ಪಾರಮೇಶ್ವರ, ಕಿರಣ ಮತ್ತು ವಾತುಲಾಗಮಗಳನ್ನು ಅಗಸ್ತ್ಯ ಋಷಿಗೆ ಬೋಧಿಸಲ್ಪಟ್ಟವು.

ಮೊದಲಿನ ಹತ್ತು ಆಗಮಗಳು ಸದಾಶಿವನಿಂದ ವಿದ್ಯೆಶ್ವರರಿಗೆ ಹಾಗೂ ಇತರ ಶ್ರೋತಾರರಿಗೆ ಬೋಧಿಸಲ್ಪಟ್ಟವು. ಆದ್ದರಿಂದ ಅವುಗಳನ್ನು ಶಿವಭೇದ ಆಗಮಗಳೆಂದು ಹಾಗೂ ಉಳಿದ ಹದಿನೆಂಟು ಆಗಮಗಳು ಅನಾದಿರುದ್ರಯಾದಿಗಳಿಂದ ೩೬ ರುದ್ರರಿಗೆ ಬೋಧಿಸಲ್ಪಟ್ಟವು. ಆದ್ದರಿಂದ ಅವುಗಳನ್ನು ರುದ್ರಭೇಧಗಾಮಗಳೆಂದು ಕರೆದಿರುವರು. ಮೊದಲಿನ ಹತ್ತು ಆಗಮಗಳಲ್ಲಿ ಪ್ರತಿಯೊಂದು ಆಗಮವು ಮತ್ತೆ ಮೂರು ಜನ ಶ್ರೋತಾರರಿಗೆ ಹಾಗೂ ಉಳಿದ ಹದಿನೆಂಟು ಆಗಮಗಳಲ್ಲಿ ಪ್ರತಿಯೊಂದು ಇಬ್ಬರು ಶ್ರೋತಾರರಿಗೆ ಬೋಧಿಸಲ್ಪಟ್ಟವು. ಹೀಗೆ ಒಟ್ಟು ೬೬ ಶ್ರೋತಾರರಿಗೆ(೩೦+೩೬) ಆಗಮಗಳು ಬೋಧಿಸಲ್ಪಟ್ಟವು. ಈ ೨೮ ಆಗಮಗಳಿಗೆ ೨೦೭ ಉಪಾಗಮಗಳಿವೆ. ಆದರೆ ಎಸ್.ಸಿ.ನಂದಿಮಠರು ತಮ್ಮ 'ಶೈವಾಗಮಗಳ ಸ್ಥೂಲ ಪರಿಚಯ' ಎಂಬ ಲೇಖನದಲ್ಲಿ[೧೬] ಇಪ್ಪತ್ತೆಂಟು ಆಗಮಗಳಲ್ಲದೆ ಅನೇಕ ಉಪಾಗಮಗಳಿರುವುವು. ಅವು ೨೫೭ಕ್ಕೂ ಹೆಚ್ಚಾಗಿವೆ. ಆದರೆ ಇವೆಲ್ಲ ಉಪಲಬ್ದವಿಲ್ಲ ಎಂದು ಉಲ್ಲೇಖಿಸಿರುತ್ತಾರೆ. ಹಾಗೆಯೇ ತಮ್ಮ ಇನ್ನೊಂದು ''The Saivagamas: Their

Literature and Theology" ಎಂಬ ಲೇಖನದಲ್ಲಿ[೧೭] ಒಟ್ಟು ೨೫೧ ಆಗಮಗಳ ಪಟ್ಟಿಯನ್ನು ನೀಡಿರುವರು. ಎಚ್.ಪಿ.ಮಲ್ಲೇದೇವರು ಅವರು ಕಾಮಿಕಾದಿ ವಾತುಲಾಂತವಾದ ಇಪ್ಪತ್ತೆಂಟು ಪ್ರಧಾನ ಶಿವಾಗಮಗಳು 'ಏಕ್ತಾರಾದಿ ವಿಶ್ವಾತ್ಮಕಾಂತ'ವಾದ ಇನ್ನೂರ ಇಪ್ಪತ್ತೈದು ಉಪಾಗಮಗಳು ಒಟ್ಟು ಎರಡುನೂರ ಐವತ್ತಮೂರು ಆಗಮಗಳಿವೆ[೧೮] ಎಂದು ಹೇಳಿರುವರು.

ಒಟ್ಟಾರೆಯಾಗಿ ಲಭ್ಯವಿರುವ ಆಗಮ ಮತ್ತು ಉಪಾಗಮಗಳ ಪಟ್ಟಿಯನ್ನು ಈ ಕೆಳಗೆ ನೀಡಲಾಗಿದೆ(ಇಲ್ಲಿ ಎಸ್.ಸಿ.ನಂದಿಮಠರವರು ನೀಡಿರುವ ಪಟ್ಟಿಯನ್ನು ಬಳಸಿಕೊಳ್ಳಲಾಗಿದೆ).

| ಸದಾಶಿವನ ಪಂಚಮುಖಗಳು | ಋಷಿಗಳು | ಕ್ರ.ಸಂ. | ಆಗಮಗಳು | ಕ್ರ.ಸಂ. | ಉಪಾಗಮಗಳು | ಕ್ರ.ಸಂ. | ಶ್ರೋತಾರರು | ಶ್ಲೋಕಗಳ ಸಂಖ್ಯೆ |
|---|---|---|---|---|---|---|---|---|
| | | ೧ | ಕಾಮಿಕ | ೧ | ಭೈರವ | ೧ | ಪ್ರವಣ | |
| | | | | ೨ | ಉತ್ತರ | ೨ | ತ್ರಿಕಾಲ | ಪರಾರ್ಧ |
| | | | | ೩ | ನಾರಸಿಂಹ | ೩ | ಹರ | |
| | | ೨ | ಯೋಗಜ | ೧ | ಪೀನಾಶಿಕೊತ್ತರ | ೧ | ಸುಧಾಖ್ಯ | |
| | | | | ೨ | ತಾರ | ೨ | ಭಸ್ಮ | ಲಕ್ಷ |
| | | | | ೩ | ಶಾಂತ | ೩ | ವಿಭು | |
| | | | | ೪ | ಸಾಂಖ್ಯ | | | |
| | | | | ೫ | ಸಂತಾನ | | | |
| | | | | ೬ | ಶಾಂತ್ಯ | | | |
| | | | | ೭ | ಆತ್ಮಯೋಗ | | | |
| ಸದ್ಯೋಜಾತ | ಕೌಶಿಕ ಋಷಿ | ೩ | ಚಿಂತ್ಯ | ೧ | ಸುಚಿಂತ್ಯ | ೧ | ದೀಪ್ತ | |
| | | | | ೨ | ಸುಭಗ | ೨ | ಗೊಪತಿ | |
| | | | | ೩ | ವಾಮ | ೩ | ಅಂಬಿಕಾ | ಲಕ್ಷ |
| | | | | ೪ | ಪಾಪಣಾಶನ | | | |
| | | | | ೫ | ಪರೋದ್ಭವ | | | |
| | | | | ೬ | ಅಮೃತ | | | |
| | | ೪ | ಕಾರಣ | ೧ | ಕಾರಣ | ೧ | ಕಾರಣ | |
| | | | | ೨ | ಪಾವನ | ೨ | ಶರ್ವರುದ್ರ | ಕೋಟಿ |

| ಸದಾಶಿವನ ಪಂಚಮುಖಗಳು | ಋಷಿಗಳು | ಕ್ರಸಂ. | ಆಗಮಗಳು | ಕ್ರಸಂ. | ಉಪಾಗಮಗಳು | ಕ್ರಸಂ. | ಶ್ರೋತಾರರು | ಶ್ಲೋಕಗಳ ಸಂಖ್ಯೆ |
|---|---|---|---|---|---|---|---|---|
| | | | | ೩ | ದುರ್ಗ | ೩ | ಪ್ರಜಾಪತಿ | |
| | | | | ೪ | ಮಹೇಂದ್ರ | | | |
| | | | | ೫ | ಭೀಮ | | | |
| | | | | ೬ | ಮಾರಣ | | | |
| | | | | ೭ | ದೇವಷ್ಠ | | | |
| | | | | ೮ | ಈಶಾನ | | | |
| | | ೫ | ಅಜಿತ | ೧ | ಪ್ರಭೂತ | ೧ | ಸುಶಿವ | |
| | | | | ೨ | ಪರೋದ್ಭೂತ | ೨ | ಶಿವ | ನಿಯತ |
| | | | | ೩ | ಪಾರ್ವತಿ | ೩ | ಅಚ್ಯುತ | |
| | | | | ೪ | ಪದ್ಮ | | | |
| ವಾಮದೇವ | ಕಶ್ಯಪ ಋಷಿ | ೬ | ದೀಪ್ತ | ೧ | ಅಮೇಯ | ೧ | ಈಶ | |
| | | | | ೨ | ಶಬ್ದ | ೨ | ಈಶಾನ | ನಿಯತ |
| | | | | ೩ | ಆಚ್ಛಾದ್ಯ | ೩ | ಹುತಾಶನ | |
| | | | | ೪ | ಅಸಂಖ್ಯ | | | |
| | | | | ೫ | ಅಮಿತೌಜಸ | | | |
| | | | | ೬ | ಆನಂದ | | | |
| | | | | ೭ | ಮಾಧ್ವ | | | |
| | | | | ೮ | ಅದ್ಭುತ | | | |

| ಸದಾಶಿವನ ಪಂಚಮುಖಗಳು | ಋಷಿಗಳು | ಕ್ರ.ಸಂ. | ಆಗಮಗಳು | ಕ್ರ.ಸಂ. | ಉಪಾಗಮಗಳು | ಕ್ರ.ಸಂ. | ಶ್ರೋತಾರರು | ಶ್ಲೋಕಗಳ ಸಂಖ್ಯೆ |
|---|---|---|---|---|---|---|---|---|
| | | | | ೯ | ರೌಕ್ಷತ | | | |
| | | | | ೧೦ | ಅಪ್ರತಿಮ | | | |
| | | | | ೧೧ | ಅಪ್ಯಾಗಮ | | | |
| | | | | ೧೨ | ಅಮೃತ | | | |
| | | ೭ | ಸೂಕ್ಷ್ಮ | ೧ | ಸೂಕ್ಷ್ಮ | ೧ | ಸೂಕ್ಷ್ಮ | |
| | | | | | | ೨ | ವೈಶ್ರವಣ | ಪದ್ಮ |
| | | | | | | ೩ | ಪ್ರಭಂಜ್ಞಾನ | |
| | | ೮ | ಸಹಸ್ರ | ೧ | ಅತೀತ | ೧ | ಕಾಲ | |
| | | | | ೨ | ಅಮಲ | ೨ | ಭೀಮ | ಶಂಖ |
| | | | | ೩ | ಮಂಗಲ | ೩ | ಭರ್ವ | |
| | | | | ೪ | ಶುದ್ಧ | | | |
| | | | | ೫ | ಅಪ್ರಮೇಯ | | | |
| | | | | ೬ | ಜ್ಯೋತಿರ್ಭಾಜ | | | |
| | | | | ೭ | ಪ್ರಭುದ್ಧ | | | |
| | | | | ೮ | ವಿಬುದ್ಧ | | | |
| | | | | ೯ | ಹಸ್ತ | | | |
| | | | | ೧೦ | ಅಲಂಕಾರ | | | |
| | | | | ೧೧ | ಶುದೊಧ | | | |

| ಸದಾಶಿವನ ಪಂಚಮುಖಗಳು | ಋಷಿಗಳು | ಕ್ರ.ಸಂ. | ಆಗಮಗಳು | ಕ್ರ.ಸಂ. | ಉಪಾಗಮಗಳು | ಕ್ರ.ಸಂ. | ಶ್ರೋತಾರರು | ಶ್ಲೋಕಗಳ ಸಂಖ್ಯೆ |
|---|---|---|---|---|---|---|---|---|
| | | ೯ | ಅಂಶುಮನ್ | ೧ | ವಿದ್ಯಾಪುರಣ | ೧ | ಅಂಬು | |
| | | | | ೨ | ವಾಸವ | ೨ | ಅಗ್ರ | ಪಂಚಲಕ್ಷ |
| | | | | ೩ | ನೀಲಲೋಹಿತ | ೩ | ರವಿ | |
| | | | | ೪ | ಪ್ರಕರಣ | | | |
| | | | | ೫ | ಭೂತ–ತಂತ್ರ | | | |
| | | | | ೬ | ಆತ್ಮಾಲಂಕಾರ | | | |
| | | | | ೭ | ಕಾಶ್ಯಪ | | | |
| | | | | ೮ | ಗೌತಮ | | | |
| | | | | ೯ | ಐಂದ್ರ | | | |
| | | | | ೧೦ | ಬ್ರಾಹ್ಮ | | | |
| | | | | ೧೧ | ವೈಶಿಷ್ಠ | | | |
| | | | | ೧೨ | ಐಶಾನ | | | |
| | | ೧೦ | ಸುಪ್ರಭೇದ | ೧ | ಸುಬೋಧ | ೧ | ದಶೇಶ | |
| | | | | ೨ | ಪ್ರಬೋಧ | ೨ | ವಿಘ್ನೇಶ | ತ್ರಿಕೋಟಿ |
| | | | | ೩ | ಬೊಧಾಂಕುರ | ೩ | ಶಶಿ | |
| ಆಘೋರ | ಭಾರದ್ವಾಜ | ೧೧ | ವಿಜಯ | ೧ | ವಿಜಯ | ೧ | ರುದ್ರ | ತ್ರಿಕೋಟಿ |
| | ಋಷಿ | | | ೨ | ಉದ್ಭವ | ೨ | ಪರಮೇಶ | |

| ಸದಾಶಿವನ ಪಂಚಮುಖಗಳು | ಋಷಿಗಳು | ಕ್ರ.ಸಂ. | ಆಗಮಗಳು | ಕ್ರ.ಸಂ. | ಉಪಾಗಮಗಳು | ಕ್ರ.ಸಂ. | ಶ್ರೋತಾರರು | ಶ್ಲೋಕಗಳ ಸಂಖ್ಯೆ |
|---|---|---|---|---|---|---|---|---|
| | | | | ೩ | ಸೌಮ್ಯ | | | |
| | | | | ೪ | ಅಘೋರ | | | |
| | | | | ೫ | ಮೃತ್ಯುನಾಶನ | | | |
| | | | | ೬ | ಕುಬೇರ | | | |
| | | | | ೭ | ಮಹಾಘೋರ | | | |
| | | | | ೮ | ವಿಮಲ | | | |
| | | ೧೨ | ನಿಶ್ವಾಸ | ೧ | ನಿಶ್ವಾಸ | ೧ | ದಶಾರ್ನ | ಕೋಟಿ |
| | | | | ೨ | ಉತ್ತರ–ನಿವಾಸ | ೨ | ಶೈಲಜ | |
| | | | | ೩ | ನಿಶ್ವಾಸ–ಮುಖ | | | |
| | | | | ೪ | ನಿಶ್ವಾಸ–ನಯನ | | | |
| | | | | ೫ | ನಿಶ್ವಾಸ–ಕಾರಿಕಾ | | | |
| | | | | ೬ | ಘೋರ–ಸಂಹಿತ | | | |
| | | | | ೭ | ಸುಸಾಂಖ್ಯ | | | |
| | | | | ೮ | ಯಮ | | | |
| | | | | ೯ | ಗುಹ್ಯ | | | |
| | | ೧೩ | ಸ್ವಾಯಂಭುವ | ೧ | ಪ್ರಜಾಪತಿ–ಮತ | ೧ | ನಿಧನೇಶ | ತ್ರಿಕೋಟ್ಯಾರ್ಧ |
| | | | | ೨ | ಸ್ವಾಯಂಭುವ | ೨ | ನಲಿನೊದ್ಭವ | |

| ಸದಾಶಿವನ ಪಂಚಮುಖಗಳು | ಋಷಿಗಳು | ಕ್ರ.ಸಂ. | ಆಗಮಗಳು | ಕ್ರ.ಸಂ. | ಉಪಾಗಮಗಳು | ಕ್ರ.ಸಂ. | ಶ್ರೋತಾರರು | ಶ್ಲೋಕಗಳ ಸಂಖ್ಯೆ |
|---|---|---|---|---|---|---|---|---|
| | | | | ೩ | ಪದ್ಮ | | | |
| | | ೧೪ | ಅನಂತ | ೧ | ಆಗ್ನೇಯ | ೧ | ವ್ಯೋಮ | ನಿಯತ |
| | | | | | | ೨ | ಆಗ್ನೇಯ | |
| | | ೧೫ | ವೀರಾಗಮ | ೧ | ಪ್ರಸ್ತರ | ೧ | ತೇಜಸ್ | |
| | | | | ೨ | ಫುಲ್ಲಮಲ್ಲ | ೨ | ಪ್ರಜಾಪತಿ | ನಿಯತ |
| | | | | ೩ | ಪ್ರಭೋಧ | | | |
| | | | | ೪ | ಬೊಧ | | | |
| | | | | ೫ | ಬೊಧಕ | | | |
| | | | | ೬ | ಅಮೊಹ | | | |
| | | | | ೭ | ಮೋಹಸಮಯ | | | |
| | | | | ೮ | ಹಾಕಟ | | | |
| | | | | ೯ | ಸಾಕಟಾಧಿಕ | | | |
| | | | | ೧೦ | ಹಲ | | | |
| | | | | ೧೧ | ವಿಲೆಖನ | | | |
| | | | | ೧೨ | ಭದ್ರ | | | |
| | | | | ೧೩ | ವೀರ | | | |
| ತತ್ಪುರುಷ | ಗೌತಮ ಋಷಿ | ೧೬ | ರೌರವಾಗಮ | ೧ | ಕಾಲಘ್ನ | ೧ | ಬ್ರಾಹ್ಮಣೇಶ | ಅರ್ಬುದಾಷ್ಟಕ |

| ಸದಾಶಿವನ ಪಂಚಮುಖಗಳು | ಋಷಿಗಳು | ಕ್ರ.ಸಂ. | ಆಗಮಗಳು | ಕ್ರ.ಸಂ. | ಉಪಾಗಮಗಳು | ಕ್ರ.ಸಂ. | ಶ್ರೋತಾರರು | ಶ್ಲೋಕಗಳ ಸಂಖ್ಯೆ |
|---|---|---|---|---|---|---|---|---|
| | | | | ೨ | ಕಾಲತೀತ | ೨ | ನಂದಿಕೇಶ | |
| | | | | ೩ | ರೌರವ | | | |
| | | | | ೪ | ರೌರವೋತ್ತರ | | | |
| | | | | ೫ | ಮಹಾಕಾಲಮತ | | | |
| | | | | ೬ | ಐಂದ್ರ | | | |
| | | | | ೭ | ಕಾಲದಹನ | | | |
| | | | | ೮ | ಕೌಮಾರ | | | |
| | | | | ೯ | ಕಾಲ | | | |
| | | ೧೭ | ಮಕುಟ | ೧ | ಮಕುಟೋತ್ತರ | ೧ | ಶಿವ | ಶತಸಹಸ್ರ |
| | | | | ೨ | ಮಕುಟ | ೨ | ಮಹಾದೇವ | |
| | | ೧೮ | ವಿಮಲ | ೧ | ಅನಂತ | ೧ | ಸರ್ವಾತ್ಮಕ | ತ್ರಿಲಕ್ಷ |
| | | | | ೨ | ಭೋಗ | ೨ | ವೀರಭದ್ರ | |
| | | | | ೩ | ಆಕ್ರಾಂತ | | | |
| | | | | ೪ | ವೃಷಪಿಂಗ | | | |
| | | | | ೫ | ವೃಶೋಧರ | | | |
| | | | | ೬ | ವೃಶದ್ಭೂತ | | | |
| | | | | ೭ | ಸುದತ್ತ | | | |

| ಸದಾಶಿವನ ಪಂಚಮುಖಗಳು | ಋಷಿಗಳು | ಕ್ರ.ಸಂ. | ಆಗಮಗಳು | ಕ್ರ.ಸಂ. | ಉಪಾಗಮಗಳು | ಕ್ರ.ಸಂ. | ಶ್ರೋತಾರರು | ಶ್ಲೋಕಗಳ ಸಂಖ್ಯೆ |
|---|---|---|---|---|---|---|---|---|
| | | | | ೮ | ರೌದ್ರ | | | |
| | | | | ೯ | ಭದ್ರಾವಿಡ | | | |
| | | | | ೧೦ | ಅರೆವತ | | | |
| | | | | ೧೧ | ಅತಿಕ್ರಾಂತ | | | |
| | | | | ೧೨ | ಅಟ್ಟಹಾಸ | | | |
| | | | | ೧೩ | ಅಲಂಕೃತ | | | |
| | | | | ೧೪ | ಅರ್ಚಿತ | | | |
| | | | | ೧೫ | ಧಾರಣ | | | |
| | | | | ೧೬ | ವಿಮಲ | | | |
| | | ೧೯ | ಚಂದ್ರಜ್ಞಾನ | ೧ | ಸ್ಥಿರ | ೧ | ಅನಂತ | ತ್ರಿಕೋಟಿ |
| | | | | ೨ | ಸ್ಥಾಣು | ೨ | ಬ್ರಹ್ಮಸ್ಪತಿ | |
| | | | | ೩ | ಮಹತ್ | | | |
| | | | | ೪ | ವರುಣ | | | |
| | | | | ೫ | ನಂದಿಕೇಶ್ವರ | | | |
| | | | | ೬ | ಏಕಪಾದ | | | |
| | | | | ೭ | ಶಂಕರ | | | |
| | | | | ೮ | ನೀಲರುದ್ರ | | | |
| | | | | ೯ | ಶಿವಭದ್ರ | | | |

| ಸದಾಶಿವನ ಪಂಚಮುಖಗಳು | ಋಷಿಗಳು | ಕ್ರ.ಸಂ. | ಆಗಮಗಳು | ಕ್ರ.ಸಂ. | ಉಪಾಗಮಗಳು | ಕ್ರ.ಸಂ. | ಶ್ರೋತಾರರು | ಶ್ಲೋಕಗಳ ಸಂಖ್ಯೆ |
|---|---|---|---|---|---|---|---|---|
| | | | | ೧೦ | ಕಲ್ಪಭೇದ | | | |
| | | | | ೧೧ | ಶ್ರೀಮುಖ | | | |
| | | | | ೧೨ | ಶಿವಶಾಸನ | | | |
| | | | | ೧೩ | ಶಿವಶೇಖರ | | | |
| | | | | ೧೪ | ದೇವಿಮಾತ | | | |
| | | ೨೦ | ಮುಖಬಿಂಬ | ೧ | ಚತುರ್ಮುಖ | ೧ | ಪ್ರಶಾಂತ | ಶತಸಹಸ್ರ |
| | | | | ೨ | ಮಲ | ೨ | ದಧಿಚಿ | |
| | | | | ೩ | ಯೋಗ | | | |
| | | | | ೪ | ಸಮಸ್ತೊಭ | | | |
| | | | | ೫ | ಪ್ರತಿಬಿಂಬ | | | |
| | | | | ೬ | ಐಮಲಂಕಾರ | | | |
| | | | | ೭ | ವಾಯವ್ಯ | | | |
| | | | | ೮ | ತೌಟಕ | | | |
| | | | | ೯ | ತುಟಿನೀರಕ | | | |
| | | | | ೧೦ | ಕಲಾತ್ಯಾಯ | | | |
| | | | | ೧೧ | ತುಲಾಯೋಗ | | | |
| | | | | ೧೨ | ಕುಟ್ಟಿಮ | | | |
| | | | | ೧೩ | ಪಟ್ಟಿಶೇಖರ | | | |

| ಸದಾಶಿವನ ಪಂಚಮುಖಗಳು | ಋಷಿಗಳು | ಕ್ರ.ಸಂ. | ಆಗಮಗಳು | ಕ್ರ.ಸಂ. | ಉಪಾಗಮಗಳು | ಕ್ರ.ಸಂ. | ಶ್ರೋತಾರರು | ಶ್ಲೋಕಗಳ ಸಂಖ್ಯೆ |
|---|---|---|---|---|---|---|---|---|
| | | | | ೧೪ | ಮಹಾವಿದ್ಯಾ | | | |
| | | | | ೧೫ | ಮಹಾಸೌರ | | | |
| ಈಶಾನ | ಅಗಸ್ತ್ಯ ಋಷಿ | ೨೧ | ಪ್ರೊದ್ಗಿತ | ೧ | ಕವಚ | ೧ | ಸೂಲಿನ್ | ಲಕ್ಷತ್ರಿತಯ |
| | | | | ೨ | ವರಾಹ | ೨ | ಕವಚ | |
| | | | | ೩ | ಪಿಂಗಳ | | | |
| | | | | ೪ | ರಸಬಂಧ | | | |
| | | | | ೫ | ದಂಡಧರ | | | |
| | | | | ೬ | ಅಂಕುಶ | | | |
| | | | | ೭ | ಧನುರ್ಧರ | | | |
| | | | | ೮ | ಶಿವಜ್ಞಾನ | | | |
| | | | | ೯ | ವಿಜ್ಞಾನ | | | |
| | | | | ೧೦ | ಶ್ರೀಕಾಲಜ್ಞಾನ | | | |
| | | | | ೧೧ | ಜ್ಞಾನ | | | |
| | | | | ೧೨ | ಆಯುರ್ವೇದ | | | |
| | | | | ೧೩ | ಧನುರ್ವೇದ | | | |
| | | | | ೧೪ | ಸರ್ಪದಂಷ್ಟ್ರವಿಭೇದ | | | |
| | | | | ೧೫ | ಗೀತ | | | |
| | | ೨೨ | ಲಲಿತ | ೧ | ಲಲಿತ | ೧ | ಯಮ | ಅಷ್ಟಸಹಸ್ರ |

| ಸದಾಶಿವನ ಪಂಚಮುಖಗಳು | ಋಷಿಗಳು | ಕ್ರ.ಸಂ. | ಆಗಮಗಳು | ಕ್ರ.ಸಂ. | ಉಪಾಗಮಗಳು | ಕ್ರ.ಸಂ. | ಶ್ರೋತಾರರು | ಶ್ಲೋಕಗಳ ಸಂಖ್ಯೆ |
|---|---|---|---|---|---|---|---|---|
| | | | | ೨ | ಲಲಿತೋತ್ತರ | ೨ | ಆಲಯ | |
| | | | | ೩ | ಕೌಮಾರ | | | |
| | | | | ೪ | ವಿಘ್ನೇಶ್ವರ | | | |
| | | ೨೩ | ಸಿದ್ಧ | ೧ | ಸಾರೋತ್ತರ | ೧ | ಬಿಂದು | ಕೋಟಿಕೊಟ್ಯಾರ್ಧ |
| | | | | ೨ | ದೇಶಿವೆಶೊತ್ತರ | ೨ | ಚಂಡೇಶ್ವರ | |
| | | | | ೩ | ಸಾಲಭೇದ | | | |
| | | | | ೪ | ಸಶಿಮಂಡಲ | | | |
| | | ೨೪ | ಸಂತಾನ | ೧ | ಲಿಂಗಾಧ್ಯಕ್ಷ | ೧ | ಶಿವನಿಷ್ಠ | ಶತ ಸಹಸ್ರ |
| | | | | ೨ | ಸೌರಾಧ್ಯಕ್ಷ | ೨ | ಅಸಂವಾಯ | |
| | | | | ೩ | ಶಂಕರ | | | |
| | | | | ೪ | ಅಮಲೇಶ್ವರ | | | |
| | | | | ೫ | ಅಸಂಖ್ಯಾ | | | |
| | | | | ೬ | ಅನಿಲ | | | |
| | | | | ೭ | ದ್ವಂದ್ವ | | | |
| | | ೨೫ | ಸರ್ವೋತ್ತರಾಗಮ | ೧ | ಶಿವಧರ್ಮೋತ್ತರ | ೧ | ಸೋಮದೇವ | ದ್ವಿಲಕ್ಷ |
| | | | | ೨ | ವಾಯುಪ್ರೋಕ್ತ | ೨ | ನೃಸಿಂಹ | |
| | | | | ೩ | ದೇವ್ಯಾಪ್ರೋಕ್ತ | | | |
| | | | | ೪ | ಈಶಾನ | | | |

| ಸದಾಶಿವನ ಪಂಚಮುಖಗಳು | ಋಷಿಗಳು | ಕ್ರ.ಸಂ. | ಆಗಮಗಳು | ಕ್ರ.ಸಂ. | ಉಪಾಗಮಗಳು | ಕ್ರ.ಸಂ. | ಶ್ರೋತಾರರು | ಶ್ಲೋಕಗಳ ಸಂಖ್ಯೆ |
|---|---|---|---|---|---|---|---|---|
| | | | | ೫ | ಸರ್ವೋದ್ಗೀತ | | | |
| | | | | ೬ | ಉತ್ತರಾಗಮ | | | |
| | | | | ೭ | ತತ್ತ್ವೋತ್ತರಾಗಮ | | | |
| | | | | ೮ | ವಿಷಯೋತ್ತರ | | | |
| | | ೨೬ | ಪಾರಮೇಶ್ವರ | ೧ | ಮಾತಂಗ | ೧ | ದೇವಿ | ದ್ವಾದಶ |
| | | | | ೨ | ಯಕ್ಷಿಣಿ | | | |
| | | | | ೩ | ಪದ್ಮ | | | |
| | | | | ೪ | ಪಾರಮೇಶ್ವರ | | | |
| | | | | ೫ | ಪೌಷ್ಕರ | | | |
| | | | | ೬ | ಸುಪ್ರಯೋಗ | | | |
| | | | | ೭ | ಹಂಸ | | | |
| | | ೨೭ | ಕಿರಣ | ೧ | ಗರುಡ | ೧ | ಶಿವ | ಶತಸಹಸ್ರ |
| | | | | ೨ | ನೈರುತ | ೨ | ಮಹಾಕಾಲ | |
| | | | | ೩ | ನೀಲ | | | |
| | | | | ೪ | ರುಕ್ಷ | | | |
| | | | | ೫ | ಭಾನುಕ | | | |
| | | | | ೬ | ದೇನುತ | | | |
| | | | | ೭ | ಪ್ರಭುದ್ಧ | | | |

| ಸದಾಶಿವನ ಪಂಚಮುಖಗಳು | ಋಷಿಗಳು | ಕ್ರ.ಸಂ. | ಆಗಮಗಳು | ಕ್ರ.ಸಂ. | ಉಪಾಗಮಗಳು | ಕ್ರ.ಸಂ. | ಶ್ರೋತಾರರು | ಶ್ಲೋಕಗಳ ಸಂಖ್ಯೆ |
|---|---|---|---|---|---|---|---|---|
| | | | | ೮ | ಬುದ್ಧ | | | |
| | | | | ೯ | ಕಾಲ | | | |
| | | ೨೮ | ವಾತುಲ | ೧ | ವಾತುಲ | ೧ | ಶಿವ | |
| | | | | ೨ | ಉತ್ತರ | ೨ | ಮಹಾಕಾಲ | ಶತಸಹಸ್ರ |
| | | | | ೩ | ಕಾಲಜ್ಞಾನ | | | |
| | | | | ೪ | ಪುರೋಹಿತ | | | |
| | | | | ೫ | ಸರ್ವಾಗಮ | | | |
| | | | | ೬ | ಶ್ರೀಶೇಷ್ಟ | | | |
| | | | | ೭ | ನಿಯತ | | | |
| | | | | ೮ | ಸುದ್ಧ | | | |
| | | | | ೯ | ಮಹಾ | | | |
| | | | | ೧೦ | ವಿಶ್ವ | | | |
| | | | | ೧೧ | ವಿಶ್ವಾತ್ಮಕ | | | |
| | | | | ೧೨ | ಧರ್ಮಾತ್ಮಕ | | | |

ಈ ಮೇಲಿನ ಪ್ರತಿಯೊಂದು ಆಗಮವು ನಾಲ್ಕು ವಿಭಾಗಗಳಲ್ಲಿ ವಿಂಗಡಿಸಲ್ಪಟ್ಟಿವೆ. ಇವನ್ನು ಪಾದಗಳೆನ್ನುವರು. ಅವುಗಳೇ ೧. ಕ್ರಿಯಾಪಾದ, ೨. ಚರ್ಯಾಪಾದ, ೩. ಯೋಗಪಾದ, ೪. ಜ್ಞಾನಪಾದ. ಇವನ್ನು ವೇದಗಳ ಭಾಗಗಳೊಂದಿಗೆ ಹೋಲಿಸುವುದುಂಟು. ವೇದಗಳ ಮಂತ್ರ ಭಾಗ(ಸಂಹಿತಾ ಭಾಗ) ಅಥವಾ ಸ್ತೋತ್ರ ಭಾಗವನ್ನು ಆಗಮಗಳ ಚರ್ಯಾ ಪಾದಕ್ಕೂ, ಯಜ್ಞಾದಿಗಳ ವಿವರಗಳ ಕ್ರಮವನ್ನು ವಿವರಿಸುವ ಬ್ರಾಹ್ಮಣ ಭಾಗವನ್ನು ಕ್ರಿಯಾಪಾದಕ್ಕೂ, ಅರಣ್ಯಕಗಳನ್ನು ಯೋಗ ಪಾದಕ್ಕೂ, ತತ್ವ ಶಾಸ್ತ್ರದ ವಿವೇಚನೆ ಇರುವ ಉಪನಿಷತ್ತುಗಳನ್ನು ಜ್ಞಾನ ಪಾದಕ್ಕೂ ಹೋಲಿಸಲಾಗುತ್ತದೆ.[೧೯]

ಎಂ.ಅರುಣಾಚಲಮ್‌ರವರು ತಮ್ಮ ಕೃತಿಯಾದ The Saivagamas[೨೦]ದಲ್ಲಿ ಆಗಮಗಳು ಕಂಡುಬಂದಿರುವುದು ದಕ್ಷಿಣ ಭಾರತದಲ್ಲಿ ಅದರಲ್ಲೂ ತಮಿಳು ನಾಡಿನಲ್ಲಿ. ಅವುಗಳು ದೊರೆತಿರುವುದು ಬಹುತೇಕ ಎರಡು ಸಾವಿರ ವರ್ಷಗಳ ಹಿಂದೆ. ಶೈವ ದೇವಾಲಯಗಳಲ್ಲಿ ಸೇವೆ ಸಲ್ಲಿಸುತ್ತಿದ್ದ ಶಿವಾಚಾರ್ಯರ ಮನೆಗಳಲ್ಲಿ ತಾಳೆಗರಿಗಳಂತಹ ಹಸ್ತಪ್ರತಿಗಳ ರೂಪದಲ್ಲಿ ದೊರೆತಿರುವವು. ಇವುಗಳು ಉತ್ತರ ಭಾರತದಲ್ಲಿ ದೊರೆಯುವುದಿಲ್ಲ. ಆದರೆ ದಕ್ಷಿಣದಲ್ಲಿ ವಿಸ್ತಾರವಾಗಿ ಬೆಳೆದು ದೇಶದ ಸಂಸ್ಕೃತಿಯನ್ನು ಹರಡಿದವು. ಡಾ.ದಾಸ್ ಗುಪ್ತಾರವರು ಶೈವಧರ್ಮದ ಹಾಗೂ ಸಂಸ್ಕೃತ ಅಧ್ಯಯನದ ಪ್ರಸಿದ್ಧ ಕೇಂದ್ರವಾದ ಬನಾರಸದಲ್ಲಿಯೂ ಕೂಡ ಆಗಮಗಳ ಯಾವುದೇ ಹಸ್ತಪ್ರತಿಗಳು ಲಭ್ಯವಾಗಿಲ್ಲವೆಂದು ಹೇಳಿದ್ದಾರೆ ಎಂದು ಉಲ್ಲೇಖಿಸಿರುವರು. ಹಾಗೆಯೇ ಅವರು ಮುಂದುವರೆದು ತಮಿಳು ಸಿದ್ಧಾಂತ ಶಾಸ್ತ್ರವು ಯಾವಾಗಲೂ ಪ್ರಕೃತಿ ವಿಕಸನದ ಹಾದಿಯನ್ನು ಅನುಸರಿಸಿದ್ದು ಅದು ಆಗಮಗಳ ಪಾದಗಳನ್ನು ವಿವರಿಸುವಲ್ಲಿಯೂ ಕಂಡುಬರುತ್ತದೆ. ಇವುಗಳ ಪ್ರಕಾರ ಕ್ರಮವಾಗಿ ಚರ್ಯಾ ಮೊದಲನೇ ಸರಳ ಹಂತವಾಗಿದೆ. ಕಟ್ಟುನಿಟ್ಟಿನ ನಿಯಮ ಮತ್ತು ಮುಂದುವರಿದ ಧರ್ಮಾಚರಣೆಯ ಕುರಿತಾದ ಕ್ರಿಯಾಪಾದವು ಎರಡನೇ ಹಂತವನ್ನು ಹೊಂದಿದೆ. ಪರಮಶ್ರೇಷ್ಠ ಗುರುವಿನ ಕಾಲಡಿಗಳಲ್ಲಿ ತನ್ನ ಮನಸ್ಸನ್ನು ಅರ್ಪಿಸಿಕೊಳ್ಳುವಂತಹ ಯೋಗ ಪಾದವು ಮೂರನೆಯದಾಗಿದೆ. ಕೊನೆಯದು ಜ್ಞಾನಪಾದವಾಗಿದ್ದು ಇದು ಅಂತಿಮ ಜ್ಞಾನ ಸಾಧನೆ, ಐಕ್ಯದ ಸಂಕೇತವಾಗಿದೆ. ಹೀಗೆ ಇವು ಪ್ರಕೃತಿ ವಿಕಸನದ ರೀತಿಯಲ್ಲಿರುವ ಕ್ರಮಬದ್ಧತೆಯನ್ನು ತೋರಿಸುತ್ತದೆ. ಆದರೆ ಆಗಮಗಳು ಈ ರೀತಿಯಾದ ಕ್ರಮವನ್ನು ಅನುಸರಿಸಿಲ್ಲ ಬದಲಾಗಿ ಹಿಮ್ಮುಖದಲ್ಲಿ ಅನುಸರಿಸಿರುವುದು ಕಂಡುಬರುತ್ತದೆ. ಮೊದಲು ಸಾಧಿಸುವ ಕ್ರಮವನ್ನು ಹೇಳಿದ್ದು ಕೊನೆಯಲ್ಲಿ ಪೀಠಿಕಾರೂಪದ ಆರಂಭದ ರೂಪವನ್ನು ಹೇಳಿರುವರು. ಆದರೂ ಕೂಡ ಯೋಗ, ಕ್ರಿಯಾ ಮತ್ತು ಚರ್ಯಾ ಪಾದಗಳನ್ನು ಕ್ರಮಬದ್ಧವಾಗಿ ಹೇಳದಿದ್ದರೂ ಭಿನ್ನ ರೂಪದಲ್ಲಿ ವಿವರಿಸಿರುವರು. ನಾವುಗಳೇ ಈ ಕ್ರಮವನ್ನು ತಿಳಿಯದ ಯೋಗ ಪಾದದ ನಂತರ ಜ್ಞಾನಪಾದ ಬರುತ್ತದೆಂದು ಮಿತಿಯನ್ನು ಹಾಕಿಕೊಂಡಿರುವೆವು[೨೧] ಎಂದು ಹೇಳಿದ್ದಾರೆ. ಅದೇನೇ ಇರಲಿ ಶೈವಾಗಮಗಳಲ್ಲಿ ಪಾದಗಳು ಪ್ರಮುಖವಾಗಿದ್ದು, ಅವುಗಳಲ್ಲಿ ವಿಷಯ ಮಹತ್ವದ್ದಾಗಿದೆ. ಆದ್ದರಿಂದ ಈ ಕೆಳಗೆ

ಪ್ರತಿಯೊಂದು ಪಾದಗಳು ಮತ್ತು ಅವುಗಳಲ್ಲಿರುವ ವಿಷಯವನ್ನು ಸಂಕ್ಷಿಪ್ತ ರೂಪದಲ್ಲಿ ಹೇಳಲು ಪ್ರಯತ್ನಿಸಲಾಗಿದೆ.

**ಕ್ರಿಯಾಪಾದ**

ಲಭ್ಯವಿರುವ ಆಗಮಗಳೆಲ್ಲೆಲ್ಲ ಕ್ರಿಯಾಪಾದ ಭಾಗವು ಅತ್ಯಂತ ವಿಸ್ತೃತವಾದ ಭಾಗವಾಗಿದೆ. ಶೈವಾಗಮಗಳು ನಿರಾಕಾರನಾದ ಪರಮಾತ್ಮನ ಸ್ವರೂಪವನ್ನು ಅರಿಯಬೇಕಾದರೆ ಆಕಾರದಿಂದಲೇ ಪ್ರಾರಂಭಿಸಬೇಕು. ಆಕಾರದಿಂದ ನಿರಾಕಾರವನ್ನು ಸಾಧಿಸಬೇಕೆಂದು ಬೋಧಿಸುವವು. ಆದುದರಿಂದ ಈ ಪಾದದಲ್ಲಿ ಶಿವನ ವಿಗ್ರಹದ ಸ್ವರೂಪ, ಅಳತೆ, ಆತನಂತೆ ಆತನ ಪರಿವಾರ ದೇವತೆಗಳಾದ ಪಾರ್ವತಿ, ಗಣಪತಿ, ಷಣ್ಮುಖ, ಶಿವಗಣಗಳು, ಶಿವಭಕ್ತರು ಇವರುಗಳ ವಿಗ್ರಹಗಳ ತಾಲಮಾನಕ್ಕ ನುಸರಿಸಿ ರಚನೆ, ಈ ವಿಗ್ರಹಗಳನ್ನಿಡಲು ಬೇಕಾಗುವ ಶಿವಾ(ದೇವಾ)ಲಯಗಳ ರಚನೆ ಮೊದಲಾದ ವಿಷಯಗಳನ್ನು ವಿವರಿಸಲಾಗಿದೆ. ಊರನ್ನಾಗಲಿ ದೇವಾಲಯವನ್ನಾಗಲಿ ಕಟ್ಟಬೇಕಾದರೆ ಧಾರ್ಮಿಕ ವಾಗಿಯೇ ಅದು ಪ್ರಾರಂಭವಾಗಬೇಕು ಎಂದು ಹೇಳಿದೆ. ಮೊದಲು ಸ್ಥಲಪರಿಶೋಧನೆ, ಶಂಕುಸ್ಥಾಪನೆಯ ವಿಧಿವಿಧಾನಗಳನ್ನು ತಿಳಿಸುತ್ತಿದ್ದು, ಕಟ್ಟಡ ನಿರ್ಮಾಣ ಕಾರ್ಯದಲ್ಲಿಯೂ ವಾಸ್ತುಶಿಲ್ಪದ ವಿಸ್ತೃತ ವಿವರಣೆಯನ್ನು ನೀಡಲಾಗಿದೆ. ಕಟ್ಟಡದ ಉದ್ಧಳತೆ, ವಿಸ್ತಾರ, ಎತ್ತರ, ಗರ್ಭಗೃಹ, ಮಂಟಪ, ಸುಕನಾಸಿ, ಶಾಲಾ, ಪ್ರಾಕಾರ, ಕಂಬ, ತೊಲೆ, ಬೋದುಗೆ, ಶಿಖರ ಮೊದಲಾದವುಗಳು ಹೇಗಿರಬೇಕೆಂಬುದರ ಬಗೆಗೆ ವಿಸ್ತೃತವಾದ ವಿವರವಿದೆ. ದೇವಾಲಯ ನಿರ್ಮಾಣದಲ್ಲಿ ಪ್ರತಿಯೊಂದು ಸಣ್ಣ ವಿಷಯವೂ ದೇವಾಲಯದ ಕಂಬ, ಗೋಡೆ, ಮಾಡ ಮೊದಲಾದ ಸ್ಥಳಗಳಲ್ಲಿರುವ ವಿಗ್ರಹಗಳೂ, ನಕ್ಷೆಗಳೂ ಶೈವಾಗಮಗಳ ಬರಹಗಾರರ ದೃಷ್ಟಿಯಿಂದ ಬಿಟ್ಟುಹೋಗಿಲ್ಲ. ಈ ದೃಷ್ಟಿಯಿಂದ ಅಭ್ಯಾಸ ಮಾಡುವವರಿಗೆ ಶೈವಾಗಮಗಳು ಉಪಯುಕ್ತವಾಗಿವೆ. ಕಟ್ಟಡ ವರ್ಣನೆಯಿಲ್ಲದೆ ವಿಗ್ರಹಗಳ ವರ್ಣನೆಯೂ ಸಂಪೂರ್ಣವಾಗಿದೆ. ವಿಗ್ರಹದ ಪ್ರತಿಯೊಂದು ಅವಯವದ ವರ್ಣನೆ, ಆಭರಣ, ಆಯುಧ ಮೊದಲಾದವುಗಳ ಪೂರ್ಣ ವಿವರವಿದೆ. ಹೆಣ್ಣು ವಿಗ್ರಹಗಳ ಆಭರಣ, ವಸ್ತ್ರಪರಿಧಾನ, ವೈಯಾರ ಇವುಗಳನ್ನು ಕೂಡ ವರ್ಣಿಸಲಾಗಿದೆ. ಶೈವಾಗಮಗಳು ಕೇವಲ ಧಾರ್ಮಿಕ ಗ್ರಂಥಗಳಷ್ಟೆ ಅಲ್ಲ ಆ ಕಾಲದ ಸಮಾಜವನ್ನು ಚಿತ್ರಿಸುವ ಕೈಗನ್ನಡಿಗಳಾಗಿವೆ.[೨]

ಹಲವು ಆಗಮಗಳು ತಂತ್ರಾವತಾರ ಮತ್ತು ಮಂತ್ರಾವತಾರ ಎಂಬ ಅಧ್ಯಾಯಗಳನ್ನು ಒಳಗೊಂಡಿವೆ. ತಂತ್ರಾವತಾರವು ಪ್ರಧಾನ ಆಗಮಗಳ ವಿವರಗಳು ಹಾಗೂ ಅವುಗಳ ಅನುಯಾಯಿಗಳು, ಅವುಗಳು ಹೊಂದಿರುವ ಶ್ಲೋಕಗಳ ಸಂಖ್ಯೆ, ಅವುಗಳ ಉಪಾಗಮಗಳು ಮತ್ತು ಇನ್ನಿತರ ವಿವರಗಳನ್ನು ನೀಡುತ್ತದೆ. ಮಂತ್ರಾವತಾರವು ಮಂತ್ರಗಳ ಕುರಿತು ಹೇಳುತ್ತದೆ. ಮಂತ್ರಗಳ ಸ್ವರೂಪ, ಬೀಜ, ಪಂಚಾಕ್ಷರ ಮತ್ತು ಅದರ ರೂಪಗಳು, ಉಚ್ಚಾರಾಂಶ ಸೂಚಕ, ಶ್ರಮಣಿಕೆ, ಭಕ್ತರ ಬೀಜಮಂತ್ರಗಳು ಹಾಗೂ ಮಂತ್ರಗಳಿಗೆ ಸಂಬಂಧಿಸಿದವೆಲ್ಲವುಗಳ ವಿವರಣೆ ಇದರಲ್ಲಿ ಕಾಣಬಹುದು. ಒಟ್ಟಾರೆ ಪೂಜಾ ವಿಧಾನಗಳು ಈ ಕ್ರಿಯಾಪದದ ಮುಖ್ಯ ವಿಷಯವಾಗಿದೆ.[೨]

## ಚರ್ಯಾಪಾದ

ದೇವಾಲಯ ಅದರಲ್ಲಿರುವ ವಿಗ್ರಹಗಳು ಪೂರ್ಣವಾದ ನಂತರ ಅವುಗಳ ಪೂಜೆಯನ್ನು ಹೇಗೆ ಮಾಡಬೇಕು. ಪೂಜೆಯ ಕಾಲಕ್ಕೆ ಬೇಕಾಗುವ ವಸ್ತುಗಳಾವುವು ಅವುಗಳನ್ನು ಹೇಗೆ ಉಪಯೋಗಿಸಬೇಕು, ಯಾವ ಮಂತ್ರಗಳನ್ನು ಪೂಜೆಯ ಕಾಲಕ್ಕೆ ಉಪಯೋಗಿಸಬೇಕು, ಯಾವ ಯಾವ ಕಾಲದಲ್ಲಿ ಯಾವ ಯಾವ ಉತ್ಸವಗಳನ್ನು ಮಾಡಬೇಕು, ಅವುಗಳನ್ನು ಹೇಗೆ ಮಾಡಬೇಕು ಇತ್ಯಾದಿ ವಿಷಯಗಳನ್ನೆಲ್ಲ ಚರ್ಯಾಪಾದದಲ್ಲಿ ಕಾಣಬಹುದು ಹಾಗೂ ಅರ್ಚನಾವಿಧಿಯ ಕುರಿತು ಹೇಳುತ್ತಾ ಅರ್ಚನೆ, ಸ್ವಾರ್ಥ, ಪರಾರ್ಥ ಎಂದು ಎರಡು ಪ್ರಕಾರ. ಆತ್ಮ ಕಲ್ಯಾಣಕ್ಕಾಗಿ ಮಾಡುವ ಅರ್ಚನೆ ಸ್ವಾರ್ಥ, ಲೋಕ ಹಿತಕ್ಕಾಗಿ, ಪರರ ಹಿತಕ್ಕಾಗಿರುವ ಅರ್ಚನೆ ಪರಾರ್ಥ ಎಂದು ಹೇಳಿದೆ. ಅರ್ಚನೆಯಲ್ಲದೆ ಕುಂಡಸ್ಥಾಪನೆ, ಹೋಮ, ಹವನ, ಅಗ್ನಿಕಾರ್ಯ ಮೊದಲಾದ ವೈದಿಕ ಕ್ರಿಯೆಗಳನ್ನು ಶೈವರು ಮಾಡಬೇಕೆಂದು ಹೇಳಿರುವುವು. ಅವುಗಳನ್ನು ಆಗಮ ಪದ್ಧತಿಗನುಸರಿಸಿ ಮಾಡಬೇಕೆಂದೂ ಅದಕ್ಕಾಗಿ ಆಗಮಗಳಲ್ಲಿರುವ ಮಂತ್ರ ಪ್ರಯೋಗಗಳನ್ನು ಉಪಯೋಗಿಸಬೇಕೆಂದು ಹೇಳುವುವು. ಎಲ್ಲ ವಿಧಿಗಳಲ್ಲಿ ಶೈವ ಮಂತ್ರಗಳನ್ನು ಉಪಯೋಗಿಸಬೇಕೆಂದು ಅವು ವೈದಿಕ ಮಂತ್ರಗಳಿಗಿಂತ ಶ್ರೇಷ್ಠವೆಂದೂ ಸಾರಲಾಗಿದೆ. ವೇದಗಳನ್ನು ಮನ್ನಿಸಿ ವೈದಿಕ ವಿಧಿಗಳಿಗೆ ಸ್ಥಾನವನ್ನು ಕೊಟ್ಟರೂ ಆಗಮ ಪದ್ಧತಿಗೆ ಪ್ರಾಶಸ್ತ್ಯ ಕೊಡಲಾಗಿದೆ. ಇವಲ್ಲದೆ ವೈದಿಕ ಸಾಹಿತ್ಯದಲ್ಲಿ ದೊರೆಯದ ನಿತ್ಯೋತ್ಸವ ಮಹೋತ್ಸವ ದೇವತಾಸ್ನಪನ, ಅಷ್ಟಮೀ ಪ್ರದೂಕ್ಷ ಅಮವಾಸಿ ಮೊದಲಾದ ದಿನಗಳಲ್ಲಿ ಪ್ರತ್ಯೇಕ ಉತ್ಸವ ನಡೆಸಲು ವಿಧಿಸಲಾಗಿದೆ.

ಶೈವಾಗಮಗಳು ವರ್ಣಾಶ್ರಮಧರ್ಮವನ್ನು ಪಾಲಿಸುವುವು. ಶೈವಾಗಮದಲ್ಲಿ ವರ್ಣಿಸಲ್ಪಟ್ಟ ವರ್ಣಾಶ್ರಮ ಧರ್ಮಗಳಿಗೂ ವೈದಿಕ ವರ್ಣಾಶ್ರಮಗಳಿಗೂ ವಿಶೇಷ ಭೇದ ಕಾಣುವುದಿಲ್ಲ. ಸುಪ್ರಭೇದವು ಶೈವದಲ್ಲಿ ಶಿವಗೋಚರ, ಶಿಖಾಗೋಚರ, ಜ್ಯೋತಿರ್ಗೋಚರ, ಸಾವಿತ್ರಿ ಗೋಚರ, ವ್ಯೋಮಗೋಚರ ಎಂದು ಐದು ಗೋಚರ ಅಥವಾ ಗೋತ್ರಗಳಿವೆ. ಈ ಐದು ಗೋತ್ರಗಳು ಅನುಕ್ರಮವಾಗಿ ಕಶ್ಯಪ, ಕೌಶಿಕ, ಭಾರದ್ವಾಜ, ಗೌತಮ, ಆತ್ರೇಯರೆಂಬ ಐವರು ಋಷಿಗಳಿಗೆ ಅನ್ವಯಿಸುವುದು. ಶೈವಾಗಮಗಳು ಹದಿನಾರು ಸಂಸ್ಕಾರಗಳನ್ನು ವಿಧಿಸುವುವು. ಅವು ಬಹುತರವಾಗಿ ವೈದಿಕ ಸಂಸ್ಕಾರಗಳನ್ನನುಸರಿಸಿದರೂ ಅಲ್ಲಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಕಂಡುಬರುವುದು. ವಿವಾಹ ಅಂತ್ಯೇಷ್ಟಿ ಮೊದಲಾದವುಗಳಲ್ಲಿ ಶೈವಕ್ರಮಗಳೂ ಅಲ್ಪಸ್ವಲ್ಪ ಬದಲಾವಣೆ ಆಗಿರುವುವು. ದೀಕ್ಷೆ ಎರಡು ಪ್ರಕಾರ: ಒಂದು ಉಪನಯನವನ್ನೂ ಮತ್ತೊಂದು ನಿರ್ವಾಣದೀಕ್ಷೆಯನ್ನೂ ಅನುಸರಿಸುವುವು.[೨೪]

## ಯೋಗಪಾದ

ವೇದದ ಬರವಣಿಗೆಗಾರರು ಯೋಗಪಾದವು ವೇದದಷ್ಟೆ ಪ್ರಾಚೀನವಾದುದೆಂದು ಹೇಳಿರುವರು. ಅಲ್ಲದೆ ಯಜ್ಞ, ಯಾಗಗಳು ಹೇಗೆ ವೇದಗಳ ಒಂದು ಭಾಗವಾಗಿದೆಯೋ ಹಾಗೆಯೇ ಯೋಗವನ್ನು

ವೇದದ ಒಂದು ಭಾಗವನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸಿದರು. ಯಜ್ಞವಲ್ಕ್ಯ ಸ್ಮೃತಿಯು ಹಿರಣ್ಯ ಗರ್ಭವು ಯೋಗವನ್ನು ಮೊದಲು ಪ್ರತಿಪಾದಿಸುತ್ತದೆ ಎಂದು ಹೇಳುತ್ತದೆ. ಬಹುಶಃ ಪತಂಜಲಿಯು ಪ್ರಾರಂಭಿಕ ದಿನಗಳಲ್ಲಿ ಪ್ರಚಲಿತದಲ್ಲಿದ್ದ ಯೋಗದ ಪರಿಕಲ್ಪನೆಗಳಲ್ಲಿ ಕೆಲವನ್ನು ಆಯ್ದು ತನ್ನ ರಾಜಯೋಗದಲ್ಲಿ ಹೇಳಿರುವನು. ತಮಿಳು ಸಂತನಾದ ತಿರುಮಲಾರರು(ಕ್ರಿ.ಶ.೫ನೇ ಶತಮಾನ) ಹಲವು ಯೋಗಗಳನ್ನು ಉಲ್ಲೇಖಿಸಿರುವರು. ಇದರಿಂದಾಗಿ ಆ ಕಾಲಕ್ಕಾಗಲೇ ಯೋಗದ ಶಾಖೆಗಳು ಇದ್ದುವೆಂದು ಊಹಿಸಬಹುದು. ಪತಂಜಲಿಯ ಯೋಗವು ಸಾಂಖ್ಯರ ಆಲೋಚನೆಗಳ ಮೇಲೆ ಆಧಾರಿತವಾಗಿದೆ. ಈತನು ದೇಹ ಮತ್ತು ಮನಸ್ಸಿನ ಮೇಲೆ ಹಿಡಿತವನ್ನು ಸಾಧಿಸುವಂತಹ ಕ್ರಮಬದ್ಧವಾದ ವಿಧಾನವನ್ನು ನೀಡಿದನು. ಆದರೆ ಆಗಮದಲ್ಲಿರುವ ಯೋಗಪಾದವು ಪತಂಜಲಿಯ ರಾಜಯೋಗವನ್ನು ಮೀರಿ ಆಂತರಿಕ ಶಿಸ್ತನ್ನು ಹೇಳುತ್ತದೆ. ಯೋಗದ ಉದ್ದೇಶ ಜ್ಞಾನವಾಗಿದೆ.[೨೫] ಯೋಗದ ಧ್ಯೇಯ ಸಮಾಧಿಯನ್ನು ಸಾಧಿಸಿ ಪರಮಾತ್ಮನನ್ನು ಪ್ರತ್ಯಕ್ಷ ಕಾಣುವುದು. ಅದಕ್ಕಾಗಿ ಮನೋನಿಗ್ರಹ ಮನಸ್ಸನ್ನು ದೇವನಲ್ಲಿ ಸ್ಥಿರೀಕರಿಸುವುದು ಅಗತ್ಯ. ಅದಕ್ಕಾಗಿ ಕೆಲವು ಸಾಧನಗಳನ್ನು ಹೇಳಲಾಗಿದೆ. ಈ ಸಾಧನಗಳನ್ನು ಮಾಡುವುದಕ್ಕಿಂತ ಮೊದಲು ಶರೀರ ರಚನೆಯನ್ನು ಅರಿತುಕೊಳ್ಳುವುದು ಅಗತ್ಯ. ಶರೀರದ ರಚನೆಯ ಕಲ್ಪನೆಯಾದ ನಂತರ ಯೋಗಾಂಗಗಳಲ್ಲಿ ಪರಿಣತನಾಗಬೇಕು. ಅವು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳೆಂದು ಎಂಟು. ಅವನ್ನು ಸಾಧಕನು ಸಾಧನೆ ಮಾಡಿ ಯಶಸ್ವಿಯಾದರೆ ಯೋಗಿಯಾಗುವನು. ಕಡೆಯ ಅಂಗವಾದ ಸಮಾಧಿಯನ್ನು ಪಡೆದು ಶಿವನಲ್ಲಿ ತಲ್ಲೀನನಾಗುವನು; ಯೋಗಾಂಗಗಳನ್ನು ಸಾಧಿಸಿಕೊಂಡರೆ ಸಿದ್ಧಿಗಳನ್ನು ಪಡೆಯುವನೆಂದು ಹೇಳಿದೆ. ಅವು ಅಣಿಮಾ, ಗರಿಮಾ, ಮಹಿಮಾ, ಲಘುಮಾ, ಪ್ರಾಪ್ತಿ, ಕಾಮ್ಯತ್ವ, ಈಶತ್ವ, ವಶಿತ್ವ ಎಂಬ ಎಂಟು ಸಿದ್ಧಿಗಳನ್ನು ಪಡೆಯುವನು. ಅವುಗಳನ್ನು ತ್ಯಜಿಸಿ ತನ್ನ ಯೋಗ ಸಾಧನೆಯನ್ನು ಮುಂದುವರಿಸಿದರೆ ಶಿವತತ್ವವನ್ನು ಪಡೆಯುವನು. ನಿಜಗುಣ ಶಿವಯೋಗಿಗಳು ತಮ್ಮ ವಿವೇಕ ಚಿಂತಾಮಣಿಯಲ್ಲಿ ಅವರ ಗುರುಗಳಾದ ಚೆನ್ನಸದಾಶಿವಯೋಗಿಗಳು ಶಿವಯೋಗ ಪ್ರದೀಪಿಕೆಯಲ್ಲಿ ಯೋಗವನ್ನು ಚೆನ್ನಾಗಿ ವಿವರಿಸಿರುವರು. ಶಿವಯೋಗವು ರಾಜಯೊಗಕ್ಕೂ ಶ್ರೇಷ್ಠವೆಂದು ತೋರಿಸಿಕೊಟ್ಟಿರುವರು.[೨೬] ಹೀಗೆ ಎಲ್ಲ ಶೈವಾಗಮಗಳು ಒಂದು ಪಾದವನ್ನು ಯೋಗದ ವಿವರಣೆಗಾಗಿ ಮೀಸಲಾಗಿಟ್ಟಿರುವುವು.

### ಜ್ಞಾನಪಾದ

ಶೈವಾಗಮಗಳ ಈ ಭಾಗ ಅತಿ ಮಹತ್ವವಾದುದು. ಶೈವಸಿದ್ಧಾಂತದ ತತ್ವಜ್ಞಾನವೆಲ್ಲ ಈ ಭಾಗದಲ್ಲಿ ಅಡಕವಾಗಿದೆ. ಈಗ ಉಪಲಬ್ದ ಶೈವಾಗಮಗಳಲ್ಲಿ ಈ ಭಾಗ ಹೆಚ್ಚು ದೊರೆಯುವುದಿಲ್ಲ. ಆದರೆ ಈಗ ಅನೇಕ ಮಹತ್ವ ಗ್ರಂಥಗಳು ಪ್ರಸಿದ್ಧವಾಗಿವೆಯಾದುದರಿಂದ ಈ ಪಾದದ ವಿಷಯ ಸಂಗ್ರಹಿಸಲು ಬಹಳ ಸಹಾಯಕವಾಗಿದೆ. ಅಂತಹ ಗ್ರಂಥಗಳಲ್ಲಿ ಮೃಗೇಂದ್ರಪೌಷ್ಕರ, ಮಾತಂಗ ಪಾರಮೇಶ್ವರ, ಭೋಜನತತ್ವಪ್ರಕಾಶಿಕಾ, ಸದ್ಯೋಜ್ಯೋತಿಯ ಭೋಗಕಾರಿಕಾ, ಮೋಕ್ಷಕಾರಿಕಾ,

ಪರಮೋಕ್ಷನಿರಾಸಕಾರಿಕಾ, ರಾಮಕಂಠನ ನಾದಕಾರಿಕಾ, ಶ್ರೀಕಂಠನ ರತ್ನತ್ರಯ, ಅಘೋರ ಶಿವಾಚಾರ್ಯರ ಇವೆಲ್ಲವುಗಳ ಮೇಲಿನ ವ್ಯಾಖ್ಯಾನ ಇವನ್ನು ಹೆಸರಿಸಬಹುದು. ಶೈವಾಗಮಗಳಲ್ಲೆಲ್ಲ ಒಂದೇ ತತ್ವಜ್ಞಾನವು ಪ್ರತಿಪಾದಿತವಾಗಿಲ್ಲ. ಕೆಲವು ದ್ವೈತಪರವಾಗಿದ್ದರೆ ಕೆಲವು ಅದ್ವೈತಪರವಾಗಿವೆ. ಕೆಲವು ವಿಶಿಷ್ಟಾದ್ವೈತ ಪರವಾಗಿವೆ. ಆದುದರಿಂದ ಅವು ಜ್ಞಾನಕ್ಕೆ ಕ್ರಿಯಾಚರ್ಯದಷ್ಟು ಮಹತ್ವ ಕೊಟ್ಟಿಲ್ಲವೆಂದು ಅನುಮಾನ ಮೂಡಬಹುದು.

ಶೈವಾಗಮಗಳು ಕ್ರಿಯಾಚರ್ಯಪಾದಗಳಲ್ಲಿ ವಿವರಿಸಿದ ವಿಷಯಗಳಿಗೆ ಮಹತ್ವ ಕೊಟ್ಟಿರುವುವು. ಮುಂದಿನ ಶೈವಾಚಾರ್ಯರು ತತ್ತ್ವಶಾಸ್ತ್ರಕ್ಕೆ ಮಹತ್ವಕೊಟ್ಟು ಶೈವಾಗಮಗಳಲ್ಲಿದ್ದ ತತ್ತ್ವಗಳನ್ನು ಕೂಡಿಸಿ ಶೈವರಿಗಾಗಿ ಸಿದ್ಧಾಂತವನ್ನು ವಿವರಿಸಿರುವರು. ಇದಕ್ಕೆ ಶೈವಸಿದ್ಧಾಂತವೆಂದು ಹೆಸರು. ಕಾಶ್ಮೀರದಲ್ಲಿ ಅಭಿನವಗುಪ್ತ, ರಾಮಕಂಠ, ಶ್ರೀಕಂಠ, ನಾರಾಯಣಕಂಠ ಇವರು ಶೈವ ಸಿದ್ಧಾಂತದ ಆಚಾರ್ಯರಾಗಿ ಅದರ ಮೇಲೆ ಗ್ರಂಥಗಳನ್ನು ಬರೆದರೆ, ಸದ್ಯೋಜ್ಯೋತಿ, ಭೋಜ ಮೊದಲಾದವರು ಮಧ್ಯಭಾರತದಲ್ಲಿ, ಅಘೋರಶಿವ, ತ್ರಿಲೋಚನಶಿವ, ಸೋಮಶಂಭು ಮೊದಲಾದವರು ದಕ್ಷಿಣ ಭಾರತದಲ್ಲಿ ಶೈವಧರ್ಮಪ್ರತಿಪಾದಕಗಳಾದ ವಿಫುಲ ಗ್ರಂಥಗಳನ್ನು ಬರೆದು ಶೈವಾಗಮಗಳ ಧರ್ಮ ಮತ್ತು ಶೈವತತ್ತ್ವಜ್ಞಾನಗಳನ್ನು ಪ್ರಸಾರ ಮಾಡಿರುವರು.

ಶೈವಾಗಮಗಳು ಮೂರು ಪದಾರ್ಥಗಳನ್ನು ಪ್ರತಿಪಾದಿಸುವುವು. ಅವು ಪತಿ, ಪಶು, ಪಾಶ ಅಥವಾ ಶಿವ, ಜೀವ, ಬಂಧನ, ಅಲ್ಲದೆ ಪಶು ಎಂಬುದರ ಅರ್ಥ, ಅದು ಪಾಶದಿಂದ ಬಿಡುಗಡೆ ಹೊಂದಿ, ಪತಿ ಜೊತೆಗೆ ಒಂದಾಗುವುದರ ತಾತ್ವಿಕ ವಿವೇಚನೆ ಕುರಿತು ತಿಳಿಸುತ್ತದೆ. ಪತಿ ಎಂದರೆ ಒಡೆಯ, ಯಜಮಾನ, ರಕ್ಷಕ ಆತನೇ ಶಿವ. ಶೈವಾಗಮಗಳಲ್ಲಿ ಶಿವನ ಸ್ವರೂಪಕಲ್ಪನೆ ಬಲು ತಾತ್ವಿಕವಾಗಿದೆ. ಆತನಿಗೆ ಸಕಲ, ನಿಷ್ಕಲ, ಸಕಲನಿಷ್ಕಲ ಎಂದು ಮೂರು ರೂಪುಗಳಿವೆ. ನಿರಾಕಾರನಾದ ಶಿವನು ರೂಪರಹಿತನಾಗಿದ್ದರೂ ಬೇಕಾದಾಗ ಬೇಕಾದರೂಪಗಳನ್ನು ಧರಿಸಲು ಸಮರ್ಥನಾಗಿರುವನು. ಶಿವನಲ್ಲಿ ಶಕ್ತಿ ಸಹಜವಾದುದು. ಶಿವ ಶಕ್ತಿಯರದು ಸಮವಾಯ ಸಂಬಂಧ. ಸೃಷ್ಟಿ, ಸ್ಥಿತಿ, ಲಯ, ತಿರೋಧಾನ, ಅನುಗ್ರಹಗಳೆಂಬ ಪಂಚಕೃತ್ಯಗಳಿಂದೊಡಗೂಡಿದುದು. ಶಿವನಿಲ್ಲದೆ ಶಕ್ತಿಯಾಗಲಿ, ಶಕ್ತಿಯಿಲ್ಲದೆ ಶಿವನಾಗಲಿ ಏನೂ ಮಾಡಲು ಸಮರ್ಥರಲ್ಲ. ನಿಜವಾಗಿ ಅವರಿಬ್ಬರು ಒಂದೇ ಆಗಿರುವರು. ಪೌಷ್ಕರ ಮತ್ತು ಮೃಗೇಂದಾಗಮಗಳ ಪ್ರಕಾರ ಸತಿಪದಾರ್ಥವು ಶಿವನ ಸ್ವರೂಪ ಕೃತ್ಯಗಳನ್ನಲ್ಲದೆ ಶುದ್ಧಾಧ್ವದಲ್ಲಿಯ ಎಲ್ಲ ವಿಷಯಗಳನ್ನೊಳಗೊಂಡಿದೆ.

ಪಾಶ ಎಂದರೆ ಜೀವ ಅಥವಾ ಜೀವಾತ್ಮ. ಜೀವಾತ್ಮರು ಅಸಂಖ್ಯಾತ, ಅಶುದ್ಧ, ಅವು ಶಿವನಿಂದ ಭಿನ್ನವಾಗಿ ಚೈತನ್ಯಯುಕ್ತವಾಗಿವೆ. ಆದರೆ ಅವುಗಳ ಚೈತನ್ಯ ಮಲಿನವಾಗಿರುವುದು. ಜೀವಾತ್ಮರಲ್ಲಿ ಮೂರು ವರ್ಗ–ವಿಜ್ಞಾನಕಲ, ಪ್ರಲಮಾಕಲ, ಸಕಲವೆಂದು, ಅವು ಕ್ರಮವಾಗಿ ಒಂದು, ಎರಡು, ಮೂರು ಮಲಗಳಿಂದ ಕೂಡಿ ತಮ್ಮ ನಿಜರೂಪವನ್ನು ಮರೆತಿರುವುವು. ಅವು ಸಂಸಾರದಲ್ಲಿ ಸುತ್ತಿ ಸುತ್ತಿ ಪಡುವ ಕಷ್ಟ ಅವುಗಳ ಹಿತಕ್ಕಾಗಿಯೇ ಆಗಿದೆ. ಅದರಿಂದ ಅವು ತಮ್ಮ

ಕರ್ಮಫಲವನ್ನು ಅಲ್ಲಿ ಭೋಗಿಸಿ, ಶುದ್ಧಿಯನ್ನು ಪಡೆಯಲು ಅವಕಾಶವಿದೆ. ಎಲ್ಲ ಮಲಗಳಿಂದ ಬಿಡುಗಡೆ ಹೊಂದಿ ಪರಿಶುದ್ಧರಾದ ಜೀವಾತ್ಮರುಗಳಿಗೆ ಪ್ರಭುವು ಅನುಗ್ರಹಮಾಡಿ ಮೋಕ್ಷಪದವಿಯನ್ನೀಯುವನು. ಸಾಮಾನ್ಯವಾಗಿ ಮೋಕ್ಷವನ್ನು ಪಡೆಯಲು ಜೀವಾತ್ಮಕರುಗಳಿಗೆ ಅನೇಕ ಯುಗಗಳು, ಅಸಂಖ್ಯ ಜನ್ಮಗಳು ಬೇಕಾಗುವುವು. ಆದರೆ ಅವುಗಳನ್ನು ದಾಟಲು ನಡುವಿನ ದಾರಿಯಿದೆ. ಅದು ಗುರುವು ಕರುಣಿಸಿ ಕೊಡುವ ದೀಕ್ಷೆ. ಆದುದರಿಂದ ಶೈವರಲ್ಲಿ ದೀಕ್ಷೆಯ ಮಹತ್ವ ಹೆಚ್ಚಾಗಿದೆ. ಪಾಶ ಎಂದರೆ ಬಂಧನ. ಬಂಧನ ಜೀವಾತ್ಮರುಗಳನ್ನು ಬಂಧನಕ್ಕೊಳಪಡಿಸುವುದು. ಅದು ಆಣವ, ಮಾಯಾ, ಕರ್ಮ ರೂಪದಿಂದ ಮೂರು ತೆರನಾಗಿರುವುದು. ಆಣವವು ಮೂಲ ಮಲ. ಅದು ಆದಿಯಿಂದ ಜೀವಾತ್ಮರುಗಳಿಗೆ ಅಂಟಿಕೊಂಡಿದೆ. ಮಾಯಾ ಮತ್ತು ಕರ್ಮ ಮಲಗಳು ಈ ಆಣವಮಲವನ್ನು ಕಡಿಮೆ ಮಾಡಲು ಅನುಕೂಲವಾಗುವುವು. ಮಾಯಾಮಲವು ಪ್ರಕಾಶ ಸ್ವರೂಪವಾಗಿದೆ. ಜೀವಾತ್ಮರುಗಳಿಗೆ ಭೋಗ್ಯವಸ್ತುಗಳನ್ನೊದಗಿಸುವುದು. ಅವನ್ನು ಮೋಹಗೊಳಿಸಿ ಭೋಗ್ಯವಸ್ತುಗಳೇ ತಾವೆಂಬ ಭ್ರಮೆಯನ್ನು ಹುಟ್ಟಿಸುವುದು. ಇದು ಮೋಹಕವಾದುದು. ಜೀವಾತ್ಮರನ್ನು ಮರಳುಗೊಳಿಸಿ, ಸಂಸಾರಬಂಧನದಲ್ಲಿ ಬಿಗಿದು ಕಟ್ಟುವುದು. ಪೌಷ್ಕರ ಮತ್ತು ಮೃಗೇಂದ್ರಾಗಮಗಳಲ್ಲಿ ಪಾಶ ಪದಾರ್ಥದಲ್ಲಿ ಮುಖ್ಯವಾದ ಮತ್ತು ವಿಶ್ವೋತ್ಪತ್ತಿಗೆ ಕಾರಣಗಳಾದ ಮೂವತ್ತಾರು ತತ್ತ್ವಗಳ ಪೂರ್ಣ ವಿವರವಿದೆ. ಭೋಜರಾಜನ ತತ್ತ್ವಪ್ರಕಾಶಿಕೆಯಲ್ಲಿ ಇವುಗಳ ಪೂರ್ಣ ವಿವರವಿದೆ. ಶೈವಾಗಮಗಳು ಶಿವ, ಜೀವ, ಜಗತ್ತಿಗೆ ಕಾರಣವಾದ ಮಾಯಾ ನಿತ್ಯವೆಂದು ಸಾರುವುವು. ಪೌಷ್ಕರ ಮೃಗೇಂದ್ರಾಗಮಗಳು ತತ್ತ್ವಗಳಿಗೆ, ಸುಪ್ರಭೇದ ಅಧ್ವಗಳಿಗೆ ಮಹತ್ವಕೊಟ್ಟಿವೆ. ಸುಪ್ರಭೇದವು ಶಿವಸೃಷ್ಟಿ, ಪಶುಸೃಷ್ಟಿಯೆಂದು ಎರಡು ಪ್ರಕಾರದ ಸೃಷ್ಟಿಯನ್ನು ನಿರೂಪಿಸುವುದು. ಶಿವಸೃಷ್ಟಿ ವಿದ್ಯೇಶಾದಿ ಶುದ್ಧಾಧ್ವದಲ್ಲಿರುವುದನ್ನೆಲ್ಲ ಒಳಗೊಂಡಿದೆ. ಪಶುಸೃಷ್ಟಿ ಮಾಯಾತತ್ತ್ವದಿಂದ ಕೆಳಗಿನದು. ಸುಪ್ರಭೇದದ ಅಧ್ವಪಟಲದಲ್ಲಿ ವಿಶ್ವೋತ್ಪತ್ತಿಶಾಸ್ತ್ರ, ಜಂಬೂದ್ವೀಪ ಭರತಖಂಡ ಮೊದಲಾದವುಗಳ ಭೂವಿವರವಿದೆ. ಮೇಲೆ ವಿವರಿಸಿದ ಆಗಮಗಳಲ್ಲದೆ ವಾತುಲ, ಸೂಕ್ಷ್ಮ, ಕಾಲೋತ್ತರ, ಪಾರಮೇಶ್ವರ ಆಗಮಗಳ ಭಾಗಗಳು ಉಪಲಬ್ಧವಿವೆ. ಅವುಗಳಲ್ಲಿರುವ ವಿಷಯ ವೀರಶೈವ ಪರವಾಗಿರುವುವು.[೨೭]

ಮೇಲೆ ವಿವರಿಸಿದ ಎಲ್ಲ ಪಾದಗಳು ಆಗಮಗಳಲ್ಲಿರುವ ವಿಷಯವನ್ನು ವಿಭಾಗಿಸಿ ಮತ್ತು ವಿಷಯವನ್ನು ವಿಸ್ತಾರವಾಗಿ ಹೇಳುತ್ತವೆ ಎಂಬುದನ್ನು ತಿಳಿಯಬಹುದು. ಹೀಗೆ ಆಗಮಗಳು ಶೈವತ್ವದ ಸಂಪೂರ್ಣ ಸಾರವನ್ನು ಒಳಗೊಂಡು ಶೈವಧರ್ಮದ ಪ್ರಮಾಣಗ್ರಂಥಗಳೆನಿಸಿವೆ. ಈ ಹಿಂದೆ ಒದಗಿಸಿರುವ ಪಟ್ಟಿಯಲ್ಲಿ ತಿಳಿಸಿದ ೨೮ ಶೈವಾಗಮಗಳಾಗಲಿ ಮತ್ತು ಅವುಗಳ ಎಲ್ಲ ಉಪಾಗಮಗಳಾಗಲಿ ಲಭ್ಯವಿಲ್ಲ ಹಾಗೂ ಉಪಲಬ್ಧವಿರುವ ಎಲ್ಲ ಆಗಮಗಳ ನಾಲ್ಕೂ ಪಾದಗಳೂ ಲಭ್ಯವಾಗಿಲ್ಲ. ನಾಲ್ಕೂ ಪಾದಗಳು ಲಭ್ಯವಾಗಿರುವ ಆಗಮಗಳು ಅತಿ ವಿರಳವಾಗಿವೆ. ಅಲ್ಲದೆ ಆಗಮಗಳು ಪೂರ್ವ ಮತ್ತು ಉತ್ತರವೆಂದು ಎರಡೆರಡು ಭಾಗಗಳನ್ನು ಹೊಂದಿವೆ. ಆದರೆ ಕೆಲವು ಆಗಮಗಳ ಪೂರ್ವಭಾಗ ಮಾತ್ರ ಮತ್ತೆ ಕೆಲವು ಆಗಮಗಳ ಉತ್ತರಭಾಗ ಮಾತ್ರ

ದೊರೆತಿವೆ. ಇನ್ನೂ ಕೆಲವು ಅಪ್ರಕಟಿತ ಆಗಮಗಳು ಹಸ್ತಪ್ರತಿರೂಪದಲ್ಲಿ ಹಾಗೆಯೇ ಉಳಿದುಕೊಂಡಿವೆ. ಹೀಗೆ ಆಗಮಗಳ ಅನುಪಲಬ್ಧತೆಯೂ ಆಗಮಗಳ ಕುರಿತು ಅಧ್ಯಯನಕ್ಕೆ ಕುಂಟಿತವನ್ನುಂಟು ಮಾಡಿದೆ ಎಂದು ಹೇಳಿದರೆ ತಪ್ಪಾಗಲಾರದು. ಹಾಗೆಯೇ ಲಭ್ಯವಾಗಿರುವ ಆಗಮಗಳೆಲ್ಲವೂ ಗ್ರಂಥಲಿಪಿಯಲ್ಲಿ ಪ್ರಕಟವಾಗಿವೆ. ಇದು ಸಹ ಆಗಮಗಳ ಕುರಿತು ಸುಲಭವಾಗಿ ಅಧ್ಯಯನ ಕೈಗೊಳ್ಳಲು ಸಮಸ್ಯೆಯನ್ನುಂಟು ಮಾಡಿದೆ ಎಂದು ಹೇಳಬಹುದು. ಇತ್ತೀಚಿನ ದಿನಗಳಲ್ಲಿ ಕೆಲವು ಆಗಮಗಳು ಸಂಸ್ಕೃತ, ತಮಿಳು, ವಿರಳವಾಗಿ ಇಂಗ್ಲೀಷ್ ಹಾಗೂ ಅತಿ ವಿರಳವಾಗಿ ಕನ್ನಡದಲ್ಲಿ ಅನುವಾದಗೊಂಡಿವೆ. ಈ ರೀತಿ ಅನುವಾದಗೊಂಡರೂ ಅವುಗಳು ಆಗಮದ ಒಂದು ಭಾಗ ಅಥವಾ ಕೆಲವು ಅಧ್ಯಾಯಗಳು ಅಥವಾ ಕೆಲವು ಶ್ಲೋಕಗಳಷ್ಟೇ ಅನುವಾದಗೊಂಡಿವೆಯಾದ್ದರಿಂದ ಸಂಪೂರ್ಣ ಆಗಮಗಳ ಲಭ್ಯತೆ ಇಲ್ಲ. ಹಾಗೆಯೇ ಕೆಲವೊಂದು ಆಗಮಗಳು ಪೂರ್ಣವಾಗಿಯೂ ಅನುವಾದಗೊಂಡಿವೆ. ಒಟ್ಟಾರೆ ಹೇಳುವುದಾದರೆ ಆಗಮಗಳು ಸುಲಭವಾಗಿ ತಿಳಿಯುವ ಭಾಷೆಯಲ್ಲಿ ಪ್ರಕಟಗೊಂಡಿರದಿರುವುದು ಆಗಮಗಳ ಅಧ್ಯಯನಕಾರರಿಗೆ ಸಮಸ್ಯೆಯನ್ನುಂಟು ಮಾಡಿವೆ ಎಂದು ಹೇಳಬಹುದು.

ಪ್ರಸ್ತುತ ಅಧ್ಯಯನವು ಆಗಮಗಳನ್ನು ಕುರಿತು ಒಂದು ಪ್ರತ್ಯೇಕ ಅಧ್ಯಾಯವನ್ನೇ ಹೊಂದಲು ಕಾರಣ ಇದರಲ್ಲಿ ಆಗಮಗಳನ್ನು ಬಳಸಿಕೊಂಡಿರುವುದು. ಇದು ಶಿಲ್ಪಗಳ ಅಧ್ಯಯನವಾಗಿರುವುದರಿಂದ ಆಗಮಗಳನ್ನೇ ಮುಖ್ಯ ಆಧಾರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಏಕೆಂದರೆ ಶಿಲ್ಪಗಳಿಗೂ ಆಗಮಗಳಿಗೂ ಅವಿನಾಭಾವ ಸಂಬಂಧವಿದೆ. ಶಿಲ್ಪಗಳು ಹೇಗಿರಬೇಕೆಂದು ಆಗಮಗಳೇ ತಿಳಿಸುತ್ತವೆ. ಶಿಲ್ಪಗಳ ರಚನೆ ಮಾಡುವುದು ಹೇಗೆ? ಅವುಗಳ ಪ್ರತಿಮಾ ಲಕ್ಷಣಗಳು ಹೇಗಿರಬೇಕು? ಅವುಗಳ ಪ್ರಮಾಣಗಳು ಎಷ್ಟಿರಬೇಕು? ಅವುಗಳನ್ನು ಹೇಗೆ ಪ್ರತಿಷ್ಠಾಪನೆ ಮಾಡಬೇಕು? ಅವುಗಳಿಗೆ ಅನುಸರಿಸುವ ಶಿಲ್ಪಗಳ ಕುರಿತು ಸಂಪೂರ್ಣ ಪೂಜಾ ವಿಧಿ, ವಿಧಾನಗಳ, ಮಂತ್ರಗಳು ಯಾವುವು? ಎಂಬ ಮುಂತಾದ ಶಿಲ್ಪಗಳ ಕುರಿತ ಸಂಪೂರ್ಣ ವಿಷಯಗಳನ್ನು ಆಗಮಗಳೇ ತಿಳಿಸುತ್ತವೆ. ಪ್ರಸ್ತುತ ಅಧ್ಯಯನವು ಶಿಲ್ಪಗಳ ಅಧ್ಯಯನವಾದ್ದರಿಂದ ಮತ್ತು ಶಿಲ್ಪಗಳ ಕುರಿತು ಆಗಮಗಳೇ ವಿವರಿಸುವುದರಿಂದ ಆಗಮಗಳ ಹುಟ್ಟು, ಬೆಳವಣಿಗೆ, ಪ್ರಾಚೀನತೆ, ಅವುಗಳ ಸಂಖ್ಯೆ ಹಾಗೂ ಅವುಗಳು ಯಾವುವು ಮತ್ತು ಅವುಗಳ ಮಹತ್ವ ಏನು ಎಂಬುದನ್ನು ತಿಳಿಯುವುದು ಅವಶ್ಯಕವಾಗಿತ್ತು. ಆದ್ದರಿಂದಲೇ ಈ ಅಧ್ಯಯನದಲ್ಲಿ ಅವುಗಳಿಗಾಗಿಯೇ ಒಂದು ಪ್ರತ್ಯೇಕ ಅಧ್ಯಾಯವಿದ್ದು ಅವುಗಳ ವಿವರಗಳನ್ನು ನೀಡಲಾಗಿದೆ.

ಹೀಗೆ ಆಗಮಗಳು ಶಿಲ್ಪಗಳ ಅಧ್ಯಯನದಲ್ಲಿ ಬಹುಪ್ರಮುಖ ಆಧಾರಗಳಾಗಿವೆ. ಪ್ರಸ್ತುತ ಅಧ್ಯಯನದಲ್ಲಿ ಆಗಮಗಳು ತಿಳಿಸುವ ಪ್ರತಿಮಾ ಲಕ್ಷಣಗಳನ್ನು ಬಳಸಿಕೊಳ್ಳಲಾಗಿದೆ. ಈ ಅಧ್ಯಯನದ ಮುಖ್ಯ ಉದ್ದೇಶವೇ ಹಂಪಿ ಪರಿಸರದಲ್ಲಿನ ಶಿಲ್ಪಗಳು ಆಗಮಗಳು ತಿಳಿಸುವ ಪ್ರತಿಮಾ ಲಕ್ಷಣಗಳನ್ನು ಅನುಸರಿಸಿ ಕೆತ್ತಲ್ಪಟ್ಟಿವೆಯೇ? ಇಲ್ಲವೆ ಎಂಬುದನ್ನು ತಿಳಿಸುವುದಾಗಿದೆ. ಶಿಲ್ಪಗಳು ಎಲ್ಲಿಯೇ

ರಚಿಸಲ್ಪಟ್ಟಿರಲಿ ಆಗಮಗಳು ಅವುಗಳಿಗೆ ಒಂದೇ ನಿಯಮಗಳನ್ನು ಹೇಳುತ್ತದೆ. ಆದರೆ ಸಾಮಾನ್ಯವಾಗಿ ದೇವಾಲಯದ ಗರ್ಭಗೃಹದಲ್ಲಿ ಪ್ರತಿಷ್ಠಾಪಿಸುವ ಮೂರ್ತಿಶಿಲ್ಪಗಳು ಆಗಮಗಳ ಅನ್ವಯ ಕೆತ್ತಲ್ಪಟ್ಟಿರುತ್ತವೆ. ಆದರೆ ಗರ್ಭಗೃಹದ ಹೊರಭಾಗದಲ್ಲಿ ಅಂದರೆ, ದೇವಾಲಯದ ಭಿತ್ತಿ, ಕಂಬ, ಕೋಷ್ಠ ಮುಂತಾದ ಭಾಗಗಳಲ್ಲಿಯೂ ಕೆತ್ತಲ್ಪಡುವ ಶಿಲ್ಪಗಳು ಆಗಮಗಳನ್ನು ಅನುಸರಿಸಿ ರಚಿತವಾಗಿರುತ್ತವೆಯೇ ಎಂಬುದನ್ನು ತಿಳಿಸುವ ಅಧ್ಯಯನಗಳು ವಿರಳವಾಗಿವೆ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಈ ಪ್ರಯತ್ನವನ್ನು ಮಾಡುವುದಕ್ಕಾಗಿ ಆಗಮಗಳಲ್ಲಿರುವ ಪ್ರತಿಮಾ ಲಕ್ಷಣಗಳನ್ನು ಅಂದರೆ ಯಾವ ಮೂರ್ತಿಯು ಯಾವ ಭಂಗಿ, ಆಯುಧಗಳು, ಆಭರಣಗಳು, ಹಸ್ತಗಳು, ಮುದ್ರೆಗಳು, ಆಸನಗಳು, ಭಾವ, ಬಣ್ಣ, ವಾಹನ ಮುಂತಾದ ಲಕ್ಷಣಗಳನ್ನು ಒಳಗೊಂಡಿರುತ್ತವೆ ಎಂದು ತಿಳಿದು ಅದರ ಅನ್ವಯ ಹಂಪಿಯಲ್ಲಿನ ಶಿಲ್ಪಗಳು ರಚಿತವಾಗಿವೆಯೇ ಎಂಬುದನ್ನು ತಿಳಿದುಕೊಳ್ಳಲು ಯತ್ನಿಸಲಾಗಿದೆ. ಹೀಗೆ ಈ ಅಧ್ಯಯನದಲ್ಲಿ ಆಗಮಗಳನ್ನು ಬಹುಮುಖ್ಯ ಆಧಾರಗಳನ್ನಾಗಿ ಬಳಸಿಕೊಳ್ಳಲಾಗಿದೆ.

**ಅಡಿಟಿಪ್ಪಣಿಗಳು**

೧. ಶಿವಕುಮಾರಸ್ವಾಮಿ ಎಂ., *ಶೈವಾಗಮಗಳು: ಒಂದು ಅಧ್ಯಯನ*, ಪು.೪

೨. ಷಣ್ಮುಖಯ್ಯ ಅಕ್ಕೂರಮಠ (ಅನು), ಶಿವಕುಮಾರಸ್ವಾಮಿ ಎಂ. (ಸಂ.), *ಸೂಕ್ಷ್ಮಾಗಮ*, ಪು.xvii

೩. ನಂಜುಂಡರಾಧ್ಯ ಎಂ.ಜಿ. (ಸಂ.), *ಶಿವಾಗಮ ಸೌರಭ*, ಪು.xi

೪. ತಂತ್ರಸಮುಚ್ಚಯ, ತ್ರಿವೇಂದ್ರಮ್ ಸಂಸ್ಕೃತ ಸೀರಿಸ್, ನಂ.೧೫೧, ಭಾಗ ೧, ಪು.೨ (ಪೀಠಿಕೆ)

೫. ಶಿವಕುಮಾರಸ್ವಾಮಿ ಎಂ., *ಪೂರ್ವೋಕ್ತ*, ಪು.೨

೬. ಅದೇ

೭. ಜ್ಞಾನಾನಂದ ಜಿ., *ಶಿಲ್ಪಾದರ್ಶ*, ಸಂ.೧, ಪು.೪೬

೮. ಮಲ್ಲೇದೇವರು ಹೆಚ್.ಪಿ., *ಆಗಮ ಶಬ್ದ ನಿರ್ವಚನ, ಶಿವಾಗಮ ಸೌರಭ*, ಪು.೧೮

೯. ಷಣ್ಮುಖಯ್ಯ ಅಕ್ಕೂರಮಠ (ಅನು), ಶಿವಕುಮಾರಸ್ವಾಮಿ ಎಂ. (ಸಂ.), *ಪೂರ್ವೋಕ್ತ*, ಪು.xvii-xviii

೧೦. ಜ್ಞಾನಾನಂದ ಜಿ., *ಪೂರ್ವೋಕ್ತ*, ಪು.೪೮

೧೧. ನಂಜುಂಡರಾಧ್ಯ ಎಂ.ಜಿ. (ಸಂ.), *ಪೂರ್ವೋಕ್ತ*, ಪು.xviii

೧೨. ಜ್ಞಾನಾನಂದ ಜಿ., *ಪೂರ್ವೋಕ್ತ*, ಪು.೪೮-೪೯

೧೩. ಕಂಬಿ ವ್ಹಿ.ಎಸ್., *ಆಗಮ ಪ್ರಣೀತ ಎರಡು ಶೈವಗಳ ತೌಲನಿಕ ಪರಿಚಯ,* ಪು.೪

೧೪. ಶಿವಕುಮಾರಸ್ವಾಮಿ ಎಂ., *ಪೂರ್ವೋಕ್ತ,* ಪು.೭-೮

೧೫. ಗಂಗಾಧರನ್ ಎಚ್., ಶಿವಾಗಮಗಳು (ಒಂದು ಅಧ್ಯಯನ), ನಂಜುಂಡರಾಧ್ಯ ಎಂ.ಜಿ. (ಸಂ.), *ಶಿವಾಗಮ ಸೌರಭ,* ಪು.೨೮-೨೯

೧೬. ಶಿರೂರ ಬಿ.ವ್ಹಿ. (ಸಂ.), *ಡಾ.ಎಸ್.ಸಿ.ನಂದಿಮಠರ ಲೇಖನಗಳು,* ಪು.೩೨೩

೧೭. ಅದೇ, ಪು.೩೯೪-೩೯೮

೧೮. ಮಲ್ಲೇದೇವರು ಎಚ್.ಪಿ. (ಸಂ.), *ವಾತುಲ ಶುದ್ಧಾಗಮ,* ಪು.xi

೧೯. ಜ್ಞಾನಾನಂದ ಜಿ., *ಪೂರ್ವೋಕ್ತ,* ಪು.೪೭

೨೦. Arunachalam M., *The Saivagamas*, p.v

೨೧. *Ibid,* p.30

೨೨. ಶಿರೂರ ಬಿ.ವ್ಹಿ (ಸಂ.), *ಪೂರ್ವೋಕ್ತ,* ಪು.೩೨೫

೨೩. Arunachalam M., *The Saivagamas*, p.29

೨೪. ಶಿರೂರ ಬಿ.ವ್ಹಿ (ಸಂ.), *ಪೂರ್ವೋಕ್ತ,* ಪು.೩೨೬-೩೨೭

೨೫. Arunachalam M., *The Saivagamas*, pp.30-31

೨೬. ಶಿರೂರ ಬಿ.ವ್ಹಿ (ಸಂ.), *ಪೂರ್ವೋಕ್ತ,* ಪು.೩೨೭-೩೨೮

೨೭. ಅದೇ, ಪು.೩೨೮-೩೩೦

## ಅಧ್ಯಾಯ ಐದು

# ಹಂಪಿ ಪರಿಸರದ ಶೈವಶಿಲ್ಪಗಳು

ಹಂಪಿಯು ಕೇವಲ ವಿಜಯನಗರದ ರಾಜಧಾನಿಯಲ್ಲದೆ ಆ ಸಾಮ್ರಾಜ್ಯದ ಕಲೆ ಮತ್ತು ವಾಸ್ತುಶಿಲ್ಪದ ಪ್ರತೀಕವೆನಿಸಿದೆ. ಇಲ್ಲಿರುವ ಪ್ರತಿಯೊಂದು ದೇವಾಲಯ, ಮಂಟಪಗಳು ಅಂದಿನ ಕಲೆ-ವಾಸ್ತುಶಿಲ್ಪವನ್ನು ತಿಳಿಸಿಕೊಡುತ್ತವೆ. ಮುಖ್ಯವಾಗಿ ಇಲ್ಲಿನ ಶಿಲ್ಪಗಳಲ್ಲಿ ಅಂದಿನ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಜೀವನವನ್ನು ಸೋದಾಹರಣವಾಗಿ ಚಿತ್ರಿಸಿದ್ದಾರೆ. ಪ್ರಸ್ತುತ ಅಧ್ಯಯನವು ಇಲ್ಲಿನ ಹಂಪಿ ಪರಂಪರೆ ಇಲಾಖೆಯು ೨೯ ಹಳ್ಳಿಗಳನ್ನು ಒಳಗೊಂಡಂತೆ ಹಂಪಿ ಪರಿಸರ ಎಂದು ಗುರುತಿಸಿರುವ ವ್ಯಾಪ್ತಿಯಲ್ಲಿ ಬರುವ ಶೈವ ಶಿಲ್ಪಗಳನ್ನು ಕುರಿತು ಕೈಗೊಂಡ ಅಧ್ಯಯನವಾಗಿದೆ. ಹಾಗೆಯೇ ಈ ಅಧ್ಯಯನದ ಉದ್ದೇಶದಲ್ಲಿ ತಿಳಿಸಿರುವಂತೆ ಇಲ್ಲಿ ದೊರೆಯುವ ಪ್ರತಿಯೊಂದು ಶಿಲ್ಪವು ಆಗಮಗಳು ಹಾಗೂ ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ನೀಡಿರುವ ಮೂರ್ತಿಲಕ್ಷಣಗಳನ್ನನುಸರಿಸಿ ನಿರ್ಮಿತವಾಗಿವೆಯೋ ಅಥವಾ ಇಲ್ಲವೋ ಎಂಬುದನ್ನು ತಿಳಿದುಕೊಳ್ಳಲು ಯತ್ನಿಸುವುದಾಗಿದೆ. ಈ ಹಿನ್ನೆಲೆಯಲ್ಲಿ ಮೇಲೆ ತಿಳಿಸಿರುವ ಹಂಪಿ ಪರಿಸರದಲ್ಲಿ ಕಂಡುಬರುವ ಪ್ರತಿಯೊಂದು ದೇವಾಲಯ, ಮಂಟಪದಲ್ಲಿರುವ ಶಿಲ್ಪಗಳು ಹಾಗೂ ಇನ್ನಿತರೆಡೆ ದೊರೆಯುವ ಬಿಡಿಶಿಲ್ಪಗಳನ್ನೂ ಛಾಯಾಚಿತ್ರ ಮಾಡಿ ಅವುಗಳು ಆಗಮಗಳು ಹಾಗೂ ಶಿಲ್ಪಶಾಸ್ತ್ರಗಳನ್ನು ಅನುಸರಿಸಿ ಕೆತ್ತಲ್ಪಟ್ಟಿವೆಯೋ ಇಲ್ಲವೊ ಎಂಬುದನ್ನು ಈ ಕೆಳಗೆ ಅವುಗಳ ಪ್ರತಿಮಾ ಲಕ್ಷಣಗಳನ್ನು ತಿಳಿಸುವುದರ ಮೂಲಕ ಹೇಳಲಾಗಿದೆ. ಹಾಗೂ ಉಲ್ಲೇಖಿಸಬೇಕಾದ ಇನ್ನೊಂದು ವಿಷಯವೆಂದರೆ ಹಂಪಿ ಪರಿಸರದಲ್ಲಿ ಶಿವನ ಎಲ್ಲ ರೂಪಗಳು ಲಭ್ಯವಾಗುವುದಿಲ್ಲ, ಲಭ್ಯವಾದ ಶಿಲ್ಪಗಳನ್ನು ಮಾತ್ರವೇ ಆಗಮಗಳಲ್ಲಿರುವ ಮೂರ್ತಿಲಕ್ಷಣಗಳೊಂದಿಗೆ ಹೋಲಿಸಿ ವಿವರಿಸಲಾಗಿದೆ. ಅಲ್ಲದೆ ಇನ್ನೂ ಕೆಲವು ಶಿಲ್ಪಗಳು ಪುರಾಣಗಳ ಕಥೆಯನ್ನಾಧರಿಸಿ ಹಾಗೂ ಕೆಲವು ಬೇರೆ ಪ್ರದೇಶದಲ್ಲಿರುವ ದೇವಾಲಯದ ಐತಿಹ್ಯವನ್ನಾಧರಿಸಿ ಕೆತ್ತಲಾಗಿರುವ ಶಿಲ್ಪಗಳೂ ಕಂಡುಬಂದಿವೆ. ಅಂತಹವುಗಳನ್ನು ಸಹ ಅವುಗಳ ಕಥೆ ಹಾಗೂ ಐತಿಹ್ಯದ ವಿವರಣೆಯೊಂದಿಗೆ ಶಿಲ್ಪದ ಪ್ರತಿಮಾಲಕ್ಷಣಗಳನ್ನು ಈ ಅಧ್ಯಯನದಲ್ಲಿ ತಿಳಿಸಲಾಗಿದೆ.

**ಶಿವಲಿಂಗ**

ಶಿವನಿಗೆ ಹಲವು ಮಾನುಷ ರೂಪಗಳಿರುವಂತೆ ನಿರಾಕಾರವಾದ ಲಿಂಗ ಸ್ವರೂಪವೂ ಉಂಟು. ವ್ಯಕ್ತ ಹಾಗೂ ಅವ್ಯಕ್ತ ರೂಪಗಳೆರಡರಲ್ಲೂ ಶಿವನು ಪೂಜೆಗೊಳ್ಳುತ್ತಾನೆ. ಸಾಮಾನ್ಯವಾಗಿ ಅವ್ಯಕ್ತ

ಅಂದರೆ ಲಿಂಗ ರೂಪದಲ್ಲಿಯೇ ಮುಖ್ಯವಾಗಿ ಶಿವ ಗರ್ಭಗೃಹದಲ್ಲಿ ಪ್ರತಿಷ್ಠೆಗೊಳ್ಳುವುದರ ಮೂಲಕ ಪೂಜೆಗೊಳ್ಳಲ್ಪಟ್ಟರೆ, ಉತ್ಸವಮೂರ್ತಿಗಳ ಮೂಲಕ ವ್ಯಕ್ತ ರೂಪದಲ್ಲಿ ಪೂಜೆಗೊಳ್ಳುತ್ತಾನೆ. ಎಲ್ಲಾ ಪ್ರಾಣಿಗಳೂ ಲೌಕಿಕವಾದ ಸಾಂಸಾರಿಕ ವಿಷಯಗಳಿಂದ ಮುಕ್ತಿಯನ್ನು ಯಾವುದರಿಂದ ಪಡೆದುಕೊಳ್ಳುತ್ತವೆಯೋ ಅದನ್ನು ಲಿಂಗ ಎಂದು ಕರೆಯಲಾಗುತ್ತದೆ. ಸಕಲವೂ ಯಾವುದರಲ್ಲಿ ಲೀನವಾಗುವುದೋ ಅದೇ ಲಿಂಗ ಎಂಬುದು ಲಿಂಗ ಶಬ್ಧದ ವ್ಯುತ್ಪತ್ತ್ಯರ್ಥ.[೧] ಅತಿ ಅಪರೂಪವಾಗಿ ದಕ್ಷಿಣ ಭಾರತದಲ್ಲಿ ಪಲ್ಲವರ ಕಾಲದ ದೇವಾಲಯದ ಗರ್ಭಗೃಹಗಳಲ್ಲಿ ಶಿವನು ವ್ಯಕ್ತ ರೂಪದಲ್ಲಿ ಕಂಡುಬಂದಿರುವುದನ್ನು ಹೊರತುಪಡಿಸಿದರೆ, ಸಾಮಾನ್ಯವಾಗಿ ಎಲ್ಲ ಶೈವ ದೇವಾಲಯಗಳಲ್ಲಿ ಲಿಂಗ ರೂಪವೇ ಪ್ರಧಾನವಾಗಿ ಕಂಡುಬರುತ್ತದೆ.[೨]

ಸಾಮಾನ್ಯವಾಗಿ ಲಿಂಗ ಎಂದಾಕ್ಷಣ ಎತ್ತರವಾದ ಪೀಠ ಅದರ ಮೇಲೆ ಪಾಣಿಪೀಠ ಅದರ ಮಧ್ಯದಲ್ಲಿ ಮೊಟ್ಟೆಯಾಕಾರವುಳ್ಳದ್ದು ಲಿಂಗ ಎಂಬುದೇ ಕಣ್ಣೆದುರಿಗೆ ಬರುವ ಲಿಂಗದ ಲಕ್ಷಣ. ಹಾಗೆಯೇ ಲಿಂಗದ ಕುರಿತು ಅಲ್ಪಮಟ್ಟಿಗೆ ತಿಳಿದಿರುವವರು ಲಿಂಗ ಎಂದರೆ ಬ್ರಹ್ಮಭಾಗ, ವಿಷ್ಣುಭಾಗ ಹಾಗೂ ಯೋನಿಪೀಠ ಮತ್ತು ಇವುಗಳ ಮೇಲ್ಭಾಗದಲ್ಲಿ ಕಾಣುವ ಮುಖ್ಯವಾದ ಭಾಗ ರುದ್ರಭಾಗವೇ (ಪೂಜಾಭಾಗ) ಲಿಂಗ ಎಂದು ತಿಳಿಸುವರು. ಆದರೆ ಲಿಂಗಗಳ ಕುರಿತು ಆಳವಾಗಿ ತಿಳಿಯಲು ಹೊರಟರೆ ಇಂತಹ ಲಿಂಗಗಳು ಹಲವು ಪ್ರಕಾರದಲ್ಲಿವೆ ಎಂಬುದು ತಿಳಿದುಬರುತ್ತದೆ. ಈ ಲಿಂಗಗಳನ್ನು ಚಲಲಿಂಗಗಳು (ಚಲನಯುಕ್ತ) ಮತ್ತು ಅಚಲಲಿಂಗಗಳು (ಸ್ಥಿರ) ಎಂದು ಎರಡು ರೀತಿಯಾಗಿ ವಿಂಗಡಿಸಲಾಗಿದೆ. ಚಲಲಿಂಗಗಳಲ್ಲಿ ಮೃಣ್ಮಯ, ಲೋಹಜ, ರತ್ನಜ, ದಾರುಜ, ಶೈಲಜ ಮತ್ತು ಕ್ಷಣಿಕ ಲಿಂಗಗಳೆಂದು ಮತ್ತೆ ವಿಭಾಗಗಳಿವೆ. ಮೃಣ್ಮಯ ಎಂದರೆ ಮಣ್ಣಿನಿಂದ ಮಾಡಿದ ಲಿಂಗಗಳು. ಲೋಹಜ ಎಂದರೆ ಚಿನ್ನ, ಬೆಳ್ಳಿ, ಕಂಚು, ತಾಮ್ರ, ಸತು, ಹಿತ್ತಾಳೆ, ಕಬ್ಬಿಣ, ಸೀಸ ಈ ಎಂಟು ಲೋಹಗಳಲ್ಲಿ ಮಾಡಿದ ಲಿಂಗಗಳು. ರತ್ನಜ ಎಂದರೆ ಮಾಣಿಕ್ಯ, ಮುತ್ತು, ಹವಳ, ಮರಕತ, ಪುಷ್ಯರಾಗ, ವಜ್ರ, ನೀಲ, ಹರಿದಶ್ಮ, ವೈಢೂರ್ಯ, ಪದ್ಮರಾಗ, ಶಂಖ, ಸ್ಫಟಿಕ, ಸೂರ್ಯಕಾಂತ ಮತ್ತು ಚಂದ್ರಕಾಂತ ಈ ಮಣಿಗಳಿಂದ ನಿರ್ಮಿತವಾಗುವ ಲಿಂಗಗಳು. ದಾರುಜ ಎಂದರೆ ಚಂದನ, ರಕ್ತಚಂದನ, ದೇವದಾರು, ಖದಿರ ಶ್ರೀಫಲ (ಬಿಲ್ವ), ಶಮೀ, ಅಶ್ವತ್ಥ, ಅರಿಷ್ಠ (ಬೇವು), ಮಧೂಕ (ಇಪ್ಪ) ಕರಂಜ (ಹೊಂಗೆ), ಶಾಲ, ಸರಳ (ದೇವದಾರುವಿನಲ್ಲಿ ಹಳದಿ ಬಣ್ಣದ್ದು), ಕದಂಬ, ಹಲಸು, ಕ್ಷೀರಿಣಃ (ಅರಳಿ), ಅಶೋಕ, ಅರ್ಜುನ ಉದುಂಬರ(ಅತ್ತಿ), ಪಾರಿಜಾತ, ಶಿರೀಷ, ಪಿಪ್ಪಲ ಈ ಮರಗಳಿಂದ ಮಾಡಿದ ಲಿಂಗಗಳು. ಶೈಲಜ ಎಂದರೆ ಶಿಲಾ ಲಿಂಗಗಳು. ಇವು ಶ್ವೇತ (ಬಿಳುಪು) ಕಲ್ಲು (ಅಮೃತಶಿಲೆ), ರಕ್ತಶಿಲಾ (ಕೆಂಪುಕಲ್ಲು), ಪೀತ ಶಿಲಾ (ಹಳದಿ ಕಲ್ಲು), ಕೃಷ್ಣಶಿಲಾ (ಕಪ್ಪುಕಲ್ಲು)ಗಳಲ್ಲಿ ಮಾಡಿದ ಲಿಂಗಗಳು ಹಾಗೂ ಕ್ಷಣಿಕ ಲಿಂಗಗಳು ಅಂದರೆ ಇಂತಹ ಲಿಂಗಗಳನ್ನು ಇಷ್ಟದೇಶ ಕಾಲಗಳಲ್ಲಿ ನಿರ್ದಿಷ್ಟವಾದ ಆಯಾದ್ರವ್ಯಗಳಿಂದ ನಿರ್ಮಿಸಿ ಪೂಜೆಯ ನಂತರ ವಿಸರ್ಜಿಸಲಾಗುತ್ತದೆ. ಇವು ಚಲಲಿಂಗಗಳಲ್ಲಿ ಬರುವ ವಿಧಗಳು ಮತ್ತು ಅವುಗಳನ್ನು ತಯಾರಿಸುವ ವಸ್ತುಗಳ ವಿವರ. ಇನ್ನು ಅಚಲ ಲಿಂಗಗಳ ವಿವರ ಈ ಮುಂದಿನಂತಿದೆ.

ಅಚಲ ಲಿಂಗಗಳನ್ನು ಸ್ಥಾವರ ಲಿಂಗಗಳೆಂದೂ ಕರೆಯುವರು. ಸುಪ್ರಭೇದಾಗಮವು ಒಂಬತ್ತು ತರಹದ ಅಚಲ ಲಿಂಗಗಳನ್ನು ಉಲ್ಲೇಖಿಸುತ್ತದೆ. ಅವುಗಳು ಸ್ವಯಂಭುವ, ಪೂರ್ವ(ಅಥವಾ ಪುರಾಣ), ದೈವತ, ಗಾಣಪತ್ಯ, ಅಸುರ, ಸುರ, ಆರ್ಷ, ರಾಕ್ಷಸ, ಮಾನುಷ ಮತ್ತು ಬಾಣಲಿಂಗಗಳು. ಇದರಲ್ಲಿ ಸ್ವಯಂಭುವ ಲಿಂಗಗಳು ಉತ್ತಮೊತ್ತಮ, ದೈವತ ಮತ್ತು ಗಾಣಪತ್ಯ ಲಿಂಗಗಳು ಉತ್ತಮ ಮಧ್ಯಮವಾದವುಗಳು. ಅಸುರ, ಸುರ ಮತ್ತು ಆರ್ಷಲಿಂಗಗಳು ಉತ್ತಮಾಧಮವಾದವುಗಳು ಮತ್ತು ಮಾನುಷಲಿಂಗಗಳು ಮಾಧ್ಯಮಾಧಮ ವಿಧಗಳಿಗೆ ಸೇರುತ್ತವೆಯೆಂದು ಹೇಳಲಾಗುತ್ತದೆ. ಮಾನಸಾರವು ಬೇರೆಯದೇ ಆದ ಆರು ತರಹದ ಅಂದರೆ ಶೈವಲಿಂಗ, ಪಾಶುಪತಲಿಂಗ, ಕಾಳಾಮುಖಲಿಂಗ, ವಾಮಲಿಂಗ, ಭೈರವಲಿಂಗ ಎಂಬ ಅಚಲಲಿಂಗಗಳನ್ನು ತಿಳಿಸುತ್ತದೆ. ಆದರೆ ಅವುಗಳ ವಿವರವನ್ನು ನೀಡುವುದಿಲ್ಲ. ಅದೇ ರೀತಿ ಮಕುಟಾಗಮವು ದೈವಿಕ, ಆರ್ಷ, ಗಾಣಪ ಮತ್ತು ಮಾನುಷ ಎಂಬ ನಾಲ್ಕು ರೀತಿಯ ಸ್ಥಿರಲಿಂಗಗಳನ್ನು ವಿವರಿಸಿದರೆ ಕಾಮಿಕಾಗಮವು ಸ್ವಾಯಂಭುವ, ದೈವಿಕ, ಆರ್ಷ, ಗಾಣಪತ್ಯ, ಮಾನುಷ ಮತ್ತು ಬಾಣಲಿಂಗಗಳೆಂಬ (ಬಾಣಾಸುರನಿಂದ ಪೂಜಿಸಲ್ಪಟ್ಟ ಲಿಂಗವನ್ನು ಬಾಣಲಿಂಗವೆಂದು ಹೇಳುವರು) ಆರು ವಿಧದ ಸ್ಥಾವರ ಲಿಂಗಗಳನ್ನು ಉಲ್ಲೇಖಿಸುತ್ತದೆ. ಈ ವಿಂಗಡನೆಯನ್ನು ಎಲ್ಲ ಶೈವಾಗಮಗಳು ಅಧಿಕೃತವಾಗಿ ಉಲ್ಲೇಖಿಸುತ್ತವೆ. ಈ ಮಾನುಷ ಲಿಂಗಗಳು ಅತ್ಯಂತ ಕೆಳಗಿರುವ ಬ್ರಹ್ಮಭಾಗವನ್ನು ವಿಷ್ಣುಭಾಗ ಎಂಬ ಮಧ್ಯಭಾಗವನ್ನು, ರುದ್ರಭಾಗ(ಪೂಜಾಭಾಗ) ಎಂಬ ಮೇಲಿನ(ಮುಖ್ಯ) ಭಾಗವನ್ನು ಹೊಂದಿರುತ್ತವೆ. ಅಲ್ಲದೆ ರುದ್ರಭಾಗದಲ್ಲಿ ಬ್ರಹ್ಮಸೂತ್ರ ಹಾಗೂ ಶಿರೋವರ್ತನ ಎಂಬ ಲಕ್ಷಣಗಳು ಇರುತ್ತವೆ. ಇಂತಹ ಮಾನುಷ ಲಿಂಗಗಳಲ್ಲಿ ಸರ್ವದೇಶಿಕಲಿಂಗ, ಸರ್ವಸಮ(ಸರ್ವತೋಭದ್ರ), ವರ್ಧಮಾನ ಲಿಂಗ, ಶೈವಾಧಿಕ ಲಿಂಗ, ಸ್ವಸ್ತಿಕಲಿಂಗ, ತ್ರೈರಾಶಿಕಲಿಂಗ, ಆಧ್ಯಲಿಂಗ ಅಲ್ಲದೇ ಅಷ್ಟೋತ್ತರಲಿಂಗ, ಸಹಸ್ರಲಿಂಗ ಹಾಗೂ ಧಾರಾಲಿಂಗ ಮತ್ತು ಮುಖಲಿಂಗ ಎಂಬ ವಿಧಗಳನ್ನು ಅವುಗಳ ಅಳತೆಗಳ ಮೇಲೆ ವಿಂಗಡನೆ ಮಾಡಲಾಗಿದೆ. ಇವುಗಳಲ್ಲದೆ ನಾಗರ, ದ್ರಾವಿಡ ಹಾಗೂ ವೇಸರ ಲಿಂಗಗಳೆಂಬ ವಿಧಗಳೂ ಉಂಟು.[೩] ಹೀಗೆ ವಿವಿಧ ಹೆಸರುಗಳುಳ್ಳ ಈ ಎಲ್ಲ ಪ್ರತಿಯೊಂದು ಲಿಂಗಗಳು ವಿಭಿನ್ನ ಅಳತೆಗಳೊಂದಿಗೆ ಪ್ರತ್ಯೇಕವಾಗಿ ವಿವರಿಸಲ್ಪಟ್ಟಿವೆ.

ಪ್ರಸ್ತುತ ಅಧ್ಯಯನ ಕೈಗೊಂಡ ಕ್ಷೇತ್ರವಾದ ಹಂಪಿ ಪರಿಸರದಲ್ಲಿ ಮೇಲೆ ವಿವರಿಸಿದ ಎಲ್ಲ ವಿಧದ ಲಿಂಗಗಳು ದೊರೆಯದಿದ್ದರೂ ಹಲವು ವಿಧದ ಲಿಂಗಗಳನ್ನು ವಿದ್ವಾಂಸರು ಗುರುತಿಸಿ ಅವುಗಳ ಅಧ್ಯಯನ ನಡೆಸಿ ವಿವರಗಳನ್ನು ನೀಡಿರುವರು. ಇದರೊಂದಿಗೆ ನನ್ನ ಕ್ಷೇತ್ರಕಾರ್ಯದಲ್ಲಿ ದೊರೆತ ಶಿವಲಿಂಗಗಳನ್ನೂ ಸೇರಿಸಿ ಒಟ್ಟಾರೆ ಹಂಪಿ ಪರಿಸರದಲ್ಲಿ ದೊರೆತಿರುವ ಪ್ರಮುಖ ಶಿವಲಿಂಗಗಳನ್ನು ಕುರಿತು ಈ ಕೆಳಗೆ ವಿವರಗಳನ್ನು ನೀಡಲಾಗಿದೆ.

ಮೊದಲನೆಯದಾಗಿ ಉತ್ಖನನದಲ್ಲಿ ಚಲಲಿಂಗಗಳೆಂದು ಕರೆಯಬಹುದಾದ ಶಿವಲಿಂಗಗಳು ದೊರೆತಿರುವುದು ತಿಳಿದುಬರುತ್ತದೆ.[೪] ಒಟ್ಟು ೪೧ ಚಿಕ್ಕಗಾತ್ರದ ಶಿವಲಿಂಗಗಳು ದೊರೆತಿದ್ದು, ಇವುಗಳಲ್ಲಿ ಹಲವು ಬಳಪದ ಕಲ್ಲಿನಿಂದ ಮಾಡಲ್ಪಟ್ಟವುಗಳಾಗಿವೆ. ಹಾಗೆಯೇ ಒಂದು ಸ್ಫಟಿಕದ ಶಿವಲಿಂಗವೂ ದೊರೆತಿರುವುದು ವಿಶೇಷ. ಈ ಎಲ್ಲ ಲಿಂಗಗಳು ಚಿಕ್ಕ ಗಾತ್ರದವುಗಳಾಗಿದ್ದರೂ ಬ್ರಹ್ಮ, ವಿಷ್ಣು ಮತ್ತು

ರುದ್ರಭಾಗಗಳನ್ನು ಹೊಂದಿದವುಗಳಾಗಿವೆ. ಹಾಗೂ ವಿಶೇಷವೆಂದರೆ ಇದರಲ್ಲಿ ಕೆಲವು ಲಿಂಗಗಳು ಕೊರಳಲ್ಲಿ ಧರಿಸುವಂತೆ ಮಾಡಲ್ಪಟ್ಟವುಗಳಾಗಿವೆ. ಆದ್ದರಿಂದ ಈ ಎಲ್ಲ ಲಿಂಗಗಳನ್ನು ಚಲಲಿಂಗಗಳೆಂದು ಕರೆಬಹುದು.

ಇವುಗಳನ್ನು ಹೊರತುಪಡಿಸಿದರೆ ಮೇಲೆ ತಿಳಿಸಿದ ವಿವಿಧ ಲಿಂಗಗಳಲ್ಲಿ ಹಂಪಿಯಲ್ಲಿ ದೊರೆಯುವ ಲಿಂಗವೆಂದರೆ ಚತುರ್ಮುಖ ಲಿಂಗ. ಇದು ಪ್ರಸ್ತುತ ವಿರೂಪಾಕ್ಷ ದೇವಾಲಯದ ಗರ್ಭಗೃಹಕ್ಕಿಂತ ಮೊದಲು ಸಿಗುವ ಅಂತರಾಳ ಭಾಗದಲ್ಲಿ ಬಲಭಾಗದ ಮೂಲೆಯಲ್ಲಿ ಒಂದು ಪೀಠದ ಮೇಲೆ ಇರಿಸಿರುವರು. ಈ ಮುಖಲಿಂಗದ ವಿವರಗಳನ್ನು ತಿಳಿಯುವ ಮೊದಲು ಶಿಲ್ಪಶಾಸ್ತ್ರಗ್ರಂಥಗಳಲ್ಲಿ ಉಲ್ಲೇಖವಾದ ಮುಖಲಿಂಗದ ಬಗೆಗಿನ ವಿವರಗಳನ್ನು ತಿಳಿಯುವುದು ಸೂಕ್ತ. ಮುಖಲಿಂಗವನ್ನು ವ್ಯಕ್ತಾವ್ಯಕ್ತ ಲಿಂಗವೆಂದೂ ಕೂಡ ಕರೆಯುತ್ತಾರೆ. ಈ ಲಿಂಗಗಳಲ್ಲಿ ಒಂದು, ಮೂರು, ನಾಲ್ಕು ಮುಖಗಳನ್ನು ನಿರ್ಮಿಸಬಹುದು. ಒಂದೇ ಬಾಗಿಲು ಇರುವಾಗ ಏಕ ವಕ್ತ್ರ ಲಿಂಗವನ್ನು ಸ್ಥಾಪಿಸಬೇಕು. ಎರಡು ಕಡೆ ಬಾಗಿಲುಗಳು ಇದ್ದಾಗ ಚತುರ್ಮುಖ ಲಿಂಗವನ್ನು ಆಯಾ ಬಾಗಿಲುಗಳ ಎದುರಾಗಿರುವಂತೆ ಸ್ಥಾಪಿಸಬೇಕು. ಎರಡು ಮುಖಗಳಿರುವ ಲಿಂಗವನ್ನು ಅಭಿಚಾರ ಕಾರ್ಯದಲ್ಲೂ ಶತ್ರು ನಾಶಕ ಕಾರ್ಯದಲ್ಲೂ ಬಳಸುತ್ತಾರೆ. ಚತುರ್ಮುಖ ಲಿಂಗವೆಂದರೆ ಅದು ನಿಜಕ್ಕೂ ಪಂಚಮುಖ ಲಿಂಗವೇ. ನಾಲ್ಕು ದಿಕ್ಕುಗಳಿಗೂ ಎದುರಾಗಿರುವ ಮುಖಗಳು ಕ್ರಮವಾಗಿ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷಗಳೆಂದು ನಿರ್ದೇಶಿಸಿದ ನಂತರ ಈಶಾನ ವಕ್ತ್ರವು ಊರ್ಧ್ವಭಾಗದಲ್ಲಿರುತ್ತದೆ ಎಂದು ಹೇಳಲಾಗುತ್ತದೆ. ಈ ಮುಖವು ಕೇವಲ ಯೋಗಿಗಳಿಗೆ ಮಾತ್ರವೇ ಕಾಣಿಸುವುದರಿಂದ ಈ ಮುಖವನ್ನು ರೂಪಿಸಕೂಡದು ಎಂದು ರೂಪಮಂಡನ ಹೇಳುತ್ತದೆ. ಆದ್ದರಿಂದ ಈ ಐದನೆಯ ಮುಖವನ್ನು ಪ್ರತ್ಯೇಕವಾಗಿ ರೂಪಿಸಬೇಕಾಗಿಲ್ಲ ಎಂದು ಚತುರ್ಮುಖದಲ್ಲಿಯೇ ಪಂಚಮುಖಗಳೂ ಇವೆ ಎಂಬ ಕಲ್ಪನೆಯನ್ನು ಇರಿಸಿಕೊಳ್ಳಲಾಗಿದೆ ಎಂದು ಅರ್ಥವಾಗುತ್ತದೆ. ಈಶಾನ ಶಿವಗುರುದೇವ ಪದ್ಧತಿ ಮತ್ತು ದೀಪಾರ್ಣವದಲ್ಲಿ ಗ್ರಾಮಗಳಲ್ಲಿ ಒಂದು ಮುಖ ಮತ್ತು ನಾಲ್ಕು ಮುಖಗಳಿರುವ ಲಿಂಗಗಳನ್ನು ಸ್ಥಾಪಿಸಬಹುದು. ಎರಡು ಮತ್ತು ಐದು ಮುಖಗಳ ಲಿಂಗಗಳನ್ನು ಪರರಾಷ್ಟ್ರಗಳ ಸರಹದ್ದಿನಲ್ಲಿ ಬೆಟ್ಟಗಳ ಮೇಲೆ ಸ್ಥಾಪಿಸಬೇಕು ಎಂದು ಹೇಳಿದೆ. ಎರಡು ಮುಖಗಳ ಲಿಂಗವು ಅಭಿಚಾರಲಿಂಗ ಎಂಬುದು ಈಗಾಗಲೇ ತಿಳಿದಿದೆ. ಪಂಚಮುಖಗಳ ಲಿಂಗವೂ ಅದೇ ರೀತಿಯಾಗಿ ಪರರಾಷ್ಟ್ರದ ಎಲ್ಲೆಯಲ್ಲಿ ಸ್ಥಾಪಿತವಾಗಬೇಕು ಎಂದು ಹೇಳಿರುವುದರಿಂದ ಇದೂ ಅಭಿಚಾರ ಲಿಂಗವೇ ಎಂಬುದು ಗೊತ್ತಾಗುತ್ತದೆ ಮತ್ತು ಇಲ್ಲಿ ಲಿಂಗದಲ್ಲಿ ಐದು ಮುಖಗಳನ್ನೂ ರೂಪಿಸಲಾಗುತ್ತದೆ ಎಂಬ ಅರ್ಥವೂ ಉಂಟಾಗುತ್ತದೆ. ಈ ಕಾರಣಕ್ಕಾಗಿ ಚತುರ್ಮುಖ ಲಿಂಗದಲ್ಲಿಯೇ ಪಂಚಮುಖಗಳ ಕಲ್ಪನೆಯನ್ನು ರೂಪಿಸಲಾಗಿದೆ.[೫] ಶಿವನ ಈ ಪಂಚಮುಖಗಳಲ್ಲಿ ಸದ್ಯೋಜಾತವು ಪಶ್ಚಿಮ ದಿಕ್ಕಿಗಿದ್ದು ತ್ರಿನೇತ್ರನಾಗಿ ಮತ್ತು ಶ್ವೇತವರ್ಣವನಾಗಿದ್ದು ಧ್ಯಾನ, ವೇದಗಳು, ಪುಸ್ತಕಗಳು, ಅಕ್ಷಮಾಲೆ, ವರದ ಮುದ್ರೆ ಮತ್ತು ಅಭಯ ಮುದ್ರೆಗಳನ್ನು, ವಾಮದೇವನು ಹೊಂಬಣ್ಣನಾಗಿ ಉತ್ತರ ದಿಕ್ಕಿಗಿದ್ದು, ತ್ರಿನೇತ್ರ, ವರದ ಮುದ್ರೆ, ಅಕ್ಷಮಾಲೆ, ಅಭಯಮುದ್ರೆ, ಉಳಿಗಳನ್ನು ಹಿಡಿದಿರುತ್ತಾನೆ. ಅಘೋರ ಮುಖವು ದಕ್ಷಿಣ ದಿಕ್ಕಿಗೆ ಮುಖ ಮಾಡಿದ್ದು, ತ್ರಿನೇತ್ರ ಮತ್ತು ನೀಲಿವರ್ಣಿತನಾಗಿ ಕೊಡಲಿ, ವೇದಪುಸ್ತಕ, ಅಂಕುಶ,

ಹಗ್ಗ, ಶೂಲ, ಕಪಾಲ, ಢಕ್ಕಾವಾದ್ಯ, ಅಕ್ಷಮಾಲೆಗಳನ್ನು ಹಿಡಿದಿದ್ದಾನೆ. ತತ್ಪುರುಷನು ಹೊಂಬಣ್ಣ ಹೊಂದಿದ್ದು ಪೂರ್ವ ದಿಕ್ಕಿನಲ್ಲಿರುತ್ತಾನೆ. ಈತನು ಜ್ಞಾನ ಮುದ್ರೆ, ವರದ ಮುದ್ರೆ, ಅಭಯ ಮುದ್ರೆ ಮತ್ತು ಕೊಡಲಿಗಳನ್ನು ಹಿಡಿದಿರುವನು. ಈಶಾನನು ದಶಭುಜನಾಗಿದ್ದು ವೇದಮಸ್ತಕ, ಅಭಯಮುದ್ರೆ, ಅಂಕುಶ, ಹಗ್ಗ, ಉಳಿ, ಕಪಾಲ, ಢಕ್ಕೆ, ಅಕ್ಷಮಾಲೆ ಮತ್ತು ತ್ರಿಶೂಲಗಳನ್ನು ಹಿಡಿದಿದ್ದು ಶ್ವೇತ ವರ್ಣದವನಾಗಿರುತ್ತಾನೆ.[೬]

ಹಂಪಿಯಲ್ಲಿ ದೊರೆತ ಮುಖಲಿಂಗದ ಕುರಿತು ಹೇಳುವುದಾದರೆ, ಈ ಚತುರ್ಮುಖ ಲಿಂಗದ ಕುರಿತು ವಾಸುದೇವನ್ ಸಿ.ಎಸ್.[೭] ಅವರು ದೀರ್ಘವಾದ ಲೇಖನವನ್ನು ಪ್ರಕಟಿಸಿರುವರು. ಇವರು ಹೇಳುವ ಪ್ರಕಾರ ಈ ಲಿಂಗವನ್ನು ಸ್ಥಳೀಯರು ಗುಂಡು ಬ್ರಹ್ಮಯ್ಯ ಎಂದು ಕರೆಯುತ್ತಾರೆ. ಮೂಲತಃ ಇದು ಪಂಚಮುಖಲಿಂಗ. ಶಿವನಿಗೆ ಈಶಾನ, ತತ್ಪುರುಷ, ಅಘೋರ, ವಾಮದೇವ ಮತ್ತು ಸದ್ಯೋಜಾತ ಎಂಬ ಐದು ಮುಖಗಳಿದ್ದು, ಊರ್ಧ್ವಭಾಗದಲ್ಲಿರಬೇಕಾದ ಈಶಾನನ ಮುಖವನ್ನು ತೋರುವುದಿಲ್ಲ. ಶಿವನಿಗೆ ಐದು ಮುಖಗಳಿದ್ದರೂ ನಾಲ್ಕು ಮುಖಗಳನ್ನು ಮಾತ್ರ ತೋರಲಾಗುವುದು. ಶಿವನ ನಾಲ್ಕು ಮುಖಗಳು ಮಧ್ಯದ ಲಿಂಗದ ಮೂಲ ಕೇಂದ್ರ ಸ್ತಂಭದ ಸುತ್ತಲೂ ಕಂಡರಿಸಲಾಗುತ್ತದೆ. ಕಪ್ಪು ಶಿಲೆಯಿಂದ ರಚಿಸಿರುವ ಈ ಪಂಚಮುಖ ಲಿಂಗದಲ್ಲಿ ನಾಲ್ಕು ಮುಖಗಳಿವೆ. ಅದನ್ನು ಒಂದು ಮೂಲೆಯಲ್ಲಿ ಇಟ್ಟಿರುವ ಕಾರಣ ಅದರ ದಕ್ಷಿಣ ಮತ್ತು ಪೂರ್ವಭಿಮುಖವಾಗಿರುವ ಎರಡು ಮುಖಗಳನ್ನು ಮಾತ್ರ ನೋಡಬಹುದಾಗಿದೆ. ಶಿವನ ಮುಖವು ಸ್ಪಷ್ಟವಾಗಿದ್ದು, ಅದರಲ್ಲಿ ಅಗಲವಾದ ಮೂಗು, ಎರಡು ಕಣ್ಣುಗಳು, ಹಣೆಯಲ್ಲಿ ಮೂರನೆಯ ಕಣ್ಣು ಮತ್ತು ಎದ್ದು ಕಾಣುವ ಬಿಡಿಯಾಗಿರುವ ತುಸು ದಪ್ಪ ತುಟಿಗಳು ಕಂಡುಬರುತ್ತವೆ. ಪ್ರತಿಯೊಂದು ಮುಖಕ್ಕೂ ಎರಡು ಮುಖಗಳ ನಡುವೆ ಉದ್ದನೆಯ ಕಿವಿಯ ಭಾಗವಿದೆ. ಶಿವನ ದಕ್ಷಿಣಾಭಿಮುಖವಾಗಿರುವ ಮುಖದ ಎಲ್ಲಾ ಲಕ್ಷಣಗಳನ್ನು ಪೂರ್ವಾಭಿಮುಖ ವಾಗಿರುವ ಮುಖವು ಹೊಂದಿದೆ. ಈ ಎರಡು ಮುಖಗಳು ಶಿವನ ಯಾವ ರೂಪವನ್ನು ಪ್ರತಿನಿಧಿಸುತ್ತದೆ ಎಂಬುದನ್ನು ಗುರುತಿಸಲು ಸಾಧ್ಯವಿಲ್ಲ. ಆದರೆ ದಕ್ಷಿಣ ಮತ್ತು ಪೂರ್ವಾಭಿಮುಖವಾಗಿರುವ ಮುಖಗಳು ಕ್ರಮವಾಗಿ ಅಘೋರ ಮತ್ತು ತತ್ಪುರುಷ ಎಂದು ತಾತ್ಪೂರ್ತಿಕವಾಗಿ ಹೇಳಬಹುದು. ಹಣೆಯಲ್ಲಿರುವ ಮೂರನೆಯ ಕಣ್ಣಿನ ಮೇಲಿನ ಭಾಗದಲ್ಲಿ ತಲೆಯಲ್ಲಿ ಕಲ್ಯಾಣ ಚಾಲುಕ್ಯ ಶೈಲಿಯನ್ನು ಹೋಲುವ ಕಿರೀಟದ ಅಲಂಕರಣೆಯಿದೆ. ಕಿರೀಟವು ಕರಂಡ ಮುಕುಟದಂತೆ ಇರುವುದು ಗಮನಾರ್ಹ. ಶಿವನ ಮುಖಭಾವವು ಮಂದಸ್ಮಿತವಾಗಿರದೆ ಗಂಭೀರವಾಗಿದೆ. ಮುಖದಲ್ಲಿನ ಅಗಲವಾದ ಮೂಗು, ಬೀರಿರುವ ದಪ್ಪ ತುಟಿಗಳು, ಅಗಲವಾಗಿ ತೆರೆದಿರುವ ಕಣ್ಣುಗಳು ಮತ್ತು ಹುಬ್ಬಿನ ಭಾಗವು ಸ್ಪಷ್ಟವಾಗಿದೆ. ಶಿವನ ಮುಖ ಭಾಗಗಳಲ್ಲಿ ಹಾಗೂ ಮಧ್ಯದಲ್ಲಿರುವ ಲಿಂಗದ ಭಾಗಗಳಲ್ಲಿ ಕಲ್ಲಿನ ಚಕ್ಕೆಗಳು ಎದ್ದಿದ್ದು ಈ ಮುಖಲಿಂಗವು ಸಾಕಷ್ಟು ತ್ರುಟಿತಗೊಂಡಿದೆ. ಈ ಪಂಚಮುಖಲಿಂಗವು ಅಧಿಕ ಪ್ರಮಾಣದಲ್ಲಿ ಭಿನ್ನವಾಗಿರುವುದರಿಂದ ಪೂಜೆಗೆ ಯೋಗ್ಯವಲ್ಲವೆಂದು ಪರಿಗಣಿಸಿ ಇದನ್ನು ಈಗಿರುವ ಜಾಗದಲ್ಲಿ ಇರಿಸಲಾಗಿದೆ. ಈ ಲಿಂಗವೇ ಮೊದಲಿಗೆ ಪೂಜೆಗೆ ಒಳಪಟ್ಟಿತ್ತು ಎನ್ನುವುದು ಸಾಮಾನ್ಯವಾಗಿ ಗೋಚರಿಸುತ್ತದೆ. ಹಂಪಿಯ ಈ ಮುಖಲಿಂಗವು ಆಂಧ್ರಪ್ರದೇಶದ ಗುಡಿಮಲ್ಲಂನಲ್ಲಿರುವ ಪರಶುರಾಮೇಶ್ವರ ಲಿಂಗ ಮೂರ್ತಿಯ

ಮುಖವನ್ನು ಹೋಲುತ್ತದೆ ಎಂದು ಲೇಖಕರು ಹೇಳುತ್ತಾರೆ. ಅವರು ಈ ಎರಡೂ ಲಿಂಗಮೂರ್ತಿಗಳಲ್ಲಿ ಕಣ್ಣು, ಮೂಗು, ತುಟಿ ಮತ್ತು ಗಲ್ಲದ ಭಾಗಗಳು ಹೆಚ್ಚಿನ ಸಾಮ್ಯತೆಯಿರುವುದನ್ನು ಗುರುತಿಸಬಹುದು ಎಂದಿದ್ದಾರೆ.

ಅಲ್ಲದೆ ಹಂಪಿಯಲ್ಲಿ ಉದ್ಭವ ಲಿಂಗವನ್ನು ಹೊಂದಿರುವ ವಿರೂಪಾಕ್ಷ ದೇವಾಲಯದಲ್ಲಿ ಪಂಚ ಶಿಖರ (ಕಳಸ) ದರ್ಶನ ಹಾಗೂ ಪಂಚಾರತಿ ಸೇವೆ ಮಾಡುವ ಪದ್ಧತಿಯಿದೆ. ಹಾಗೂ ಶಿವರಾತ್ರಿಯಂದು ಪಂಚಲಿಂಗಗಳ ದರ್ಶನ ಪಡೆಯುವ ಸಂಪ್ರದಾಯವೂ ಇದೆ. ಈ ಪಂಚಲಿಂಗಗಳ ದರ್ಶನ ಮತ್ತು ಆರಾಧನೆ ಅಂದರೆ ಮಧ್ಯದಲ್ಲಿರುವ ವಿರೂಪಾಕ್ಷ ಲಿಂಗವೂ ಸೇರಿದಂತೆ ಕಿನ್ನರೇಶ್ವರ(ಪೂರ್ವ), ಮಾಣಿಭದ್ರೇಶ್ವರ (ಉತ್ತರ), ಜಂಬುನಾಥೇಶ್ವರ (ದಕ್ಷಿಣ) ಮತ್ತು ಸೋಮೇಶ್ವರ (ಪಶ್ಚಿಮ) ಈ ಪಂಚಲಿಂಗಗಳನ್ನು ಹೊಂದಿರುವ ಪ್ರತ್ಯೇಕ ದೇವಾಲಯಗಳಿವೆ. ಈ ದೇವಾಲಯಗಳಲ್ಲಿರುವ ಲಿಂಗಗಳು ವಿಷ್ಣುಧರ್ಮೋತ್ತರ ಪುರಾಣ ಉಲ್ಲೇಖಿಸುವಂತೆ ಶಿವನ ಪಂಚಮುಖಗಳಂತಿದ್ದು, ಅಂದರೆ ವಿರೂಪಾಕ್ಷ, ಈಶಾನನ್ನು (ಆಕಾಶ), ಮಾಣಿಭದ್ರೇಶ್ವರ–ವಾಮದೇವನನ್ನು (ಜಲ), ಜಂಬುನಾಥೇಶ್ವರ–ಅಘೋರನನ್ನು (ಅಗ್ನಿ), ಕಿನ್ನರೇಶ್ವರ–ತತ್ಪುರುಷನನ್ನು (ವಾಯು) ಸೋಮೇಶ್ವರ–ಸದ್ಯೋಜಾತನನ್ನು (ಪೃಥ್ವಿ) ಈ ರೀತಿಯಾಗಿ ಪಂಚಭೂತಗಳನ್ನು ಪ್ರತಿನಿಧಿಸುತ್ತವೆ. ಹಾಗೂ ಈ ಎಲ್ಲ ಲಿಂಗಗಳಿರುವ ದೇವಾಲಯಗಳು ಮತ್ತು ಪ್ರಸ್ತುತ ಮುಖಲಿಂಗವು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿಯೇ ಇದ್ದುದನ್ನು ಕಾರಣವಾಗಿಸಿ ಇವುಗಳು ಒಂದಕ್ಕೊಂದು ಸಂಬಂಧ ಹೊಂದಿವೆಯೆಂದು ಹೇಳಿ ಈ ಮುಖಲಿಂಗವೇ ಪ್ರಾಚೀನದಲ್ಲಿ ವಿರೂಪಾಕ್ಷನ ಹೆಸರಿನಲ್ಲಿ ಗರ್ಭಗೃಹದಲ್ಲಿ ಪೂಜೆಗೊಳ್ಳಲ್ಪಟ್ಟ ಮುಖಲಿಂಗವಾಗಿದ್ದು, ಅದು ಭಿನ್ನ(ತೃಟಿತ)ವಾದ ನಂತರ ಅದನ್ನು ಈಗಿರುವ ಸ್ಥಳದಲ್ಲಿ ಇರಿಸಲಾಗಿದೆ. ಹಾಗೂ ಈ ಪರಿಸರದಲ್ಲಿ ಕಂಡುಬಂದಿರುವ ಪಂಚಲಿಂಗಗಳು(ಇವುಗಳ ಕುರಿತು ಮುಂದೆ ವಿವರಿಸಲಾಗಿದೆ) ಈ ಪಂಚಮುಖಲಿಂಗದ ಸಂಕೇತವಾಗಿ ನಿರ್ಮಾಣಗೊಂಡು ಆರಾಧನೆಗೊಂಡಿರಬಹುದೆಂದು ಲೇಖಕರ ಲೇಖನದ ತಾತ್ಪರ್ಯವಾಗಿದೆ. ಹಾಗೆಯೇ ಚಂದ್ರಶೇಖರ್ ವಿ.ಡಾವಣಗೇರಿಯವರು 'ಹಂಪಿ ಶ್ರೀವಿರೂಪಾಕ್ಷ ದೇವಾಲಯ ಪೌರಾಣಿಕ ಹಾಗೂ ಐತಿಹಾಸಿಕ ಹಿನ್ನೆಲೆ' ಎಂಬ ಲೇಖನ ದಲ್ಲಿ,[೮] ಶ್ರೀವಿರೂಪಾಕ್ಷನು ಮಾತಂಗೇಶ್ವರ, ವಾಣಿಭದ್ರೇಶ್ವರ, ಜಂಬುನಾಥೇಶ್ವರ, ವೀರಭದ್ರೇಶ್ವರ, ಮಾಲ್ಯವಂತೇಶ್ವರ ಎಂಬ ಪಂಚಮುಖಗಳಿಂದ ವಿರಾಜಿಸುತ್ತಾನೆ. ಶಿವನ ಹಿಂದೆ ಬರುವ ನಂದಿ ಈ ಕ್ಷೇತ್ರದಲ್ಲಿ ಸವ್ಯ ವೃಷಭ, ಮಹಾಕಾಯ ವೃಷಭ, ಮಹಾಶಯ ವೃಷಭ, ಮಹಾಶೃಂಗ ವೃಷಭ ಎಂಬ ನಾಲ್ಕು ರೂಪಗಳಿಂದ ಈ ಕ್ಷೇತ್ರದಲ್ಲಿ ನೆಲೆಯಾಗಿರುವನೆಂಬುದು ಪುರಾಣ ಹಿನ್ನೆಲೆಯಾಗಿದೆ ಎಂದು ಉಲ್ಲೇಖಿಸಿರುವುದು ಸಹ ಈ ಚತುರ್ಮುಖ ಲಿಂಗಕ್ಕೆ ಪುಷ್ಠಿ ನೀಡುತ್ತದೆ ಎಂದು ಹೇಳಬಹುದು. ಈ ಎಲ್ಲ ವಿವರಗಳೊಂದಿಗೆ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ, ಅದು ಈ ದೇವಾಲಯದ ವಾಸ್ತುಶಿಲ್ಪ. ಪ್ರಸ್ತುತ ಚತುರ್ಮುಖವು ವಿರೂಪಾಕ್ಷ ದೇವಾಲಯದ ಅಂತರಾಳ ಭಾಗದಲ್ಲಿದೆ. ವಾಸುದೇವನ್ ಸಿ.ಎಸ್.ರವರು ತಮ್ಮ ಲೇಖನದಲ್ಲಿ ಅಭಿಪ್ರಾಯಪಟ್ಟಂತೆ ಈ ಚತುರ್ಮುಖ ಲಿಂಗವೇ ದೇವಾಲಯದ ಮೂಲಲಿಂಗವಿರಬಹುದು. ಅದಕ್ಕೆ ಈ ಮುಂದಿನ ಕಾರಣಗಳನ್ನು ನೀಡಬಹುದು.

ವಿರೂಪಾಕ್ಷ ದೇವಾಲಯದ ನಿರ್ಮಾಣದ ಕಾಲ ನಿಖರವಾಗಿ ತಿಳಿದುಬಂದಿಲ್ಲ. ಇದುವರೆಗೆ ದೊರೆತಿರುವ ಶಾಸನಗಳಲ್ಲಿ ವಿರೂಪಾಕ್ಷ ದೇವರನ್ನು ಉಲ್ಲೇಖಿಸುವ ಮೊದಲನೆ ಶಾಸನವೆಂದರೆ ಕುಷ್ಟಗಿ ತಾಲೂಕಿನ ಪುರ ಗ್ರಾಮದ ೧೧೧೮ರ ಶಾಸನ.[೯] ಈ ಶಾಸನದಲ್ಲಿ ಚಾಲುಕ್ಯರ ಅರಸ ಜಗದೇಕಮಲ್ಲನ ದಂಡನಾಯಕ ಅಗ್ರಹಾರ ಬೈಳೆನೆಗೆಯೂರಿನ ಮುಖ್ಯಸ್ಥ ಕೊಣ್ಣಯವಾರಿ ಅಯ್ಯಣಯ್ಯನಿಗೆ ೫ ಮತ್ತರು ಗದ್ದೆಯನ್ನು ದಾನವಾಗಿ ನೀಡಿದ ಉಲ್ಲೇಖವಿದೆ. ಈ ಶಾಸನದ ವಿವರಣೆಯಿಂದ ಕ್ರಿ.ಶ.೧೧೧೮ರ ಕಾಲಕ್ಕಾಗಲೇ ವಿರೂಪಾಕ್ಷ ದೇವರು ದಾನವನ್ನು ಪಡೆದಿದ್ದು, ಈ ಮೊದಲೇ ಅಸ್ತಿತ್ವದಲ್ಲಿತ್ತೆಂಬುದನ್ನು ಊಹಿಸಬಹುದು. ಈ ವಿರೂಪಾಕ್ಷ ದೇವಾಲಯವು ಮೊದಲು ಸರಳ ದೇವಾಲಯವಾಗಿದ್ದಿರಬೇಕು. ಬಹುಶಃ ತೆರೆದ ಮಂಟಪವನ್ನು ಹೊಂದಿದ್ದಿರಬೇಕು. ಶಿಲ್ಪಶಾಸ್ತ್ರಗ್ರಂಥಗಳು ಚತುರ್ಮುಖಲಿಂಗ ಸ್ಥಾಪನೆಯಾಗಿದ್ದಲ್ಲಿ ಅದಕ್ಕೆ ಸರ್ವತೋಭದ್ರ ಅಂದರೆ ನಾಲ್ಕು ದಿಕ್ಕುಗಳಲ್ಲಿ ಪ್ರವೇಶದ್ವಾರಗಳನ್ನು ಹೊಂದಿರಬೇಕು ಎಂಬ ನಿಯಮಕ್ಕೆ ಅನುಸಾರವಾಗಿ ಮೊದಲು ವಿರೂಪಾಕ್ಷ ದೇವಾಲಯವು ಸರಳವಾದ ಸರ್ವತೊಭದ್ರ ಮಂದಿರವಾಗಿದ್ದಿರಬೇಕು. ಹಾಗೆಯೇ ಚಂದ್ರಶೇಖರ ಡಾವಣಗೇರಿಯವರು ಉಲ್ಲೇಖಿಸಿದ ಸವ್ಯ ವೃಷಭ, ಮಹಾಕಾಯ ವೃಷಭ, ಮಹಾಶಯ ವೃಷಭ, ಮಹಾಶೃಂಗ ವೃಷಭ ಎಂಬ ನಾಲ್ಕು ನಂದಿಗಳು ನಾಲ್ಕು ದಿಕ್ಕಿನ ದ್ವಾರಗಳ ಎದುರು ಸ್ಥಾಪನೆಯಾಗಿದ್ದಿರಬೇಕು. ಕಾಲಕ್ರಮದಲ್ಲಿ ದೇವಾಲಯ ಬೆಳವಣಿಗೆಗೊಂಡು ಈ ಮುಖಲಿಂಗವು ತೃಟಿತಗೊಂಡು ನಂತರ ಅದನ್ನು ಹೊರಗೆ ಇರಿಸಲಾಗಿದೆ. ಹಾಗೆಯೇ ನಂತರದಲ್ಲಿ ದೇವಾಲಯ ಜೀರ್ಣೋದ್ಧಾರಗೊಂಡು ಅನೇಕ ಹೊಸ ಸೇರ್ಪಡೆಯೊಂದಿಗೆ ಪ್ರಸ್ತುತ ದೇವಾಲಯ ಇರುವಂತೆ ಆಗಿರಬಹುದು. ಈ ದೇವಾಲಯದ ನಂದಿ ಮಂಟಪದಲ್ಲಿ ಮೂರು ನಂದಿಗಳನ್ನು ಇರಿಸಿದ್ದು, ಇನ್ನೊಂದನ್ನು ಕೆಳಗೆ ಇರಿಸಲಾಗಿದೆ. ಒಟ್ಟಾರೆ ಈ ಎಲ್ಲ ಅಂಶಗಳು ಒಂದಕ್ಕೊಂದು ಸಂಬಂಧಿತವಾಗಿದ್ದು, ಚತುರ್ಮುಖ ಲಿಂಗವೇ ವಿರೂಪಾಕ್ಷ ದೇವಾಲಯದ ಮೂಲಲಿಂಗವಾಗಿ ಪೂಜೆಗೊಳ್ಳಲ್ಪಟಿದ್ದಿರ ಬೇಕೆಂಬ ಅಂಶವನ್ನು ಬಲಪಡಿಸುತ್ತವೆ. ಈ ಊಹೆಗಳೇನೇ ಇದ್ದರೂ ಒಟ್ಟಾರೆ ಹಂಪಿಯಲ್ಲಿ ದೊರೆತ ಈ ಏಕೈಕ ಮುಖಲಿಂಗವು ಒಂದು ಮಹತ್ವದ ಶಿವಲಿಂಗವಾಗಿದೆಯೆಂದು ಹೇಳಬಹುದು.



ಚತುರ್ಮುಖ ಲಿಂಗ
ವಿರೂಪಾಕ್ಷ ದೇವಾಲಯ,
ಹಂಪಿ

**ಪಂಚಲಿಂಗಗಳು**

ಹಂಪಿ ಪರಿಸರದಲ್ಲಿ ವಿವಿಧ ಆಕಾರದ ಹಲವು ಪಂಚಲಿಂಗಗಳು ದೊರೆತಿವೆ. ಇಂತಹ ಪಂಚಲಿಂಗಗಳ ಕುರಿತು ವಾಸುದೇವನ್ ಸಿ.ಎಸ್.ರವರು ತಮ್ಮ ಎರಡು ಲೇಖನಗಳಲ್ಲಿ[೧೦] ಮೇಲೆ ಹೇಳಿರುವ ವಿವರಣೆಯನ್ನೇ ಈ ಪಂಚಲಿಂಗಗಳಿಗೂ ನೀಡಿರುವರು. ಇವರು ಹೇಳುವ ಇನ್ನೊಂದು ವಿವರಣೆಯೆಂದರೆ ವಿಷ್ಣುಧರ್ಮೋತ್ತರವು ಪಂಚಲಿಂಗಗಳನ್ನು ಕುರಿತಂತೆ ವಿವರಿಸುತ್ತದೆ. ಇದರ ಪ್ರಕಾರ ಈಗಾಗಲೇ ಮೇಲೆ ವಿವರಿಸಿದ ಪಂಚಮುಖಗಳು ಶಿವನಿಗಿರುತ್ತವೆ. ಇವು ನಾಲ್ಕು ದಿಕ್ಕುಗಳನ್ನು ನೋಡುತ್ತವೆ. ಮತ್ತು ಸಂಪ್ರದಾಯದಂತೆ ಪ್ರಥಮ ಮುಖವು (ಈಶಾನ) ಉತ್ತರಕ್ಕೆ ಅದನ್ನು ಶಿಲ್ಪದಲ್ಲಿ ಕಂಡರಿಸುವುದಿಲ್ಲ. ಈ ಮುಖಗಳು ವಿಶ್ವದ ಪ್ರತಿರೂಪಗಳೆಂದೂ, ಸರ್ವಾಂತರ್ಯಾಮಿ ಮತ್ತು ಅಂತರ್ಗಾಮಿಯಾಗಿ ಪಂಚಭೂತಗಳನ್ನು ಪ್ರತಿನಿಧಿಸುತ್ತವೆ ಎಂದು ಪರಿಗಣಿಸಲಾಗಿದೆ. ಲಿಂಗದ ಸ್ವರೂಪವು ರೂಪುಗೊಂಡ ಬಗೆಗೆ ವಿವಿಧ ವ್ಯಾಖ್ಯಾನಗಳಿವೆ. ಅವುಗಳಲ್ಲಿ ಲಿಂಗವು ಮಂತ್ರಗಳಿಂದ ಕೂಡಿದೆ ಎನ್ನುವುದು ಒಂದು. ಐದು ಮುಖಗಳು ಐದು ಮಂತ್ರಗಳನ್ನು ಪ್ರತಿಪಾದಿಸುತ್ತವೆ ಎಂದು ಪ್ರತಿಭಾವಿಸಲಾಗಿದೆ. ತೈತ್ತರೀಯ ಅರಣ್ಯಕವು ಇದನ್ನು ಉಲ್ಲೇಖಿಸುತ್ತದೆ. ಮಂತ್ರಗಳು ಲಯಬದ್ಧವಾಗಿರುವ ಸೂತ್ರಗಳಾಗಿದ್ದು, ಅತಿಮಾನುಷ ಶಕ್ತಿಯ ಇರುವಿಕೆಯನ್ನು ತೋರುತ್ತದೆ. ಲಯಬದ್ಧ ಉಚ್ಛಾರಣೆಯು ಅದರ (ದೇವರ) ದೇಹವಾಗಿದ್ದು, ಶಿವನು ಅಂದರೆ ಪರಮಾತ್ಮನು ಅದರ ಆತ್ಮವಾಗುತ್ತಾನೆ. ಮಂತ್ರವು (ವಿದ್ಯೆ) ದೇಹವಾಗುತ್ತದೆ. ಇದು ಶಿವಲಿಂಗರೂಪಿಯಾಗಿ ಕಾಣಿಸಿಕೊಳ್ಳುತ್ತದೆ. ಆದ್ದರಿಂದ ಲಿಂಗವು ಮಂತ್ರಗಳಿಂದ ಕೂಡಿದ್ದು, ಶಿವನ ದೇಹವನ್ನು ಪ್ರತಿನಿಧಿಸುತ್ತವೆ. ಹಾಗೂ ಐದನೆಯ ಮುಖ ಅಥವಾ ಮಂತ್ರ ಈಶಾನವು ಇವೆಲ್ಲದರ ಕೈಗೆ ನಿಲುಕದಷ್ಟು ದೂರದಲ್ಲಿ ಜ್ಯೋತಿಯಾಗಿ ಬೆಳಗುತ್ತಿರುತ್ತದೆ. ಈ ಜ್ಯೋತಿಯಿಂದ (ದಿವ್ಯಲಿಂಗ) ಲಯಬದ್ಧ ಕಂಪನಗಳು ಹೊರಟು ಮಂತ್ರಗಳಾಗಿ ಮಾರ್ಪಡುತ್ತದೆ ಎಂದು ನಂಬಲಾಗಿದೆ. ದಿವ್ಯಲಿಂಗವು ತತ್ಪುರುಷನಾಗಿದ್ದು, ಕೇಂದ್ರದ ಮೂಲಸ್ತಂಭವಾಗಿ ಜ್ಯೋತಿಯನ್ನು ನೀಡುತ್ತದೆ. ವಾಮದೇವ ಲಿಂಗವು ಸ್ಥಂಭದ ಕೆಳಭಾಗವನ್ನು ಪ್ರತಿನಿಧಿಸುತ್ತದೆ. ಇದನ್ನು ಅಲ್ಲಿ ಪ್ರತಿಷ್ಠಾಪಿಸಿ ಪೂಜಿಸಲಾಗುತ್ತದೆ. ಮೂಲಸ್ತಂಭವೇ ಎಲ್ಲಕ್ಕೂ ಆಧಾರವಾಗಿದ್ದು, ಅದರಲ್ಲಿಯೇ ಅಂತ್ಯಗೊಳ್ಳುತ್ತದೆ. ಅರ್ಥಾತ್ ಆದಿ ಮತ್ತು ಅಂತ್ಯವು ಮೂಲಸ್ತಂಭದಲ್ಲಿಯೇ ಇದೆ. ಅದರಿಂದ ಇದನ್ನು ಲಿಂಗ ಎನ್ನಲಾಗುತ್ತದೆ.

ವಿಷ್ಣುಧರ್ಮೋತ್ತರವು ಶಿವನ ಐದು ಮುಖಗಳಿಗೆ ಪರ್ಯಾಯವಾದ ಐದು ಹೆಸರುಗಳನ್ನು ಉಲ್ಲೇಖಿಸುತ್ತದೆ. ಶಿವನ ದೇಹವು ರೂಪಗೊಂಡ ಮಂತ್ರವು ಈಶಾನ ತತ್ಪುರುಷ, ಅಘೋರ, ವಾಮದೇವ ಮತ್ತು ಸದ್ಯೋಜಾತರನ್ನು ಸೂಚಿಸುತ್ತದೆ. ಅವುಗಳ ಪರ್ಯಾಯವಾದ ಎರಡನೆಯ ಹೆಸರುಗಳು ಸದಾಶಿವ, ಮಹಾದೇವ, ಭೈರವ, ಉಮಾ ಮತ್ತು ನಂದಿ. ಇದರಂತೆ ಮಧ್ಯಭಾಗದಲ್ಲಿರುವ

ಮುಖವು ತತ್ಪುರುಷ ಮಹಾದೇವ, ಅಘೋರವು ಭೈರವನನ್ನು, ವಾಮದೇವ ಅಥವಾ ಉಮಾ ಇನ್ನೊಂದು ಬದಿಯಲ್ಲಿರುತ್ತದೆ. ಉಮಾ ಮುಖವು ಸುಂದರ ವದನದಿಂದ ಕೂಡಿದ್ದು, ಪಾರ್ವತಿ ದೇವಿಯ ಅಥವಾ ಶಿವನ ಶಕ್ತಿ ಹಾಗೂ ಪ್ರಕೃತಿಯನ್ನು ಸೂಚಿಸುತ್ತದೆ. ಈ ಹೆಸರುಗಳು ಶಿವನ ಪಾರಮ್ಯವನ್ನು ತೋರುವುದರೊಂದಿಗೆ ಅವನೇ ಸರ್ವಶಕ್ತ ಮತ್ತು ಮಹೇಶ ಎಂದು ಪ್ರತಿಪಾದಿಸುತ್ತವೆ. ಈ ಹಿನ್ನೆಲೆಯಲ್ಲಿ ಹಂಪಿ ಪರಿಸರದಲ್ಲಿ ದೊರಕಿರುವ ಪಂಚಲಿಂಗಗಳನ್ನು ಗಮನಿಸಲಾಗಿದೆ ಎಂದು ಹೇಳಿ ಲೇಖಕರು ಈ ಮುಂದಿನ ವಿವರಣೆಯನ್ನು ನೀಡಿರುವರು.

ಹಂಪಿ ಪರಿಸರದಲ್ಲಿ ಇಲ್ಲಿಯವರೆಗೆ ಐದು ಭಿನ್ನ ಶೈಲಿಯ ಪಂಚಲಿಂಗಗಳು ದೊರಕಿವೆ. ಕಮಲಾಪುರದ ಊರಮ್ಮನ ಗುಡಿಯ ಪಕ್ಕದಲ್ಲಿರುವ ಬೇವಿನ ಮರದ ಕೆಳಗೆ ಒಂದು ಪಂಚಲಿಂಗವನ್ನು ಪ್ರತಿಷ್ಠಾಪಿಸಿ ಪೂಜಿಸಲಾಗುತ್ತದೆ. ಈ ಪಂಚಲಿಂಗವು ಕಣಶಿಲೆಯಿಂದ ಮಾಡಲಾಗಿದ್ದು, ಚತುರಸ್ರಾಕಾರದ ಪಾಣಿಪೀಠದ ಮೇಲೆ ಐದು ಲಂಬಾಕಾರದ ಲಿಂಗಗಳನ್ನು ಕಂಡರಿಸಲಾಗಿದೆ. ಇದಕ್ಕೆ ಪ್ರಣಾಳವಿದೆ. ಐದು ಲಿಂಗಾಕಾರಗಳು ಒಂದಕ್ಕೊಂದು ಅಂಟಿಕೊಂಡಂತೆ ಇದ್ದು, ಮಧ್ಯದ ಲಿಂಗಾಕೃತಿಯು ಉಳಿದ ನಾಲ್ಕು ಲಿಂಗಾಕೃತಿಗಳಿಗಿಂತ ಎತ್ತರವಾಗಿದೆ. ಲಿಂಗವನ್ನು ಸಿಮೆಂಟ್ ನೆಲದಲ್ಲಿ ಹುದುಗಿಸಲಾಗಿದೆ. ಇನ್ನೊಂದು ಭಿನ್ನ ಶೈಲಿಯ ಪಂಚಲಿಂಗವು ಕಮಲಾಪುರದ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ವಸ್ತುಸಂಗ್ರಹಾಲಯದ ಆವರಣದಲ್ಲಿದೆ. ಇದು ವೃತ್ತಾಕಾರದ ಪಾಣಿಪೀಠವನ್ನು ಹೊಂದಿದ್ದು, ಜಲಹರಿ ಅಥವಾ ಪ್ರಣಾಳವನ್ನು ಹೊಂದಿದ್ದು, ಸಾಮಾನ್ಯವಾಗಿ ಕಂಡುಬರುವ ಲಿಂಗದ ವಿಷ್ಣುಭಾಗದಂತೆ (ಯೋನಿಭಾಗ) ಇದೆ. ರುದ್ರಭಾಗದ ಎಂದರೆ ವಿಷ್ಣುಭಾಗದ ಮೇಲ್ಮೈಯಲ್ಲಿ ಐದು ಕಿರುಲಿಂಗಗಳನ್ನು ಬಿಡಿಬಿಡಿಯಾಗಿ ಕೆತ್ತಲಾಗಿದೆ. ಇವುಗಳೂ ಒಂದಕ್ಕೊಂದು ಅಂಟಿಕೊಂಡಿಲ್ಲ. ಎಲ್ಲಾ ಲಿಂಗಗಳು ಒಂದೇ ಅಳತೆ ಮತ್ತು ಆಕಾರದಲ್ಲಿವೆ. ಲಿಂಗದ ವಿಷ್ಣುಭಾಗದಲ್ಲಿ ಆಂಜನೇಯನ ಉಬ್ಬುಶಿಲ್ಪವನ್ನು ಕೆತ್ತಲಾಗಿದೆ. ಲಿಂಗದ ಬ್ರಹ್ಮಭಾಗ ಅಥವಾ ಅಧಿಷ್ಠಾನ ಭಾಗವು ಇಲ್ಲ. ಇದನ್ನು ಕಣಶಿಲೆಯಲ್ಲಿ ಮಾಡಲಾಗಿದೆ. ಇದೇ ವಸ್ತು ಸಂಗ್ರಹಾಲಯದಲ್ಲಿ ನಾಲ್ಕು ಪಂಚಲಿಂಗಗಳಿವೆ. ಇವುಗಳು ಮೇಲೆ ವಿವರಿಸಿರುವ ಎರಡು ಶೈಲಿಯ ಪಂಚಲಿಂಗಗಳಿಗಿಂತ ಭಿನ್ನ ಶೈಲಿಯಲ್ಲಿದೆ. ಇವುಗಳು ಪಿರಮಿಡ್ ಆಕಾರದಲ್ಲಿದ್ದು, ಕೆಳಭಾಗವು ಅಗಲವಾಗಿ ಚೌಕಾಕಾರವಾಗಿರುತ್ತದೆ. ಕೆಳಗಿನಿಂದ ಮೇಲೆ ಬಂದಂತೆ ಚೌಕಾಕಾರವು ಕಿರಿದಾಗಿ ಅದರ ಮೇಲಿನ ಸಮತಟ್ಟಾದ ಭಾಗದಲ್ಲಿ ಐದು ಲಿಂಗಗಳನ್ನು ಒಂದಕ್ಕೊಂದು ಅಂಟಿಕೊಂಡಂತೆ ಕೆತ್ತಲಾಗಿದೆ. ಮಧ್ಯದ ಭಾಗದಲ್ಲಿರುವ ಲಿಂಗಾಕೃತಿಯು ನಾಲ್ಕು ಲಿಂಗಗಳ ಮೇಲ್ಭಾಗದಲ್ಲಿ ಹಾಗೂ ಎತ್ತರದಲ್ಲಿರುವಂತೆ ರೂಪಿಸಲಾಗಿದೆ. ಇದಕ್ಕೆ ಪಾಣಿಪೀಠ ಮತ್ತು ಪ್ರಣಾಳ ಭಾಗಗಳಿಲ್ಲ. ಆದರೆ ಕೆಳಗಿನಿಂದ ಮೇಲೆ ಲಿಂಗದವರೆಗೆ ಇರುವ ಕಲ್ಲಿನ ಚೌಕಾಕಾರ ಭಾಗದಲ್ಲಿ ಮೆಟ್ಟಿಲಿನಂತೆ ತೋರಿಸಲಾಗಿದೆ. ಅದರ ನಡುವೆ ಪಟ್ಟಿಯಂತಹ ಅಲಂಕರಣೆಯು ಕಂಡುಬರುತ್ತದೆ. ಇದೇ ಶೈಲಿಯ ಪಂಚಲಿಂಗವು ಕಮಲಾಪುರದ ಕಮಲ್‌ಮಹಲ್ ಹತ್ತಿರದ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಉಪನಿರ್ದೇಶಕರ ಕಚೇರಿ ಆವರಣದಲ್ಲಿ ಪ್ರದರ್ಶಿಸಲಾಗಿದೆ.

ಹಾಗೂ ಹೇಮಕೂಟ ಬೆಟ್ಟದ ಮೇಲಿರುವ ಮೂಲ ವಿರೂಪಾಕ್ಷ ದೇವಾಲಯದ ಎದುರಿನಲ್ಲಿ ಹುಟ್ಟು ಬಂಡೆಯ ಮೇಲೆ ಒಂದೇ ಸಾಲಿನಲ್ಲಿರುವಂತೆ ಐದು ಲಿಂಗಗಳನ್ನು ಆಯಾತಾಕಾರದ ಪಾಣಿಪೀಠದಲ್ಲಿರುವಂತೆ ಕೆತ್ತಲಾಗಿದೆ. ಇದು ಇನ್ನೊಂದು ಬಗೆಯ ಪಂಚಲಿಂಗ, ಕಮಲಪುರದ ಪೊಲೀಸ್ ಠಾಣೆಯ ಮುಂದಿರುವ ಆಂಜನೇಯನ ಗುಡಿಯ ಕಳಸ ಭಾಗಕ್ಕೆ ಪಂಚಲಿಂಗವನ್ನು ಇರಿಸಲಾಗಿದೆ. ಇದು ಕಿರುಗಾತ್ರದಲ್ಲಿದ್ದು, ಪಿರಮಿಡ್ಡು ಆಕಾರದಲ್ಲಿದೆ. ನಾಲ್ಕು ಲಿಂಗಗಳು ಕೆಳಭಾಗದಲ್ಲಿದ್ದರೆ ಐದನೆಯ ಲಿಂಗವು ಅದರ ಮೇಲ್ಭಾಗದಲ್ಲಿದೆ ಎಲ್ಲಿಂದಲೋ ತಂದು ಇಲ್ಲಿ ಇರಿಸಿರುವುದು ಸ್ಪಷ್ಟವಾಗಿ ತೋರುತ್ತದೆ ಎಂದು ಲೇಖಕರು ಉಲ್ಲೇಖಿಸಿರುವರು. ಆದರೆ ಪ್ರಸ್ತುತದಲ್ಲಿ ನಾನು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಈ ದೇವಾಲಯವನ್ನು ರಸ್ತೆ ಅಗಲೀಕರಣ ಮಾಡುವ ವೇಳೆಯಲ್ಲಿ ನೆಲಸಮಗೊಳಿಸಲಾಗಿದ್ದು, ಪಂಚಲಿಂಗವನ್ನು ಬೇರೆಡೆಗೆ ಇಡಲಾಗಿದೆ ಎಂಬ ಅಂಶವು ತಿಳಿದುಬಂದಿತು. ಹೀಗೆ ಲೇಖಕರು ತಮ್ಮ ಎರಡೂ ಲೇಖನಗಳಲ್ಲಿ ಒಟ್ಟು ಒಂಬತ್ತು ಪಂಚಲಿಂಗಗಳನ್ನು ವಿವರಿಸಿರುವರು. ಆದರೆ ನನ್ನ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಈ ಮೇಲಿನ ಪಂಚಲಿಂಗಗಳು ಸೇರಿದಂತೆ ಇನ್ನೂ ಐದು ಪಂಚಲಿಂಗಗಳು ಕಂಡುಬಂದವು. ಹಜಾರರಾಮ ದೇವಾಲಯದ ಆಗ್ನೇಯ ದಿಕ್ಕಿಗಿರುವ ಮಂಟಪದಲ್ಲಿ ಒಂದು ಪೀಠದ ಮೇಲೆ ಪಂಚಲಿಂಗವನ್ನಿಟ್ಟಿರುವರು. ಹಾಗೂ ಇನ್ನೊಂದು ಪಂಚಲಿಂಗವು ಮಹಾನವಮಿ ದಿಬ್ಬದಿಂದ ಹಜಾರರಾಮ ದೇವಾಲಯಕ್ಕೆ ಹೋಗುವ ದಾರಿಯ(ರಾಜಪ್ರಾಂಗಣ) ಬಲಭಾಗದಲ್ಲಿ ತೆರೆದ ಆವಣರದಲ್ಲಿದೆ. ಇದನ್ನು ಸಂರಕ್ಷಿಸಿಲ್ಲ. ಹಾಗೆಯೇ ಆನೆಗೊಂದಿಯ ಮುಕ್ತಿನರಸಿಂಹ ದೇವಾಲಯದ ಹತ್ತಿರದಲ್ಲಿರುವ ರುದ್ರಾಕ್ಷಿ ಮಂಟಪಕ್ಕೆ ಹೋಗಲು ಮೆಟ್ಟಿಲುಗಳನ್ನು ಹತ್ತಿದಾಗ ಅಲ್ಲಿಯೇ ಮೆಟ್ಟಿಲುಗಳನ್ನು ಅಂಟಿಕೊಂಡಂತೆ ಇರುವ ಗೋಡೆಗೆ ಪಂಚಲಿಂಗವನ್ನು ಅಳವಡಿಸಲಾಗಿದೆ. ಇದನ್ನು ಎಲ್ಲಿಂದಲೋ ತಂದು ಸೇರಿಸಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಮೂರು ಲಿಂಗಗಳು ಮೇಲಿನ ಲೇಖಕರು ಉಲ್ಲೇಖಿಸಿದ ಕಮಲಾಪುರದ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ವಸ್ತುಸಂಗ್ರಹಾಲಯದಲ್ಲಿರುವ ನಾಲ್ಕು ಪಂಚಲಿಂಗಗಳ ಕುರಿತು ನೀಡಿದ ವಿವರಣೆ ಅಂದರೆ ಪಿರಾಮಿಡ್ ಆಕಾರದಲ್ಲಿರುವ ಮೆಟ್ಟಿಲುಗಳಂತೆ ಅಲಂಕರಣೆಯನ್ನು ಹೊಂದಿರುವ ಲಕ್ಷಣಗಳನ್ನೇ ಒಳಗೊಂಡಿದೆ. ಆದರೂ ಸ್ವಲ್ಪ ಭಿನ್ನತೆಯನ್ನು ಗುರುತಿಸಬಹುದು. ಹಜಾರರಾಮ ದೇವಾಲಯದ ಮಂಟಪದಲ್ಲಿರುವ ಪಂಚಲಿಂಗವು ಮೆಟ್ಟಿಲಿನಂತಿರುವ ಅಲಂಕರಣೆಯು ಎತ್ತರವಾಗಿದ್ದರೆ, ರಾಜಪ್ರಾಂಗಣದಲ್ಲಿ ತೆರೆದ ಆವರಣದಲ್ಲಿರುವ ಪಂಚಲಿಂಗವು ಕಡಿಮೆ ಎತ್ತರವನ್ನು ಹೊಂದಿದೆ. ಹಾಗೂ ಆನೆಗೊಂದಿಯ ರುದ್ರಾಕ್ಷಿ ಮಂಟಪದ ಬಳಿ ದೊರೆತಿರುವ ಪಂಚಲಿಂಗದ ಮೆಟ್ಟಿಲಿನಾಕೃತಿಯ ಅಲಂಕರಣೆಯ ಭಾಗವು ನಾಶವಾಗಿದ್ದು, ಕೇವಲ ಮೇಲಿನ ಪಂಚಲಿಂಗಗಳು ಇರುವ ಭಾಗವನ್ನು ಗೋಡೆಗೆ ಅಳವಡಿಸಲಾಗಿದೆ. ಆದರೆ ಈ ಮೂರು ಪಂಚಲಿಂಗಗಳ ಆಕಾರ ಒಂದೇ ತೆರನಾಗಿದ್ದು, ಗಾತ್ರದಲ್ಲೂ ಒಂದೇ ಎಂದೆನಿಸುತ್ತದೆ.

ಆನೆಗೊಂದಿಯ ವೀರಭದ್ರ ದೇವಾಲಯದ ಮುಂಭಾಗದಲ್ಲಿ ಇತರ ಕೆಲವು ಬಿಡಿಶಿಲ್ಪಗಳೊಂದಿಗೆ ಪಂಚಲಿಂಗವೊಂದನ್ನು ಇರಿಸಿರುವರು. ಈ ಪಂಚಲಿಂಗವೂ ಸಹ ಮೇಲೆ ವಿವರಿಸಿದಂತೆ ಕೆಳಭಾಗದಲ್ಲಿ

ಮೆಟ್ಟಿಲಿನಂತಿರುವ ಅಲಂಕರಣೆಯನ್ನು ಹೊಂದಿದ್ದು ಮೇಲ್ಭಾಗದಲ್ಲಿ ಪಂಚಲಿಂಗಗಳನ್ನು ಕೆತ್ತಿರುವರು. ಆದರೆ ಇವುಗಳು ಒಂದಕ್ಕೊಂದು ಅಂಟಿಕೊಂಡಿರದೆ ನಾಲ್ಕೂ ಮೂಲೆಗಳಲ್ಲೂ ಒಂದೊಂದು ಲಿಂಗವನ್ನು ಕೆತ್ತಿದ್ದು ಮಧ್ಯದಲ್ಲಿ ಒಂದು ಲಿಂಗವನ್ನು ಕೆತ್ತಲಾಗಿದೆ. ಅಂದರೆ ಮೇಲಿನ ಲೇಖಕರು ವಿವರಿಸಿದ ಕಮಲಾಪುರದ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ವಸ್ತುಸಂಗ್ರಹಾಲಯದ ಆವರಣದಲ್ಲಿರುವ ವೃತ್ತಾಕಾರದ ಪಾಣಿಪೀಠವನ್ನು ಹೊಂದಿರುವ ಪಂಚಲಿಂಗದ ಲಕ್ಷಣಗಳನ್ನು ಈ ಪಂಚಲಿಂಗದಲ್ಲಿಯೂ ಕಾಣಬಹುದು. ಆದರೆ ಇದು ವೃತ್ತಾಕಾರದಲ್ಲಿಲ್ಲ. ಚೌಕಾಕಾರದಲ್ಲಿದ್ದು, ಜಲಹರಿಯನ್ನು ಹೊಂದಿರುವುದಿಲ್ಲ. ಆದರೆ ಸ್ಥಳೀಯರೇ ಇದರ ಎಡಭಾಗವನ್ನು ಒಡೆದು ನೀರು ಹರಿದು ಹೋಗುವಂತೆ ಮಾಡಿದ್ದಾರೆ. ಇದರಲ್ಲಿರುವ ಲಿಂಗಗಳು ಒಂದೇ ಆಕಾರ ಹಾಗೂ ಗಾತ್ರದಲ್ಲಿವೆ. ಪ್ರಸ್ತುತ ಪಂಚಲಿಂಗವು ದೇವಾಲಯದ ಹೊರಭಾಗದಲ್ಲಿಯೇ ಪೂಜೆಗೊಳ್ಳುತ್ತಿದೆ. ಹಾಗೆಯೇ ಮಾಲ್ಯವಂತ ರಘುನಾಥ ದೇವಾಲಯದ ಮುಂದಿರುವ ಮಂಟಪದ ಹಾಸುನೆಲದಲ್ಲಿ ಸಾಲಾಗಿ ಐದು ಲಿಂಗಗಳನ್ನು ಕಾಣಬಹುದು. ಆದರೆ ಇವುಗಳು ಬಹುಮಟ್ಟಿಗೆ ಮಣ್ಣಿನಿಂದ ಮುಚ್ಚಿ ಹೋಗಿವೆ. ಬಹುಶಃ ಇದೂ ಸಹ ಹೇಮಕೂಟದಲ್ಲಿರುವ ಪಂಚಲಿಂಗಕ್ಕೆ ಇರುವ ಆಯಾತಾಕಾರದ ಪೀಠವು ಇದ್ದಿರಬಹುದು. ಆದರೆ ಪ್ರಸ್ತುತದಲ್ಲಿ ಈ ಪೀಠವು ಗೋಚರಿಸದೇ ಕೇವಲ ಲಿಂಗಗಳಷ್ಟೇ ಕಾಣುತ್ತವೆ. ಇವುಗಳು ಆಕಾರದಲ್ಲೂ ಒಂದೇ ಇದ್ದು, ಗಾತ್ರದಲ್ಲೂ ಒಂದೇ ಇವೆ. ಈ ಎಲ್ಲ ಪಂಚಲಿಂಗಗಳಿಗಿಂತ ಭಿನ್ನವಾಗಿರುವ ಪಂಚಲಿಂಗವೊಂದು ಚಕ್ರತೀರ್ಥದ ಬಳಿಯಿರುವ ಕೋಟಿಲಿಂಗದಲ್ಲಿ ಹುಟ್ಟು ಬಂಡೆಯಲ್ಲಿದೆ. ಇದು ಚೌಕಾಕಾರದ ಪಾಣಿಪೀಠವನ್ನು ಹೊಂದಿದ್ದು, ನಾಲ್ಕು ಮೂಲೆಗಳಲ್ಲೂ ಚಿಕ್ಕಗಾತ್ರದ ಲಿಂಗಗಳನ್ನು ಕೆತ್ತಿದ್ದು, ಮಧ್ಯದಲ್ಲಿ ದೊಡ್ಡಗಾತ್ರದ ಲಿಂಗವನ್ನು ಕೂರಿಸುವಷ್ಟು ರಂಧ್ರವನ್ನು(ತಗ್ಗನ್ನು) ಕಂಡರಿಸಲಾಗಿದೆ. ಆದರೆ ಪ್ರಸ್ತುತದಲ್ಲಿ ಲಿಂಗವಿಲ್ಲ. ಕೇವಲ ವೃತ್ತಾಕಾರದ ಅಂದರೆ ಒಂದು ದೊಡ್ಡಗಾತ್ರದ ಲಿಂಗವನ್ನು ಕೂರಿಸುವಷ್ಟು ರಂಧ್ರವು ಕಂಡುಬರುತ್ತದೆ. ಬಹುಶಃ ಮೊದಲು ಇಲ್ಲಿ ಲಿಂಗವನ್ನು ಸೇರಿಸಿದ್ದು ನಂತರದಲ್ಲಿ ಅದನ್ನು ಸ್ಥಾನಪಲ್ಲಟ ಮಾಡಿರಬಹುದು ಎಂದು ಊಹಿಸಬಹುದು. ಇದರ ಮುಂದೆ ಕುಳಿತಿರುವ ನಂದಿಯೊಂದನ್ನು ಕೆತ್ತಲಾಗಿದೆ. ಈ ಲಕ್ಷಣಗಳಿಂದ ಈ ಪಂಚಲಿಂಗವು ಉಳಿದೆಲ್ಲ ಪಂಚಲಿಂಗಗಳಿಗಿಂತ ವಿಭಿನ್ನ ಮತ್ತು ವಿಶೇಷವಾದದ್ದೆನ್ನಬಹುದು.

ವಾಸುದೇವನ್ ಸಿ.ಎಸ್.ರವರು ತಮ್ಮ ಲೇಖನದಲ್ಲಿ ಅಭಿಪ್ರಾಯಪಡುವಂತೆ ಹಂಪಿ ಪರಿಸರದಲ್ಲಿ ಪಂಚಲಿಂಗಗಳಿಗಾಗಿಯೇ ಯಾವುದೇ ದೇವಾಲಯವು ಸ್ಥಾಪನೆಗೊಂಡಿಲ್ಲ. ಹಾಗೂ ಶಾಸನಗಳು ಇವುಗಳ ಕುರಿತು ಮೌನವಾಗಿಯೇ ಇವೆ ಎಂದೇ ಹೇಳಬಹುದು. ಒಟ್ಟಾರೆ ಇಷ್ಟು ಪ್ರಮಾಣದಲ್ಲಿ ಹಂಪಿ ಪರಿಸರದಲ್ಲಿ ಪಂಚಲಿಂಗಗಳು ದೊರೆತಿರುವುದರಿಂದ ವಿಜಯನಗರ ಕಾಲದಲ್ಲಿ ಪಂಚಲಿಂಗ ಗಳನ್ನು ಪೂಜಿಸುವ ಶೈವ ಧರ್ಮದ ಒಂದು ಶಾಖೆ ಇದ್ದಿರಬಹುದು. ಇವರು ಪಂಚಲಿಂಗಗಳ ಆರಾಧಕರಾಗಿರಬಹುದು. ಕ್ರಮೇಣ ಈ ಪಂಥದವರು ನೇಪಥ್ಯಕ್ಕೆ ಸರಿದಿರಬಹುದು ಎಂಬ ಲೇಖಕರ ಹೇಳಿಕೆಯು ಸಮಂಜಸವೆನ್ನಿಸುತ್ತದೆ.



ಪಂಚಲಿಂಗ, ಕೋಟಿಲಿಂಗದ ಬಳಿ,
ಹಂಪಿ



ಪಂಚಲಿಂಗ, ಮಾಲ್ಯವಂತ ರಘುನಾಥ
ದೇವಾಲಯದ ಎದುರು ಮಂಟಪದಲ್ಲಿ,
ಕಮಲಾಪುರ



ಪಂಚಲಿಂಗ, ವೀರಭದ್ರ
ದೇವಾಲಯ, ಆನೆಗೊಂದಿ



ಪಂಚಲಿಂಗ, ಮುಕ್ತಿನರಸಿಂಹ
ದೇವಾಲಯದ ಬಳಿಯಿರುವ
ರುದ್ರಾಕ್ಷಿಮಂಟಪ, ಆನೆಗೊಂದಿ



ಪಂಚಲಿಂಗ, ಮಹಾನವಮಿ ದಿಬ್ಬದ ಎದುರು ಆವರಣ, ಹಂಪಿ

## ಅಷ್ಟೋತ್ತರ ಮತ್ತು ಸಹಸ್ರ ಲಿಂಗಗಳು

ಈ ಎರಡು ಲಿಂಗ ಸಮೂಹಗಳು ಕಂಡುಬರುವುದು ಚಕ್ರತೀರ್ಥದ ಬಳಿ ಇರುವ ಕೋಟಿಲಿಂಗ ಎಂಬಲ್ಲಿ. ಕೋಟಿಲಿಂಗವೆಂದು ಹೆಸರು ಬರಲು ಇಲ್ಲಿ ಬಂಡೆಗಳ ಸಮೂಹವಿದ್ದು ಎಲ್ಲೆಂದರಲ್ಲಿ ಲಿಂಗಗಳನ್ನು ಕಂಡರಿಸಿರುವರು. ಆದ್ದರಿಂದ ಈ ಪ್ರದೇಶವನ್ನು ಕೋಟಲಿಂಗ ಎಂದು ಕರೆಯುವರು. ಶಾಸನಗಳಲ್ಲಿ[೧೧] ಇದನ್ನು ಕೋಟಿಶಂಕರಲಿಂಗ ಎಂದು ಉಲ್ಲೇಖಿಸಲಾಗಿದೆ. ಇಲ್ಲಿ ಕೋಟಿಲಿಂಗಗಳಿರುವುದಕ್ಕೆ ಪಂಪಾಮಹಾತ್ಮೆಯಲ್ಲಿ[೧೨] ಕಥೆಯೊಂದನ್ನು ಹೇಳಲಾಗಿದೆ. ಅದೆಂದರೆ ಒಮ್ಮೆ ಶಿವನು ಎಲ್ಲ ದೇವತೆಗಳೊಂದಿಗೆ ಸಭೆಯಲ್ಲಿದ್ದಾಗ ಶಿವಭಕ್ತನಾದ ದುರ್ವಾಸ ಮುನಿಯು ಬಂದು ಶಿವನನ್ನು ಸ್ತುತಿಸಿ ನಿನ್ನನ್ನು ಶರಣು ಹೋಗುವೆನೆಂದು ಪ್ರಾರ್ಥಿಸುತ್ತಾನೆ. ಆಗ ಶಿವನು ದುರ್ವಾಸನ ಭಕ್ತಿಯನ್ನು ಮೆಚ್ಚಿ ಅವನನ್ನು ಆಲಂಗಿಸಿ ನೀನೆ ನನ್ನ ನಿಜವಾದ ಭಕ್ತನು. ನನ್ನ ಪಾದದಲ್ಲಿ ನಿಷ್ಠೆಯುಳ್ಳ ಭಕ್ತರು ಹಲವರು ಇರುವರು. ಅವರಲ್ಲಿ ಶಿವೆ ಮೊದಲು, ನಂತರ ವಿಷ್ಣು, ಬ್ರಹ್ಮ, ನಂದಿಕೇಶ್ವರ, ಉಪಮನ್ಯು, ಅಗಸ್ತ್ಯ, ಭೃಗು, ನೀನು ಮತ್ತು ಬಾಣಾಸುರ ಹಾಗೂ ರಾವಣಾಸುರರು ಎಂದು ಹೇಳಿ ಅವನನ್ನು ಸನ್ಮಾನಿಸಿದನು. ಇದನ್ನು ಕಂಡು ಪಾರ್ವತಿಯು ಸುವರ್ಣಕಾಂತಿಯುಳ್ಳದ್ದು, ಬಾಡದೆ ಇರುವಂಥಹದ್ದು ಆದ ಪಂಕಜಮಾಲೆಯನ್ನು ದುರ್ವಾಸ ಮಹರ್ಷಿಗೆ ಕೊಟ್ಟು ಆಶೀರ್ವದಿಸಿದಳು. ಹಾಗೂ ಈ ಮಾಲೆಯನ್ನು ಶಿವನು ನನಗೆ ಪ್ರೇಮದಿಂದ ಕೊಟ್ಟಿದ್ದನು, ಅದನ್ನೇ ನಿನಗೆ ಕೊಡುತ್ತಿದ್ದೇನೆ ಸ್ವೀಕರಿಸು ಎಂದು ಹೇಳಿದಳು.

ಭಕ್ತಿ ಮಾಲೆಯನ್ನು ಸ್ವೀಕರಿಸಿದ ದುರ್ವಾಸನು ಅದನ್ನು ಕೊರಳಲ್ಲಿ ಧರಿಸಿ ಸ್ವರ್ಗದ ಕಡೆಗೆ ಸಾಗುತ್ತಿದ್ದಾಗ, ಸರ್ವಸಂಗ ಪರಿತ್ಯಾಗಿಯಾದ ನನಗೆ ಈ ಮಾಲೆಯಿಂದೇನು ಪ್ರಯೋಜನ? ಭೋಗೆಚ್ಛೆಯುಳ್ಳವರಿಗೆ ಕೊಡುವುದೆಂದು ಯೋಚಿಸಿದನು. ಅದೇ ಸಮಯದಲ್ಲಿ ಐರಾವತವನ್ನೇರಿ ರಾಜಬೀದಿಯಲ್ಲಿ ದೇವೇಂದ್ರನು ಶಚೀ ಸಮೇತನಾಗಿ ಬರುತ್ತಿರುವುದನ್ನು ಕಂಡು ತನ್ನ ಶಿರದಲ್ಲಿದ್ದ ಮಾಲೆಯನ್ನು ದೇವೇಂದ್ರನಿಗೆ ನೀಡಿದನು. ದೇವೇಂದ್ರನು ಸಿರಿಮದದಿಂದ ಅಜ್ಞಾನದಿಂದ ಅದನ್ನು ತನ್ನ ಎಡಗೈಯಿಂದ ಸ್ವೀಕರಿಸಿ ಮದ್ದಾನೆಯ ಮಸ್ತಕದ ಮೇಲೆ ಹಾಕಿದನು. ಶಚೀದೇವಿಯು ಶಿವ

ನಿರ್ಮಾಲ್ಯವನ್ನು ನಿಂದಿಸಬೇಡಿ, ನಿಂದಿಸಿದವರು ನರಕ ಲೋಕವನ್ನು ಹೊಂದುತ್ತಾರೆ ಎಂದು ಹೇಳಿದಳು. ಆಗ ಐರಾವತವು ತನ್ನ ಶಿರದಲ್ಲಿದ್ದ ಶಿವ ನಿರ್ಮಾಲ್ಯವನ್ನು ಸೊಂಡಿಲಿನಿಂದ ಎಳೆದು ನೆಲದ ಮೇಲೆ ಹಾಕಿ ತನ್ನ ಪಾದಗಳಿಂದ ತುಳಿದುಬಿಟ್ಟಿತು. ಇದನ್ನು ಕಂಡ ದುರ್ವಾಸನು ಕುಪಿತನಾಗಿ ಎಲವೋ ದೇವೇಂದ್ರ! ಯಾವ ಐಶ್ವರ್ಯ ಮದದಿಂದ ಶಿವ ನಿರ್ಮಾಲ್ಯವನ್ನು ಅವಮಾನಿಸಿದೆಯೋ ನೀನು ಸಾಮ್ರಾಜ್ಯ ಭ್ರಷ್ಟನಾಗು ಎಂದು ಶಪಿಸಿದನು. ಆಗ ದೇವೇಂದ್ರನು ಐರಾವತದಿಂದ ಕೆಳಗಿಳಿದು ನನ್ನ ಅಪರಾಧವನ್ನು ಕ್ಷಮಿಸು ಎಂದು ದುರ್ವಾಸನನ್ನು ಪ್ರಾರ್ಥಿಸಿದನು. ಶಚೀದೇವಿಯು ಹಾಗೂ ದೇವ, ಗಂಧರ್ವ, ಸಿದ್ಧ ಪರಮಹರ್ಷಿಗಳೆಲ್ಲರು ತಮ್ಮ ಪ್ರಭುವನ್ನು ಕ್ಷಮಿಸಬೇಕೆಂದು ಬೇಡಿಕೊಂಡರು. ಆಗ ದುರ್ವಾಸನು ರುದ್ರನ ಅನುಗ್ರಹವಿಲ್ಲದೆ ಇಂದ್ರನು ಪಾಪದಿಂದ ಮುಕ್ತನಾಗುವುದಿಲ್ಲ. ಆದ್ದರಿಂದ ಇವನು ಉಮಾವಲ್ಲಭನಾದ ಶಂಕರನನ್ನು ಶರಣು ಹೋಗಲಿ ಆ ಶಂಭುವಿನಿಂದ ಇವನು ಪುನಃ ಸುಖವನ್ನು ಪಡೆಯುವನು ಎಂದು ಹೇಳಿ ಮುನ್ನಡೆದನು. ಈ ವೃತ್ತಾಂತವನ್ನು ಕೇಳಿ ದೈತ್ಯೇಂದ್ರನಾದ ಬಲಚಕ್ರವರ್ತಿಯು ಅಸುರ ಸೈನ್ಯದೊಂದಿಗೆ ಕೂಡಲೇ ಸ್ವರ್ಗದ ಮೇಲೆ ದಂಡೆತ್ತಿ ದೇವೇಂದ್ರನನ್ನು ಸೋಲಿಸಿ ಸ್ವರ್ಗ ಸಾಮ್ರಾಜ್ಯವನ್ನು ವಶಪಡಿಸಿಕೊಂಡನು. ಬಳಿಕ ದೇವೇಂದ್ರನು ಸುರರೊಡಗೂಡಿ ಘೋರಾರಣ್ಯದಲ್ಲಿ ಅಲೆದನು. ಬಲಿಚಕ್ರವರ್ತಿಗೆ ಹೆದರಿ ಸುರರೆಲ್ಲ ಘೋರವಾದ ಮಂದರ ಪರ್ವತದ ಗುಹೆಯಲ್ಲಿ ವಾಸಿಸಿದರು. ದೇವತೆಗಳ ದುಸ್ಥಿತಿಯನ್ನು ತಿಳಿದು ಬೃಹಸ್ಪತಿಯು ಅವರನ್ನು ನೋಡಲು ಬಂದಾಗ ಇಂದ್ರನು ನಮ್ಮನ್ನು ರಕ್ಷಿಸು ಎಂದು ಕೇಳಲು ಬೃಹಸ್ಪತಿಯು ಇಂದ್ರನಿಗೆ ಉತ್ತಮವಾದ ಶಿವ ನಿರ್ಮಾಲ್ಯವನ್ನು ತಿರಸ್ಕರಿಸಿ ಮುನಿಯ ಶಾಪಕ್ಕೆ ಒಳಗಾಗಿರುವೆ. ಶಂಕರನ ಸೇವೆಯಿಂದ ನೀನು ಮುಕ್ತನಾಗುವೆ ಎಂದು ಹೇಳಿ ಇಂದ್ರನನ್ನು ಶಿವದೀಕ್ಷೆಯಿಂದ ಪರಿಶುದ್ಧನನ್ನಾಗಿ ಮಾಡಿ ಶಿವ ಪಂಚಾಕ್ಷರಿ ಮಹಾಮಂತ್ರವನ್ನು ಉಪದೇಶಿಸಿದನು. ಇಂದ್ರನು ಗುರುವಿನ ಆಜ್ಞೆಯನ್ನು ಪಾಲಿಸುತ್ತ ಪಂಪಾಕ್ಷೇತ್ರದಲ್ಲಿ ನದಿಯ ತಟದಲ್ಲಿರುವ ಕೋಟಿತೀರ್ಥದಲ್ಲಿ ಸ್ನಾನ ಮಾಡಿ ಶಿವಮಂತ್ರವನ್ನು ಜಪಿಸಿದನು. ಶಿವಾಗಮೋಕ್ತ ವಿಧಿಯಂತೆ ಮರಳಿನಿಂದ ಒಂದು ಕೋಟಿ ಲಿಂಗಗಳನ್ನು ಮಾಡಿ ಭಕ್ತಿಯಿಂದ ಪೂಜಿಸುತ್ತಿದ್ದನು. ಪ್ರತಿದಿನವೂ ಶಿವಾನುಗ್ರಹ ಆಸೆಯಿಂದ ಕೋಟಿಲಿಂಗಗಳನ್ನು ಪೂಜಿಸುತ್ತಿದ್ದನು. ಈ ರೀತಿಯಾಗಿ ಇಂದ್ರನು ನೂರು ದಿನಗಳ ಕಾಲ ನೂರು ಲಕ್ಷ ಲಿಂಗಗಳನ್ನು ಪೂಜಿಸಿದನು. ಶಕ್ರನ ಭಕ್ತಿಗೆ ಪಂಪಾಪತಿಯು ಪ್ರಸನ್ನನಾಗಿ ಸುರಾಧೀಶ ನನ್ನಲ್ಲಿ ನಿನ್ನ ಭಕ್ತಿಯು ದೃಢವಾಯಿತು. ಪಾಪದಿಂದ ನೀನು ಮುಕ್ತನಾಗಿರುವೆ. ಸಮುದ್ರ ಮಥನವನ್ನು ಮಾಡಿ ಭಯವಿಲ್ಲದೆ ಅಮೃತವನ್ನು ಪಡೆದು ನನ್ನ ಅನುಗ್ರಹದಿಂದ ಬಲಿಯನ್ನು ಗೆದ್ದು ಪುನಃ ಸ್ವರ್ಗವನ್ನು ಹೊಂದುವೆ ಎಂದು ವರವನ್ನಿತ್ತನು. ಈ ರೀತಿ ಶಿವನಿಂದ ವರವನ್ನು ಪಡೆದು ಬೃಹಸ್ಪತಿಯನ್ನು ಆಹ್ವಾನಿಸಿ ಸುರಾಸುರ ಸಹಾಯದಿಂದ ಬಲವಾಗಿ ಸಮುದ್ರವನ್ನು ಕಡೆದು ಅದರಿಂದ ಅಮೃತ ಮೊದಲಾದ ವಸ್ತುಗಳನ್ನು ಪಡೆದು ಶಿವನ ಅನುಗ್ರಹದಿಂದ ಬಲಿ ಮೊದಲಾದ ಪ್ರಮುಖರನ್ನು ಗೆದ್ದು ಸ್ವರ್ಗಲೋಕ ಪ್ರಭುವಾದನು. ದೇವೇಂದ್ರನು ಈ ತೀರ್ಥದಲ್ಲಿ ಸ್ನಾನಮಾಡಿ ಇದರ ತಟದಲ್ಲಿ ಕೋಟಲಿಂಗಗಳನ್ನು ಪೂಜಿಸಿ ಶಿವಾನುಗ್ರಹವನ್ನು ಪಡೆದು ಸ್ವರ್ಗ ಸಾಮ್ರಾಜ್ಯವನ್ನು ಪಡೆದುದರಿಂದ ಇದು ಕೋಟಿತೀರ್ಥವೆಂದು ಹೆಸರಾಯಿತು.

ಹೀಗೆ ಪಂಪಾಮಹಾತ್ಮೆಯಲ್ಲಿ ಉಲ್ಲೇಖಗೊಂಡ ಕೋಟಿತೀರ್ಥ ಹಾಗೂ ಕೋಟಿಲಿಂಗ ಎಂದು ಕರೆಯಲ್ಪಡುವ ಈ ಪ್ರದೇಶದಲ್ಲಿ ಪ್ರಸ್ತುತವೂ ಬಂಡೆಗಳ ಮೇಲೆ ಅನೇಕ ಲಿಂಗಗಳು ಕಂಡುಬರುತ್ತವೆ. ಈಗ ವಿವರಿಸಲು ಹೊರಟ ಅಷ್ಟೋತ್ತರ ಲಿಂಗ ಹಾಗೂ ಸಹಸ್ರಲಿಂಗಗಳು ಸಹ ಇದೇ ಸಮೂಹದಲ್ಲಿವೆ. ಚಕ್ರತೀರ್ಥದಿಂದ ನದಿಯ ದಡದ ಮೂಲಕ ವಿಠಲ ದೇವಾಲಯಕ್ಕೆ ಸಾಗಿ ಹೋಗುವ ದಾರಿಯ ಎಡಭಾಗದಲ್ಲಿ ಬಂಡೆಗಳ ದೊಡ್ಡ ಸಮೂಹವೇ ದೊರೆಯುತ್ತದೆ. ಈ ಬಂಡೆಗಳಲ್ಲಿ ಹಲವಾರು ಶೈವ, ವೈಷ್ಣವ ಸಂಬಂಧಿ ಶಿಲ್ಪಗಳನ್ನು ಕಂಡರಿಸಲಾಗಿದೆ. ಹಾಗೆಯೇ ನದಿಗೆ ತಾಗಿಕೊಂಡಂತೆಯೇ ಎರಡು ಶೈವ ದೇವಾಲಯಗಳು ದೊರೆಯುತ್ತವೆ. ಈ ದೇವಾಲಯಗಳಿಗೆ ಹತ್ತಿರವಿರುವ ಹಾಸುಬಂಡೆಯ ಮೇಲೆ ಒಂದು ಕಡೆ ಅಷ್ಟೋತ್ತರ ಲಿಂಗ ಮತ್ತೊಂದು ಕಡೆ ಸಹಸ್ರಲಿಂಗಗಳು ಕಂಡುಬರುತ್ತವೆ. ಅಷ್ಟೋತ್ತರ ಲಿಂಗವೆಂದರೆ ಒಟ್ಟು ೧೦೮ ಲಿಂಗಗಳನ್ನು ಕೆತ್ತಿರುವರು. ದೊಡ್ಡದಾದ ಚೌಕಾಕಾರದ ಪಾಣಿಪೀಠವನ್ನು ಕೆತ್ತಲಾಗಿದ್ದು, ಅದರಲ್ಲಿ ೧೦೮ ಚಿಕ್ಕ ಚಿಕ್ಕ ಲಿಂಗಗಳನ್ನು ಕೆತ್ತಲಾಗಿದ್ದು, ಅವುಗಳ ಮಧ್ಯದಲ್ಲಿ ಅವುಗಳಿಗಿಂತ ದೊಡ್ಡದಾದ ಲಿಂಗವನ್ನು ಕೆತ್ತಿದ್ದು, ಅದಕ್ಕೆ ಪ್ರತ್ಯೇಕವಾದ ಚೌಕಾಕಾರದ ಪಾಣಿಪೀಠವನ್ನೂ ಕೆತ್ತಿರುವರು. ಇದನ್ನೇ ಅಷ್ಟೋತ್ತರ ಲಿಂಗವೆಂದು ಕರೆಯಲಾಗಿದೆ. ಇದಕ್ಕೆ ಶಾಸನುಲ್ಲೇಖವು ಇದೆ. ಈ ಲಿಂಗದ ಎದುರಿನ ಬಂಡೆಯ ಮೇಲಿರುವ ಶಾಸನ[೧೩] "ಶ್ರೀ ಕೋಟಿಶಂಕರ ಅಷ್ಟೋತ್ತರ ಶತಲಿಂಗಾಯ ನಮ" ಎಂದು ಉಲ್ಲೇಖಿಸುತ್ತದೆ. ಹಾಗೆಯೇ ಈ ಲಿಂಗಗಳಿರುವ ಬಂಡೆಯ ಮುಂದಿರುವ ಇನ್ನೊಂದು ದೊಡ್ಡ ಹಾಸು ಬಂಡೆಯ ಮೇಲೆ ಸಹಸ್ರಲಿಂಗಗಳನ್ನು ಕೆತ್ತಿರುವರು. ಇದು ಸಹ ಅಷ್ಟೋತ್ತರ ಲಿಂಗದ ಲಕ್ಷಣಗಳನ್ನು ಹೊಂದಿದೆ. ಆದರೆ ಇಲ್ಲಿ ೧೦೨೮ ಚಿಕ್ಕಗಾತ್ರದ ಲಿಂಗಗಳನ್ನು ಒಳಗೊಂಡಿದೆ. ಇಲ್ಲಿ ಲಿಂಗಗಳ ಸುತ್ತಲೂ ಚೌಕಾಕಾರದ ಪಟ್ಟಿಕೆಯೆನೋ ತೋರಿಸಲಾಗಿದ್ದರೂ ಅದಕ್ಕೆ ಪ್ರಣಾಳವನ್ನು ಕೆತ್ತಲಾಗಿಲ್ಲ. ಆದರೆ ಮಧ್ಯದ ಲಿಂಗದಿಂದ ನೀರು ಹರಿದು ಹೋಗಲು ಹರಿಯನ್ನು ಮಾಡಲಾಗಿದೆ. ಹಾಗೂ ಈ ಸಹಸ್ರಲಿಂಗದ ಎದುರಿರುವ ಅಲ್ಪ ಎತ್ತರವಿರುವ ಬಂಡೆಯಲ್ಲಿ ಸಾಲಾಗಿ ಕುಳಿತಿರುವ ನಂದಿಶಿಲ್ಪಗಳನ್ನು ಕೆತ್ತಲಾಗಿದೆ ಮತ್ತು ಈ ಲಿಂಗಗಳ ಪಕ್ಕದಲ್ಲಿ ಸಾಷ್ಟಾಂಗ ನಮಸ್ಕರಿಸುವ ಎರಡು ಭಕ್ತ ಶಿಲ್ಪಗಳನ್ನು ಕೆತ್ತಲಾಗಿದೆ. ಈ ಸಹಸ್ರಲಿಂಗಕ್ಕೂ ಶಾಸನ[೧೪] ಉಲ್ಲೇಖವಿದ್ದು, ಅದು ಶ್ರೀ ಕೋಟಿಶಂಕರ ಸಹಸ್ರ ಲಿಂಗಾಯ ನಮಃ ಎಂದು ಉಲ್ಲೇಖಿಸುತ್ತದೆ. ಈ ಲಿಂಗಗಳಿರುವ ಹಾಸುಬಂಡೆಯಲ್ಲಿ ನಾಲ್ಕೂ ಮೂಲೆಗಳಲ್ಲೂ ರಂಧ್ರಗಳನ್ನು ಕಾಣಬಹುದು. ವಿಜಯನಗರದ ಅರಸರ ಕಾಲದಲ್ಲಿ ಶಿವರಾತ್ರಿಯ ದಿನದಂದು ಇಲ್ಲಿ ದೊಡ್ಡ ಪ್ರಮಾಣದಲ್ಲಿ ಪೂಜೆ–ಮನಸ್ಕಾರ ಆಹೋರಾತ್ರಿ ಜಾಗರಣೆ ಸೇವೆ ನಡೆಯುತ್ತಿತ್ತಂತೆ. ಶಿವರಾತ್ರಿಯ ಸಂದರ್ಭದಲ್ಲಿ ಈ ರಂಧ್ರಗಳಲ್ಲಿ ಕಂಬಗಳನ್ನು ನೆಟ್ಟು ಶಿವಲಿಂಗಗಳ ಮೇಲೆ ಹಸಿರು ಹಂದರ ಹಾಕಲಾಗುತ್ತಿತ್ತು ಎಂದು ಸ್ಥಳೀಯರು ಹೇಳುತ್ತಾರೆ. ಇಂಥ ಪವಿತ್ರ ತಾಣವಾಗಿರುವ ಈ ಶಿವಲಿಂಗ ಕ್ಷೇತ್ರಕ್ಕೆ ಬರುವ ಭಕ್ತರು ಚಕ್ರತೀರ್ಥದಲ್ಲಿ ಸ್ನಾನ ಮಾಡಿ ದೇವೇಂದ್ರ ಪೂಜಿಸಿದ ಈ ಶಿವಲಿಂಗಗಳನ್ನು ಪೂಜಿಸಿ ಪುನೀತರಾಗುತ್ತಾರೆ. ಜೀವನದಲ್ಲಿ ತಿಳಿದೋ ತಿಳಿಯದೆಯೋ ಮಾಡಿದ ತಪ್ಪುಗಳು, ಪಾಪಗಳು ಈ ಶಿವಲಿಂಗಗಳನ್ನು ಪೂಜಿಸಿದರೆ ಪರಿಹಾರವಾಗುತ್ತವೆ ಎಂಬ ನಂಬಿಕೆ ಜನಸಾಮಾನ್ಯರಲ್ಲಿದೆ.[೧೫]

ಇನ್ನೊಂದು ಸಹಸ್ರಲಿಂಗವು ವಿರೂಪಾಕ್ಷ ದೇವಾಲಯದ ಬಲಬದಿಯ ಪ್ರಾಕಾರ ಮಂಟಪದಲ್ಲಿರುವ ಒಂದು ಗರ್ಭಗೃಹದಲ್ಲಿದೆ. ಪ್ರಸ್ತುತ ಇದನ್ನು ರುದ್ರಾಕ್ಷೇಶ್ವರಲಿಂಗ ಎಂದು ಕರೆಯಲಾಗುತ್ತದೆ. ಈ ಗರ್ಭಗೃಹದಲ್ಲಿ ಎತ್ತರವಾದ ಕಟ್ಟೆಯಿದ್ದು ಅದರ ಮೇಲೆ ಈ ಶಿವಲಿಂಗವನ್ನು ಕಾಣುತ್ತೇವೆ. ಯೋನಿಪೀಠ ಸಹಿತವಾದ ಈ ಶಿವಲಿಂಗದ ರುದ್ರಭಾಗ ಅಥವಾ ಪೂಜಾ ಭಾಗವು ಸಹಸ್ರ ಲಿಂಗದ ಲಕ್ಷಣಗಳನ್ನು ಒಳಗೊಂಡಿದೆ. ಪೂಜಾಭಾಗದಲ್ಲಿ ಗೆರೆಗಳನ್ನು ಹಾಕುವ ಮೂಲಕ ಅನೇಕ ಲಿಂಗಗಳು ರೂಪುಗೊಂಡಿವೆ. ಅವುಗಳು ಸಹಸ್ರ ಸಂಖ್ಯೆಯನ್ನು ಮೀರಿರುವುದರಿಂದ ಅದೇ ಸಹಸ್ರ ಲಿಂಗ. ಬಹುಶಃ ಇವು ರುದ್ರಾಕ್ಷ ಬೀಜಗಳಂತೆ ಕಾಣುವುದರಿಂದ ಅದನ್ನು ರುದ್ರಾಕ್ಷೇಶ್ವರಲಿಂಗ ಎಂದು ಕರೆಯಲಾಗಿದೆ.



ಅಷ್ಟೋತ್ತರಲಿಂಗ, ಕೋಟಿಲಿಂಗ, ಹಂಪಿ



ಸಹಸ್ರಲಿಂಗ, ಕೋಟಿಲಿಂಗ, ಹಂಪಿ

## ಸರ್ವಾಂಗಲಿಂಗ ಮತ್ತು ಯೋಗಾಂಗಲಿಂಗಗಳು

ಹಂಪಿಯಲ್ಲಿ ದೊರೆಯುವ ಹಲವು ಪ್ರಮುಖ ಲಿಂಗಗಳಲ್ಲಿ ಸರ್ವಾಂಗ ಮತ್ತು ಯೋಗಾಂಗ ಲಿಂಗಗಳು ಮಹತ್ವವಾದವು. ಹಂಪಿಯ ಉದ್ದಾನ ವೀರಭದ್ರ ದೇವಾಲಯದಲ್ಲಿ ಈ ಎರಡೂ ಲಿಂಗಗಳೂ ಇರುವವು. ಇವುಗಳನ್ನು ಕುರಿತಂತೆ ಸಿ.ಟಿ.ಎಂ.ಕೊಟ್ರಯ್ಯನವರು ಹದಿನಾರು ಪುಟಗಳ ಕಿರು ಪುಸ್ತಕವನ್ನು[೧೬] ಪ್ರಕಟಿಸಿರುವರು. ಹಾಗೂ ಅದರಲ್ಲಿ ಇವುಗಳ ಕುರಿತು ದೀರ್ಘವಾದ ವಿವರಣೆಯನ್ನು ನೀಡಿರುವರು.

### ಸರ್ವಾಗಲಿಂಗ

ಇದು ಪ್ರಸ್ತುತ ಉದ್ದಾನ ವೀರಭದ್ರ ದೇವಾಲಯದ ಅಂತರಾಳ ಭಾಗದಲ್ಲಿ ಇರುವುದು. ಕಮಲಾಪುರದಿಂದ ಹಂಪಿಗೆ ಹೋಗುವ ದಾರಿಯಲ್ಲಿ ಬಲಬದಿಗೆ ಹಾಗೂ ಚಂಡಿಕೇಶ್ವರ ದೇವಾಲಯದ ಬಳಿ ಉದ್ದಾನ ವೀರಭದ್ರ ದೇವಾಲಯವಿದೆ. ಇದು ಕ್ರಿ.ಶ.೧೫೪೫ರಲ್ಲಿ ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ಅವನ ಕಾರ್ಯಕರ್ತನಾದ ರಾಮರಾಜನ ತಮ್ಮ ಪ್ರಧಾನಿ ತಿಂಮ್ಮರಾಜನ ದಳವಾಯಿ ಜಂಗಮಯ್ಯನು ಸದಾಶಿವರಾಯನಿಗೂ, ರಾಮರಾಯನಿಗೂ ಮತ್ತು ಪ್ರಧಾನಿ ಎರತಿಂಮರಾಜನಿಗೂ ಪುಣ್ಯವಾಗಬೇಕೆಂದು ಕೃಷ್ಣಾಪುರಪೇಟೆಯ ಹಿರಿಯ ಕಾಲುವೆಯ ಛತ್ರದ ಬಳಿ ಮುದುವೀರಣ್ಣನ ಪ್ರತಿಷ್ಠೆ ಮಾಡಿಸಿ ಅಥವಾ ದೇವಾಲಯ ಕಟ್ಟಿಸಿ ದೇವರಿಗೆ ಚಿನ್ನ ಬೆಳ್ಳಿ ಅಭರಣಗಳನ್ನು ಮಾಡಿಸಿದನೆಂದು ಶಾಸನವು[೧೭] ಉಲ್ಲೇಖಿಸುತ್ತದೆ.

ಪ್ರಸ್ತುತ ವಿವರಿಸುತ್ತಿರುವ ಸರ್ವಾಂಗಲಿಂಗವು ಕ್ರಿ.ಶ.೧೬ನೇ ಶತಮಾನದಲ್ಲಿ ನಿರ್ಮಿತವಾಗಿದ್ದಿರ ಬೇಕೆಂದು ಲೇಖಕರಾದ ಸಿ.ಟಿ.ಎಂ.ಕೊಟ್ರಯ್ಯನವರು ಹೇಳುತ್ತಾರೆ. ಇದಕ್ಕೆ ಅವರು ಮೇಲಿನ ಶಾಸನಾಧಾರ ಮತ್ತು ದೇವಾಲಯದ ವಾಸ್ತುಶೈಲಿಯನ್ನು ಆಧಾರವಾಗಿ ನೀಡುತ್ತಾರೆ. ಅಲ್ಲದೆ ಸರ್ವಾಂಗಲಿಂಗದ ವೈಶಿಷ್ಟ್ಯಗಳನ್ನು ತಿಳಿಸುತ್ತಾರೆ. ಅವರು ಹೇಳುವುದು ಲಿಂಗದ ರುದ್ರಭಾಗವು ಇತರ ಲಿಂಗಗಳಲ್ಲಿ ಕಾಣಬರುವಂತೆ ವೃತ್ತಾಕಾರದಲ್ಲಿರದೆ ತ್ರಿಕೋಣಾಕಾರದಲ್ಲಿದೆ. ಆದರೆ ಚಪ್ಪಟೆಯಾದ ಮೂರು ಮುಖಗಳನ್ನು ಹೊಂದಿದೆ. ಚಪ್ಪಟೆಯಾದ ಮೂರು ಮುಖಗಳ ಮೇಲೆ ಚಕ್ರಗಳು, ಅವುಗಳ ಮಧ್ಯೆ ಪೀಠಸ್ಥಲಿಂಗಾಕೃತಿಗಳನ್ನು ಕೊರೆಯಲಾಗಿದೆ. ಇವೆಲ್ಲವೂ ವೀರಶೈವ ಷಟ್‌ಚಕ್ರ-ಷಟ್‌ಸ್ಥಲ ಸಿದ್ಧಾಂತವನ್ನು ನಿರೂಪಿಸುವಂತಹುಗಳಾವೆ. ಮತ್ತು ಈ ಲಿಂಗದ ಶಿರೋಭಾಗವು ಸಹ ಒಂದು ವಿಶಿಷ್ಟ ಆಕಾರದಲ್ಲಿದ್ದು ೩೬ ಬುದ್ಬುದಾಕಾರ ಅಥವಾ ಅರ್ಧಗೋಳಾಕೃತಿಯ ಆಕಾರಗಳಿಂದ ಕೂಡಿದೆ.

ಮೊದಲನೆ ಮುಖದ ಕೆಳಭಾಗದ ಎಡದಲ್ಲಿ ಆಧಾರ ಅಥವಾ ಮೂಲಾಧಾರ ಚಕ್ರದ, ನಾಲ್ಕು ದಳದ ಪದ್ಮದೊಳಗಿನ ಚತುಷ್ಕೋಣಾಕೃತಿಯೊಳಗಣ, ಭಕ್ತಸ್ಥಲದ ಆಚಾರಲಿಂಗವನ್ನು ತೋರಿಸಲಾಗಿದೆ. ಮೊದಲನೆಯದರ ಪಕ್ಕದಲ್ಲಿ ಸ್ವಾಧಿಷ್ಠಾನ ಚಕ್ರದ, ಆರು ದಳದ ಪದ್ಮದೊಳಗಿನ ಧನುರಾಕೃತಿಯೊಳಗಣ, ಮಹೇಶಸ್ಥಲದ ಗುರುಲಿಂಗವನ್ನು ಕೆತ್ತಲಾಗಿದೆ. ಆಚಾರಲಿಂಗದೊಳಗೆ ಗುರುಲಿಂಗವು ಮತ್ತು ಭಕ್ತಸ್ಥಳದೊಳಗೆ ಮಹೇಶಸ್ಥಳವು ಐಕ್ಯವಾದ ಪರಿಣಾಮದಿಂದ ಉಂಟಾಗಿ ಲಿಂಗವೇ ಇಷ್ಟಲಿಂಗ

ಮತ್ತು ಸ್ಥಲವೇ ತ್ಯಾಗಾಂಗಸ್ಥಲ. ಈ ಐಕ್ಯ ಭಾವವನ್ನು ಬಿಂಬಿಸುವ ಆಕೃತಿಯನ್ನು ಮೇಲಿನ ಭಾಗದಲ್ಲಿ ಕೊರೆಯಲಾಗಿದೆ. ಮತ್ತು ಈ ಐಕ್ಯಭಾಗವನ್ನು ಸೂಚಿಸಲು ಅಂದರೆ ಆಚಾರಲಿಂಗದ ಚತುಷ್ಕೋಣವನ್ನು ಮತ್ತು ಗುರುಲಿಂಗದ ಧನುರಾಕೃತಿಯನ್ನು ಇಷ್ಟಲಿಂಗಾಕೃತಿಯಲ್ಲಿ ಅಳವಡಿಸಲಾಗಿದೆ. ಮತ್ತು ಯಥಾಪ್ರಕಾರವಾಗಿ ಈ ಚಕ್ರಗಳ ಅಧಿದೇವತೆಯಾದ ಪೀಠಸ್ಥಲಿಂಗವನ್ನು ಇಲ್ಲಿ ಮತ್ತು ಸರ್ವಾಂಗಲಿಂಗದ ಇತರ ಎಲ್ಲಾ ಆಕೃತಿಗಳಲ್ಲಿಯೂ ತೋರಿಸಲಾಗಿದೆ.

ಇನ್ನು ಎರಡನೇ ಮುಖದ ಮೇಲೆಯೂ ಸಹ ಮೂರು ಆಕೃತಿಗಳನ್ನು ಕಾಣುತ್ತೇವೆ. ಕೆಳಗಿನ ಅರ್ಧದಲ್ಲಿ ಎರಡು ಮತ್ತು ಮೇಲಿನ ಅರ್ಧದಲ್ಲಿ ಒಂದು. ಕೆಳಭಾಗದಲ್ಲಿ ಎಡಕ್ಕೆ ಇರುವುದೇ ಮಣಿಪೂರ ಚಕ್ರದ ದಳದ ಪದ್ಮದೊಳಗಿನ ತ್ರಿಕೋಣಾಕೃತಿಯ ಮಧ್ಯದಲ್ಲಿರುವ ಪ್ರಸಾದಿಸ್ಥಲದ ಶಿವಲಿಂಗವು. ಶಿವಲಿಂಗದ ಬಲಕ್ಕೆ, ವಿಶುದ್ಧಿ ಚಕ್ರದ ದ್ವಾದಶ ಪದ್ಮದೊಳಗಣ ಷಟ್ಕೋಣಾಕೃತಿಯೊಳು ಕಾಣುವ ಪ್ರಾಣಲಿಂಗಸ್ಥಲದ ಜಂಗಮಲಿಂಗವು ಶಿವಲಿಂಗದೊಂದಿಗೆ ಜಂಗಮಲಿಂಗವು ಮತ್ತು ಪ್ರಸಾದಿಸ್ಥಲದೊಂದಿಗೆ ಪ್ರಾಣಲಿಂಗಸ್ಥಲದ ಐಕ್ಯದಿಂದಾಗಿ ಅನುಗುಣವಾದ ಲಕ್ಷಣಗಳಿಂದ ಕಾಣ ಬರುವುದೇ ಭೋಗಾಂಗದ ಪ್ರಾಣಲಿಂಗವು.

ಕೊನೆಯ ಮುಖದಲ್ಲಿ ಸಹ ಕೆಳಭಾಗದಲ್ಲೆರಡು ಮತ್ತು ಮೇಲ್ಭಾಗದಲ್ಲಿ ಒಂದು ಆಕೃತಿಗಳು ಕಾಣಿಸುತ್ತವೆ. ಕೆಳಭಾಗದ ಪಾರ್ಶ್ವದಲ್ಲಿ ಕಾಣಿಸುವುದೇ ಅನಾಹತ ಚಕ್ರದ ಷೋಡಶದಳದೊಳಗಣ ವರ್ತುಳಾಕಾರದ ಮಧ್ಯದಲ್ಲಿರುವ ಶರಣಸ್ಥಳದ ಪ್ರಾಸಾದಿಲಿಂಗ. ಪ್ರಾಸಾದಿಲಿಂಗದ ಬಲಪಾರ್ಶ್ವದಲ್ಲಿರುವ ಆರನೇ ಆಕೃತಿಯಲ್ಲಿ ಆಜ್ಞಾಚಕ್ರದ, ದ್ವಿದಳ ಪದ್ಮದ ಶೂನ್ಯಾಕಾರದ ಮಧ್ಯದಲ್ಲಿ ಕಾಣಿಸುವುದು ಐಕ್ಯಸ್ಥಲದ ಮಹಾಲಿಂಗವು. ಶರಣಸ್ಥಲ ಮತ್ತು ಐಕ್ಯಸ್ಥಲ, ಪ್ರಾಸಾದಿಲಿಂಗ ಮತ್ತು ಮಹಾಲಿಂಗಗಳ ಐಕ್ಯದಿಂದಾಗಿ ಮೇಲೆ ಕಾಣಸಿಗುವುದೇ ಯೋಗಾಂಗದೊಂದಿಗಿರುವ ಭಾವಲಿಂಗ, ಸಂಕ್ಷಿಪ್ತವಾಗಿ ಹೇಳುವುದಾದರೆ ಮೇಲಿನ ಆರು ಆಕೃತಿಗಳಲ್ಲಿ (ಚಕ್ರಗಳಲ್ಲಿ) ವೀರಶೈವ ಸಿದ್ಧಾಂತದ ಆರು ಘಟ್ಟಗಳು ಅಥವಾ ಸೋಪಾನಗಳು ಚಿತ್ರಿತವಾಗಿವೆ. ಇವುಗಳ ಪ್ರಭೇದಗಳನ್ನು ಸುಲಭವಾಗಿ ಅರ್ಥವಾಗುವಂತೆ ಈ ಕೆಳಗಿನ ರೀತಿಯಲ್ಲಿ ತೋರಿಸಬಹುದು.

| ಚಕ್ರ | ಪದ್ಮದಳಗಳ ಸಂಖ್ಯೆ | ವೀರಶೈವನ ದೇಹ ದಲ್ಲಿ ಅವುಗಳ ಸ್ಥಾನ | ಆಕೃತಿ | ಅಂಕಸ್ಥಲ | ಲಿಂಗ ಪರಿಣಾಮ | ಐಕ್ಯದ | |
|---|---|---|---|---|---|---|---|
| ಆಧಾರ (ಮೂಲಾಧಾರ) | ನಾಲ್ಕು ದಳಗಳ ಪದ್ಮ | ಗುದದ್ವಾರ | ಚುತಷ್ಕೋಣ | ಭಕ್ತಸ್ಥಲ | ಆಚಾರ ಲಿಂಗ | ಇಷ್ಟಲಿಂಗ ಮತ್ತು | ಸರ್ವಾಂಗಲಿಂಗ |
| ಸ್ವಾಧಿಷ್ಠಾನ | ಆರುದಳಗಳ ಪದ್ಮ | ಗುದದ್ವಾರದಿಂದ ಸ್ವಲ್ಪ ಮೇಲೆ | ಧನುರಾಕಾರ | ಮಹೇಶ ಸ್ಥಲ | ಗುರುಲಿಂಗ | ತ್ಯಾಗಾಂಗ | |
| ಮಣಿಪುರ | ಹತ್ತು ದಳಗಳ ಪದ್ಮ | ನಾಭಿ | ತ್ರಿಕೋಣ | ಪ್ರಸಾದಿಸ್ಥಲ | ಶಿವಲಿಂಗ | ಪ್ರಾಣಲಿಂಗ | |
| ಅನಾಹತ | ಹನ್ನೆರಡು ದಳಗಳ ಪದ್ಮ | ಹೃದಯ | ಷಟ್‌ಕೋಣ | ಪ್ರಾಣಲಿಂಗ ಸ್ಥಲ | ಜಂಗಮ ಲಿಂಗ | ಮತ್ತು ಭೋಗಾಂಗ | |
| ವಿಶುದ್ಧ | ಹದಿನಾರು ದಳಗಳ ಪದ್ಮ | ಕಂಠೆ | ವೃತ್ತಾಕರ | ಶರಣಸ್ಥಲ | ಪ್ರಸಾದ ಲಿಂಗ | ಭಾವಲಿಂಗ ಮತ್ತು | |
| ಅಜ್ಞಾ | ಎರಡುದಗಳ ಪದ್ಮ | ಭ್ರೂಮಧ್ಯೆ | ಶೂನ್ಯಾಕಾರ | ಐಕ್ಯಸ್ಥಲ | ಮಹಾಲಿಂಗ | ಯೋಗಾಂಗ | |

ಇನ್ನು ಈ ಮೂರು ಮುಖಗಳ ಊರ್ಧ್ವಭಾಗವು ಅರ್ಧ ವೃತ್ತಾಕಾರವಾಗಿದ್ದು, ಒಂದು ವಿಶಿಷ್ಟ ರೀತಿಯ ಶಿರೋಭಾಗವು ಉಂಟಾಗಿದೆ. ಆ ಶಿರೋಭಾಗದಲ್ಲಿ ಕಾಣಿಸುವ ೩೬ ಬುದ್ಬುದಾಕಾರಗಳು, ಅವುಗಳನ್ನು ಪ್ರತಿನಿಧಿಸುವ ತತ್ವಗಳನ್ನು ವಿವರಿಸುವುದು ಸ್ವಲ್ಪ ಕಷ್ಟದ ಕೆಲಸವೇ ಸರಿ. ಆದರೂ ವೀರಶೈವ ಸಿದ್ಧಾಂತವನ್ನು ಆಧಾರವಾಗಿಟ್ಟುಕೊಂಡು ಅನೇಕ ವಿಧವಾಗಿ ಇವುಗಳ ಬಗ್ಗೆ ವಿವರಣೆಗಳನ್ನು ಕೊಡಬಹುದು. ಆಗಲೂ ಇಂತಹದೇ ಒಂದು ವಿವರಣೆಯ ಪ್ರತೀಕಗಳೆಂದು ಖಚಿತವಾಗಿ ಹೇಳಲು ಬರುವುದಿಲ್ಲ.

ಮಾನವ ದೇಹವು ೫ ಶುದ್ಧ ತತ್ವಗಳು ೭ ಮಿಶ್ರ ತತ್ವಗಳು ಮತ್ತು ೨೪ ಅಶುದ್ಧ ತತ್ವಗಳಿಂದ ನಿರ್ಮಿತವಾದ ದೇವಮಂದಿರ. ಅಶುದ್ಧ ತತ್ವಗಳು ಮತ್ತು ಮಿಶ್ರ ತತ್ವಗಳ ಸಹಾಯದಿಂದ ಮಾಯೆಯನ್ನು ದಾಟಿ, ಶುದ್ಧ ತತ್ವಗಳ ಸಹಾಯದಿಂದ ಜೀವಭಾವವನ್ನು ಬಿಟ್ಟು, ಪರಮಾತ್ಮನ ಮಹಾಬೆಳಗಿನಲ್ಲಿ ಒಂದಾಗುವುದನ್ನು ನಿರೂಪಿಸುವಂತಹುಗಳಾಗಿರಲೂಬಹುದು. ಮತ್ತೊಂದು ವಿವರಣೆಯೆಂದರೆ ಮೇಲೆ ತಿಳಿಸಿದ ಆರೂ ಲಿಂಗಗಳು ತಮ್ಮ ತಮ್ಮೊಳಗೆ ಮತ್ತು ಇತರ ಲಿಂಗಗಳೊಂದಿಗೆ ಐಕ್ಯವಾಗುವ ತತ್ವವನ್ನಾಧರಿಸಿ ೩೬ ಐಕ್ಯ ಲಿಂಗಗಳುಂಟಾಗುತ್ತವೆ. ಉದಾಹರಣೆಗೆ ಆಚಾರಲಿಂಗ+ಆಚಾರಲಿಂಗ, ಆಚಾರಲಿಂಗ+ಗುರುಲಿಂಗ, ಆಚಾರಲಿಂಗ+ಶಿವಲಿಂಗ, ಆಚಾರಲಿಂಗ+ ಜಂಗಮ ಲಿಂಗ, ಆಚಾರಲಿಂಗ+ಪ್ರಾಸಾಧಿಲಿಂಗ, ಆಚಾರಲಿಂಗ+ಮಹಾಲಿಂಗ, ಮಹಾಲಿಂಗವು ಮಹಾಲಿಂಗದೊಡನೆ ಐಕ್ಯವಾದಾಗ ಬರುವ ಮೊತ್ತವೇ ೩೬ ಇದು ಲಿಂಗತ್ವದ ನಿರೂಪಣಾ ದೃಷ್ಟಿಯಿಂದ.

ಹಾಗೆಯೇ ಮೇಲಿನ ರೀತಿಯಲ್ಲಿಯೇ ಅಂಗ ತತ್ವದ ನಿರೂಪಣಾ ದೃಷ್ಠಿಯಿಂದಲೂ ೩೬ ತತ್ವಗಳುಂಟಾಗಿ ಈ ಸರ್ವಾಂಗ ಲಿಂಗದ ಶಿರೋಭಾಗದಲ್ಲಿ ಕಾಣುವ ೩೬ ಆಕಾರಗಳು ನಿರೂಪಿತವಾಗುತ್ತವೆ ಎಂದು ಹೇಳಬಹುದು ಮತ್ತು ಅಂಗ ಸಂಬಂಧವಾದ ತತ್ವಗಳಿಪ್ಪತ್ತೈದು, ಲಿಂಗ ಸಂಬಂಧವಾದ ತತ್ವಗಳು ಹನ್ನೊಂದು, ಅಂಗ-ಲಿಂಗ ಸಂಬಂಧವಾದುಭಯ, ತತ್ವಂಗಳು ಕೂಡಿ ೩೬ ತತ್ವಗಳಾದವು ಈ ಮೂವತ್ತಾರು ತತ್ವಗಳು ಸಮರಸೈಕ್ಯವೆಂಬುದು ಅರ್ಥವಾಗುತ್ತದೆ.

ಹೀಗೆ ವೀರಶೈವ ಸಿದ್ಧಾಂತವನ್ನು ಆಳವಾಗಿ ಅಭ್ಯಾಸ ಮಾಡುತ್ತಾ ಹೋದಂತೆಲ್ಲಾ ಈ ವಿಶಿಷ್ಟವಾದ ೩೬ ಸಂಖ್ಯೆಯನ್ನು ಇನ್ನೂ ಅನೇಕ ಬಗೆಯಲ್ಲಿ ಅರ್ಥೈಸುತ್ತಾ ಹೋಗಬಹುದೇ ವಿನಹ ಯಾವೊಂದು ತತ್ವವನ್ನು ಪ್ರತಿನಿಧಿಸುತ್ತವೆಂದು ನಿರ್ಣಯವಾಗಿ ಹೇಳುವುದು ಕಷ್ಟ ಅಲ್ಲದೇ ಅವುಗಳನ್ನು ಶಿರೋಭಾಗದಲ್ಲಿಯೇ ಮತ್ತು ಒಂದು ವಿಶಿಷ್ಟವಾದ ಕ್ರಮದಲ್ಲಿಯೇ ಏಕೆ ಕೆತ್ತಲಾಗಿದೆಯೆಂಬುದು ಇನ್ನು ತಿಳಿಯಬೇಕಾದ ವಿಷಯವಾಗಿದೆ ಎಂದು ಲೇಖಕರು ಈ ರೀತಿಯಾಗಿ ವೀರಶೈವ ಸಿದ್ಧಾಂತವನ್ನು ಅನುಸರಿಸಿ ಸರ್ವಾಂಗಲಿಂಗದ ಕುರಿತು ದೀರ್ಘವಾದ ವಿವರಣೆ ನೀಡುತ್ತಾರೆ. ಇಷ್ಟೇ ಅಲ್ಲದೆ ಅದನ್ನು ಕೆತ್ತಿರುವ ಉದ್ದೇಶವನ್ನು ಚರ್ಚಿಸುತ್ತಾ ಈ ಮುಂದಿನಂತೆ ಹೇಳಿರುವರು.

ಈ ಲಿಂಗವು ದೇವಸ್ಥಾನದ ಪ್ರಧಾನ ದೇವತಾ ಮೂರ್ತಿಯಾಗಿರದೆ ಇಷ್ಟೊಂದು ವಿಶಿಷ್ಟ ಲಕ್ಷಣಗಳನ್ನೊಳಗೊಂಡಿದ್ದರೂ ಅದು ಕೇವಲ ಉಪವಿಗ್ರಹವಾಗಿದೆ. ಅದರ ಪೀಠವೂ ಸಹ ಈ

ಲಿಂಗಕ್ಕಾಗಿ ನಿರ್ಮಿಸಿದ್ದೆಂದು ಹೇಳಬರುವಂತಿಲ್ಲ. ಅದು ಪ್ರತಿಷ್ಠಿತವಾಗಿರುವ ಸ್ಥಾನವು ಸಹ ಪೂರ್ವಯೋಜಿತ ಅಥವಾ ಮುಖ್ಯವೆಂದಾಗಲಿ ಹೇಳಲಾಗದು. ಈ ಕಾರಣಗಳಿಂದಾಗಿ ಈ ಸರ್ವಾಂಗಲಿಂಗವು ಪೂಜೆಗೋಸ್ಕರ ನಿರ್ಮಿತವಾದುದಾಗಿರದೇ, ವೀರಶೈವ ಸಿದ್ಧಾಂತದ ಬೋಧನೆಯಲ್ಲಿ ದೃಷ್ಟಾಂತ ಸಾಧನೆಯಾಗಿ ಉಪಯೋಗಿಸಲು ನಿರ್ಮಿಸಿದ್ದಾಗಿರಬೇಕು. ಈ ಅಭಿಪ್ರಾಯವನ್ನು ಸಮರ್ಥಿಸು ವಲ್ಲಿ ಉದ್ದಾನ ವೀರಭದ್ರ ದೇವಾಲಯದ ಪಕ್ಕದಲ್ಲಿಯೇ ಈಗಲೂ ಕಾಣಬರುವ ಬಹು ವಿಶಾಲವಾದ ಶಿಥಿಲವಾಗಿದ್ದರೂ ಈಗಲೂ ಸುಮಾರು ೬೦೦ ಕಂಬಗಳಿಂದ ಕೂಡಿದ ಮಠದ ಅವಶೇಷಗಳು ಸಹಾಯವಾಗುತ್ತವೆ. ಒಂದು ಊಹೆಯಂತೆ ಈ ದೇವಾಲಯವು ಸಾರ್ವಜನಿಕ ದೇವಸ್ಥಾನವಾಗಿರದೆ ಈ ಮಠಕ್ಕೆ ಹೊಂದಿದ ಆಂತರಿಕ ದೇವಸ್ಥಾನವಾಗಿದ್ದಿರಬೇಕು. ಆದುದರಿಂದ ಈ ಸರ್ವಾಂಗಲಿಂಗವು ಈ ಮಠದಲ್ಲಿ ವಾಸವಾಗಿದ್ದ ಬೋಧಕರಿಂದ, ಪಂಡಿತರಿಂದ, ವೇದಾಂತಿಗಳಿಂದ ದಾರ್ಶನಿಕರಿಂದ ಅಥವಾ ದೃಷ್ಟಾರರಿಂದ ತಮ್ಮ ಘನಕಾರ್ಯದಲ್ಲಿ ಉಪಯೋಗ ಮಾಡಲ್ಪಟ್ಟಿರಬೇಕು ಎಂದು ಲೇಖಕರು ಊಹಿಸುತ್ತಾರೆ. ಅಲ್ಲದೆ ಆ ಪಂಡಿತರು ಕ್ರಿ.ಶ.೧೬ನೇ ಶತಮಾನದ ಉತ್ತರಾರ್ಧದಲ್ಲಿ ಹಂಪಿಯ ಹಿರಿಯಮಠದಲ್ಲಿ ಮಹಾಕವಿಗಳು ಪಂಡಿತೋತ್ತಮರು ದಾರ್ಶನಿಕರು ಷಟ್‌ಚಕ್ರ ಬ್ರಹ್ಮಿಗಳೂ ಎನಿಸಿದ್ದ ವಿರೂಪಾಕ್ಷ ಪಂಡಿತರು ಇರಬಹುದೆಂದೂ ಅಭಿಪ್ರಾಯಪಡುತ್ತಾರೆ. ಹಾಗೆಯೇ ಕೊನೆಯಲ್ಲಿ ಲಿಂಗದ ಕುರಿತು ಇಂತಹ ಲಿಂಗದ ಉಲ್ಲೇಖವು ಯಾವ ಹಿಂದೂ ಶಿಲ್ಪಶಾಸ್ತ್ರಗಳಲ್ಲಿಯೂ ಕಾಣಬರದೆ ಇರುವುದರಿಂದ ಲಿಂಗಗಳ ಶಿಲ್ಪಾಧ್ಯಯನ ದೃಷ್ಟಿಯಿಂದ ಅತಿ ಮಹತ್ವದ್ದೂ ಆಗಿರುವುದಲ್ಲದೇ ಹಿಂದೂ ಶಿಲ್ಪಶಾಸ್ತ್ರಗಳ ಅಧ್ಯಯನಕ್ಕೆ ವೀರಶೈವ ಸಿದ್ಧಾಂತದ ಅಪೂರ್ವ ಕೊಡುಗೆಯಾಗಿದೆ ಎಂದೂ ಹೇಳಿರುವರು. ಹೀಗೆ ಲೇಖಕರ ಇಷ್ಟೆಲ್ಲ ದೀರ್ಘ ವಿವರಣೆಯಿಂದ ಸರ್ವಾಂಗಲಿಂಗದ ಪ್ರಾಮುಖ್ಯತೆಯನ್ನು ಅರಿಯಬಹುದು. ಹಾಗೂ ಇದರ ಉಲ್ಲೇಖ ಕಮಲಾಪುರ ಕೈಫಿಯತ್ತಿನಲ್ಲಿಯೂ ದೊರೆಯುತ್ತದೆ. ಇಲ್ಲಿ ಮುದ್ದು(>ಉದ್ದಾ) ವೀರಭದ್ರ ದೇವರ ಪ್ರತಿಷ್ಠೆ ಮಾಡಿ, ಗುಡಿಕಟ್ಟಿಸಿ ಆ ಗುಡಿವಳಗೆ ತ್ರಿಕೋಣಯಂತ್ರ ನಿರ್ಮಾಣ ಮಾಡಿಯಿದ್ದಾರೆ. ಅದೇ ಶಿಲೆಗೆ ಯೀಗ ಜನರು ಮೂರು ಮೂಲ(>ಲಿ) ಕಲ್ಲು, ಮುವತ್ತಾರುಲಿಂಗ[೧೮] ಎಂದು ಕರೆಯುವುದನ್ನು ದಾಖಲಿಸುತ್ತದೆ.

### ಯೋಗಾಂಗ ಲಿಂಗ

ಈ ವಿಶಿಷ್ಟ ಲಿಂಗವು ಸಹ ಮೇಲೆ ವಿವರಿಸಿದ ಉದ್ದಾನ ವೀರಭದ್ರ ದೇವಾಲಯದಲ್ಲಿಯೇ ಕಂಡುಬರುತ್ತದೆ. ಇದು ಈ ದೇವಾಲಯದ ದೀಪಸ್ತಂಭದಲ್ಲಿ ದಕ್ಷಿಣ ದಿಕ್ಕಿಗೆ ಅಂದರೆ ಗರ್ಭಗೃಹದಲ್ಲಿರುವ ವೀರಭದ್ರ ದೇವರಿಗೆ ಅಭಿಮುಖವಾಗಿರುವ ಪಾರ್ಶ್ವದಲ್ಲಿ ಉಬ್ಬುಶಿಲ್ಪವಾಗಿ ಕೆತ್ತಲಾಗಿದೆ. ಒಂದು ಪೀಠಸ್ಥ ಲಿಂಗದ ಮೇಲೆ ಮತ್ತೊಂದು ಪೀಠಸ್ಥ ಲಿಂಗವನ್ನು ಕೆತ್ತಿರುವುದೇ ಈ ಲಿಂಗಶಿಲ್ಪದ ವಿಶೇಷ. ಇದನ್ನು ಯೋಗಾಂಗ ಲಿಂಗವೆಂದು ಕರೆಯಲಾಗಿದೆ. ಮೇಲೆ ವಿವರಿಸಿದ ಸರ್ವಾಂಗಲಿಂಗದ ಕುರಿತು ಲೇಖನವನ್ನು ಬರೆದ ಲೇಖಕರಾದ ಸಿ.ಟಿ.ಎಂ.ಕೊಟ್ರಯ್ಯನವರು ಈ ಲಿಂಗದ ಕುರಿತು ಸಹ ದೀರ್ಘವಾದ ಲೇಖನವನ್ನು[೧೯] ಬರೆದಿರುವರು. ಲೇಖಕರು ಈ ಲಿಂಗವು ವೀರಶೈವ ಶರಣರಲ್ಲೊಬ್ಬರಾದ ಸೊನ್ನಲಾಪುರದ (ಸೊಲ್ಲಾಪುರ) ಸಿದ್ಧರಾಮೇಶ್ವರರ ಜೀವನ ಕಾಲದ ಘಟನೆಗಳಿಂದ

ಪ್ರಭಾವಿತವಾಗಿರುವಂತಹುದಾಗಿದೆ ಎಂದಿದ್ದಾರೆ. ಶಿಲ್ಪದ ಲಕ್ಷಣಗಳನ್ನು ವಿವರಿಸುತ್ತಾ ದೀಪಸ್ತಂಭದ ದಕ್ಷಿಣ ಪಾರ್ಶ್ವದಲ್ಲಿರುವ ಈ ಶಿಲ್ಪದಲ್ಲಿ ಕೆಳಗೆ ಒಂದು ರೇಖಾವೃತ್ತದೊಳಗೆ ಆರು ದಳಗಳುಳ್ಳ ಒಂದು ಹೂವನ್ನು ರಚಿಸಲಾಗಿದೆ. ಇದು ಒಂದು ಜಲಾಶಯವನ್ನು ಪ್ರತಿನಿಧಿಸುತ್ತದೆ. ಬಹುಶಃ ಈಗಿನ ಸೊಲ್ಲಾಪುರದಲ್ಲಿರುವ ಸಿದ್ಧರಾಮನ ಸಮಾಧಿಯ ಬಳಿ ಈಗಲೂ ಕಾಣಬರುವ ದೊಡ್ಡ ತಟಾಕವನ್ನು ಪ್ರತಿನಿಧಿಸುತ್ತಿರಬೇಕು. ಅನಂತರ ಆ ಹೂವಿನಿಂದ ಮೇಲಕ್ಕೆ ಒಂದು ಪೀಠಸ್ಥ ಶಿವಲಿಂಗವನ್ನು ಕಂಡರಿಸಲಾಗಿದ್ದು, ಇನ್ನೊಂದು ಪೀಠಸ್ಥ ಶಿವಲಿಂಗವು ಅದರ ಮೇಲೆಯೇ ಕಂಡುಬರುತ್ತಿದ್ದು ಮೊದಲನೆಯದು ಎರಡನೆಯದಕ್ಕೆ ಆಧಾರವಾಗಿರುವಂತೆ ತೋರಿಸಲಾಗಿದೆ. ಮೇಲಿರುವ ಪೀಠದ ಪ್ರಣಾಳವು ನಮ್ಮ ಎಡಕ್ಕೆ ಸ್ವಲ್ಪ ಪ್ರಧಾನವಾಗಿ ಗೋಚರಿಸುವಂತೆ ಕಡೆಯಲಾಗಿದೆ. ಕೆಳಗಿರುವ ಪೀಠಕ್ಕೆ ಪ್ರಣಾಳವು ಇರುವುದಿಲ್ಲ. ಈ ಎರಡೂ ಲಿಂಗಗಳು ಒಂದೇ ಕಲ್ಲಿನಲ್ಲಿ ಮಾಡಿರುವಂತೆ ಉಬ್ಬುಶಿಲ್ಪವನ್ನಾಗಿ ಕಂಡರಿಸಲಾಗಿದೆ. ಅವುಗಳನ್ನು ಒಂದರ ಮೇಲೊಂದು ಇರುವಂತೆಯೂ ಮತ್ತು ನಯವಾಗಿ ಕಾಣುವಂತೆಯೂ ಶಿಲ್ಪಿಯು ಚತುರತೆಯಿಂದ ನಿರ್ಮಿಸಿರುತ್ತಾನೆ ಎಂದು ಹೇಳಿರುವರು. ಇಂದಿಗೂ ಸಹ ದೇವಾಲಯದ ಎದುರಿರುವ ದೀಪಸ್ತಂಭ ಹಾಗೂ ವಿವರಣೆ ನೀಡದ ಲಿಂಗವು ಯಾವುದೇ ರೀತಿಯ ಶಿಥಿಲಗೊಳ್ಳಟ್ಟಿಲ್ಲ ಅಥವಾ ಭಗ್ನಗೊಳಗಾಗಿಲ್ಲ. ಆದರೆ ಸ್ತಂಭಕ್ಕೆ ಸುಣ್ಣ ಬಳಿದಿರುವುದನ್ನು ಹೊರತುಪಡಿಸಿದರೆ ಲಿಂಗವು ಸುಸ್ಥಿತಿಯಲ್ಲಿದ್ದು, ಇಂದಿಗೂ ಪೂಜೆಗೊಳ್ಳುತ್ತಿದೆ ಎಂಬ ಅಂಶವು ನಾನು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿಯೂ ಕಂಡುಬಂದಿತು.

ಲೇಖಕರು ಈ ಲಿಂಗವು ಕ್ರಿ.ಶ. ೧೨ನೇ ಶತಮಾನದಲ್ಲಿ ಸೊನ್ನಲಾಪುರದಲ್ಲಿ ಜೀವಿಸಿದ್ದ ವೀರಶೈವ ಶರಣ ಸಿದ್ಧರಾಮೇಶ್ವರನ ಪವಾಡ ಘಟನೆಗಳಿಗೆ ಸಂಬಂಧಿಸಿದುದಾಗಿದೆ ಎಂದು ಅಭಿಪ್ರಾಯ ಪಟ್ಟಿರುತ್ತಾರೆ. ಕ್ರಿ.ಶ.೧೨ನೇ ಶತಮಾನದಲ್ಲಿ ಜೀವಿಸಿದ್ದ ಸಿದ್ದರಾಮೇಶ್ವರ ಚರಿತ್ರೆಯನ್ನು ಹಂಪೆಯಲ್ಲಿ ವಾಸವಾಗಿದ್ದ ಇನ್ನೊಬ್ಬ ವೀರಶೈವ ಶರಣ ಕವಿ ರಾಘವಾಂಕನು ಕನ್ನಡದಲ್ಲಿ ಬರೆದ ಸಿದ್ಧರಾಮ ಚರಿತ್ರೆಯಲ್ಲಿ ಕಾಣಬಹುದು. ರಾಘವಾಂಕನ ಈ ಗ್ರಂಥದ ಮೂಲಕ ಸಿದ್ಧರಾಮೇಶ್ವರರು ಒಬ್ಬ ಚಾರಿತ್ರಿಕ ಪುರುಷ ಮತ್ತು ಕ್ರಿ.ಶ.೧೨ನೇ ಶತಮಾನದ ಉತ್ತರಾರ್ಧದಲ್ಲಿ ಸೊನ್ನಲಾಪುರದಲ್ಲಿ ಜೀವಿಸಿದ್ದರು. ಅವರು ಬಸವೇಶ್ವರ, ಅಲ್ಲಮಪ್ರಭು, ಚನ್ನಬಸವಣ್ಣ ಮತ್ತಿತರ ಬಸವಕಲ್ಯಾಣದ ಶರಣರ ಸಮಕಾಲೀನರು ಎಂಬುದು ತಿಳಿದುಬರುತ್ತದೆ. ಹಾಗೆಯೇ ಸಿದ್ಧರಾಮರ ಆರಾಧ್ಯ ದೈವವಾದ ಶ್ರೀಶೈಲ ಮಲ್ಲಿಕಾರ್ಜುನ ಸ್ವಾಮಿಯು ಒಂದು ದಿನ ತನ್ನ ಭಕ್ತನನ್ನು ಕುರಿತು ಸ್ವಂತ ಊರಾದ ಸೊನ್ನಲಾಪುರಕ್ಕೆ ಹಿಂತಿರುಗಿ ಅದನ್ನೆ ತನ್ನ ಆಧ್ಯಾತ್ಮಿಕ, ಸಾಹಿತ್ಯಿಕ, ಸಾಮಾಜಿಕ ಮುಂತಾದ ಕಾರ್ಯಗಳ ಕೇಂದ್ರವನ್ನಾಗಿಸಿಕೊಳ್ಳುವಂತೆ ತಿಳಿಸುವುದು. ಆದರೆ ಸಿದ್ಧರಾಮರು ತಮ್ಮ ಆರಾಧ್ಯ ದೈವದಿಂದ ದೂರವಿರಲು ಸಮ್ಮತಿಸದಿರುವುದು. ಅದಕ್ಕೆ ಪರಿಹಾರವಾಗಿ ಶ್ರೀಶೈಲ ಮಲ್ಲಿಕಾರ್ಜುನ ಸ್ವಾಮಿಯು ಆ ಕಾರಣಕ್ಕಾಗಿ ಚಿಂತಿಸದಿರಲು ಸಿದ್ಧರಾಮರಿಗೆ ಹೇಳುತ್ತಾ ತಾನೂ ಕೂಡ ಸೊನ್ನಲಾಪುರದಲ್ಲಿ ಪ್ರಕಟವಾಗಿ ತನ್ನ ಭಕ್ತನ ಜೊತೆಯಲ್ಲಿಯೇ ಇರುವುದಾಗಿ ವಚನವನ್ನಿಯಿವುದು. ಅದಕ್ಕಾಗಿ ಸಿದ್ಧರಾಮರು ಅನುಸರಿಸಬೇಕಾದ ಕೆಲವು ನಿಬಂಧನೆ ಗಳನ್ನು ತಿಳಿಸುವುದು. ಎಂದರೆ ಸಿದ್ಧರಾಮರು ಸೊನ್ನಲಾಪುರಕ್ಕೆ ಹಿಂದಿರುಗಿದ ನಂತರ ಒಂದು

ಶುಭ ಮೂಹರ್ತದಲ್ಲಿ ಮಂದಾರ ವೃಕ್ಷವೊಂದರ ಕೆಳಗೆ ಒಂದು ಶಿವಲಿಂಗವನ್ನು ಸ್ಥಾಪಿಸುವಂತೆಯೂ ತದನಂತರ ತಾನೇ ಅಲ್ಲಿಗೆ ಬಂದು ಅದರ ಮೇಲೆ ನೆಲೆಸುವುದಾಗಿಯೂ ಆಶ್ವಾಸನೆ ನೀಡಿದುದು. ಅಷ್ಟಲ್ಲದೇ ಮಲ್ಲಿಕಾರ್ಜುನ ದೇವರು ತಾನು ಸಿದ್ಧರಾಮರ ಸೊನ್ನಲಾಪುರಕ್ಕೆ ಬರುವ ಶುಭಮೂಹರ್ತ, ಸ್ಥಳ, ಕುರುಹುಗಳು, ಅನುಸರಿಸಬೇಕಾದ ಆಚರಣೆಗಳು, ತಾನು ಬಂದುದನ್ನು ಗುರುತಿಸುವ ಕ್ರಮ ಮುಂತಾದವುಗಳ ಕುರಿತು ವಿವರವಾಗಿ ತಿಳಿಸುವುದು ಹಾಗೂ ಅದಕ್ಕನುಗುಣವಾಗಿ ಸಿದ್ಧರಾಮರು ಸೊನ್ನಲಾಪುರಕ್ಕೆ ಹಿಂದಿರುಗಿ ಅಮರಲಿಂಗವನ್ನು ಪ್ರತಿಷ್ಠಾಪಿಸಿ ಅದಕ್ಕೆ ಒಂದು ದೇವಾಲಯವನ್ನು ನಿರ್ಮಿಸಿದ ವಿಷಯ ತದನಂತರ ತನ್ನ ಆರಾಧ್ಯ ದೈವವಾದ ಶ್ರೀಶೈಲ ಮಲ್ಲಿಕಾರ್ಜುನನ ಬರುವಿಕೆಗಾಗಿ ಕಾತುರದಿಂದ ನಿರೀಕ್ಷಿಸುತ್ತಿರುವ ಸಂದರ್ಭಧಲ್ಲಿ ಒಬ್ಬ ಭಕ್ತನು ಓಡಿ ಬಂದು ಒಂದು ಬರಡು ಹಸು ಆ ದಿನವೇ ಗರ್ಭಧಾರಣೆ ಮಾಡಿ, ಆ ದಿನವೇ ಕರುವಿಗೆ ಜನ್ಮವಿತ್ತಂತೆ ಮತ್ತು ಆ ಕರು ಕ್ಷಣಮಾತ್ರದಲ್ಲಿ ಬೆಳೆದು ಯೌವನದ ಹೋರಿಯಾಗಿ ಮೆರೆಯುತ್ತಿದ್ದಂತೆ ವಿಷಯ ತಿಳಿಸಿದುದು. ಆ ಕೂಡಲೇ ಸಿದ್ಧರಾಮರು ತನ್ನ ಪರದೈವವನ್ನೇ ಆ ಘಟನೆಗಳಲ್ಲಿ ಗುರುತಿಸಿ ಸಕಲ ಮರ್ಯಾದೆಗಳೊಂದಿಗೆ ಆ ಸ್ಥಳಕ್ಕೆ ಧಾವಿಸಿ ಬಸವನನ್ನು ತಾನು ಮೊದಲೇ ನಿರ್ಮಿಸಿದ್ದ ದೇವಸ್ಥಾನಕ್ಕೆ ಕರೆತಂದು ಅದರೊಳಕ್ಕೆ ಕಳುಹಿಸುದುದು ಆಗ ಮೊದಲೇ ಆಗಿದ್ದ ದೈವ ಘೋಷಣೆಯಂತೆ ಆ ಬಸವ ದೇವಸ್ಥಾನದ ಒಳಗೆ ಹೋಗುತ್ತಾ ಗರ್ಭಗೃಹವನ್ನು ಪ್ರವೇಶಿಸಿ ಅಲ್ಲಿಯೇ ಲಿಂಗದಲ್ಲಿ ಐಕ್ಯವಾಗುತ್ತಾ ಮೊದಲಿದ್ದ ಲಿಂಗದ ಮೇಲೆ ಇನ್ನೊಂದು ಲಿಂಗವಾಗಿ ರೂಪುಗೊಂಡಿರುವ ಮುಂತಾದ ವಿಷಯಗಳು ತಿಳಿದುಬರುತ್ತವೆ. ಆಗ ಘಟಿಸಿದ ಐಕ್ಯದ ಪರಿಣಾಮವಾಗಿ ಅದು ಒಂದೇ ದೈವ(ಲಿಂಗ)ವೆನಿಸಿದ್ದು ಅಂಥ ಲಿಂಗಕ್ಕೆ ಯೋಗಾಂಗಲಿಂಗವೆಂದು ಪ್ರತೀತಿ.

ಸಿದ್ಧರಾಮ ಚರಿತ್ರೆಯ ಕರ್ತೃ ರಾಘವಾಂಕನ ವ್ಯಾಖ್ಯಾನದ ಪ್ರಕಾರ ಯೋಗಾಂಗ ಲಿಂಗವೆಂಬುದು ಒಂದೇ ಕಲ್ಲಿನಿಂದಾದ ಲಿಂಗಶಿಲ್ಪ. ವೀರಶೈವ ತತ್ವ ಸಿದ್ಧಾಂತವೆಂದರೆ ಪುರುಷ (ಶಿವ) ಮತ್ತು ಶಕ್ತಿ (ದೇವಿ) ಒಂದೇ. ಅವು ಅವಿಚ್ಛಿನ್ನ ಮತ್ತು ಅವಿಭಾಜ್ಯ ಎಂಬುದು ಪರಮಾತ್ಮನಿಗೆ ಆಧಾರ ಇಲ್ಲವೆಂಬುದು ಮತ್ತು ತನಗೆ ತಾನೇ ಆಧಾರ ಎಂಬ ತತ್ವಗಳು. ಇಲ್ಲಿ ಗಮನಿಸಬೇಕಾದ ಒಂದು ವಿಷಯವೆಂದರೆ ಕ್ರಿ.ಶ.೧೨ ಮತ್ತು ೧೩ನೇ ಶತಮಾನಗಳ ಈ ದೇವಾಲಯಕ್ಕೆ ಮತ್ತು ದೇವರಿಗೆ ಸಂಬಂಧಪಟ್ಟಂತೆ ೨೨ಕ್ಕೂ ಹೆಚ್ಚಿನ ಶಾಸನಗಳು ಇದ್ದು ಇದರಲ್ಲಿ ಯಾವೊಂದು ಶಾಸನವು ಆ ದೇವಸ್ಥಾನದಲ್ಲಿ ಸ್ಥಾಪಿತವಾದ ಲಿಂಗಕ್ಕೆ ಲಿಂಗದ ಮೇಲೆ ಲಿಂಗವೆಂದಾಗಲಿ, ಯೋಗಾಂಗಲಿಂಗವೆಂದಾಗಲೀ ಹೇಳದೆ ಕಪಿಲಸಿದ್ಧ ಮಲ್ಲಿಕಾರ್ಜುನ ದೇವ ಅಥವಾ ಕಪಿಲ ಮಲ್ಲಿಕಾರ್ಜುನ ಎಂದು ವಿವರಿಸುತ್ತವೆ. ಇಲ್ಲಿ ಕಪಿಲ ಎಂಬ ಶಬ್ದವು ಮೇಲೆ ವಿವರಿಸಿದ ಬಸವನ ಪವಾಡಕ್ಕೆ ಅನ್ವಯವಾಗುತ್ತದೆ ಮತ್ತು ಆ ಸ್ಥಳಕ್ಕೆ ಅಭಿನವ ಶೈಲ ದಕ್ಷಿಣ ಕಾಶಿಯೆಂದು ಉಲ್ಲೇಖಿಸಿರುವುದು ತಿಳಿಯುತ್ತದೆ. ಇಲ್ಲಿ ಇನ್ನೂ ಒಂದು ಗಮನಿಸಬೇಕಾದ ವಿಷಯವೆಂದರೆ ಶರಣ ಸಿದ್ಧರಾಮೇಶ್ವರರು ತಮ್ಮ ವಚನಗಳ ಅಂತ್ಯದಲ್ಲಿ ತನ್ನ ಆರಾಧ್ಯ ದೈವನನ್ನು ಸ್ಮರಿಸುತ್ತಾ ಕಪಿಲ ಸಿದ್ದಮಲ್ಲಿಕಾರ್ಜುನ ಎಂಬ ಅಂಕಿತದಲ್ಲಿ ಬರೆದಿರುತ್ತಾನೆ. ಆ ಕಾರಣದಿಂದಾಗಿಯೇ ಶಾಸನಗಳು ಇದೇ ಪದವನ್ನೆ ಬಳಸಿರಬಹುದೆಂದು ಲೇಖಕರು ಅಭಿಪ್ರಾಯ ಪಡುತ್ತಾರೆ.

ಹಂಪೆಯ ಉದ್ಧಾನ ವೀರಭದ್ರ ದೇವಾಲಯದಲ್ಲಿ ಕಾಣಬರುವ ಲಿಂಗದ ಮೇಲೆ ಲಿಂಗವು ಮೇಲೆ ವಿವರಿಸಿದ ಕ್ರಿ.ಶ.೧೨ನೇ ಶತಮಾನದಲ್ಲಿ ಜೀವಿಸಿದ್ದ ಸಿದ್ಧರಾಮರ ಜೀವನ ಚರಿತ್ರೆ, ಘಟನಾವಳಿಗಳನ್ನು ಆಧರಿಸಿದುದಾಗಿದೆ ಎಂದು ತಿಳಿಯಬಹುದು. ಅಲ್ಲದೆ ಸಿದ್ಧರಾಮರ ಜೀವನ ಚರಿತ್ರೆಯು ಪ್ರಥಮ ಬಾರಿಗೆ ಬರೆಯಲ್ಪಟ್ಟದ್ದು ಹಂಪೆಯಲ್ಲಿ ಹಾಗೂ ಕವಿ ರಾಘವಾಂಕನಿಂದ ಅದೂ ಸಿದ್ಧರಾಮರ ಕಾಲಾನಂತರವೆಂಬುದು ಇನ್ನೊಂದು ವಿಶೇಷತೆ.

ಹೀಗೆ ಹಂಪಿಯ ಪ್ರಾಂತ್ಯದಲ್ಲಿಯೂ ಮತ್ತು ಸಿದ್ಧರಾಮರ ಕಾಲಾನಂತರ ಸುಮಾರು ೪೦೦ ವರ್ಷಗಳ ನಂತರ ಎಂದರೆ ಕ್ರಿ.ಶ.೧೬ನೇ ಶತಮಾನದಲ್ಲಿಯೂ ಸಹ ವಿಶೇಷ ಜನಪ್ರಿಯತೆ ಮತ್ತು ವ್ಯಾಪಕ ಪ್ರಚಾರವನ್ನು ಪಡೆದಿದ್ದುವೆಂದೂ ಮೇಲಿನ ಶಿಲ್ಪದಿಂದ ವೇದ್ಯವಾಗುತ್ತದೆ ಎಂದು ಲೇಖಕರು ತಮ್ಮ ಲೇಖನದಲ್ಲಿ ತಿಳಿಸುತ್ತಾರೆ.

ಈ ಮೇಲಿನ ವಿವರಣೆಗಳಿಂದ ಹಂಪಿಯಲ್ಲಿ ದೊರೆಯುವ ಎರಡೂ ಲಿಂಗಶಿಲ್ಪಗಳು ಅಂದರೆ ಸರ್ವಾಂಗಲಿಂಗ ಮತ್ತು ಯೋಗಾಂಗಲಿಂಗಗಳೆರಡೂ ವೀರಶೈವ ಸಿದ್ಧಾಂತದ ಹಿನ್ನೆಲೆಯಲ್ಲಿ ರಚಿತವಾದವುಗಳೆಂಬುದು ತಿಳಿಯುವುದಲ್ಲದೆ ವೀರಶೈವ ಮತವು ಹೆಚ್ಚು ವ್ಯಾಪಕವಾಗಿ ವಿಸ್ತರಿಸಿತ್ತಲ್ಲದೆ ಪ್ರಸಿದ್ಧಿ ಪಡೆದಿತಿತ್ತು ಎಂದು ತಿಳಿಯುತ್ತದೆ.



ಸರ್ವಾಂಗಲಿಂಗ, ಉದ್ಧಾನವೀರಭದ್ರ ದೇವಾಲಯ,
ಹಂಪಿ



ಯೋಗಾಂಗಲಿಂಗ, ಉದ್ದಾನವೀರಭದ್ರ ದೇವಾಲಯದ
ದೀಪಸ್ತಂಬ, ಹಂಪಿ

## ಬಡವಿ ಲಿಂಗ

ಏಕಶಿಲೆಯಲ್ಲಿ ರಚಿತವಾದ ಈ ಶಿವಲಿಂಗವು ಸುಮಾರು ೭–೮ ಅಡಿ ಎತ್ತರವಾಗಿದ್ದು, ಹಂಪಿ ಪರಿಸರದಲ್ಲಿಯೇ ಅತ್ಯಂತ ದೊಡ್ಡ ಗಾತ್ರದ ಲಿಂಗವಾಗಿದೆ. ಇದು ಹಂಪಿಯಲ್ಲಿರುವ ಬಾಲಕೃಷ್ಣ ದೇವಾಲಯದ ಬಳಿಯಲ್ಲಿಯೇ ಹಾಗೂ ಏಕಶಿಲಾ ಲಕ್ಷ್ಮೀನರಸಿಂಹ ಶಿಲ್ಪದ ಬಲಪಕ್ಕದಲ್ಲಿಯೇ ಒಂದು ಗರ್ಭಗೃಹದಲ್ಲಿದೆ. ಈ ಗರ್ಭಗೃಹಕ್ಕೆ ನಿರಂತರವಾಗಿ ಕಾಲುವೆಯ ಮೂಲಕ ನೀರನ್ನು ಬಿಡಲಾಗುತ್ತದೆ. ಆದ್ದರಿಂದ ಈ ಲಿಂಗವು ಸದಾ ೧–೨ ಅಡಿಗಳಷ್ಟು ಕೆಳಭಾಗದಲ್ಲಿ ನೀರಿನಿಂದ ಆವೃತ್ತವಾಗಿರುತ್ತದೆ. ಇದು ವೃತ್ತಾಕಾರದ ಪೀಠವನ್ನು ಹೊಂದಿದ್ದು, ಬ್ರಹ್ಮಭಾಗ, ವಿಷ್ಣುಭಾಗ ಹಾಗೂ ವೃತ್ತಾಕಾರದ ಪಾಣಿಪೀಠ ಹಾಗೂ ರುದ್ರಭಾಗಗಳನ್ನು ಒಳಗೊಂಡಿದೆ. ರುದ್ರಭಾಗ ಅಥವಾ ಪೂಜಾ ಭಾಗದಲ್ಲಿ ಪಾರ್ಶ್ವಸೂತ್ರಗಳನ್ನು ಕಾಣಬಹುದು ಹಾಗೂ ಶಿವನ ತ್ರಿನೇತ್ರ ಮತ್ತು ಎರಡು ಕಣ್ಣುಗಳನ್ನು ಕೊರೆದಿರುವರು. ಲಿಂಗದ ಶಿರೋಭಾಗವು ಚಪ್ಪಟೆಯಾಕಾರದಲ್ಲಿದೆ. ಬ್ರಹ್ಮಸೂತ್ರ (ಎರಡು ಲಂಬರೇಖೆಗಳು)ವನ್ನು ತೋರಿಸಲಾಗಿಲ್ಲ. ಈ ಎಲ್ಲ ಲಕ್ಷಣಗಳಿಂದ ಇದು ಯಾವುದೇ ಆಗಮ ಹಾಗೂ ಶಿಲ್ಪಶಾಸ್ತ್ರದ ನಿಯಮಗಳನ್ನು ಒಳಗೊಂಡು ರಚಿತವಾದುದಲ್ಲವೆಂದು ತಿಳಿಯಬಹುದು. ಆದರೆ ಇದರ ನಿರ್ಮಿತಿಗೆ ಎರಡು ಐತಿಹ್ಯಗಳು ಪ್ರಚಲಿತದಲ್ಲಿವೆ.

ಮೊದಲನೆಯದು ಒಬ್ಬ ಬಡ ವೃದ್ಧ ಶಿವಭಕ್ತೆಯೊಬ್ಬಳು ಹಂಪಿಯ ಸಮೀಪದ ಗ್ರಾಮವೊಂದ ರಲ್ಲಿ ವಾಸವಾಗಿದ್ದಳು. ಆಕೆ ಪರಮ ಶಿವಭಕ್ತೆಯಾಗಿದ್ದು, ಪ್ರತಿದಿನ ಮುಂಜಾನೆ ಮತ್ತು ಸಂಜೆಯ ಸಮಯದಲ್ಲಿ ತಪ್ಪದೆ ಶಿವಪೂಜೆ ಮಾಡುತ್ತಿದ್ದಳು. ಆಕೆ ಪರಸ್ಥಳಕ್ಕೆ ಹೋದ ಸಂದರ್ಭದಲ್ಲಿ ಶಿವಲಿಂಗವನ್ನು

ತನ್ನ ಸೀರೆಯ ಸೆರಗಿನಲ್ಲಿ ಕಟ್ಟಿರುತ್ತಿದ್ದಳು. ಒಂದು ದಿನ ಆಕೆ ಹಂಪಿಯಲ್ಲಿ ಗದ್ದೆ ಕೆಲಸ ಮಾಡುವ ಸಂದರ್ಭದಲ್ಲಿ ಬಾಯಾರಿಕೆಯಾಗಿ ನೀರು ಕುಡಿಯುವಾಗ ಸೀರೆಯ ಸೆರಗಿನಲ್ಲಿದ್ದ ಶಿವಲಿಂಗವು ನೀರಿನಲ್ಲಿ ಬಿದ್ದಿತು. ಎಷ್ಟು ಹುಡುಕಾಡಿದರು ಶಿವಲಿಂಗವು ದೊರೆಯದೆ ಹೋಯಿತು. ಸೂರ್ಯಾಸ್ತದ ಸಮಯ ಅಂದರೆ ಶಿವಪೂಜೆಯ ಸಮಯ ಸಮೀಪಿಸಿ ಆಕೆಗೆ ಬಹಳ ದುಃಖವಾಗಿ ನನ್ನ ಈ ತಪ್ಪಿಗೆ ಪರಿಹಾರವೇ ಇಲ್ಲವೇ ಎಂದು ರೋಧಿಸುತ್ತಾ ಕುಳಿತಿರುವಾಗ ಶಿವ ಆಕೆಯ ಭಕ್ತಿಗೆ ಮೆಚ್ಚಿ ನೀರಿನಿಂದ ಅದ್ಭುತ ಲಿಂಗಾಕಾರದಲ್ಲಿ ಮೇಲಕ್ಕೆ ಎದ್ದು ಬಂದನೆಂದು ಅಂದಿನಿಂದಲೂ ಈ ಲಿಂಗಕ್ಕೆ ಬಡವಿಲಿಂಗ ಎಂದು ಹೆಸರಾಯಿತೆಂದು ಪ್ರತೀತಿ.

ಇನ್ನೊಂದು ಐತಿಹ್ಯದ ಪ್ರಕಾರ ಪಂಪಾಪತಿ ಜಾತ್ರೆ ನಡೆಯುವಾಗ ಎಲ್ಲಾ ಭಕ್ತರು ಅಲ್ಲಿಗೆ ಬಂದು ಸೇರಿದರು. ಆಗ ಪಾರ್ವತಿಯು ಶಿವನನ್ನು ಕುರಿತು ನಮ್ಮ ಭಕ್ತರೆಲ್ಲ ಸುಡುವ ಬಿಸಿಲಿನಲ್ಲಿ ಬೇಯುತ್ತಿದ್ದಾರೆ ನಾವು ಅಲ್ಲಿಗೆ ಬೇಗನೆ ಹೋಗೋಣವೆಂದು ಕೇಳಿಕೊಂಡಾಗ ಶಿವನು ನನ್ನ ಭಕ್ತ ಬಂದಿಲ್ಲ ಅವನು ಬರುವವರೆಗೂ ನಾನೂ ಬರುವುದಿಲ್ಲವೆಂದು ಉತ್ತರಿಸಿದನು. ಆಗ ಪಾರ್ವತಿಯು ಆ ಭಕ್ತ ಯಾರು ಎಂಬುದರ ಕುರಿತು ವಿಚಾರಿಸಿದಾಗ ಶಿವನು ಭಕ್ತನ ಭಕ್ತಿ ಪರೀಕ್ಷೆಯನ್ನು ಮಾಡುವ ಮೂಲಕ ಪಾರ್ವತಿಗೆ ಉತ್ತರಿಸಲೆತ್ನಿಸಿದನು. ಅದರಂತೆ ಶಿವನು ನೀರಿನಲ್ಲಿ ಬಿದ್ದಂತೆ, ಪಾರ್ವತಿಯ ಶಿವನ ಜೀವರಕ್ಷಿಸುವಂತೆ ಜನರಲ್ಲಿ ಕೇಳುತ್ತಿರುವಂತೆ ನಟಿಸಿದರು. ಆಗ ಅಲ್ಲಿದ್ದ ಜನ ಸಮೂಹ ಇವರನ್ನು ನಿರ್ಲಕ್ಷಿಸಿದರು. ಆದರೆ ಆತುರಾತುರವಾಗಿ ಬರುತ್ತಿದ್ದ ದಂಪತಿಗಳಿಬ್ಬರು ಇವರೆಡೆಗೆ ಬಂದು ತಾವು ಧರಿಸಿದ್ದ ವಸ್ತ್ರಗಳನ್ನು ಕಳಚಿ ನೀರಿಗಳಿದು ಶಿವನನ್ನು ರಕ್ಷಿಸಿದರು. ಇದಕ್ಕೆ ಮೆಚ್ಚಿದ ಶಿವನು ಅವರಿಗೆ ವರವೇನು ಬೇಕು ಎಂದು ಕೇಳಿದಾಗ ಆ ದಂಪತಿಗಳು ಸ್ವಾಮಿ ನಮ್ಮಂತಹ ಸಾಮಾನ್ಯ ಜನರಿಗೆ ನಿನ್ನ ದರ್ಶನ ದೊರಕುವುದು ಬಹಳ ಕಷ್ಟ. ಆದ್ದರಿಂದ ಬಡವರ ಹೆಸರಿನಲ್ಲಿ ಒಂದು ಶಿವಲಿಂಗವನ್ನು ಸ್ಥಾಪಿಸು ಇದರಿಂದ ಎಲ್ಲ ಬಡಜನರಿಗೆ ನಿನ್ನ ದರ್ಶನ ದೊರೆಯು ವಂತಾಗುತ್ತದೆಂದೂ ಕೇಳಿಕೊಂಡಾಗ ಶಿವನು ಅವರ ಕೋರಿಕೆಯನ್ನು ಅನುಗ್ರಹಿಸಿ ದೊಡ್ಡದಾದ ಶಿವಲಿಂಗವನ್ನು ಸ್ಥಾಪಿಸಿದನು. ಅಂದಿನಿಂದ ಬಡವರಲಿಂಗ-ಬಡವಿಲಿಂಗ ಎಂದು ಕರೆಯಲ್ಪಟ್ಟಿತ್ತೆಂದು ಪ್ರತೀತಿ ಇದೆ.[೨೦]



ಬಡವಿಲಿಂಗ. ಹಂಪಿ

## ಮಾಲ್ಯವಂತ ಪರ್ವತದಲ್ಲಿರುವ ಶಿವಲಿಂಗಗಳ ಸಮೂಹ

ಪ್ರಸ್ತುತ ಮಾಲ್ಯವಂತ ದೇವಾಲಯದ ಹಿಂಭಾಗದಲ್ಲಿ ಚಿಕ್ಕದಾದ ಗುಹಾಂತರ ದೇವಾಲಯವಿದ್ದು, ಇದು ಶೈವ ದೇವಾಲಯವಾಗಿದೆ. ಅದನ್ನು ಪ್ರಸನ್ನ ಮಾಲ್ಯವಂತ ಅಥವಾ ಪ್ರಸನ್ನ ವಿರೂಪಾಕ್ಷ ದೇವಾಲಯವೆಂದು ಕರೆಯುವರು. ಈ ದೇವಾಲಯದ ಎದುರಿನಲ್ಲಿ ಹಾಸುಬಂಡೆಯ ಮೇಲೆ ಹಲವು ಪೀಠಸಹಿತ ಶಿವಲಿಂಗಗಳನ್ನು ಹಾಗೂ ಪ್ರತಿಯೊಂದು ಶಿವಲಿಂಗದ ಕೆಳಗೆ ನಂದಿಶಿಲ್ಪವನ್ನು ಕೆತ್ತಿರುವರು. ಇದರ ಪಕ್ಕದಲ್ಲಿಯೇ ಒಂದು ತೀರ್ಥವಿದ್ದು, ಅದನ್ನು ಪಂಪಾಮಹಾತ್ಮೆಯಲ್ಲಿ ಲಕ್ಷ್ಮಣತೀರ್ಥವೆಂದು ಹೆಸರಿಸಲಾಗಿದೆ. ಈ ತೀರ್ಥದ ಪಶ್ಚಿಮಕ್ಕೆ ಬಂಡೆಯ ಮೇಲೆ ಕೊರೆದಿರುವ ಶಿವಲಿಂಗ, ದಕ್ಷಿಣ ಭಾಗದಲ್ಲಿ ಶಿವಲಿಂಗಗಳು ಮತ್ತು ಉತ್ತರ ದಿಕ್ಕಿನಲ್ಲಿ ಶಿವಲಿಂಗ ಮತ್ತು ನಂದಿ ವಿಗ್ರಹಗಳಿವೆ. ಅಲ್ಲದೆ ಆಗ್ನೇಯ ದಿಕ್ಕಿನಲ್ಲಿ ವೀರಭದ್ರ ದೇವಾಲಯವಿದೆ. ಅದರ ಪಕ್ಕದಲ್ಲಿ ಶಿವಲಿಂಗ ಮತ್ತು ನಂದಿಯ ವಿಗ್ರಹಗಳಿವೆ. ಈ ಶಿವಲಿಂಗವನ್ನು ಕಾಳಹಸ್ತಿಲಿಂಗವೆಂದು ಸೂಚಿಸುವ ಶಾಸನವು ಪಕ್ಕದಲ್ಲಿದೆ. ವೀರಭದ್ರ ದೇವಾಲಯದ ಕೆಳಭಾಗದಲ್ಲಿ ಗುಂಡಿನ ಮೇಲೆ ಮೈಲಾರ, ಗಣೇಶ ಮತ್ತು ಭೈರವ ಶಿಲ್ಪಗಳಿವೆ. ಇಷ್ಟು ಶೈವ ಶಿಲ್ಪಗಳನ್ನು ಒಳಗೊಂಡರುವ ಈ ಪರ್ವತವು ಒಂದು ಪ್ರಖ್ಯಾತ ಶೈವ ಕ್ಷೇತ್ರವಾಗಿತ್ತು. ನಂತರದ ಕಾಲದಲ್ಲಿ ಶ್ರೀ ವೈಷ್ಣವ ಧರ್ಮದ ಪ್ರಭಾವದಿಂದಾಗಿ ಮಾಲ್ಯವಂತ ರಘುನಾಥ ದೇವಾಲಯ ನಿರ್ಮಾಣಗೊಂಡಿರಬಹುದು ಎಂಬ ಅಭಿಪ್ರಾಯವಿದೆ.[೨೨] ಅಲ್ಲದೆ ಈ ಪರ್ವತದಲ್ಲಿ ಮೊದಲು ಕೇರಳ ರಾಜ್ಯದ ಮಾಲ್ಯವಂತನೆಂಬ ಋಷಿ ವಾಸವಿದ್ದು, ಅವನು ಶಿವನ (ವಿರೂಪಾಕ್ಷ) ಪರಮಭಕ್ತನಾಗಿದ್ದನು. ಈತನು ಶಿವನನ್ನು ಕುರಿತು ತಪಸ್ಸು ಕೈಗೊಂಡಿದ್ದರಿಂದ ಈ ಕ್ಷೇತ್ರವನ್ನು ಋಷಿಯ ಹೆಸರಿನಿಂದಲೇ ಅಂದರೆ ಮಾಲ್ಯವಂತ ಪರ್ವತವೆಂದು ಪ್ರಸಿದ್ಧಿ ಹೊಂದಲಿ[೨೩] ಎಂದು ವರ ನೀಡಿದ್ದರಿಂದ ಅಂದಿನಿಂದ ಮಾಲ್ಯವಂತ ಪರ್ವತವೆಂದು ಕರೆಯಲಾಗಿದೆ ಎಂದು ಪ್ರತೀತಿಯಿದೆ. ಹೀಗೆ ಪೌರಾಣಿಕ ಕಾಲದಿಂದಲೂ ಇದೊಂದು ಶೈವ ಕ್ಷೇತ್ರವಾಗಿತ್ತೆನ್ನಲು ಇಲ್ಲಿರುವ ಶಿವಲಿಂಗ ಹಾಗೂ ನಂದಿಶಿಲ್ಪಗಳ ಸಮೂಹವೇ ಸಾಕ್ಷಿಯಾಗಿವೆ ಎನ್ನಬಹುದು.



ಶಿವಲಿಂಗಗಳ ಸಮೂಹ, ಮಾಲ್ಯವಂತ ರಘುನಾಥ ದೇವಾಲಯದ ಹಿಂಭಾಗ, ಕಮಲಾಪುರ

**ಶ್ರೀ ಕಾಳಹಸ್ತಿಲಿಂಗ**

ಆಂಧ್ರ ಪ್ರದೇಶದ ಚಿತ್ತೂರು ಜಿಲ್ಲೆಯ ಶ್ರೀ ಕಾಳಹಸ್ತಿಯು ಪುರಾಣ ಪ್ರಸಿದ್ಧ ಶೈವ ಕೇಂದ್ರ. ಇಲ್ಲಿಯ ದೇವಾಲಯದಲ್ಲಿ ಪಂಚಭೂತ ಲಿಂಗಗಳಲ್ಲಿ ಒಂದಾದ ವಾಯು ಲಿಂಗವಿದ್ದು, ಈ ಪ್ರದೇಶವನ್ನು ದಕ್ಷಿಣಕಾಶಿಯೆಂದೇ ಕರೆಯಲಾಗಿದೆ. ಇಲ್ಲಿರುವ ದೇವಾಲಯ ಹಾಗೂ ಲಿಂಗ ಒಂದು ಐತಿಹ್ಯದ ಹಿನ್ನೆಲೆಯಲ್ಲಿ ಶ್ರೀ ಕಾಳಹಸ್ತಿ ಎಂದು ಹೆಸರು ಪಡೆದಿರುವುದು ತಿಳಿದುಬರುತ್ತದೆ. ಆ ಐತಿಹ್ಯವೆಂದರೆ ಜೇಡರ ಹುಳು, ಆನೆ, ಸರ್ಪ ಈ ಮೂರು ಜೀವಿಗಳು ಶಿವನ ಪರಮಭಕ್ತರಿದ್ದು ನಿತ್ಯವು ತಮ್ಮದೇ ಆದ ರೀತಿಯಲ್ಲಿ ಇಲ್ಲಿಯ ಲಿಂಗವನ್ನು ಪೂಜಿಸುತ್ತಿರುತ್ತವೆ. ಜೇಡರ ಹುಳು ಧೂಳು ಮತ್ತು ಕಸದಿಂದ ಲಿಂಗಕ್ಕೆ ತೊಂದರೆಯಾಗಬಾರದೆಂದು ನಿತ್ಯವು ಬಲೆಯನ್ನು ಹೆಣೆಯುವುದರ ಮೂಲಕ ಭಕ್ತಿಯನ್ನು ತೋರಿಸುತ್ತದೆ. ಹಾಗೆಯೇ ಸರ್ಪವು ಸಹ ಲಿಂಗದ ಮೇಲೆ ಮಣಿಯನ್ನಿಟ್ಟು ತನ್ನ ಹೆಡೆಯಿಂದ ರಕ್ಷಣೆ ನೀಡುವುದರ ಮೂಲಕ ಮತ್ತು ಆನೆಯು ನೀರನ್ನು ತಂದು ಲಿಂಗವನ್ನು ಸ್ವಚ್ಛಗೊಳಿಸಿ ಪುಷ್ಪ, ಬಿಲ್ವಪತ್ರೆಗಳನ್ನು ಮುಡಿಸುವುದರ ಮೂಲಕ ತಮ್ಮ ತಮ್ಮ ಭಕ್ತಿಯನ್ನು ತೋರಿಸುವುವು. ಹೀಗೆ ನಿತ್ಯವೂ ಮಾಡುತ್ತಿದ್ದ ಸಂದರ್ಭದಲ್ಲಿ ಒಂದು ದಿನ ಜೇಡರ ಹುಳು ಮತ್ತು ಸರ್ಪವು ತಮ್ಮ ಪೂಜೆ ಸಲ್ಲಿಸಿದ ನಂತರ ತಡವಾಗಿ ಬಂದ ಆನೆಯು ನೀರನ್ನು ತಂದು ಲಿಂಗಕ್ಕೆರಚಿತು. ಇದರಿಂದ ಕೋಪಗೊಂಡ ಜೇಡ ಮತ್ತು ಸರ್ಪವು ಆನೆ ವಿರುದ್ಧ ಹೋರಾಡಲು ನಿರ್ಧರಿಸಿ ಮೂರು ಜೀವಿಗಳ ನಡುವೆ ಹೋರಾಟವಾಗಿ ಮೂರು ಸಹ ಮರಣವನ್ನಪ್ಪಿದವು. ಆಗ ಶಿವನು ಪ್ರತ್ಯಕ್ಷವಾಗಿ ಅವುಗಳ ನಿಸ್ವಾರ್ಥ ಸೇವೆಗೆ ಮೆಚ್ಚಿ ಮೋಕ್ಷವನ್ನು ನೀಡಿದನು. ಅಂದಿನಿಂದ ಜೇಡದಿಂದ ಶ್ರೀ ಎಂಬ ಶಬ್ದ, ಸರ್ಪದಿಂದ ಕಾಳ ಎಂದು ಹಾಗೂ ಆನೆಯಿಂದ ಹಸ್ತಿ ಎಂಬ ಪದಗಳೂ ಸೇರಿ ಈ ದೇವಾಲಯಕ್ಕೆ ಹಾಗೂ ಲಿಂಗಕ್ಕೆ ಶ್ರೀ ಕಾಳಹಸ್ತಿ ಎಂದು ಹೆಸರಾಯಿತು. ಈ ಐತಿಹ್ಯವನ್ನು ಒಳಗೊಂಡ ಶಿಲ್ಪಗಳು ವಿರೂಪಾಕ್ಷ ದೇವಾಲಯದ ಅಂತರಾಳದ ಹೊರಭಾಗದ ದಕ್ಷಿಣ ದಿಕ್ಕಿನ ಭಿತ್ತಿಯಲ್ಲಿ ಕಂಡುಬರುತ್ತದೆ. ಇದರ ಕುರಿತು ಧನುಂಜಯ ಸಿ. ಅವರು ಲೇಖನವನ್ನು ಬರೆದಿರುತ್ತಾರೆ.[೨೪] ಆದರೆ ಇವರು ಈ ಕೆಳಗೆ ವಿವರಿಸಿರುವ ಇನ್ನೂ ಕೆಲವು ಶಿಲ್ಪಗಳು ಹಾಗೂ ಶಾಸನ ಉಲ್ಲೇಖಗಳನ್ನು ಗಮನಿಸಿಲ್ಲ. ಮೇಲಿನ ಶಿಲ್ಪವಲ್ಲದೆ ಮಾಲ್ಯವಂತ ರಘುನಾಥ ದೇವಾಲಯದ ಆಗ್ನೇಯ ದಿಕ್ಕಿನಲ್ಲಿ ವೀರಭದ್ರ ದೇವಾಲಯವಿದ್ದು ಅದರ ಪಕ್ಕದಲ್ಲಿ ಶಿವಲಿಂಗ ಮತ್ತು ನಂದಿ ವಿಗ್ರಹಗಳಿವೆ. ಈ ಶಿವಲಿಂಗವನ್ನು ಕಾಳಹಸ್ತಿ ಲಿಂಗವೆಂದು ಸೂಚಿಸುವ ಶಾಸನವೂ ಪಕ್ಕದಲ್ಲಿದೆ.[೨೫] ಹಾಗೆಯೇ ಕಮಲಾಪುರದ ಎಚ್.ಪಿ.ಸಿ.ಯ ಹತ್ತಿರ ಕಾಲುವೆಯ ಉತ್ತರ ದಂಡೆಯ ಕಲ್ಲಿನ ಆಸರೆಯ ಗುಂಡಿನ ಮೇಲೆ 'ಶ್ರೀ ಕಾಳಹಸ್ತಿ ಲಿಂಗಂ'ಎಂಬ ಶಾಸನವು ದೊರೆಯುತ್ತದೆ.[೨೬] ಹೀಗೆ ವಿರೂಪಾಕ್ಷ ದೇವಾಲಯದಲ್ಲಿ ಕಂಡುಬರುವ ಶಿಲ್ಪದಂತೆಯೇ ಇನ್ನೂ ಹಲವು ಶಿಲ್ಪಗಳು ಕಂಡುಬರುತ್ತವೆ. ಲಿಂಗವನ್ನು ಪೂಜಿಸುತ್ತಿರುವ ಜೇಡರ ಹುಳುವಿನ ಶಿಲ್ಪಗಳು, ವಿರೂಪಾಕ್ಷ ದೇವಾಲಯದ ಎಡಬದಿಯ ಪ್ರಾಕಾರ ಮಂಟಪದ ಕಂಬದಲ್ಲಿ ಮತ್ತು ರಾಣಿಯ ಸ್ನಾನಗೃಹದ ಬಳಿಯಿರುವ ಚಂದ್ರಶೇಖರ ದೇವಾಲಯದ ನವರಂಗ ಹಾಗೂ ಮಲಪನಗುಡಿಯ ಮಲ್ಲಿಕಾರ್ಜುನ ದೇವಾಲಯದ ನವರಂಗದ ಕಂಬಗಳಲ್ಲಿ ಕಂಡಬರುತ್ತವೆ. ಹಾಗೆಯೇ ಲಿಂಗಕ್ಕೆ ಸರ್ಪ ಸುತ್ತಿಕೊಂಡಿರುವ ಶಿಲ್ಪಗಳು ಸಾಮಾನ್ಯವಾಗಿ ಕಂಡುಬರುತ್ತಿದ್ದು, ಅವುಗಳು ಒಂದು, ಎರಡು,

ಮೂರು ಐದು ಹಾಗೂ ಏಳು ಹೀಗೆ ಬೇರೆ ಬೇರೆ ಸಂಖ್ಯೆಯ ಹೆಡೆಗಳನ್ನು ಹೊಂದಿರುವವು. ಹಾಗೆಯೇ ಆನೆಯು ಲಿಂಗಕ್ಕೆ ನೀರೆರೆಚುವ ಹಾಗೂ ಪುಷ್ಪವನ್ನು ಮುಡಿಸುವ ಶಿಲ್ಪಗಳು ವಿರೂಪಾಕ್ಷ ದೇವಾಲಯದ ಎಡಬದಿಯ ಪ್ರಾಕಾರ ಮಂಟಪದ ಕಂಬಗಳಲ್ಲಿ, ಪ್ರಸನ್ನ ವಿರೂಪಾಕ್ಷ ದೇವಾಲಯದ ಉತ್ಸವ ಅಥವಾ ಕಲ್ಯಾಣ ಮಂಟಪದ ಕಂಬದಲ್ಲಿ ಹಾಗೂ ಜಂಬುನಾಥ ದೇವಾಲಯದ ಮಹಾರಂಗ ಮಂಟಪದ ಕಂಬಗಳಲ್ಲಿ ಕಂಡುಬರುತ್ತವೆ. ಹೀಗೆ ಈ ಎಲ್ಲ ಶಿಲ್ಪಗಳು ಶ್ರೀಕಾಳಹಸ್ತಿಯ ಐತಿಹ್ಯವನ್ನು ತಿಳಿಸುತ್ತಿದ್ದು ಅದು ಬಹು ಪ್ರಚಲಿತದಲ್ಲಿತ್ತೆಂದು ಊಹಿಸಬಹುದು.



ಕಾಳಹಸ್ತಿಲಿಂಗ ವಿರೂಪಾಕ್ಷ ದೇವಾಲಯದ ಭಿತ್ತಿ, ಹಂಪಿ

**ಇತರೆ ಶಿವಲಿಂಗಗಳು**

ಈ ಮೇಲಿನ ಶಿವಲಿಂಗಗಳಲ್ಲದೆ ಇನ್ನೂ ಹಲವು ರೀತಿಯ ಶಿವಲಿಂಗಗಳು ಹಂಪಿ ಪರಿಸರದಲ್ಲಿ ಕಂಡುಬರುತ್ತವೆ. ಇವು ಮುಖ್ಯವಾಗಿ ದೇವಾಲಯದ ಭಿತ್ತಿ, ಕಂಬಗಳ ಮೇಲೆ ಕೆತ್ತಲ್ಪಟ್ಟುವುಗಳಾಗಿವೆ. ಪೀಠ ಸಹಿತ ಲಿಂಗಗಳು ದೇವಾಲಯದ ಕಂಬಗಳಲ್ಲಿ ಉಬ್ಬುಶಿಲ್ಪಗಳಾಗಿ ಸಾಮಾನ್ಯವಾಗಿ ಕಂಡುಬರುತ್ತವೆ. ಕೆಲವು ಲಿಂಗಗಳು ವೃಕ್ಷಗಳ ಕೆಳಗೆ ಚಿಕ್ಕಚಿಕ್ಕ ಬಂಡೆಗಳ ಮೇಲೆ ಸ್ಥಾಪಿತವಾಗಿರುವಂತೆ ಕೆತ್ತಲಾಗಿದೆ. ಇವುಗಳ ಮೂಲಕ ಶಿವಲಿಂಗಗಳು ಬೆಟ್ಟಗಳ ಮೇಲೆ ಸ್ಥಾಪಿತವಾಗಿರುವ ಕಲ್ಪನೆಯನ್ನು ಶಿಲ್ಪದಲ್ಲಿ ತೋರಿಸಲಾಗಿದೆ ಎಂದು ತಿಳಿಯಬಹುದು. ಇಂತಹ ಶಿವಲಿಂಗಗಳು ಎಲ್ಲ ದೇವಾಲಯದ ಕಂಬಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಮೇಲೆ ವಿವರಿಸಿದ ವಿರೂಪಾಕ್ಷ ದೇವಾಲಯದ ಭಿತ್ತಿಯ ಮೇಲಿರುವ ಶ್ರೀಕಾಳಹಸ್ತಿಯ ಐತಿಹ್ಯವನ್ನು ಬಿಂಬಿಸುವ ಲಿಂಗದ ಕೆಳಭಾಗದಲ್ಲಿಯೇ ಮತ್ತೊಂದು ಶಿವಲಿಂಗವಿದೆ. ಇದರ ಮುಂದೆ ಅಂಜಲಿ ಮುದ್ರೆಯಲ್ಲಿರುವ ಇಬ್ಬರು ವ್ಯಕ್ತಿಗಳನ್ನು ಕೆತ್ತಲಾಗಿದೆ. ಅದರಲ್ಲಿ ಒಬ್ಬನು ಸಾಮಾನ್ಯನಾಗಿದ್ದು, ಮತ್ತೊಬ್ಬ ವ್ಯಕ್ತಿಯ ದೇಹದ ಕೆಳಭಾಗವು ಮತ್ಸರೂಪವನ್ನು ಹೊಂದಿರುವಂತೆ ತೋರಿಸಲಾಗಿದೆ. ಇವರು ಬಹುಶಃ ವ್ಯಾಘ್ರಪಾದ ಮತ್ತು ಪತಂಜಲಿ ಇದ್ದಿರಬಹುದೆಂದು ಊಹಿಸಬಹುದು. ಶಿಲ್ಪಗಳು ಭಿತ್ತಿಯ ಮೇಲಿರುವುದರಿಂದ ವ್ಯಾಘ್ರಪಾದನ ಪಾದಗಳು ಸರಿಯಾಗಿ ಗೋಚರಿಸುವುದಿಲ್ಲ. ಆದರೆ ದೇಹದ ಅರ್ಧ ಭಾಗವು ಮತ್ಸರೂಪವನ್ನು ಹೊಂದಿರುವ ಪತಂಜಲಿಯನ್ನು ಗುರುತಿಸಬಹುದು. Virupaksha Temple at Hampi ಎಂಬ ಪಿಎಚ್.ಡಿ.ಮಹಾಪ್ರಬಂಧದಲ್ಲಿ ಬಾಲಸುಬ್ರಮಣ್ಯ ಅವರೂ ಈ ಶಿಲ್ಪವನ್ನು ಕುರಿತಂತೆ ಪತಂಜಲಿಯೇ ಇರಬಹುದೆಂದು

ಊಹಿಸಿರುತ್ತಾರೆ.[೨೭] ಬಹುಶಃ ಇಲ್ಲಿ ಕೆತ್ತಲಾಗಿರುವ ಲಿಂಗವು ಚಿದಂಬರಂನ ಆಕಾಶಲಿಂಗದ ಸಂಕೇತವಾಗಿದ್ದು, ಅದರ ಮುಂದೆ ಈ ಇಬ್ಬರೂ ಅಂಜಲಿ ಮುದ್ರೆಯಲ್ಲಿ ನಿಂತಿರುವಂತೆ ಕೆತ್ತಲಾಗಿದೆಯೆಂದು ಊಹಿಸಬಹುದು.

ಇನ್ನೂ ಕೆಲವು ಶಿವಲಿಂಗಗಳ ಪಕ್ಕದಲ್ಲಿ ಅಂದರೆ ರುದ್ರಭಾಗ ಅಥವಾ ಪೂಜಾಭಾಗದ ಪಕ್ಕದಲ್ಲಿ ಹಲ್ಲಿಯನ್ನು ತೋರಿಸಿರುವರು. ಈ ಶಿಲ್ಪದಲ್ಲಿ ಹಲ್ಲಿಯು ಲಿಂಗಕ್ಕೆ ಪುಷ್ಪವನ್ನಿಡುವ ರೀತಿಯಲ್ಲಿದ್ದು ಅದು ಶಿವಲಿಂಗವನ್ನು ಪೂಜಿಸಿ ತನ್ನ ಭಕ್ತಿಯನ್ನು ತೋರುತ್ತಿರುವಂತೆ ಶಿಲ್ಪಿಯು ಶಿಲ್ಪವನ್ನು ರಚಿಸಿರುವನು. ಇಂತಹ ಶಿಲ್ಪಗಳು ವಿರೂಪಾಕ್ಷ ದೇವಾಲಯದ ಭಿತ್ತಿ, ಮಹಾರಂಗಮಂಟಪ ಹಾಗೂ ಎಡಬದಿಯ ಪ್ರಾಕಾರ ಮಂಟಪದ ಕಂಬಗಳಲ್ಲಿ ಮತ್ತು ಕಡಲೆಕಾಳು ಗಣೇಶ ದೇವಾಲಯದ ಮಂಟಪದ ಕಂಬಗಳೆರಡರಲ್ಲಿ ಹಾಗೂ ಪ್ರಸನ್ನ ವಿರೂಪಾಕ್ಷ ದೇವಾಲಯದ ಉತ್ಸವಮಂಟಪದ ಕಂಬವೊಂದರಲ್ಲಿ ಕಂಡುಬರುತ್ತವೆ. ಅಪರೂಪದ ಇನ್ನೊಂದು ವಿಧವ ಲಿಂಗವು ತಿಮ್ಮಲಾಪುರದ ತ್ರಿಕೂಟ ಶಿವ ದೇವಾಲಯದ ನವರಂಗದ ೪ನೇ ಕಂಬದಲ್ಲಿ ಕಂಡರಿಸಲಾಗಿದೆ. ಇದನ್ನೊಂದು ವಿಶಿಷ್ಟ ಮಹಾಲಿಂಗ ಎನ್ನಬಹುದು. ಇಲ್ಲಿ ಕೆಳಗೆ ಕೂರ್ಮ ಅದರ ಮೇಲೆ ಎಡ–ಬಲಕ್ಕೆ ಮುಖ ಮಾಡಿರುವ ಎರಡು ಚಿಕ್ಕ ಗಾತ್ರದ ನಿಂತ ಗಜಗಳನ್ನು ಕೆತ್ತಲಾಗಿದೆ. ಅವುಗಳ ಮೇಲೆ ತಟೆಯಾಕಾರದಂತಿರುವ ಪೀಠವನ್ನು ಕೆತ್ತಲಾಗಿದ್ದು, ಅದರ ಮೇಲೆ ವಿಶಿಷ್ಟವಾಗಿರುವ ರುದ್ರ ಭಾಗವನ್ನು ಕಂಡರಿಸಲಾಗಿದೆ. ಒಟ್ಟಾರೆ ಕೂರ್ಮವು ಗಜಗಳನ್ನು, ಗಜಗಳು ಲಿಂಗವನ್ನು ಹೊತ್ತಿರುವಂತೆ ಶಿವಲಿಂಗವು ಕಂಡುಬರುತ್ತದೆ. ಇಡಿಯಾಗಿ ಲಿಂಗವು ಒಂದು ಪೀಠಸ್ಥ ಲಿಂಗದಂತೆ ಕಾಣುತ್ತದೆ. ಇನ್ನೂ ವಿಶೇಷವಾಗಿ ಕಂಡುಬರುವ ಲಿಂಗ ಶಿಲ್ಪಗಳೆಂದರೆ ಸ್ಥಾವರ ಲಿಂಗವನ್ನು ಪೂಜಿಸುತ್ತಿರುವ ಮತ್ತು ಚಲಲಿಂಗಗಳನ್ನು ಪೂಜಿಸುತ್ತಿರುವ ಶಿಲ್ಪಗಳು ಸ್ಥಾವರ ಲಿಂಗವನ್ನು ಪೂಜಿಸುತ್ತಿರುವ ಶಿಲ್ಪಗಳೆಂದರೆ ಇಲ್ಲಿ ಪೀಠಸಹಿತ ಲಿಂಗವಿದ್ದು, ಕೆಲವೆಡೆ ಅರ್ಚಕರು ಈ ಲಿಂಗವನ್ನು ನೀರಿನಿಂದ ಶುದ್ಧಿಗೊಳಿಸುತ್ತಿರುವಂತೆ ಕೆತ್ತಲ್ಪಟ್ಟಿದ್ದರೆ ಇನ್ನೂ ಕೆಲವು ಕಡೆ ಅರ್ಚಕರು ಲಿಂಗದ ಪೂಜಾಭಾಗಕ್ಕೆ ಹೂ ಮುಡಿಸುತ್ತಿರುವಂತೆ ಕೆತ್ತಲಾಗಿದೆ. ಇನ್ನೂ ಕೆಲವೆಡೆ ಲಿಂಗದ ಮುಂದೆ ಅರ್ಚಕರು ಅಂಜಲಿ ಮುದ್ರೆಯಲ್ಲಿರುವಂತೆ ಕೆತ್ತಲಾಗಿದೆ. ಇಲ್ಲಿ ಅರ್ಚಕನಾದವನ ಶಿಲ್ಪವು ಕೊರಳಲ್ಲಿ ರುದ್ರಾಕ್ಷಿಮಾಲೆಗಳು ಕಟಿಯಿಂದ ಪಾದದವರೆಗಿನ ವಸ್ತ್ರವನ್ನು (ಧೋತಿ) ಧರಿಸಿದ್ದು ತಲೆಯ ಹಿಂಭಾಗದಲ್ಲಿ ಕೂದಲನ್ನು ಕಟ್ಟಿರುವಂತೆ ಕೆತ್ತಲಾಗಿದೆ. ಇಂತಹ ಶಿಲ್ಪಗಳು ವಿರೂಪಾಕ್ಷ ದೇವಾಲಯದ ಭಿತ್ತಿ, ಮಹಾರಂಗಮಂಟಪ, ನೂರು ಕಂಬಗಳ ಮಂಟಪ, ಪ್ರಾಕಾರ ಮಂಟಪದ ಕಂಬಗಳಲ್ಲಿ, ಮಲಪನಗುಡಿಯ ಮಲ್ಲಿಕಾರ್ಜುನ ದೇವಾಲಯದ ಕಂಬವೊಂದರಲ್ಲಿ, ಜಂಬುನಾಥ ದೇವಾಲಯದ ಮಹಾರಂಗಮಂಟಪದ ಕಂಬವೊಂದರಲ್ಲಿ ಹಾಗೂ ಕಮಲಾಪುರದಲ್ಲಿ ರುವ ರಾಘವೇಂದ್ರ ಮಠದ ಕಂಬವೊಂದರಲ್ಲಿ ಕಂಡುಬರುತ್ತವೆ. ಉಮಾಮಹೇಶ್ವರ ದೇವಾಲಯದ ಕಂಬವೊಂದರಲ್ಲಿ ಅರ್ಚಕನೊಬ್ಬ ಲಿಂಗಕ್ಕೆ ಆರತಿ ಬೆಳಗುತ್ತಿರುವ ಶಿಲ್ಪವನ್ನು ಕೆತ್ತಲಾಗಿದೆ. ಇನ್ನೂ ಕೆಲವು ಶಿಲ್ಪಗಳಲ್ಲಿ ಲಿಂಗದ ಮುಂದೆ ರಾಜ ಪ್ರಮುಖನೊಬ್ಬ ಅಂಜಲಿ ಮುದ್ರೆಯಲ್ಲಿ ನಿಂತಿರುವಂತೆ ಕೆತ್ತಲಾಗಿದ್ದರೆ ಇನ್ನೂ ಕೆಲವು ಇಂತಹವುದೇ ಶಿಲ್ಪಗಳಲ್ಲಿ ಶಿವಲಿಂಗ ಅದರ ಮುಂದೆ ನಂದಿ ಹಾಗೂ ರಾಜಪ್ರಮುಖರಿಬ್ಬರು ಅಂಜಲಿ ಮುದ್ರೆಯಲ್ಲಿರುವಂತೆ ಮತ್ತು ಕೆಲವೆಡೆ ಅರ್ಚಕರನ್ನು ತೋರಿಸಲಾಗಿದೆ.

ಅವನು ರಾಜಪ್ರಮುಖನಿಗೆ ಪ್ರಸಾದವನ್ನು (ತೀರ್ಥ) ನೀಡುತ್ತಿರುವಂತೆ ಕೆತ್ತಲಾಗಿದೆ. ಇಂತಹ ಶಿಲ್ಪಗಳು ಬಾಲಕೃಷ್ಣ ದೇವಾಲಯದ ಮಹಾಮಂಪಟದ ಕಂಬವೊಂದರಲ್ಲಿ, ಹಜಾರರಾಮ ದೇವಾಲಯದ ಎದುರಿರುವ ಪಾನಸುಪಾರಿ ಬಜಾರನ ಎಡಬದಿಯಲ್ಲಿರುವ ಪಾಳುಬಿದ್ದಿರುವ ದೇವಾಲಯದ ಗೋಡೆಯಲ್ಲಿರುವ ಒಂದು ಪಟ್ಟಿಕೆಯಲ್ಲಿ, ಗುಮ್ಮಟಾಕಾರದ ದ್ವಾರ. ಮಲಪನಗುಡಿಯ ಮಲ್ಲಿಕಾರ್ಜುನ ದೇವಾಲಯದ ಮಹಾಮಂಟಪದ ಮತ್ತು ಕಲ್ಯಾಣಮಂಟಪದ ಕಂಬವೊಂದರಲ್ಲಿ ತಿಮ್ಮಲಾಪುರ ತ್ರಿಕೂಟ ದೇವಾಲಯದ ಮುಖಮಂಟಪದ ಕಂಬವೊಂದರಲ್ಲಿ ಕಂಡುಬರುತ್ತವೆ. ಈ ಶಿಲ್ಪಗಳು ಕೆಲವೆಡೆ ಕಂಬದ ಒಂದೇ ಪಾರ್ಶ್ವದ, ಒಂದೇ ಪಟ್ಟಿಕೆಯಲ್ಲಿ ಕೆತ್ತಲ್ಪಟ್ಟಿದ್ದರೆ, ಇನ್ನೂ ಕೆಲವು ಒಂದೇ ಕಂಬದ ಬೇರೆ-ಬೇರೆ ಪಾರ್ಶ್ವಗಳಲ್ಲಿ ಅಕ್ಕ-ಪಕ್ಕದಲ್ಲಿ ಕಾಣುವಂತೆ ಅಂದರೆ ನಿರೂಪಣಾತ್ಮಕ ರೀತಿಯಲ್ಲಿ ಕೆತ್ತಲ್ಪಟ್ಟಿವೆ.

ಮೇಲಿನ ಶಿಲ್ಪಗಳಂತೆಯೇ ಚಲಲಿಂಗಗಳೆಂದು ಕರೆಯಲ್ಪಡುವ ಶಿವಲಿಂಗಗಳನ್ನು ಯತಿಗಳು ಪೂಜಿಸಿಕೊಳ್ಳುತ್ತಿರುವ ಶಿಲ್ಪಗಳೂ ಇವೆ. ಈ ಶಿಲ್ಪಗಳಲ್ಲಿ ಯತಿಗಳು ಪದ್ಮಾಸನದಲ್ಲಿ ಕುಳಿತು ಎಡಗೈಯಲ್ಲಿ ಪೀಠಸ್ಥ ಶಿವಲಿಂಗವನ್ನು ಹಿಡಿದಿದ್ದು ಅದು ದೇಹದ ಮಧ್ಯಭಾಗದಲ್ಲಿ ಅಂದರೆ ಉದರ ಭಾಗದ ಹತ್ತಿರ ಚಾಚಿರುತ್ತದೆ. ಹಾಗೂ ಬಲಗೈಯು ಸಹ ಎಡ ಭಾಗದೆಡೆಗೆ ಚಾಚಿದ್ದು, ಅಂದರೆ ಎಡಗೈಯಲ್ಲಿ ಹಿಡಿದ ಶಿವಲಿಂಗದ ಮೇಲ್ಭಾಗದಲ್ಲಿ ಬರುವಂತೆ ಚಾಚಿದ್ದು ಜ್ಞಾನಮುದ್ರೆಯಲ್ಲಿರುತ್ತದೆ. ಕೆಲವು ಶಿಲ್ಪಗಳಲ್ಲಿ ಎಡಗೈಯಲ್ಲಿರುವ ಶಿವಲಿಂಗವು ಸ್ಪಷ್ಟವಾಗಿ ಕಾಣುವಂತೆ ಕೆತ್ತಲಾಗಿದೆ. ಅಲ್ಲದೆ ಈ ಯತಿಗಳು ಉದ್ದನೆಯ ಜಟೆಗಳನ್ನು ಹೊಂದಿರುವಂತೆ ಇಲ್ಲವೆ ಜಟೆಗಳು ತಲೆಯ ಮೇಲ್ಭಾಗದಲ್ಲಿ ಗಂಟು ಕಟ್ಟಿರುವಂತೆ ಕೆತ್ತಲಾಗಿದ್ದು, ಕೊರಳಲ್ಲಿ ಹಾಗೂ ಬಾಹುಗಳಲ್ಲಿ ಆಭರಣಗಳನ್ನು (ರುದ್ರಾಕ್ಷಿ ಮಾಲೆ?) ಧರಿಸಿರುವಂತೆ ಕೆತ್ತಲಾಗಿದೆ. ಈ ಶಿಲ್ಪಗಳು ಪ್ರಸ್ತುತ ವೀರಶೈವರು ಲಿಂಗಪೂಜೆ ಮಾಡಿಕೊಳ್ಳುವ ಪದ್ಧತಿಗೆ ಹೋಲಿಕೆಯಾಗುತ್ತವೆ. ಇಂತಹ ಲಿಂಗಗಳನ್ನು ಚಲಲಿಂಗಗಳೆಂದು ಕರೆದಿರುವರು. ಇಂತಹ ಲಿಂಗಗಳು ಉತ್ಖನನದಲ್ಲಿ ದೊರೆತಿರುವುದನ್ನು ಈ ಮೊದಲೇ ತಿಳಿಸಲಾಗಿದೆ. ಆದ್ದರಿಂದ ಈ ಶಿಲ್ಪಗಳು ಅಂದಿನ ಪೂಜಾ ಪದ್ಧತಿಯನ್ನು ತಿಳಿಯಲು ಸಹಾಯಕವಾಗಿವೆ ಎನ್ನಬಹುದು. ಇಂತಹ ಶಿಲ್ಪಗಳು ವಿರೂಪಾಕ್ಷ ದೇವಾಲಯದ ಕಲ್ಯಾಣ ಅಥವಾ ನೂರು ಕಂಬಗಳ ಮಂಟಪದ ಎದುರಿಗಿರುವ ತೆರೆದ ಮಂಟಪದ (ಪ್ರಸ್ತುತ ಈ ಮಂಟಪದಲ್ಲಿ ಆಂಜನೇಯನ ವಿಗ್ರಹವನ್ನು ನಿಲ್ಲಿಸಲಾಗಿದೆ) ಕಂಬವೊಂದರಲ್ಲಿ ಹಾಗೂ ನೆಲಮನೆ ಶಿವದೇವಾಲಯ ಅಥವಾ ಪ್ರಸನ್ನ ವಿರೂಪಾಕ್ಷ ದೇವಾಲಯದ ಉತ್ಸವ ಮಂಟಪದ ಕಂಬವೊಂದರಲ್ಲಿ, ಕಮಲಾಪುರದಲ್ಲಿರುವ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ವಸ್ತುಸಂಗ್ರಹಾಲಯದಲ್ಲಿ, ಮಲಪನಗುಡಿ ಮಲ್ಲಿಕಾರ್ಜುನ ದೇವಾಲಯದ ಕಲ್ಯಾಣ ಮಂಟಪದಲ್ಲಿ ಕಂಬವೊಂದರಲ್ಲಿ, ಹೊಸಪೇಟೆಯ ಜಂಬೂನಾಥ ದೇವಾಲಯದ ಮಹಾರಂಗ ಮಂಟಪದ ಕಂಬ ಮತ್ತು ತಿಮ್ಮಲಾಪುರದ ತ್ರಿಕೂಟ ದೇವಾಲಯದ ನವರಂಗದ ಕಂಬವೊಂದರಲ್ಲಿ ಕಂಡುಬರುತ್ತವೆ.

ಹೀಗೆ ಈ ರೀತಿಯಾಗಿ ಹಂಪಿ ಪರಿಸರದಲ್ಲಿ ಹಲವು ರೀತಿಯ ಶಿವಲಿಂಗಗಳು ಇರುವುದು ತಿಳಿದುಬರುತ್ತದೆ. ಇವೆಲ್ಲವುಗಳು ಹಂಪಿ ಪ್ರದೇಶವು ಒಂದು ದೊಡ್ಡ ಶೈವ ಕೇಂದ್ರವಾಗಿತ್ತೆಂಬುದನ್ನು ಸಮರ್ಥಿಸುತ್ತವೆ ಎಂದು ಹೇಳಬಹುದು.



ಶಿವಲಿಂಗದೊಂದಿಗೆ ವ್ಯಾಘ್ರಪಾದ ಮತ್ತು ಪತಂಜಲಿ, ವಿರೂಪಾಕ್ಷ ದೇವಾಲಯ, ಹಂಪಿ



ಶಿವಲಿಂಗ ವಿರೂಪಾಕ್ಷ ದೇವಾಲಯ, ಹಂಪಿ



ಶಿವಲಿಂಗ ಪ್ರಸನ್ನ ವಿರೂಪಾಕ್ಷ ದೇವಾಲಯ. ಹಂಪಿ

## ಹಂಪಿ ಪರಿಸರದಲ್ಲಿ ದೊರೆತ ವಿವಿಧ ಶಿವಲಿಂಗಗಳು

| ಗ್ರಾಮ | ಶಿವಲಿಂಗಗಳು ದೊರೆತಿರುವ ಸ್ಥಳ | ಶಿವಲಿಂಗಗಳು | ಶಿವಲಿಂಗಗಳ ಸಂಖ್ಯೆ | ಒಟ್ಟು ಸಂಖ್ಯೆ |
|---|---|---|---|---|
| ಹಂಪಿ | ವಿರೂಪಾಕ್ಷ ದೇವಾಲಯದ ಅಂತರಾಳ ಭಾರ | ಚತುರ್ಮುಖಲಿಂಗ | ೧ | ೧ |
| ಹಂಪಿ | ಹೇಮಕೂಟ ಬೆಟ್ಟದ ಮೂಲ ವಿರೂಪಾಕ್ಷ ದೇವಾಲಯದ ಬಳಿಯ ಹಾಸು ಬಂಡೆ | ಪಂಚಲಿಂಗ | ೧ | |
| ಹಂಪಿ | ಚಕ್ರತೀರ್ಥದ ಕೋಟಿಲಿಂಗದಲ್ಲಿನ ಹಾಸುಬಂಡೆ | ಪಂಚಲಿಂಗ | ೧ | |
| ಹಂಪಿ | ಹಜಾರಾಮ ದೇವಾಲಯದ ಆಗ್ನೇಯ ದಿಕ್ಕಿಗಿರುವ ಮಂಟಪ | ಪಂಚಲಿಂಗ | ೧ | |
| ಹಂಪಿ | ಮಹಾನವಮಿ ದಿಬ್ಬದಿಂದ ಹಜಾರರಾಮ ದೇವಾಲಯಕ್ಕೆ ಹೋಗುವ ಮಾರ್ಗದ ಬಲಭಾಗದಲ್ಲಿ ತೆರೆದ ಆವರಣ | ಪಂಚಲಿಂಗ | ೧ | |
| ಹಂಪಿ | ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಉಪನಿರ್ದೇಶಕರ ಕಚೇರಿ ಆವರಣ | ಪಂಚಲಿಂಗ | ೧ | |
| ಕಮಲಾಪುರ | ಊರಮ್ಮ ದೇವಾಲಯದ ಪಕ್ಕದಲ್ಲಿ | ಪಂಚಲಿಂಗ | ೧ | |
| ಕಮಲಾಪುರ | ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ವಸ್ತುಸಂಗ್ರಹಾಲಯ | ಪಂಚಲಿಂಗ | ೫ | |
| ಕಮಲಾಪುರ | ಪೊಲೀಸ್ ಠಾಣೆಯ ಎದುರಿನ ಆಂಜನೇಯ ದೇವಾಲಯದ ಕಳಸಭಾಗ(ಪ್ರಸ್ತುತ ಸ್ಥಳ ಬದಲೀಕರಣ) | ಪಂಚಲಿಂಗ | ೧ | |
| ಕಮಲಾಪುರ | ಮಾಲ್ಯವಂತ ರಘುನಾಥ ದೇವಾಲಯದ ಎದುರಿನ ಮಂಟಪ | ಪಂಚಲಿಂಗ | ೧ | |
| ಆನೆಗೊಂದಿ | ಮುಕ್ತಿ ನರಸಿಂದ ದೇವಾಲಯದ ಬಳಿಯಿರುವ ರುದ್ರಾಕ್ಷಿ ಮಂಟಪ | ಪಂಚಲಿಂಗ | ೧ | |
| ಆನೆಗೊಂದಿ | ವೀರಭದ್ರ ದೇವಾಲಯದ ಹೊರ ಆವರಣ | ಪಂಚಲಿಂಗ | ೧ | ೧೫ |
| ಹಂಪಿ | ಚಕ್ರತೀರ್ಥದ ಕೋಟಿಲಿಂಗದಲ್ಲಿನ ಹಾಸುಬಂಡೆ | ಅಷ್ಟೋತ್ತರ ಲಿಂಗ | ೧ | ೧ |
| ಹಂಪಿ | ಚಕ್ರತೀರ್ಥದ ಕೋಟಿಲಿಂಗದಲ್ಲಿನ ಹಾಸುಬಂಡೆ | ಸಹಸ್ರಲಿಂಗ | ೧ | |
| ಹಂಪಿ | ವಿರೂಪಾಕ್ಷ ದೇವಾಲಯದ ಬಲಬದಿಯ ಪ್ರಾಕಾರ ಮಂಟಪದಲ್ಲಿರುವ ದೇವಾಲಯ | ಸಹಸ್ರ ಲಿಂಗ | ೧ | ೨ |
| ಹಂಪಿ | ಉದ್ದಾನ ವೀರಭದ್ರ ದೇವಾಲಯದ ಅಂತರಾಳ | ಸರ್ವಾಂಗ ಲಿಂಗ | ೧ | ೧ |
| ಹಂಪಿ | ಉದ್ದಾನ ವೀರಭದ್ರ ದೇವಾಲಯದ ದೀಪಸ್ತಂಭ | ಯೋಗಾಂಗ ಲಿಂಗ | ೧ | ೧ |
| ಹಂಪಿ | ಲಕ್ಷ್ಮೀನರಸಿಂದ ಏಕಶಿಲಾ ಮೂರ್ತಿಯ ಬಲಪಕ್ಕದಲ್ಲಿ | ಬಡವಿ ಲಿಂಗ | ೧ | ೧ |
| ಕಮಲಾಪುರ | ಮಾಲ್ಯವಂತ ರಘುನಾಥ ದೇವಾಲಯದ ಹಿಂಭಾಗದಲ್ಲಿನ ಹಾಸುಬಂಡೆ | ಶಿವಲಿಂಗಗಳ ಸಮೂಹ | ೩೪ | ೩೪ |

| ಗ್ರಾಮ | ಶಿವಲಿಂಗಗಳು ದೊರೆತಿರುವ ಸ್ಥಳ | ಶಿವಲಿಂಗಗಳು | ಶಿವಲಿಂಗಗಳ ಸಂಖ್ಯೆ | ಒಟ್ಟು ಸಂಖ್ಯೆ |
|---|---|---|---|---|
| ಹಂಪಿ | ವಿರೂಪಾಕ್ಷ ದೇವಾಲಯದ ದಕ್ಷಿಣಾಭಿಮುಖದ ಭಿತ್ತಿ | ಕಾಳಹಸ್ತಿ ಲಿಂಗ | ೧ | |
| ಹಂಪಿ | ವಿರೂಪಾಕ್ಷ ದೇವಾಲಯದ ಎಡಬದಿಯ ಪ್ರಾಕಾರ ಮಂಟಪದ ೨೮ನೇ ಕಂಬ | ಕಾಳಹಸ್ತಿ ಲಿಂಗ | ೧ | |
| ಕಮಲಾಪುರ | ಚಂದ್ರಶೇಖರ ದೇವಾಲಯದ ನವರಂಗದ ೫ನೇ ಕಂಬ | ಕಾಳಹಸ್ತಿ ಲಿಂಗ | ೧ | |
| ಮಲಪನಗುಡಿ | ಮಲ್ಲಿಕಾರ್ಜುನ ದೇವಾಲಯದ ನವರಂಗದ ೩ನೇ ಕಂಬ | ಕಾಳಹಸ್ತಿ ಲಿಂಗ | ೧ | ೪ |
| | | ಒಟ್ಟು | ೬೦ | ೬೦ |

* ಸೂಚನೆ: ಹಂಪಿ ಪರಿಸರದಲ್ಲಿ ಸಾಮಾನ್ಯ ಶಿವಲಿಂಗಗಳು(ಬ್ರಹ್ಮ, ವಿಷ್ಣು ಮತ್ತು ರುದ್ರಭಾಗ ಅಥವಾ ಪೂಜಾ ಭಾಗಗಳನ್ನು ಒಳಗೊಂಡಿರುವ) ಅಧಿಕ ಸಂಖ್ಯೆಯಲ್ಲಿ ದೊರೆತಿದ್ದು ಅವುಗಳನ್ನು ಈ ಪಟ್ಟಿಯಲ್ಲಿ ಸೇರಿಸಿರುವುದಿಲ್ಲ.

## ಚಂದ್ರಶೇಖರ ಮೂರ್ತಿ

ಶಿವನು ಚಂದ್ರನನ್ನು ತನ್ನ ಮುಕುಟದಲ್ಲಿ ಧರಿಸಿರುವುದರಿಂದ ಚಂದ್ರಶೇಖರ ಎಂದು ಕರೆಯಲ್ಪಟ್ಟಿದ್ದಾನೆ. ಶಿವನು ಚಂದ್ರಶೇಖರನಾದ ಸಂದರ್ಭವನ್ನು ಈ ಕೆಳಗಿನಂತೆ ಹೇಳಲಾಗಿದೆ. ದಕ್ಷಪ್ರಜಾಪತಿ ಅಶ್ವಿನಿನಾದಿ ಇಪ್ಪತ್ತೇಳು ಜನ ಸುಂದರಿಯರಾದ ಕನ್ನಿಕೆಗಳನ್ನು ಸೃಷ್ಟಿಸಿ ನಯನಾಂದಕರನಾದ ಚಂದ್ರನಿಗೆ ಕೊಟ್ಟು ವಿವಾಹ ಮಾಡಿದನು. ಆದರೆ ಚಂದ್ರನು ರೋಹಿಣಿ ಎಂಬುವಳಲ್ಲಿ ಹೆಚ್ಚು ಅನುರಾಗವುಳ್ಳವನಾದನು. ಇದರಿಂದ ಖಿನ್ನರಾದ ಉಳಿದ ಕನ್ನಿಕೆಯರು ದಕ್ಷನಿಗೆ ತಿಳಿಸಲು ಅವನು ಚಂದ್ರನನ್ನು ಎಚ್ಚರಿಸಿದರೂ ಅವನು ಮುಂಚಿನಂತೆಯೇ ಇರುವವನಾದನು. ಇದನ್ನು ತಿಳಿದ ದಕ್ಷನು ಕೋಪಗೊಂಡು ಚಂದ್ರನನ್ನು ಕ್ಷಯಿಸುವಂತೆ ಶಪಿಸಿದನು. ಆಗ ಚಂದ್ರನು ಹದಿನೈದು ದಿನಗಳಲ್ಲಿ ಒಂದೊಂದೇ ಕಲಾರಹಿತನಾಗುತ್ತ ಏಕಕಲಾ ಮಾತ್ರಾವಶೇಷನಾದನು. ಆ ಸಮಯದಲ್ಲಿ ಇಂದ್ರನನ್ನು ಮೊರೆಹೊಕ್ಕನು ಇಂದ್ರನು ಬ್ರಹ್ಮನನ್ನು ಹಾಗೂ ಬ್ರಹ್ಮನು ಶಿವನನ್ನು ಆಶ್ರಯಿಸಲು ತಿಳಿಸಿದನು. ಆಗ ಚಂದ್ರನು ಕೈಲಾಸಕ್ಕೆ ಹೋಗಿ ನಂದಿಕೇಶ್ವರನ ಸಹಾಯದಿಂದ ಮಹಾದೇವನನ್ನು ಅನೇಕ ರೀತಿಯಾಗಿ ಸ್ತೋತ್ರ ಮಾಡಿದಾಗ ಮಹಾದೇವನು ಚಂದ್ರನ ವೃತ್ತಾಂತವನ್ನು ತಿಳಿದು ಸಂತೋಷದಿಂದ ಏಕಕಲಾಮಾತ್ರನಾದ ಚಂದ್ರನನ್ನು ದೇವತೆಗಳ ಪ್ರಾರ್ಥನೆಯಂತೆ ಜಗದ್ರಕ್ಷಕನಾದುದರಿಂದ ಚಂದ್ರನಿಗೂ ಅಭಯವಿತ್ತು, ತನ್ನ ತಲೆಯಲ್ಲಿ ಧರಿಸಿದನು. ಮತ್ತೆ ನನ್ನಾಜ್ಞೆಯಿಂದ ನೀನು ಪುನಃ ವೃದ್ಧಿಹೊಂದು ಎಂಬುದಾಗಿ ಅನುಗ್ರಹಿಸಿದನು. ಇದನ್ನು ಕೇಳಿದ ಬ್ರಹ್ಮ ವಿಷ್ಣು ಮೊದಲಾದ ದೇವತೆಗಳು ಚಂದ್ರನಿಗೆ ದಕ್ಷ ಶಾಪವೂ ವ್ಯರ್ಥವಾಗದಂತೆ ಪ್ರತಿ ಮಾಸದಲ್ಲೂ ಕ್ಷಯಾವೃದ್ಧಿಯಾಗುವಂತೆ ಪರಮೇಶ್ವರನನ್ನು ಪ್ರಾರ್ಥಿಸಿದರು. ಆದುದರಿಂದ ಚಂದ್ರನು ಪರಮೇಶ್ವರಾನುಗ್ರಹದಿಂದ ಕ್ಷಯವೃದ್ಧಿ ಹೊಂದುವವನಾಗಿ ಏಕಕಲೆಯಿಂದ ಶಿವನ ಜಟೆಯನ್ನಲಂಕರಿಸಿರುವುದರಿಂದ ಶಿವನು ಚಂದ್ರಶೇಖರನಾದನು.[೨೮]

ಆದರೆ ಸುಪ್ರಭೇದಾಗಮವು ಬೇರೆಯದಾದ ವಿವರಣೆಯನ್ನು ನೀಡುತ್ತದೆ. ಅದರ ಪ್ರಕಾರ ಶಿವನು ಮೇರು ಪರ್ವತದಲ್ಲಿ ನಗ್ನನಾಗಿ ತಿರುಗುತ್ತಿದ್ದಾಗ ಅಲ್ಲಿನ ಋಷಿ ಪತ್ನಿಯರು ಶಿವನಿಗೆ ಮೋಹಿತರಾಗಿ ತಮ್ಮ ಪಾತಿವ್ರತ್ಯವನ್ನು ಕಳೆದುಕೊಂಡರು. ಇದರಿಂದ ಕೃದ್ಧರಾದ ಅವರು ಶಿವನನ್ನು ಸಂಹರಿಸಲು ಯಜ್ಞವನ್ನು ಮಾಡಿದರು. ಆ ಯಜ್ಞಕುಂಡದಿಂದ ಪರಶು, ಸರ್ಪ, ಕೃಷ್ಣಮೃಗ, ಅಪಸ್ಮಾರ ಪುರುಷ, ವೃಷಭ, ಹುಲಿ, ಸಿಂಹ, ಮುಂತಾದವುಗಳು ಹೊರಬಂದವು. ಆದರೆ ಶಿವನು ಪರಶು ಕೃಷ್ಣಮೃಗ ಹಾಗೂ ಸರ್ಪವನ್ನು ತನ್ನ ಆಯುಧಗಳಾಗಿ ಧರಿಸಿದನು. ಅಪಸ್ಮಾರನನ್ನು ತನ್ನ ಕಾಲಡಿಗಳಲ್ಲಿ ಇರಿಸಿಕೊಂಡನು. ಹುಲಿ ಮತ್ತು ಸಿಂಹಗಳನ್ನು ಸಂಹರಿಸಿ ಅವುಗಳ ಚರ್ಮವನ್ನು ವಸ್ತ್ರವನ್ನಾಗಿ ಧರಿಸಿದನು. ಹಾಗೂ ಕಪಾಲ ಮತ್ತು ಅರ್ಧಚಂದ್ರನನ್ನು ಅಥವಾ ಬಾಲಚಂದ್ರನನ್ನು ತನ್ನ ಮುಕುಟದಲ್ಲಿ ಅಭರಣಗಳಾಗಿ ಧರಿಸಿದನು. ಈ ವಿವರಣೆಯಲ್ಲದೆ, ಸುಪ್ರಭೇದಾಗಮವು ಶಿವನ ಎಲ್ಲ ಮೂರ್ತಿಗಳಲ್ಲಿ ಶಿವನು ಸಾಮಾನ್ಯವಾಗಿ ತ್ರಿನೇತ್ರನಾಗಿದ್ದು ಚತುರ್ಭುಜಗಳನ್ನು ಹೊಂದಿರಬೇಕು. ಅರ್ಧಚಂದ್ರ ಹಾಗೂ ಧುರ್‌ಧುರಾ ಪುಷ್ಪಗಳು ಮುಕುಟದಲ್ಲಿ ಮತ್ತು ಸರ್ಪಗಳು, ಹುಲಿಚರ್ಮ, ಹಾರ ಕೇಯೂರ, ಯಜ್ಞೋಪವೀತ ಮತ್ತು ಕರ್ಣಕುಂಡಲಗಳನ್ನು ಧರಿಸಿರಬೇಕು ಎಂದು ಹೇಳುತ್ತದೆ. ಶಿಲ್ಪರತ್ನವು

ಶಿವನ ಮೂರ್ತಿಯನ್ನು ಗೋಡೆಯ ಮೇಲೆ ಚಿತ್ರಿಸಿದ್ದರೆ, ಶಿವನ ಬಣ್ಣವು ಬಿಳುಪು ಅಥವಾ ಸೂರ್ಯನಂತೆ ಕೆಂಪು ಅಥವಾ ಚಿನ್ನದ ವರ್ಣವಿರಬೇಕು. ಉನ್ನತವಾದ ಭುಜಗಳು ನೀಳವಾಗಿರುವ ಬಾಹುಗಳು, ತಾವರೆ ದಳದಂತಿರುವ ಕಣ್ಣುಗಳು ಇರಬೇಕು. ಮೂರು ಕಟಿಸೂತ್ರಗಳನ್ನು ಹೊಂದಿರಬೇಕು. ಶಿವನು ಹದಿನಾರು ಆಯಸ್ಸಿನ ಯುವಕನಾಗಿ ಸುಂದರ ವದನನಾಗಿರಬೇಕು. ಕರ್ಣಕುಂಡಲಗಳನ್ನು ಧರಿಸಿದ್ದು, ನೀಲಕಂಠನಾಗಿರಬೇಕು. ನಾಲ್ಕು, ಎಂಟು, ಹತ್ತು, ಹದಿನಾರು ಅಥವಾ ಹದಿನೆಂಟು ಬಾಹುಗಳನ್ನು ಹೊಂದಿರಬಹುದು. ಮೂರ್ತಿಯ ಬಾಹುಗಳ ಸಂಖ್ಯೆಯು ಮೂರ್ತಿಯ ಭಾವವನ್ನು ಅನುಸರಿಸಿ ಇರುತ್ತವೆ. ನಾಲ್ಕು ಬಾಹುಗಳ ಮೂರ್ತಿಯನ್ನು ಶಾಂತ ಮೂರ್ತಿ ಎನ್ನುತ್ತಾರೆ. ನಾಲ್ಕು ಬಾಹುಗಳಲ್ಲಿ ಮೇಲಿನ ಹಸ್ತಗಳಲ್ಲಿ ತ್ರಿಶೂಲ ಮತ್ತು ಡಮರುಗ ಇರುತ್ತದೆ. ಕೆಳಹಸ್ತಗಳಲ್ಲಿ ವರದ ಮತ್ತು ಅಭಯಮುದ್ರೆಗಳಿರಬೇಕು.[೨೯]

ಹೀಗೆ ಚಂದ್ರಶೇಖರನೆನಿಸಿದ ಶಿವನನ್ನು ಕೇವಲ ಮೂರ್ತಿ, ಉಮಾಸಹಿತ ಮೂರ್ತಿ ಹಾಗೂ ಆಲಿಂಗನಮೂರ್ತಿ ಎಂದು ಮೂರು ಪ್ರಕಾರಗಳಲ್ಲಿ ವಿಂಗಡಿಸಲಾಗಿದೆ. ಅಲ್ಲದೆ ಆಗಮಗಳಲ್ಲಿ ಚಂದ್ರಶೇಖರಮೂರ್ತಿಯ ಲಕ್ಷಣಗಳನ್ನು ವಿವರಿಸಿರುವರು ಅವುಗಳು ಈ ಕೆಳಗಿನಂತಿವೆ.

**ಕೇವಲಮೂರ್ತಿ**

ಅಂಶುಮದ್ಭೇದಾಗಮವು[೩೦] ಕೇವಲ ಮೂರ್ತಿಯು ಬಲಗೈಗಳಲ್ಲಿ ಮುಂದಿನದು ಅಭಯಹಸ್ತ, ಎಡಗೈಗಳಲ್ಲಿ ಮುಂದಿನದು ವರದಹಸ್ತದಲ್ಲಿರಬೇಕು ಹಾಗೂ ಹಿಂದಿನ ಬಲಗೈಯಲ್ಲಿ ಟಂಕ ಮತ್ತು ಹಿಂದಿನ ಎಡಗೈಯಲ್ಲಿ ಕೃಷ್ಣಮೃಗವನ್ನು ಹಿಡಿದಿರಬೇಕು. ಹಾಗೂ ಶಿವನು ದೇಹದ ಯಾವುದೇ ಭಾಗಗಳನ್ನು ಬಾಗಿಸದೇ ಸಮಭಂಗದಲ್ಲಿರಬೇಕು. ಮೊಣಕಾಲ ಕೆಳಗಿನವರೆಗೂ ಪಿತಾಂಬರವನ್ನು ಧರಿಸಿದ್ದು, ಅದರ ದೊಡ್ಡದಾದ ನೆರಿಗೆಗಳು ಎರಡು ಕಾಲುಗಳ ಮಧ್ಯಭಾಗದಲ್ಲಿ ಹಾದು ಹೋಗಿರಬೇಕು. ಶಿವನ ಸಮಭಂಗವು ರಾಜಸ ಗುಣವನ್ನು ಬಿಂಬಿಸುತ್ತಿರಬೇಕು. ಕೃಷ್ಣಮೃಗ ಹಾಗೂ ಟಂಕವನ್ನು ಕರ್ತರಿ ಹಸ್ತದಲ್ಲಿ ಹಿಡಿದಿರಬೇಕು. ಮೃಗವು ಶಿವನ ಮುಖವನ್ನು ನೋಡುತ್ತಿರುವಂತೆ ಇರಬಹುದು ಅಥವಾ ಇಲ್ಲದೆಯೂ ಇರಬಹುದು. ಅರ್ಧಚಂದ್ರನನ್ನು ಶಿವನ ಜಟಾಮುಕುಟದ ಎಡ ಅಥವಾ ಬಲಭಾಗದಲ್ಲಿಯೂ ತೋರಿಸಬಹುದು. ಹಾಗೂ ಶಿವನು ಕೆಂಪು ವರ್ಣದವನಾಗಿರಬೇಕು ಎಂದು ಹೇಳುತ್ತದೆ. ಕಾಶ್ಯಪಶಿಲ್ಪಶಾಸ್ತ್ರ[೩೧] ಹಾಗೂ ರೌರವಾಗಮ[೩೨] ಅಜಿತಾಗಮಗಳೂ[೩೩] ಸಹ ಚಂದ್ರಶೇಖರ ಮೂರ್ತಿ ಲಕ್ಷಣಗಳನ್ನು ಹೇಳುವಲ್ಲಿ ಬಹುಪಾಲು ಇದೇ ಲಕ್ಷಣಗಳನ್ನೇ ಹೇಳುತ್ತವೆ. ಉತ್ತರ ಕಾಮಿಕಾಗಮವು[೩೪] ಮೇಲಿನ ಲಕ್ಷಣಗಳೊಂದಿಗೆ ಇನ್ನೂ ಕೆಲವು ವಿವರಗಳನ್ನು ಸೇರಿಸುತ್ತದೆ. ಮುಂದಿನ ಬಲಹಸ್ತವು ವರದ ಮುದ್ರೆ ರಚಿಸಿದರೆ ಅದು ಸಿಂಹ ಕರ್ಣ ಎನ್ನಿಸಿಕೊಳ್ಳುತ್ತದೆ. ಕರ್ತರಿಹಸ್ತ ಮುದ್ರೆಯಲ್ಲಿರುವ ಮೇಲಿನ ಎರಡು ಹಸ್ತಗಳು ಹಿಕ್ಕಾಸೂತ್ರದಿಂದ ಮೇಲಕ್ಕೆ ಹೋಗಬಾರದು, ಎಂದರೆ ಹಸ್ತಗಳು ಭುಜಕ್ಕಿಂತಲೂ ಹೆಚ್ಚು ಎತ್ತರವಾಗಿರಬಾರದು. ಆ ಹಸ್ತಗಳಲ್ಲಿ ಹಿಡಿದಿರುವ ಟಂಕ ಮತ್ತು ಜಿಂಕೆಗಳ ಎತ್ತರವು ಕರ್ಣಸೂತ್ರಕ್ಕಿಂತಲೂ ಮೇಲಕ್ಕೆ ಇರಬಾರದು. ಜಿಂಕೆಯು ಶಿವನನ್ನು ನೋಡುವಂತೆ

ಅಥವಾ ಶಿವನಿಗೆ ವಿರುದ್ಧ ದಿಕ್ಕಿನಲ್ಲಿ ನೋಡುತ್ತಿರುವಂತೆ ಇರಬಹುದಾದರೂ ಟಂಕದ ಶಿರೋಭಾಗವು ಶಿವನಿಗೆ ವಿರುದ್ಧ ದಿಕ್ಕಿನಲ್ಲಿರಬೇಕು. ಶಿವನ ಎಡಕಿವಿಯಲ್ಲಿ ರತ್ನಕುಂಡಲ, ಶಂಖಪತ್ರ ಅಥವಾ ಪದ್ಮಪತ್ರ ಇರಬೇಕು. ಬಲಕಿವಿಯಲ್ಲಿ ಮಕರ ಕುಂಡಲ ಸಿಂಹಕುಂಡಲ ಅಥವಾ ಪತ್ರಕುಂಡಲ ಇರಬೇಕು. ತಲೆಯ ಸುರುಳಿಯಾಕಾರದ ಕೂದಲು ಹಿಂಭಾಗದಲ್ಲಿ ಕರ್ಣಗಳವರೆಗೂ ಹರಡಿಕೊಂಡಿದ್ದು, ಜಟೆಗಳು ಎಡ ಮತ್ತು ಬಲ ಎರಡೂ ಪಾರ್ಶ್ವಗಳಲ್ಲೂ ಬಾಹುಗಳವರೆಗೂ ಹರಡಿರಬೇಕು. ಮೂರ್ತಿಯು ನಾನಾ ಆಭರಣಗಳಿಂದ ಅಲಂಕೃತನಾಗಿರಬೇಕು. ಮುತ್ತಿನ ಹಾರಗಳು, ರತ್ನಖಚಿತ ಕಂಠಾಭರಣಗಳು ಯಜ್ಞೋಪವೀತ, ಛನ್ನವೀರ, ಉದರಬಂಧ ಇವುಗಳೊಂದಿಗೆ ಕೇಯೂರ ಕಂಕಣಗಳೂ ಹಾಗೂ ಬೆರಳುಗಳಲ್ಲಿ ಮುದ್ರಿಕೆ ಉಂಗುರಗಳು ಇರಬೇಕು ಮತ್ತು ಪಾದಜಾಲಕಗಳನ್ನು ಧರಿಸಿರಬೇಕು. ಚಂದ್ರಶೇಖರ ಮೂರ್ತಿಯು ಪದ್ಮ ಪೀಠದ ಮೇಲೆ ನಿಂತಿರಬೇಕು ಎಂದು ಹೇಳುತ್ತದೆ. ಉತ್ತರ ಕಾರಣಾಗಮವು[೩೫] ಉತ್ತರ ಕಾಮಿಕಾಗಮದ ವಿವರಣೆಯನ್ನೇ ಹೇಳುತ್ತದೆ.

ಶ್ರೀ ತತ್ವನಿಧಿಯು[೩೬] ಚಂದ್ರಶೇಖರಮೂರ್ತಿಯು ಸೌಮ್ಯ ಹಾಗೂ ಶೃಂಗಾರ ಭಾವದಿಂದ ಕೂಡಿದ್ದು ಹವಳದಂತಹ ದೇಹಕಾಂತಿಯನ್ನು ಹೊಂದಿರುತ್ತಾನೆ. ಅಭಯ, ವರದ ಹಸ್ತಗಳನ್ನು ಹೊಂದಿದ್ದು, ಚಂದ್ರಬಿಂಬವನ್ನು ಧರಿಸಿರುವನು. ಹಾಗೂ ಮೃಗ ಮತ್ತು ಪರಶುಗಳನ್ನು ಹಿಡಿದಿದ್ದು, ಪದ್ಮಪೀಠದಲ್ಲಿ ಸ್ಥಾನಿಕನಾಗಿರುತ್ತಾನೆ. ಹಾಗೂ ದೇವಿಯು ಶ್ಯಾಮಲವರ್ಣದವಳಾಗಿದ್ದು, ತ್ರಿನೇತ್ರ ಮತ್ತು ದ್ವಿಭುಜಗಳನ್ನು ಹೊಂದಿದ್ದು, ತ್ರಿಭಂಗಿಯಲ್ಲಿರುತ್ತಾಳೆ. ಬಲಗೈಯಲ್ಲಿ ನೀಲೋತ್ಪಲ ಪುಷ್ಪವನ್ನು ಹಿಡಿದಿರುತ್ತಾಳೆ ಎಂದು ಹೇಳುತ್ತದೆ.

ಹಂಪಿ ಪರಿಸರದಲ್ಲಿ ಒಟ್ಟು ಆರು ಕೇವಲ ಚಂದ್ರಶೇಖರ ಮೂರ್ತಿಗಳು ದೊರೆತಿವೆ. ಅವುಗಳು ಕಡಲೆಕಾಳು ಗಣೇಶ ದೇವಾಲಯ ಮಂಟಪದ ೧೩ನೇ ಕಂಬದಲ್ಲಿ ಒಂದು ಹಾಗೂ ಇದೇ ದೇವಾಲಯದ ಹಿಂಭಾಗದಲ್ಲಿರುವ ಹರಿಹರ ದೇವಾಲಯದ ಮೊದಲನೇ ಕಂಬದಲ್ಲಿ ಎರಡು ಶಿಲ್ಪಗಳು ಹಾಗೂ ತಿಮ್ಮಲಾಪುರದ ತ್ರಿಕೂಟ ದೇವಾಲಯದ ನವರಂಗದ ೫ನೇ ಕಂಬದಲ್ಲಿ ಒಂದು ಮತ್ತು ದೇವಾಲಯದ ದ್ವಾರಗೋಪುರ ಅಥವಾ ರಾಯಗೋಪುರದಲ್ಲಿ ಗಾರೆಯಿಂದ ನಿರ್ಮಿಸಿದ ಒಂದು ಶಿಲ್ಪ ಹಾಗೂ ಕೋಟಿಲಿಂಗದಲ್ಲಿ ಶೈವ ದೇವಾಲಯದಲ್ಲಿರುವ ಒಂದು ಶಿಲ್ಪ ಹೀಗೆ ಒಟ್ಟು ಆರು ಶಿಲ್ಪಗಳು ದೊರೆತಿವೆ. ಇವುಗಳಲ್ಲಿ ಹರಿಹರ ದೇವಾಲಯದ ೧ನೇ ಕಂಬದಲ್ಲಿರುವ ಶಿಲ್ಪವು ಹಾಗೂ ಕೋಟಿಲಿಂಗ ಪ್ರದೇಶದ ಶೈವ ದೇವಾಲಯದಲ್ಲಿ ದೊರೆಯುವ ಶಿಲ್ಪಗಳು ಒಂದೇ ಲಕ್ಷಣಗಳನ್ನು ಹೊಂದಿದ್ದು, ಆಗಮಗಳ ಹಿನ್ನೆಲೆಯಲ್ಲಿ ಕೆತ್ತಲ್ಪಟ್ಟಿವೆ ಎಂದು ಹೇಳಬಹುದು. ಮೇಲಿನ ಆಗಮಗಳ ವಿವರಣೆಯಂತೆ ಈ ಶಿಲ್ಪಗಳಲ್ಲಿ ಶಿವನು ಬಲಹಸ್ತಗಳಲ್ಲಿ ಕ್ರಮವಾಗಿ ಅಭಯ ಮತ್ತು ಪರಶು ಹಾಗೂ ಎಡಹಸ್ತಗಳಲ್ಲಿ ವರದ ಹಾಗೂ ಮೃಗವನ್ನು ಹಿಡಿದಿರುವನು. ಕೋಟಿಲಿಂಗದಲ್ಲಿ ದೊರೆಯುವ ಶಿಲ್ಪವು ಎಡ ಮುಂದಿನ ಹಸ್ತವು ವರದ ಮುದ್ರೆಯಲ್ಲಿರದೆ ಬಾಹುವನ್ನು ಸಾಮಾನ್ಯವಾಗಿ ಇಳಿಬಿಟ್ಟಂತೆ ಇರುವುದು. ಈ ಶಿಲ್ಪದಲ್ಲಿ ಜಟಾಮುಕುಟ, ಕರ್ಣಗಳಲ್ಲಿ ಕುಂಡಲಗಳು(ಸ್ಪಷ್ಟವಿಲ್ಲ) ಹಾಗೂ ಕೊರಳಲ್ಲಿ

ಹಾರಗಳು, ವಕ್ಷ ಬಂಧ, ಯಜ್ಞೋಪವೀತ ಕೈಗಳಲ್ಲಿ ಕಂಕಣಗಳು ಹಾಗೂ ಬಾಹುವಳಯಗಳನ್ನು ಹೊಂದಿದ್ದು ಪಾದದವರೆಗಿನ ವಸ್ತ್ರಧರಿಸಿರುತ್ತಾನೆ. ಬಳಸಿರುವ ಮಾಧ್ಯಮ ಒರಟು ಶಿಲೆಯಾದ್ದರಿಂದ ಕೆಲವು ಕೆತ್ತನೆಗಳು ಸ್ಪಷ್ಟವಾಗಿ ಗೋಚರಿಸುವುದಿಲ್ಲ. ಮುಕುಟದಲ್ಲಿರುವ ಬಾಲಚಂದ್ರ ಮತ್ತು ಕರ್ಣಕುಂಡಲಗಳು ಕೆತ್ತಲ್ಪಟ್ಟಿದ್ದರೂ ಅವುಗಳು ಯಾವುವು ಎಂದು ಗುರುತಿಸುವುದು ಕಷ್ಟ. ಅಲ್ಲದೆ ಈ ಶಿಲ್ಪದ ಅಕ್ಕಪಕ್ಕದಲ್ಲಿ ಸ್ತ್ರೀ ಉಪದೇವತೆಯರ ಶಿಲ್ಪಗಳನ್ನು ಕೆತ್ತಿರುವರು. ಆದರೆ ಹರಿಹರ ದೇವಾಲಯದಲ್ಲಿರುವ ಶಿಲ್ಪವು ಸಮಭಂಗದಲ್ಲಿ ನಿಂತಿದ್ದು ಹಿಂದಿನ ಎರಡು ಕೈಗಳಲ್ಲಿ ಪರಶು ಮತ್ತು ಮೃಗವನ್ನು ಹಾಗೂ ಮುಂದಿನ ಎರಡೂ ಹಸ್ತಗಳು ಅಭಯ, ವರದ ಮುದ್ರೆಯಲ್ಲಿದ್ದು ಕಟಿಯ ಭಾಗದಿಂದ ಪಾದದವರೆಗಿನ ವಸ್ತ್ರವನ್ನು ಧರಿಸಿರುವ ಲಕ್ಷಣಗಳನ್ನು ಹೊರತುಪಡಿಸಿದರೆ ಶಿಲ್ಪಕ್ಕೆ ಸುಣ್ಣ ಬಳಿದಿರುವುದರಿಂದ ಉಳಿದ ಯಾವ ಲಕ್ಷಣಗಳೂ ಸ್ಪಷ್ಟವಾಗಿ ಗೋಚರಿಸುವುದಿಲ್ಲ. ಆದರೂ ಮುಖ್ಯವಾಗಿ ಕಂಡುಬರುವ ಈ ಎಲ್ಲ ಲಕ್ಷಣಗಳು ಆಗಮ ಉಲ್ಲೇಖದಂತೆಯೇ ಇರುವುದರಿಂದ ಬಹುಪಾಲು ಈ ಶಿಲ್ಪಗಳು ಆಗಮ ಪ್ರಕಾರವಾಗಿ ಕೆತ್ತಲ್ಪಟ್ಟಿವೆ ಎಂದು ಹೇಳಬಹುದು.

ಹಾಗೆಯೇ ಶಿಲ್ಪರತ್ನದ ಪ್ರಕಾರ ಕೆಲವು ಶಿಲ್ಪಗಳು ಕೆತ್ತಲ್ಪಟ್ಟಿವೆ. ಅವುಗಳು ಕಡಲೆಕಾಳು ಗಣೇಶ ದೇವಾಲಯದ ತೆರೆದ ಮಂಟಪದ ೧೩ನೇ ಕಂಬದಲ್ಲಿ ಹಾಗೂ ಹರಿಹರ ದೇವಾಲಯದಲ್ಲಿ ಮೇಲೆ ವಿವರಿಸಿರುವ ಕಂಬದಲ್ಲಿಯೇ ಉತ್ತರ ದಿಕ್ಕಿನ ಪಾರ್ಶ್ವದಲ್ಲಿ ಇನ್ನೊಂದು ಶಿಲ್ಪವಿದೆ. ಹಾಗೆಯೇ ಇನ್ನೊಂದು ಶಿಲ್ಪವು ತಿಮ್ಮಲಾಪುರದ ತ್ರಿಕೂಟ ದೇವಾಲಯದ ನವರಂಗದಲ್ಲಿನ ೫ನೇ ಕಂಬದಲ್ಲಿದೆ. ಈ ಎರಡು ಶಿಲ್ಪಗಳನ್ನು ಶಿಲ್ಪರತ್ನವು ವಿವರಿಸಿದ ವಿವರಣೆಗಳ ಪ್ರಕಾರವೇ ಕೆತ್ತಲಾಗಿದೆ ಎಂದು ಹೇಳಬಹುದು. ಈ ಮೂರ್ತಿಶಿಲ್ಪಗಳು ಸಮಭಂಗದಲ್ಲಿ ನಿಂತಿದ್ದು ಮುಂದಿನ ಎರಡು ಹಸ್ತಗಳು ಅಭಯ ಮತ್ತು ವರದ ಮುದ್ರೆಯಲ್ಲಿದ್ದು, ಹಿಂದಿನ ಎರಡು ಕೈಗಳಲ್ಲಿ ತ್ರಿಶೂಲ ಮತ್ತು ಡಮರುವನ್ನು ಹಿಡಿದಿರುತ್ತವೆ. ಉಳಿದಂತೆ ಕಿರೀಟಮುಕುಟ, ಸಕಲ ಆಭರಣಗಳು ಕಟಿಯಿಂದ ಪಾದದವರೆಗಿನ ವಸ್ತ್ರವನ್ನು ಧರಿಸಿವೆ. ಈ ಶಿಲ್ಪಗಳು ಶಿಲ್ಪರತ್ನವು ಹೇಳಿದ ಲಕ್ಷಣಗಳನ್ನೇ ಹೊಂದಿರುವುದರಿಂದ ಇವುಗಳು ಶಿಲ್ಪರತ್ನವನ್ನು ಅನುಸರಿಸಿ ರಚಿಸಿದವುಗಳಾಗಿವೆ ಎಂದು ಹೇಳಬಹುದು.

ತಿಮ್ಮಲಾಪುರದ ತ್ರಿಕೂಟ ದೇವಾಲಯದ ದ್ವಾರಗೋಪುರದಲ್ಲಿ ಚಂದ್ರಶೇಖರಮೂರ್ತಿ ಶಿಲ್ಪವೊಂದಿದೆ. ಗಾರೆಯಿಂದ ನಿರ್ಮಿಸಿದ ಈ ಶಿಲ್ಪದಲ್ಲಿ ಶಿವನು ಸಮಭಂಗದಲ್ಲಿ ನಿಂತಿದ್ದು ಮುಂದಿನ ಎರಡು ಹಸ್ತಗಳು ಅಭಯ ವರದ ಮುದ್ರೆಯಲ್ಲಿದ್ದು ಹಿಂದಿನ ಎರಡೂ ಕೈಗಳಲ್ಲಿನ ಆಯುಧಗಳು ಭಗ್ನಗೊಂಡಿವೆಯಾದ್ದರಿಂದ ಆಯುಧಗಳನ್ನು ಗುರುತಿಸಲಾಗುವುದಿಲ್ಲ. ಆದರೆ ಈ ಮೂರ್ತಿಯು ಜಟಾಮುಕುಟ, ಬಲಕರ್ಣದಲ್ಲಿ ಮಕರಕುಂಡಲ ಹಾಗೂ ಎಡಕರ್ಣದಲ್ಲಿ ವೃತ್ತಕುಂಡಲಗಳನ್ನು ಧರಿಸಿರುವನು. ಕೊರಳಲ್ಲಿ ಹಾರಗಳು, ಬಾಹುಗಳಲ್ಲಿ ಕೆಯೂರ, ಕಂಕಣಗಳನ್ನು ಹಾಗೂ ಕಟಿಯಿಂದ ಪಾದದವರೆಗಿನ ವಸ್ತ್ರಗಳನ್ನೂ ಧರಿಸಿರುವನು. ಹೀಗೆ ಇದು ಸಹ ಆಗಮ ಉಲ್ಲೇಖಿತ ಚಂದ್ರಶೇಖರ ಶಿಲ್ಪವೆಂದು ಹೇಳಬಹುದು.


ಕೇವಲ ಚಂದ್ರಶೇಖರಮೂರ್ತಿ, ಹರಿಹರ
ದೇವಾಲಯ, ಹಂಪಿ


ಕೇವಲ ಚಂದ್ರಶೇಖರಮೂರ್ತಿ,
ಶೈವದೇವಾಲಯ, ಕೋಟಿಲಿಂಗ, ಹಂಪಿ


ಕೇವಲ ಚಂದ್ರಶೇಖರಮೂರ್ತಿ
ಹರಿಹರದೇವಾಲಯ, ಹಂಪಿ


ಕೇವಲ ಚಂದ್ರಶೇಖರಮೂರ್ತಿ ಕಡಲೆಕಾಳು
ಗಣೇಶ ದೇವಾಲಯ, ಹಂಪಿ



ಕೇವಲ ಚಂದ್ರಶೇಖರಮೂರ್ತಿ ತ್ರಿಕೂಟ
ದೇವಾಲಯ, ತಿಮ್ಮಾಲಾಪುರ

### ಕೇವಲ ಚಂದ್ರಶೇಖರಮೂರ್ತಿ

| ಗ್ರಾಮ | ದೇವಾಲಯಗಳು/ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ಕಡಲೆಕಾಳು | ದೇವಾಲಯ ಮಂಟಪದ ೧೩ನೇ ಕಂಬ | ೧ |
| ಹಂಪಿ | ಹರಿಹರ | ದೇವಾಲಯ ಮಂಟಪದ ೧ನೇ ಕಂಬ | ೧ |
| ಹಂಪಿ | ಹರಿಹರ | ದೇವಾಲಯ ಮಂಟಪದ ೧ನೇ ಕಂಬ | ೧ |
| ಹಂಪಿ | ಕೋಟಿಲಿಂಗದ ಶೈವ ದೇವಾಲಯ | ದೇವಾಲಯದ ಹೊರ ಭಿತ್ತಿ | ೧ |
| ತಿಮ್ಮಾಲಾಪುರ | ತ್ರಿಕೂಟ ದೇವಾಲಯ | ನವರಂಗದ ೫ನೇ ಕಂಬ ದ್ವಾರಗೋಪುರದಲ್ಲಿದೆ | ೨ |
| ಒಟ್ಟು | | | ೬ |

## ಉಮಾಸಹಿತ ಚಂದ್ರಶೇಖರಮೂರ್ತಿ

ಇದು ಚಂದ್ರಶೇಖರ ಮೂರ್ತಿಯಲ್ಲಿಯೇ ಎರಡನೆಯ ಪ್ರಕಾರ. ಇಲ್ಲಿ ಚಂದ್ರಶೇಖರ ಮೂರ್ತಿಯ ಎಡದಲ್ಲಿ ದೇವಿಯನ್ನು ತೋರಿಸಿದರೆ ಅದು ಉಮಾಸಹಿತ ಚಂದ್ರಶೇಖರ ಎನ್ನಿಸಿಕೊಳುತ್ತದೆ. ಇಲ್ಲಿ ಚಂದ್ರಶೇಖರ ಮೂರ್ತಿಯು ಮೇಲೆ ವಿವರಿಸಿದ ಲಕ್ಷಣಗಳನ್ನೇ ಹೊಂದಿದ್ದು ಪಕ್ಕದಲ್ಲಿ ದೇವಿಯು ಇರುತ್ತಾಳೆ. ಕಾಮಿಕಾಗಮವು[೩೭] ಚಂದ್ರಶೇಖರ ಮೂರ್ತಿಯು ದೇವಿಯೊಡಗೂಡಿ ಒಂದೇ ಪೀಠದಲ್ಲಿ ಇರಬಹುದು. ಇಲ್ಲವೆ ಪ್ರತ್ಯೇಕ ಪೀಠದಲ್ಲಿಯೂ ಇರಬಹುದು ಎಂದು ಹೇಳುತ್ತದೆ. ಶ್ರೀ ತತ್ವನಿಧಿಯು

ದೇವಿಯು ತ್ರಿನೇತ್ರ, ದ್ವಿಭುಜಗಳನ್ನು ಹೊಂದಿದ್ದು ತ್ರಿಭಂಗಿಯಲ್ಲಿರಬೇಕು. ಮತ್ತು ಬಲಗೈಯಲ್ಲಿ ನಿಲೋತ್ಪಲ ಪುಷ್ಪವನ್ನು ಹಿಡಿದಿರಬೇಕು ಎಂದು ಹೇಳುತ್ತದೆ. ಈ ಮೂರ್ತಿಗಳೆರಡು ಆಲಂಗಿತ ಲಕ್ಷಣಗಳನ್ನು ಹೊಂದಿದ್ದರೆ ಅದನ್ನು ಆಲಿಂಗನ ಚಂದ್ರಶೇಖರಮೂರ್ತಿ ಎನ್ನುವರು. ಇಲ್ಲಿ ಚಂದ್ರಶೇಖರನು ತನ್ನ ಮುಂದಿನ ಎಡಗೈಯಿಂದ ದೇವಿಯನ್ನು ಆಲಂಗಿಸಿರುತ್ತಾನೆ. ಹಂಪಿ ಪರಿಸರದಲ್ಲಿ ಆಲಿಂಗನ ಚಂದ್ರಶೇಖರ ಮೂರ್ತಿಶಿಲ್ಪಗಳು ಲಭ್ಯವಾಗಿಲ್ಲ. ಆದರೆ ಉಮಾಸಹಿತ ಚಂದ್ರಶೇಖರಮೂರ್ತಿಯನ್ನು ವಿರೂಪಾಕ್ಷ ದೇವಾಲಯದಲ್ಲಿ ಕಾಣಬಹುದು. ಇಲ್ಲಿ ಉಮಾಸಹಿತ ಚಂದ್ರಶೇಖರ ಮೂರ್ತಿಯು ಉತ್ಸವ ಮೂರ್ತಿಯಾಗಿ ಪೂಜಿಸಲ್ಪಡುತ್ತಿದೆ. ಇದು ಪಂಚಲೋಹದ ಮೂರ್ತಿಯಾಗಿದ್ದು, ದೇವ ಹಾಗೂ ದೇವಿಯು ಪ್ರತ್ಯೇಕ ಪದ್ಮ ಪೀಠಗಳಲ್ಲಿ ಸ್ಥಾನಿಕರಾಗಿರುವರು. ಚಂದ್ರಶೇಖರಮೂರ್ತಿಯು ಸಮಪಾದದಲ್ಲಿ ನಿಂತಿದ್ದು, ಮುಖದಲ್ಲಿ ಪ್ರಸನ್ನ ಭಾವ, ತ್ರಿನೇತ್ರ ಹೊಂದಿರುವನು. ಜಟಾಮುಕುಟ, ಬಲಕಿವಿಯಲ್ಲಿ ಮಕರಕುಂಡಲ, ಎಡಕಿವಿಯಲ್ಲಿ ವೃತ್ತಕುಂಡಲಗಳನ್ನು, ಕೊರಳಲ್ಲಿ ಹಾರಗಳು ಹಾಗೂ ಯಜ್ಞೋಪವೀತ, ಚನ್ನವೀರಗಳನ್ನು ಧರಿಸಿರುವನು ಮತ್ತು ಮೊಣಕಾಲ ಮೇಲಿನವರೆಗಿನ ವಸ್ತ್ರವನ್ನು ಧರಿಸಿದ್ದು, ಕಟಿಯಲ್ಲಿ ವಿವಿಧ ಆಭರಣಗಳಿಂದ ಅಲಂಕೃತಗೊಂಡಿರುವನು. ಚತುರ್ಭುಜಗಳನ್ನು ಹೊಂದಿದ್ದು, ಬಲಗೈಗಳಲ್ಲಿ ಮುಂದಿನದು ಅಭಯಹಸ್ತ, ಹಿಂದಿನದು ಪರಶು ಹಾಗೂ ಎಡಗೈಗಳಲ್ಲಿ ಮುಂದಿನದು ವರದಹಸ್ತ ಹಿಂದಿನದು ಮೃಗವನ್ನು ಹಿಡಿದಿರುತ್ತದೆ. ಮೃಗವು ಶಿವನೆಡೆಗೆ ನೋಡುತ್ತಿರುವಂತಿದೆ. ಕೆಲವು ಜಟೆಗಳು ಬಾಹುಗಳ ಮೇಲೆ ಇಳಿ ಬಿದ್ದಿದ್ದು ಬಾಹುಗಳಲ್ಲಿ ಬಾಹುವಳಯಗಳು, ಕಂಕಣಗಳು, ಕೇಯೂರಗಳಿಂದ ಹಾಗೂ ಬೆರಳುಗಳಲ್ಲಿ ಉಂಗುರಗಳಿಂದ ಅಲಂಕೃತನಾಗಿರುವನು. ಬಲಗಾಲಿನ ಮೊಣಕಾಲ ಕೆಳಗೆ ಒಂದು ಗೆಜ್ಜೆಯುಳ್ಳ ಆಭರಣವನ್ನು ಹಾಗೂ ಪಾದಗಳಲ್ಲಿ ಪಾದಜಾಲಕಗಳನ್ನು ಧರಿಸಿರುವನು. ಕತ್ತಿನ (ಕುತ್ತಿಗೆ) ಹಿಂಭಾಗದಲ್ಲಿ ಚಕ್ರದ ಅಲಂಕರಣೆ ಯನ್ನೂ ಕಾಣಬಹುದು.

ದೇವಿಯೂ ಸಹ ಪದ್ಮಪೀಠದ ಮೇಲೆ ತ್ರಿಭಂಗದಲ್ಲಿ ಸ್ಥಾನಿಕಳಾಗಿರುವಳು. ಕಿರೀಟಮುಕುಟ, ಮಕರಕುಂಡಲಗಳನ್ನು, ಕೊರಳ ಹಾರಗಳನ್ನು ಧರಿಸಿರುವಳು. ದ್ವಿಭುಜಗಳನ್ನುಳ್ಳವಳಾಗಿದ್ದು, ಬಲಗೈಯು ಸಿಂಹಕರ್ಣ ಮುದ್ರೆಯಲ್ಲಿರುವುದು. ಹಾಗೂ ಎಡಗೈಯು ಡೊಲಹಸ್ತದಲ್ಲಿರುವುದು. ಭುಜವಳಯ, ಬಾಹುವಳಯ, ಕಂಕಣಗಳಿಂದ ಹಾಗೂ ಬೆರಳುಗಳಲ್ಲಿ ಉಂಗುರಗಳಿಂದ ಅಲಂಕೃತಳಾಗಿರುವಳು. ಉನ್ನತ ಸ್ತನಗಳನ್ನು ಹೊಂದಿದ್ದು, ಕಟಿಭಾಗದಿಂದ ಪಾದದವರೆಗಿನ ನೆರಿಗೆಯುಳ್ಳ ಉಡುಗೆಯನ್ನು ಧರಿಸಿರುವಳು ಹಾಗೂ ಕಟಿಭಾಗವು ವಿವಿಧ ಆಭರಣಗಳಿಂದ ಅಲಂಕೃತವಾಗಿರುವುದು. ದೇವಿಯ ಬಲಗಾಲು ಸ್ಥಿರವಾಗಿದ್ದು, ಎಡಗಾಲು ಕುಂಚಿತಪಾದವಾಗಿದೆ ಮತ್ತು ಪಾದಗಳಲ್ಲಿ ಪಾದಜಾಲಕಗಳನ್ನು ಕಾಣಬಹುದು. ಹೀಗೆ ಕೆಲವು ಲಕ್ಷಣಗಳಲ್ಲಿ ವ್ಯತ್ಯಾಸಗಳಿದ್ದರೂ ಬಹುಲಕ್ಷಣಗಳಿಂದ ಇವು ಆಗಮದ ಪ್ರಕಾರವಾಗಿ ರಚಿತವಾಗಿವೆ ಎನ್ನಬಹುದು.

ಇಂತಹುದೆ ಲಕ್ಷಣಗಳನ್ನು ಹೊಂದಿದ ಇನ್ನೊಂದು ಉಮಾಸಹಿತ ಚಂದ್ರಶೇಖರ ಮೂರ್ತಿಶಿಲ್ಪವೂ ಇದೇ ದೇವಾಲಯದಲ್ಲಿದೆ. ಇದು ಸಹ ಉತ್ಸವಮೂರ್ತಿಯಾಗಿದ್ದು, ಮೇಲೆ ವಿವರಿಸಿದ ಬಹುಪಾಲು ಲಕ್ಷಣಗಳನ್ನು ಹೊಂದಿದೆ. ಚಂದ್ರಶೇಖರ ಮೂರ್ತಿಯು ವೃತ್ತಾಕಾರದ ಪೀಠದ ಮೇಲಿದ್ದು ಮೇಲಿನ

ಚಂದ್ರಶೇಖರ ಮೂರ್ತಿಯ ಲಕ್ಷಣಗಳನ್ನೇ ಹೊಂದಿರುವನು. ವ್ಯತ್ಯಾಸವೆಂದರೆ ಈ ಶಿಲ್ಪಕ್ಕೆ ಭುಜವಳಯಗಳು ಮೊಣಕಾಲ ಕೆಳಗಿನ ಗೆಜ್ಜೆಯಾಕಾರದ ಆಭರಣ ಹಾಗೂ ಪಾದಜಾಲಕಗಳನ್ನು ತೋರಿಸಿರುವುದಿಲ್ಲ. ಬದಲಿಗೆ ಕಾಲುಗಳಲ್ಲಿ ಕಾಲ್ಗಡಗಳನ್ನು ತೋರಿಸಲಾಗಿದೆ. ಉಳಿದಂತೆ ಎರಡೂ ಶಿಲ್ಪಗಳಲ್ಲಿ ಒಂದೇ ಲಕ್ಷಣಗಳಿವೆ. ದೇವಿಯ ಶಿಲ್ಪವೂ ಬಹುಪಾಲು ಒಂದೇ ತೆರನಾದ ಲಕ್ಷಣಗಳನ್ನು ಹೊಂದಿದ್ದು, ಕೆಲವು ಭಿನ್ನತೆಗಳನ್ನು ಕಾಣಬಹುದು. ಅವು ದೇವಿಯು ಬಲಗೈಯಲ್ಲಿ ಪುಷ್ಪವನ್ನು(ನೀಲೋತ್ಪಲ) ಸಿಂಹ ಕರ್ಣಮುದ್ರೆಯಲ್ಲಿ ಹಿಡಿದಿರುವಳು. ಎಡಗೈ ಡೊಲಹಸ್ತವಾಗಿದ್ದರೂ ಮುಂಗೈ ಭಾಗವು ದೇವಿಯ ತೊಡೆಯೆಡೆಗೆ ಅತಿಯಾಗಿ ಬಗ್ಗಿಸಿರುವಂತೆ ತೋರುವುದು. ಹಾಗೂ ಎಡಗಾಲು ಸ್ಥಿರವಾಗಿದ್ದು, ಬಲಗಾಲು ಕುಂಚಿತದಲ್ಲಿರುವುದು. ಉಳಿದಂತೆ ಈ ಶಿಲ್ಪವೂ ಮೇಲೆ ವಿವರಿಸಿದ ಶಿಲ್ಪವನ್ನೇ ಹೋಲುತ್ತದೆ. ಆದ್ದರಿಂದ ಈ ಶಿಲ್ಪಗಳು ಸಹ ಸಂಪೂರ್ಣವಾಗಿ ಆಗಮಗಳು ಉಲ್ಲೇಖಿಸುವ ಸಂಪೂರ್ಣ ಲಕ್ಷಣಗಳನ್ನು ಹೊಂದಿರದಿದ್ದರೂ ಬಹುಪಾಲು ಹೊಂದಿರುವುದರಿಂದ ಆಗಮಗಳ ಹಿನ್ನೆಲೆಯಲ್ಲಿ ರಚಿತವಾಗಿದೆ ಎಂದು ಎನ್ನಬಹುದು.



ಉಮಾಸಹಿತ ಚಂದ್ರಶೇಖರ ಉತ್ಸವಮೂರ್ತಿ, ವಿರೂಪಾಕ್ಷ ದೇವಾಲಯ, ಹಂಪಿ

## ಉಮಾಸಹಿತ ಚಂದ್ರಶೇಖರ

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ದೇವಾಲಯದ ಉತ್ಸವ ಮೂರ್ತಿಗಳು (ಪಂಚಲೋಹ) | ೨ |
| | | ಒಟ್ಟು | ೨ |

**ಸುಖಾಸನ ಮೂರ್ತಿ**

ಸುಖಾಸನದಲ್ಲಿ ಕುಳಿತಿರುವ ಶಿವನ ಮೂರ್ತಿಶಿಲ್ಪವನ್ನು ಸುಖಾಸನ ರೂಪ ಎನ್ನಲಾಗಿದೆ. ಈ ರೂಪವನ್ನು ಶಿವನು ಧರಿಸಿದ ಸಂದರ್ಭವೆಂದರೆ ಒಂದಾನೊಂದು ಸಮಯದಲ್ಲಿ ಜಗನ್ಮಾತೆಯಾದ ಪಾರ್ವತಿಯು ಕೈಲಾಸ ಪರ್ವತದಲ್ಲಿ ರತ್ನಸಿಂಹಾಸನಾರೂಢನಾದ ಪರಮೇಶ್ವರನನ್ನು ನಮಸ್ಕರಿಸಿ ಜ್ಞಾನರೂಪವೇ ಈ ವೇದ ಶಿವಾಗಮಗಳ ತತ್ತ್ವಾರ್ಥವಾವುದು ಅದನ್ನು ದಯವಿಟ್ಟು ನನಗೆ ಉಪದೇಶಿಸು ಎಂದು ಪ್ರಾರ್ಥಿಸಲು ಶಿವನು ನಾನೇ ಓಂಕಾರ ಸ್ವರೂಪವಾದ, ಸತ್ಯ ಸ್ವರೂಪವಾದ ವೇದಾಗಮ ತತ್ವವೂ ಬ್ರಹ್ಮಸಾಕ್ಷಾತ್ಕಾರ ರೂಪವಾದ ಜ್ಞಾನ ಸ್ವರೂಪವೂ ನಾನೇ. ಸೂರ್ಯ-ಸೂರ್ಯರಶ್ಮಿಗಳಂತೆ ನಮ್ಮಿಬ್ಬರಿಗೂ ಭೇದವಿಲ್ಲ. ನನ್ನ ಪ್ರಕೃತಿ ರೂಪಳಾದ ನೀನೆ ಈ ಪ್ರಪಂಚ ಮೂಲಕಾರಣಳು, ನಾನೇ ಈ ಸುಖ ಸ್ವರೂಪವಾದ ಶಿವ ರೂಪ ಬ್ರಹ್ಮವೆಂದು ಹೇಳಿ ಪಾರ್ವತಿಗೆ ನಿತ್ಯಸುಖರೂಪ, ಬ್ರಹ್ಮದರ್ಶನವನ್ನು ಮಾಡಿಸುವುದರಿಂದಲೂ ಪತಂಜಲಿ ಮಹರ್ಷಿಯು ಲೋಕಪಾವನವಾದ ಶಿವದೀಕ್ಷೆಯನ್ನು ಹೊಂದಿ ಯೋಗನುಷ್ಠಾನದಿಂದ ನಿತ್ಯ ಸುಖರೂಪನಾದ ಶಿವನನ್ನು ಹೊಂದಲು ಆಸಕ್ತನಾಗಿ ದೃಢವಾದ ಚಾಂಚಲ್ಯ ರಹಿತವಾದ ಸದಾ ಚಿಂತನೆಯಿಂದ ಪಾಶರಹಿತವಾದ ನಿತ್ಯಸುಖರೂಪವಾದ ಸುಖಾವಹರೂಪದ ದರ್ಶನ ಮಾಡಿ ತಾನು ಅಂತಹ ಶಿವನಿಂದ ಭಿನ್ನನಲ್ಲವೆಂಬ ಅನುಭವವನ್ನು ಹೊಂದಿದನು. ಈ ಅವತಾರದಿಂದ ಶಿವನು ಸುಖಾಸನರೂಪನೆನಿಸಿದನು.[೩೮]

ಸುಖಾಸನ ಮೂರ್ತಿಯ ವರ್ಣನೆಯು ಎಲ್ಲ ಶಿಲ್ಪಶಾಸ್ತ್ರಗಳಲ್ಲಿಯೂ ಒಂದೇ ರೀತಿಯಾಗಿ ಕಂಡುಬರುತ್ತದೆ. ನಾಲ್ಕು ಬಾಹುಗಳುಳ್ಳ ದೇವನು ಕುಳಿತಿರುತ್ತಾನೆ. ಮೂರು ಕಣ್ಣುಗಳುಳ್ಳ ಈತನು ರಜೋಗುಣಸಂಪನ್ನನಾಗಿದ್ದಾನೆ ಎಂಬುದನ್ನು ಸೂಚಿಸಲು ಮೂರ್ತಿಯು ಹವಳದಂತೆ ಕೆಂಪು ಬಣ್ಣವನ್ನು ಪಡೆದಿರುವಂತೆ ಹೇಳಲಾಗಿದೆ. ಭದ್ರಪೀಠದ ಮೇಲೆ ಎಲಗಾಲನ್ನು ಮಡಚಿ ಇರಿಸಿಕೊಂಡು ಬಲಗಾಲನ್ನು ಕೆಳಕ್ಕೆ ತೂಗಿ ಬಿಟ್ಟಿರುತ್ತಾನೆ. ಈ ಭಂಗಿಯನ್ನೇ ಸುಖಾಸನ ಎನ್ನುತ್ತಾರೆ. ಆದ್ದರಿಂದ ಈ ಭಂಗಿಯಲ್ಲಿರುವ ಇತರ ಮೂರ್ತಿಗಳನ್ನು ಈ ಗುಂಪಿಗೇ ಸೇರಿಸಲಾಗಿರುವುದು. ಈ ಮೂರ್ತಿ ವ್ಯಾಘ್ರ ಚರ್ಮಾಂಬರಧಾರಿಯಾಗಿದ್ದು, ರೇಷಿಮೆಯ ವಸ್ತ್ರಗಳನ್ನು ಧರಿಸಿರುತ್ತಾನೆ. ಮೇಲಿನ ಬಲಹಸ್ತದಲ್ಲಿ ಅಂಕುಶ ಅಥವಾ ಪರಶು, ಎಡಹಸ್ತದಲ್ಲಿ ಕೃಷ್ಣಮೃಗ ಇರುತ್ತದೆ. ಕೆಳಗಿನ ಬಲಹಸ್ತದಲ್ಲಿ ಅಭಯಮುದ್ರೆ ಎಡಹಸ್ತದಲ್ಲಿ ವರದ ಅಥವಾ ಸಿಂಹಕರ್ಣ ಮುದ್ರೆ ಇರಬಹುದು. ಬಲಕಿವಿಯಲ್ಲಿ ಮಕರಕುಂಡಲ ಅಥವಾ ಸಿಂಹಕುಂಡಲವಿದ್ದು, ಎಡಕಿವಿಯಲ್ಲಿ ಪತ್ರಕುಂಡಲ ಇರಬಹುದು. ಅಥವಾ ಎರಡೂ ಕಿವಿಗಳಲ್ಲೂ ವೃತ್ತಕುಂಡಲಗಳು ಇರಬಹುದು. ಮುಂಗೈಗಳಲ್ಲಿ ಸರ್ಪಕಂಕಣಗಳು, ತಲೆಯ ಮೇಲೆ ಜಟಾಮುಕುಟ, ಯಜ್ಞೋಪವೀತಧಾರಿಯಾಗಿದ್ದು, ಎಲ್ಲಾ ಆಭರಣಗಳೊಂದಿಗೆ ಅಲಂಕೃತನಾಗಿರುತ್ತಾನೆ. ಈ ಮೂರ್ತಿಯೊಂದಿಗೆ ದೇವಿಯಾಗಲಿ, ಸ್ಕಂದನಾಗಲಿ ಇರಕೂಡದು. ಪೂರ್ವ ಕಾರಣಾಗಮದಲ್ಲಿ ಮೇಲಿನ ಈ ವಿವರಣೆಗಿಂತಲೂ ಸ್ವಲ್ಪ ವ್ಯತ್ಯಾಸವಿದೆ. ಇಲ್ಲಿ ಬಲಗಾಲನ್ನು ಪೀಠದ ಮೇಲೆ ಮಡಚಿ ಇರಿಸಿಕೊಂಡಿದ್ದು, ಎಡಗಾಲನ್ನು ತೂಗಿ ಬಿಟ್ಟಿರಬೇಕು.[೩೯]

ಸುಖಾಸನಮೂರ್ತಿಯ ಕುರಿತಂತೆ ಮೇಲೆ ತಿಳಿಸಿದ ಹಾಗೆ ಎಲ್ಲ ಶಿಲ್ಪ ಶಾಸ್ತ್ರಗಳಲ್ಲಿಯೂ ಒಂದೇ ರೀತಿಯಾದ ಲಕ್ಷಣಗಳನ್ನು ಹೇಳಲಾಗಿದೆ. ಅಜಿತಾಗಮ,[೪೦] ರೌರವಾಗಮ,[೪೧] ದೀಪ್ತಾಗಮ,[೪೨] ಶ್ರೀ ಕಾಶ್ಯಪ ಶಿಲ್ಪಶಾಸ್ತ್ರ,[೪೩] ಶಿಲ್ಪರತ್ನ[೪೪] ಈ ಎಲ್ಲ ಆಗಮ ಅಥವಾ ಶಿಲ್ಪಶಾಸ್ತ್ರ ಗ್ರಂಥಗಳಲ್ಲಿಯೂ ಸುಖಾಸನ ಮೂರ್ತಿಯ ಲಕ್ಷಣಗಳನ್ನು ವಿವರಿಸಲಾಗಿದ್ದು, ಅವು ಒಂದೇ ರೀತಿಯದ್ದಾಗಿವೆ.

ಹಂಪಿ ಪರಿಸರದಲ್ಲಿ ಒಟ್ಟು ನಾಲ್ಕು ಇಂತಹ ಸುಖಾಸನ ಮೂರ್ತಿಶಿಲ್ಪಗಳು ದೊರೆತಿವೆ. ಕಮಲಾಪುರದ ಪಟ್ಟಾಭಿರಾಮ ದೇವಾಲಯದ ನೂರು ಕಂಬಗಳ ಮಂಟಪದ ೪೨ನೇ ಸ್ತಂಭದಲ್ಲಿ, ನಾಗೇನಹಳ್ಳಿಯ ರಂಗನಾಥ ದೇವಾಲಯದ ನವರಂಗದ ೪ನೇ ಕಂಬದಲ್ಲಿ ಹಾಗೂ ಹೊಸಪೇಟೆಯ ಜಂಬುನಾಥ ದೇವಾಲಯದ ನವರಂಗದ ೫ನೇ ಕಂಬದಲ್ಲಿ ಹಾಗೂ ಮಹಾರಂಗಮಂಟಪದ ೩೩ನೇ ಕಂಬದಲ್ಲಿ ಈ ಶಿಲ್ಪಗಳು ಕಂಡುಬರುತ್ತವೆ.

ಕಮಲಾಪುರದ ಪಟ್ಟಾಭಿರಾಮ ದೇವಾಲಯದ ನೂರು ಕಂಬಗಳ ಮಂಟಪದಲ್ಲಿನ ೪೨ನೇ ಕಂಬದಲ್ಲಿ ಸುಖಾಸನಮೂರ್ತಿಯು ಕಂಡುಬರುತ್ತದೆ. ಇಲ್ಲಿ ಶಿವನು ಸುಖಾಸನ ಭಂಗಿಯಲ್ಲಿರುವನು. ಅಂದರೆ ಪೀಠದ ಮೇಲೆ ಎಡಗಾಲನ್ನು ಮಡಚಿ ಪೀಠದ ಮೇಲಿಟ್ಟಿದ್ದು, ಬಲಗಾಲನ್ನು ಕೆಳಕ್ಕೆ ಬಿಟ್ಟಿರುವನು. ಕಿರೀಟಮುಕುಟ, ಕರ್ಣಕುಂಡಲಗಳು, ಕೊರಳಹಾರಗಳನ್ನು ಧರಿಸಿದ್ದು, ಚತುರ್ಭುಜಗಳನ್ನು ಹೊಂದಿದ್ದು, ಬಲಭಾಗದ ಮುಂದಿನ ಹಸ್ತವು ಅಭಯಮುದ್ರೆಯಲ್ಲಿ ಮತ್ತು ಹಿಂದಿನ ಹಸ್ತದಲ್ಲಿ ತ್ರಿಶೂಲವನ್ನು ಹಿಡಿದಿರುವನು. ಎಡಭಾಗದ ಮುಂದಿನ ಹಸ್ತವು ವರದ ಮುದ್ರೆ ಹಾಗೂ ಹಿಂದಿನ ಹಸ್ತದಲ್ಲಿ ಮೃಗವನ್ನು ಹಿಡಿದಿರುವನು. ಕಟಿಯಿಂದ ಪಾದದವರೆಗಿನ ವಸ್ತ್ರವನ್ನು ಧರಿಸಿದ್ದು, ಉಳಿದ ಅಲಂಕರಣೆಗಳು ಅಸ್ಪಷ್ಟವಾಗಿವೆ. ನಾಗೇನಹಳ್ಳಿಯ ರಂಗನಾಥ ದೇವಾಲಯದ ನವರಂಗ ಭಾಗದ ೪ನೇ ಕಂಬದಲ್ಲಿಯೂ ಸುಖಾಸನಮೂರ್ತಿಯು ಕಂಡುಬರುತ್ತದೆ. ಇಲ್ಲಿಯೂ ಶಿವನು ಸುಖಾಸನದಲ್ಲಿ ಕುಳಿತಿದ್ದು, ಬಲಭಾಗದ ಮುಂದಿನ ಹಸ್ತವು ಅಭಯ, ಹಿಂದಿನ ಹಸ್ತದಲ್ಲಿ ಡಮರು ಹಾಗೂ ಎಡಭಾಗದ ಮುಂದಿನ ಹಸ್ತವು ವರದ, ಹಿಂದಿನ ಹಸ್ತದಲ್ಲಿ ಮೃಗವನ್ನು ಹಿಡಿದಿರುವನು. ಕರಂಡಮುಕುಟವನ್ನು ಧರಿಸಿದ್ದು, ಕರ್ಣಗಳ ಹಿಂಭಾಗದಲ್ಲಿ ಜಟೆಗಳನ್ನು ತೋರಿಸಲಾಗಿದೆ. ಶಿಲ್ಪಕ್ಕೆ ಬಣ್ಣಬಳಿದಿರುವುದರಿಂದ ವಸ್ತ್ರಾಭರಣಗಳು ಅಸ್ಪಷ್ಟವಾಗಿವೆ. ಈ ಶಿಲ್ಪಗಳಂತಿರುವ ಇನ್ನೂ ಎರಡು ಶಿಲ್ಪಗಳು ಜಂಬುನಾಥ ದೇವಾಲಯದ ನವರಂಗದ ೫ನೇ ಕಂಬ ಹಾಗೂ ಮಹಾರಂಗಮಂಟಪದ ೩೩ನೇ ಕಂಬದಲ್ಲಿ ಕಂಡುಬರುತ್ತದೆ. ನವರಂಗದ ೫ನೇ ಕಂಬದಲ್ಲಿರುವ ಶಿಲ್ಪವು ಒಂದು ಪೀಠದ ಮೇಲೆ ಸುಖಾಸನದಲ್ಲಿ ಕುಳಿತ್ತಿದ್ದು, ಶಿವನು ಚತುರ್ಭುಜಗಳನ್ನು ಉಳ್ಳವನಾಗಿರುವನು. ಬಲಭಾಗದ ಮುಂದಿನ ಹಸ್ತವು ಅಭಯ, ಹಿಂದಿನದು ಪರಶುವನ್ನು ಹಿಡಿದಿರುವುದು ಎಡಭಾಗದ ಹಸ್ತಗಳಲ್ಲಿ ಮುಂದಿನದು ನಷ್ಟಗೊಂಡಿದ್ದು, ವರದ ಮುದ್ರೆಯಲ್ಲಿದ್ದಿರಬಹುದೆಂದು ಗುರುತಿಸಬಹುದು. ಹಿಂದಿನದು ಮೃಗವನ್ನು ಹಿಡಿದಿರುವುದು. ಕಿರೀಟಮುಕುಟ, ಕೊರಳಹಾರ, ವಸ್ತ್ರಗಳನ್ನು ಧರಿಸಿರುವನೆಂದು ಗುರುತಿಸಬಹುದು. ಆದರೂ ಶಿಲ್ಪವು ಹೆಚ್ಚು ಸ್ಪಷ್ಟತೆಯಿಲ್ಲ, ಅಸೀನ ಭಂಗಿ ಹಾಗೂ ಆಯುಧಗಳಿಂದ ಸುಖಾಸಿನಮೂರ್ತಿ ಎಂದು ಸ್ಪಷ್ಟವಾಗುತ್ತದೆ. ಹಾಗೆಯೇ ಮಹಾರಂಗಮಂಟಪದಲ್ಲಿನ ೩೩ನೇ ಕಂಬದಲ್ಲಿ ಕಂಡುಬರುತ್ತದೆ. ಇಲ್ಲಿಯೂ ಶಿವನು ಸುಖಾಸನದಲ್ಲಿ ಕುಳಿತಿದ್ದು, ಕಿರೀಟಮುಕುಟ, ಕೊರಳಹಾರಗಳು,

ಯಜ್ಞೋಪವೀತ, ಕಟಿಆಭರಣಗಳು, ಕಂಕಣಗಳು ಮತ್ತು ಕಾಲ್ಗಡಗಗಳನ್ನು, ಮೊಣಕಾಲ ಮೇಲ್ಭಾಗದವರೆಗಿನ ವಸ್ತ್ರವನ್ನು ಧರಿಸಿರುವನು. ಬಲಭಾಗದ ಮುಂದಿನ ಹಸ್ತವು ಅಭಯ, ಹಿಂದಿನ ಹಸ್ತದಲ್ಲಿ ಪರಶುವನ್ನು ಹಿಡಿದಿರುವನು. ಎಡಭಾಗದ ಮುಂದಿನ ಹಸ್ತವು ವರದ ಹಾಗೂ ಹಿಂದಿನ ಹಸ್ತದಲ್ಲಿ ಮೃಗವನ್ನು ಹಿಡಿದಿರುವುದು ಸ್ಪಷ್ಟವಾಗಿದೆ. ಈ ಎಲ್ಲ ಲಕ್ಷಣಗಳಿಂದ ಎರಡೂ ಶಿಲ್ಪಗಳು ಒಂದೇ ಪ್ರತಿಮಾ ಲಕ್ಷಣಗಳನ್ನು ಹೊಂದಿವೆ.

ಮೇಲಿನ ನಾಲ್ಕು ಶಿಲ್ಪಗಳನ್ನು ಗಮನಿಸಿದಾಗ ತಿಳಿದುಬರುವ ಮುಖ್ಯ ಅಂಶವೆಂದರೆ, ಬಲಭಾಗದ ಹಿಂದಿನ ಹಸ್ತದಲ್ಲಿನ ಆಯುಧಗಳು ಮೊದಲ ಮೂರು ಶಿಲ್ಪಗಳಲ್ಲಿಯೂ ಬೇರೆ-ಬೇರೆಯಾಗಿರುವುದು. ಹಾಗೂ ಉಳಿದ ಎಲ್ಲ ಲಕ್ಷಣಗಳು ಬಹುಪಾಲು ಒಂದೇ ಆಗಿವೆ. ಆದ್ದರಿಂದ ಜಂಬುನಾಥ ದೇವಾಲಯದಲ್ಲಿ ಕಂಡುಬಂದಿರುವ ಶಿಲ್ಪಗಳೆರಡೂ ಆಗಮಗಳ ನಿಯಮಾನುಸಾರ ಕೆತ್ತಲ್ಪಟ್ಟಿದೆ ಎಂದು ಹಾಗೂ ಉಳಿದ ಎರಡೂ ಶಿಲ್ಪಗಳು ಆಗಮಗಳ ನಿಯಮಾನುಸಾರ ಕೆತ್ತಲ್ಪಡದಿದ್ದರೂ ಸಂಪೂರ್ಣವಾಗಿ ಆಗಮಗಳ ಅನುಸರಣೆಯನ್ನು ಧಿಕ್ಕರಿಸಿಲ್ಲ; ಬಹುಪಾಲು ಅನುಸರಿಸಿವೆ ಎಂದು ಹೇಳಬಹುದು.

**ಸುಖಾಸನಮೂರ್ತಿ**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಕಮಲಾಪುರ | ಪಟ್ಟಾಭಿರಾಮ | ನೂರು ಕಂಬಗಳ ಮಂಟಪದ ೪೨ನೇ ಕಂಬ | ೧ |
| ನಾಗೇನಹಳ್ಳಿ | ರಂಗನಾಥ | ನವರಂಗದ ೪ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ನವರಂಗದ ೫ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾರಂಗಮಂಟಪದ ೩೩ನೇ ಕಂಬ | ೧ |
| ಒಟ್ಟು | | | ೪ |



ಸುಖಾಸನಮೂರ್ತಿ, ಪಟ್ಟಾಭಿರಾಮ ದೇವಾಲಯ, ಕಮಲಾಪುರ



ಸುಖಾಸನಮೂರ್ತಿ ರಂಗನಾಥ ದೇವಾಲಯ, ನಾಗೇನಹಳ್ಳಿ



ಸುಖಾಸನಮೂರ್ತಿ ಜಂಬುನಾಥ ದೇವಾಲಯ.
ಹೊಸಪೇಟೆ

### ಉಮಾಸಹಿತ ಮೂರ್ತಿ

ಸುಖಾಸನ ಮೂರ್ತಿಯ ಜೊತೆಯಲ್ಲಿ ಅಂದರೆ ಒಂದೇ ಪೀಠದ ಮೇಲೆ ಶಿವನೊಂದಿಗೆ ಉಮೆಯನ್ನು ತೋರಿಸಿದ್ದರೆ, ಅದು ಉಮಾಸಹಿತಮೂರ್ತಿ ಎನ್ನಿಸಿಕೊಳ್ಳುತ್ತದೆ. ಇಲ್ಲಿ ದೇವಿಯು ಶಿವನ ಎಡಪಕ್ಕದಲ್ಲಿ ಕುಳಿತಿರುತ್ತಾಳೆ. ದ್ವಿಬಾಹುಗಳನ್ನು ಹೊಂದಿದ್ದು ಬಲಗೈಯಲ್ಲಿ ತಾವರೆ ಪುಷ್ಪವನ್ನು ಹಿಡಿದಿದ್ದು, ಎಡಗೈಯು ಸಿಂಹಕರ್ಣ ಮುದ್ರೆಯಲ್ಲಿರುತ್ತದೆ. ಇಲ್ಲವೆ ದೇವಿಯ ಎಡಗಾಲು ಪೀಠದಿಂದ ಇಳಿ ಬಿದ್ದಿರಬೇಕು. ಬಲಗಾಲು ಪೀಠದ ಮೇಲೆ ಮಡಚಿಕೊಂಡಿರಬೇಕು. ಶಿಲ್ಪರತ್ನದ ಪ್ರಕಾರ ದೇವಿಯ ಬಲಹಸ್ತದಲ್ಲಿ ಉತ್ಪಲ ಇರಬೇಕು, ಎಡಹಸ್ತವು ವರದ ಮುದ್ರೆಯಲ್ಲಿರಬೇಕು. ಅಥವಾ ಎಡತೋಳು ದೇವಿಯ ಎಡತೊಡೆಯಿಂದ ಸ್ವಲ್ಪ ದೂರದಲ್ಲಿ ಪೀಠದ ಮೇಲೆ ವಿಶ್ರಮಿಸಿರಬಹುದು. ದೇವಿಯ ಬಣ್ಣವು ಹಸಿರು ದೇವಿಯು ಬಗೆಬಗೆಯ ಆಭರಣಗಳಿಂದ, ಹಾರಗಳಿಂದ ರೇಷ್ಮೆವಸ್ತ್ರಗಳಿಂದ ಅಲಂಕೃತವಾಗಿರಬೇಕು. ದೇವಿಯು ಕರಂಡ ಮುಕುಟವನ್ನು ಧರಿಸಿರಬೇಕು. ಪೂರ್ವಕಾರಣಾಗಮವು ಕುಳಿತಿರುವ ದೇವಿಯ ಎತ್ತರವು ಶಿವನ ಭುಜಗಳಷ್ಟು ಇರಬೇಕು. ದೇವಿಯ ಮುಖವು ದೇವನ ಕಡೆಗೆ ಸ್ವಲ್ಪ ತಿರುಗಿರಬೇಕು. ಒಂದೇ ಪೀಠದ ಮೇಲೆ ಒಂದೇ ಪ್ರಭಾಮಂಡಲದಲ್ಲಿ ಕುಳಿತಿರುವ ಶಿವ ಮತ್ತು ದೇವಿಯನ್ನು ಉಮಾಸಹಿತ ಮೂರ್ತಿ ಎಂದು ವಿವರಿಸಿದೆ.[೪೫]

ಹಂಪಿ ಪರಿಸರದಲ್ಲಿ ಉಮಾಸಹಿತ ಮೂರ್ತಿಗಳು ಒಟ್ಟು ಎರಡು ದೊರೆತಿದ್ದು, ಒಂದು ವಿರೂಪಾಕ್ಷ ದೇವಾಲಯದ ಉತ್ಸವಮೂರ್ತಿಯಾಗಿದೆ. ಇನ್ನೊಂದು ಹಂಪಿಯಲ್ಲಿರುವ ವಿಜಯನಗರದ ಶಾಸನೋಕ್ತ ನರಸಿಂಹ ದೇವಾಲಯದ ಬಳಿಯಿರುವ ದೇವಾಲಯದ ಕಂಬವೊಂದರಲ್ಲಿ ದೊರೆತಿದೆ.

ಮೊದಲನೆಯದು ವಿರೂಪಾಕ್ಷ ದೇವಾಲಯದ ಉತ್ಸವ ಮೂರ್ತಿ. ಇದು ಪಂಚಲೋಹ ಮೂರ್ತಿಯಾಗಿದ್ದು, ಇಲ್ಲಿ ಶಿವ ಮತ್ತು ಉಮೆಯು ಒಂದೇ ಪೀಠದಲ್ಲಿ ಕುಳಿತಿರುವರು. ಶಿವನು ಸುಖಾಸನದಲ್ಲಿ ಕುಳಿತಿದ್ದು, ಅಂದರೆ ಬಲಗಾಲನ್ನು ಪೀಠದ ಕೆಳಕ್ಕೆ ಇಳಿಬಿಟ್ಟಿದ್ದು, ಎಡಗಾಲನ್ನು ಪೀಠದ ಮೇಲೆ ಮಡಚಿಕೊಂಡಿರುತ್ತಾನೆ. ಹಾಗೂ ಬಲಗಾಲು ಪುಷ್ಪದ ಮೇಲೆ ಸ್ಥಿತವಾಗಿರುವಂತೆ ತೋರಿಸಲಾಗಿದೆ. ಶಿವನು ಚತುರ್ಭುಜಗಳನ್ನು ಹೊಂದಿದ್ದು, ಮುಂದಿನ ಕೈಗಳು ಅಭಯ ಮತ್ತು ವರದ ಹಸ್ತಗಳಾಗಿದ್ದು, ಎಡಗೈಗಳಲ್ಲಿ ಬಲಹಿಂದಿನ ಹಸ್ತವು ಪರಶುವನ್ನು, ಎಡ ಹಿಂದಿನ ಹಸ್ತವು ಮೃಗವನ್ನು ಹಿಡಿದುಕೊಂಡಿರುತ್ತದೆ. ಜಟಾಮುಕುಟಧಾರಿಯಾಗಿದ್ದು, ಜಟೆಗಳು ಭುಜದ ಮೇಲೆ ಬಿದ್ದಿರುವಂತೆ ತೋರಿಸಲಾಗಿದೆ. ತ್ರಿನೇತ್ರನಾಗಿದ್ದು, ಕಂಠಹಾರ, ಕೊರಳಹಾರಗಳು, ಕರ್ಣಗಳಲ್ಲಿ ಸರ್ಪಕುಂಡಲಗಳು, ಕೈ ಬೆರಳುಗಳಲ್ಲಿ ಉಂಗುರಗಳು, ಯಜ್ಞೋಪವೀತ, ವಕ್ಷಬಂಧ, ಭುಜವಳಯ, ಬಾಹುವಳಯ, ಕಂಕಣಗಳು ಹಾಗೂ ಕಟಿಯಿಂದ ಪಾದದವರೆಗಿನ ಉಡುಗೆಯನ್ನು ಧರಿಸಿರುವನು. ಕಟಿಯಲ್ಲಿ ಪುಷ್ಪಾಲಂಕೃತನಾದ ಕಟಿಸೂತ್ರಗಳನ್ನು ಧರಿಸಿರುವನು. ಹಾಗೂ ಕಾಲಲ್ಲಿ ಒಂದು ಗೆಜ್ಜೆಯುಳ್ಳ ಆಭರಣವನ್ನು ಧರಿಸಿರುವನು. ಹಾಗೆಯೇ ದೇವಿಯು ಶಿವನ ಎಡಪಕ್ಕದಲ್ಲಿ ಕುಳಿತವಳಾಗಿದ್ದು, ದ್ವಿಬಾಹುಗಳನ್ನು ಹೊಂದಿರುವಳು. ಬಲಗೈಯಲ್ಲಿ ಪುಷ್ಪವನ್ನು ಹಿಡಿದಿರುವಂತೆ ತೋರುತ್ತದೆ. ಆದರೆ ಪುಷ್ಪವು ಭಗ್ನಗೊಂಡಿರುತ್ತದೆ. ಆದರೆ ಅದು ಇತ್ತು ಎಂದು ಊಹಿಸಬಹುದಾದ ಲಕ್ಷಣಗಳು ಕೈಯಲ್ಲಿ ಗೋಚರಿಸುತ್ತದೆ. ಹಾಗೂ ಎಡಗೈಯು ವರದ ಮುದ್ರೆಯಲ್ಲಿರುವುದು. ದೇವಿಯು ಕಿರೀಟಮುಕುಟ,

ಕರ್ಣದಲ್ಲಿ ವೃತ್ತಕುಂಡಲಗಳು, ಕಂಠಹಾರ, ಕೊರಳಹಾರಗಳನ್ನು ಧರಿಸಿದ್ದು, ಕಟಿಯಿಂದ ಪಾದದವರೆಗಿನ ಉಡುಗೆಯನ್ನು ತೊಟ್ಟಿರುವಳು. ಬಾಹುವಳಯಗಳು ಹಾಗೂ ಕಂಕಣಗಳು, ಬೆರಳುಗಳಲ್ಲಿ ಉಂಗುರಗಳೂ ಇರುವವು. ದೇವಿಯೂ ಸುಖಾಸನ ಅಂದರೆ ಬಲಗಾಲನ್ನು ಪೀಠದ ಕೆಳಕ್ಕೆ ಇಳಿಬಿಟ್ಟಿದ್ದು, ಎಡಗಾಲನ್ನು ಪೀಠದ ಮೇಲೆ ಮಡಚಿಕೊಂಡಿರುತ್ತಾಳೆ. ಹಾಗೂ ಬಲಗಾಲು ಪುಷ್ಪದ ಮೇಲೆ ಸ್ಥಿತವಾಗಿರುವುದು. ಪೀಠದಲ್ಲಿ ಕುಳಿತ ನಂದಿಯ ಉಬ್ಬುಶಿಲ್ಪವಿದೆ. ಈ ಶಿಲ್ಪದ ಎರಡು ಲಕ್ಷಣಗಳನ್ನು ಹೊರತುಪಡಿಸಿ ಅಂದರೆ ದೇವಿಯ ಶಿಲ್ಪವು ಎಡಗಾಲಿನ ಬದಲಾಗಿ ಬಲಗಾಲನ್ನು ಕೆಳಕ್ಕೆ ಇಳಿಬಿಟ್ಟಿರುವುದು ಹಾಗೂ ಪೀಠದಲ್ಲಿ ನಂದಿಯ ಶಿಲ್ಪವನ್ನು ತೋರಿಸಿರುವುದನ್ನು ಹೊರತುಪಡಿಸಿ ಉಳಿದಂತೆ ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ಉಲ್ಲೇಖಿಸುವ ಲಕ್ಷಣಗಳನ್ನು ಹೊಂದಿವೆ. ಆದ್ದರಿಂದ ಇದು ಸಂಪೂರ್ಣವಾಗಿ ಅಲ್ಲದಿದ್ದರೂ ಬಹುಪಾಲು ಶಿಲ್ಪಶಾಸ್ತ್ರಗಳು ಹೇಳುವ ಪ್ರಕಾರವೇ ಕೆತ್ತಲಾಗಿದೆ ಎನ್ನಬಹುದು.

ಇನ್ನೊಂದು ಶಿಲ್ಪವು ಹಂಪಿಯ ವರಾಹ ದೇವಾಲಯದ ಬಳಿ ಇರುವ ದೇವಾಲಯದ ಕಂಬವೊಂದರಲ್ಲಿ ಲಭ್ಯವಾಗಿದೆ. ಇಲ್ಲಿ ಶಿವನು ಉಮೆಯೊಂದಿಗೆ ಒಂದೇ ಪೀಠದಲ್ಲಿ ವಿರಾಜಿಸಿರುವನು. ಶಿವನು ಸುಖಾಸನದಲ್ಲಿ ಕುಳಿತಿದ್ದು, ಚತುರ್ಭುಜಗಳನ್ನು ಹೊಂದಿರುವನು. ಮುಂದಿನ ಕೈಗಳು ಅಭಯ ಮತ್ತು ವರದ ಮುದ್ರೆಯಲ್ಲಿದ್ದು, ಹಿಂದಿನ ಬಲಗೈಯು ಪರಶುವನ್ನು ಹಾಗೂ ಎಡಗೈಯು ಮೃಗವನ್ನು(ಅಸ್ಪಷ್ಟ) ಹಿಡಿದಿರುವುದು. ಇಲ್ಲಿ ಜಟಾಮುಕುಟದ ಬದಲಾಗಿ ಜಟಾಮಂಡಲವನ್ನು ತೋರಿಸಲಾಗಿದೆ. ಕರ್ಣಗಳಲ್ಲಿ ಕುಂಡಲಗಳು, ಕೊರಳಾಭರಣಗಳು, ಯಜ್ಞೋಪವೀತವನ್ನು ಧರಿಸಿರುವನು. ಈತನ ಎಡಪಕ್ಕದಲ್ಲಿ ದೇವಿಯು ಬಲಗಾಲನ್ನು ಪೀಠದ ಮೇಲೆ ಮಡಚಿಕೊಂಡಿದ್ದು, ಎಡಗಾಲನ್ನು ಪೀಠದಿಂದ ಕೆಳಕ್ಕೆ ಇಳಿ ಬಿಟ್ಟಿರುವಳು ಹಾಗೂ ಕರಂಡಮುಕುಟ, ಕರ್ಣಕುಂಡಲಗಳನ್ನು ಧರಿಸಿರುವಳು. ದ್ವಿಬಾಹುಗಳನ್ನು ಹೊಂದಿದ್ದು, ಬಲಗೈಯಲ್ಲಿ ಪುಷ್ಪವನ್ನು (ಅಸ್ಪಷ್ಟ) ಹಿಡಿದಿದ್ದು, ಎಡಗೈಯು ಪೀಠದ ಮೇಲೆ ವಿರಮಿಸಿರುವುದು. ಹೀಗೆ ಈ ಶಿಲ್ಪವು ಶಿಲ್ಪರತ್ನವು ಉಲ್ಲೇಖಿಸುವ ವಿವರಣೆಗಳೊಂದಿಗೆ ಹೋಲಿಕೆಯಾಗುವುದರಿಂದ ಇದು ಶಿಲ್ಪರತ್ನದ ಹಿನ್ನೆಲೆಯಲ್ಲಿ ಕೆತ್ತಲಾಗಿದ ಶಿಲ್ಪವಾಗಿದೆ.



ಉಮಾಸಹಿತಮೂರ್ತಿ,
ಉತ್ಸವ ಮೂರ್ತಿ, ಹಂಪಿ

ಉಮಾಸಹಿತಮೂರ್ತಿ,
ನರಸಿಂಹದೇವಾಲಯದ ಬಳಿಯಿರುವ,
ಶೈವದೇವಾಲಯ, ಹಂಪಿ



**ಉಮಾಸಹಿತ ಮೂರ್ತಿ**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ದೇವಾಲಯದ ಉತ್ಸವಮೂರ್ತಿ | ೧ |
| ಹಂಪಿ | ವರಹಾ ದೇವಾಲಯದ ಬಳಿಯಿರುವ ಪಾಳುಬಿದ್ದ ದೇವಾಲಯ | ದೇವಾಲಯದ ಪ್ರಾಕಾರಮಂಟಪದ ೮ನೇ ಕಂಬ | ೧ |
| ಒಟ್ಟು | | | ೨ |

**ಉಮಾ-ಮಹೇಶ್ವರ ಮೂರ್ತಿಶಿಲ್ಪ**

ವಿಷ್ಣುಧರ್ಮೋತ್ತರಪುರಾಣ ಮತ್ತು ರೂಪಮಂಡನ ಇವೆರಡೂ ಉಮಾಮಹೇಶ್ವರ ಮೂರ್ತಿಯ ಬಗ್ಗೆ ವಿವರಣೆಯನ್ನು ನೀಡುತ್ತವೆ. ಶಿವ ಮತ್ತು ಉಮಾದೇವಿ ಇಬ್ಬರೂ ಒಂದೇ ಪೀಠದ ಮೇಲೆ ಪರಸ್ಪರ ಆಲಿಂಗನ ಮುದ್ರೆಯಲ್ಲಿರಬೇಕು ಎಂದು ವಿಷ್ಣುಧರ್ಮೋತ್ತರಪುರಾಣ ತಿಳಿಸುತ್ತದೆ. ಶಿವನು ಜಟಾಮುಕುಟವನ್ನು ಧರಿಸಬೇಕು. ಜಟಾಮುಕುಟದಲ್ಲಿ ಬಾಲಚಂದ್ರ ಇರಬೇಕು. ಶಿವನು ಎರಡು ಬಾಹುಗಳನ್ನು ಹೊಂದಿದ್ದು, ಬಲಹಸ್ತದಲ್ಲಿ ನೀಲೋತ್ಪಲವನ್ನು ಹಿಡಿದಿರಬೇಕು. ಮತ್ತು ಎಡಹಸ್ತವು ಉಮಾದೇವಿಯ ಎಡಭುಜದ ಮೇಲಿರಿಸಿದ್ದು, ಆಲಿಂಗನ ಭಂಗಿಯಲ್ಲಿರಬೇಕು. ದೇವಿಯು ತನ್ನ ಬಲಹಸ್ತವನ್ನು ಶಿವನ ಬಲಭುಜದ ಮೇಲೆ ಇರಿಸಿದ್ದು, ಆಲಿಂಗನ ಭಂಗಿಯಲ್ಲಿರಬೇಕು. ದೇವಿಯ ಎಡಹಸ್ತದಲ್ಲಿ ದರ್ಪಣವಿರಬೇಕು. ದೇವಿಯ ಸ್ತನ ಪ್ರದೇಶ ಮತ್ತು ಕಟಿಪ್ರದೇಶವು ಆಕರ್ಷಕವಾಗಿರುವಂತೆ ರೂಪಿಸಬೇಕು. ಶಿವ ಮತ್ತು ದೇವಿಯ ಮೂರ್ತಿಗಳು ಸಕಲ ಲಕ್ಷಣಯುಕ್ತನಾಗಿ ಸುಂದರವಾಗಿ ರೂಪಿಸಿರಬೇಕು. ಈ ಮೂರ್ತಿಯ ಆರಾಧನೆಯು ಲೌಕಿಕ ಸಮೃದ್ಧಿ ಮತ್ತು ಸುಖಗಳನ್ನು ಕೌಟುಂಬಿಕ ಆನಂದಗಳನ್ನು ದಯಪಾಲಿಸಿ ನಂತರದಲ್ಲಿ ನಿರಂತರ ಸುಖವನ್ನು ಕರುಣಿಸುತ್ತದೆ.

ರೂಪಮಂಡನವು ಶಿವನು ಚತುರ್ಭುಜನಾಗಿದ್ದು, ಬಲಗೈಗಳಲ್ಲಿ ಒಂದು ತ್ರಿಶೂಲವನ್ನು ಮತ್ತೊಂದು ಮಾತುಲಿಂಗ ಫಲವನ್ನು ಹಿಡಿದಿರಬೇಕು. ಎಡಗೈಗಳಲ್ಲಿ ಒಂದು ಉಮಾದೇವಿಯ ಭುಜದ ಮೇಲೆ ಹಾಗೂ ಇನ್ನೊಂದು ಹಸ್ತದಲ್ಲಿ ಸರ್ಪವನ್ನು ಹಿಡಿದಿರಬೇಕು. ಶಿವನು ಹವಳದ ವರ್ಣವನ್ನು ಹೊಂದಿರುವನು ಎಂದು ಹೇಳುತ್ತದೆ. ಹಾಗೂ ದೇವಿಯ ಲಕ್ಷಣವು ಮೇಲೆ ವಿವರಿಸಿದ ವಿಷ್ಣುಧರ್ಮೋತ್ತರಪುರಾಣವು ಹೇಳುವ ಲಕ್ಷಣಗಳನ್ನೇ ಹೇಳುತ್ತದೆ. ಅಲ್ಲದೆ ಇವರೊಂದಿಗೆ ವೃಷಭ, ಗಣೇಶ, ಕುಮಾರ (ಕಾರ್ತಿಕೇಯ) ಹಾಗೂ ಕೃಶ ದೇಹವನ್ನು ಹೊಂದಿರುವ ಭೃಂಗಿಯನ್ನು ನೃತ್ತಿಸುತ್ತಿರುವ ರೀತಿಯಲ್ಲಿ ತೋರಿಸಬೇಕು ಎಂದು ಹೇಳುತ್ತದೆ.[೪೬]

ಹಂಪಿ ಪರಿಸರದಲ್ಲಿ ಒಟ್ಟು ೮ ಉಮಾಮಹೇಶ್ವರ ಶಿಲ್ಪಗಳು ಕಂಡುಬರುತ್ತವೆ. ಅವುಗಳು ಈ ಕೆಳಗಿನಂತಿವೆ.

ವಿರೂಪಾಕ್ಷ ದೇವಾಲಯದಲ್ಲಿ ಒಟ್ಟು ೪ ಉಮಾಮಾಹೇಶ್ವರ ಶಿಲ್ಪಗಳು ದೊರೆತಿವೆ. ಒಂದು ದೇವಾಲಯದ ಎಡಬದಿಯಲ್ಲಿರುವ ಪ್ರಾಕಾರ ಮಂಟಪದ ಮೇಲ್ಭಾಗದಲ್ಲಿ ಗಾರೆಯಿಂದ ನಿರ್ಮಿತಗೊಂಡ ದೇವಕೋಷ್ಠದಲ್ಲಿದೆ. ಈ ಶಿಲ್ಪವೂ ಗಾರೆಯಿಂದ ಮಾಡಲ್ಪಟ್ಟಿದ್ದು, ತೃಟಿತಗೊಂಡಿದೆ. ಆದರೂ ಉಮಾಮಹೇಶ್ವರ ಶಿಲ್ಪವೆಂದು ಹೇಳುವಷ್ಟು ಅವಶೇಷಗಳು ಉಳಿದುಕೊಂಡಿವೆ. ಈ ಶಿಲ್ಪದಲ್ಲಿ ಶಿವನು ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿದ್ದು, ಚತುರ್ಭುಜಗಳನ್ನು ಹೊಂದಿದ್ದನೆಂದು ಹೇಳಬಹುದು. ಆದರೆ ಬಲಭಾಗದ ಎರಡೂ ಬಾಹುಗಳು ಭಗ್ನಗೊಂಡಿವೆ. ಶಿವನು ಜಟಾಮುಕುಟಧಾರಿಯಾಗಿದ್ದು, ಸಕಲ ಆಭರಣಗಳನ್ನು ಧರಿಸಿರುವನು. ಅವನ ಎಡ ತೊಡೆಯ ಮೇಲೆ ಉಮೆಯು ಆಸೀನಳಾಗಿದ್ದು, ಕರಂಡ ಮುಕುಟ ಹಾಗೂ ಸಕಲ ವಸ್ತ್ರಾಭರಣವನ್ನು ಧರಿಸಿರುವಳು. ಆಕೆಯ ಎಡಬಾಹು ಭಗ್ನಗೊಂಡಿದೆ. ಹಾಗೂ ಬಲಬಾಹುವು ಶಿವನನ್ನು ಆಲಂಗಿಸಿದಂತಿದೆ. ಶಿವನು ಎಡಬಾಹುಗಳಲ್ಲಿ ಮೇಲಿನದು ಡಮರುವನ್ನು ಹಿಡಿದಿದ್ದು, ಕೆಳಗಿನದು ದೇವಿಯ ಕಟಿ ಭಾಗವನ್ನು ಆಲಂಗಿಸಿರುವುದು. ಈ ಶಿಲ್ಪದಂತೆಯೇ, ಗಾರೆಯಲ್ಲಿ ನಿರ್ಮಿತಗೊಂಡ ಇನ್ನೊಂದು ಉಮಾಮಹೇಶ್ವರ ಶಿಲ್ಪವು ಮೇಲಿನ ಶಿಲ್ಪಕ್ಕಿಂತ ಹೆಚ್ಚು ಸುಂದರವಾಗಿದ್ದರೂ ಇದೂ ಸಹ ಭಗ್ನಗೊಂಡ ಶಿಲ್ಪವೇ ಆಗಿದೆ. ಇಲ್ಲಿಯೂ ಶಿವನು ಚುತರ್ಭುಜ ನಾಗಿದ್ದು, ಬಲಭಾಗದ ಎರಡೂ ಬಾಹುಗಳು ಭಗ್ನಗೊಂಡಿವೆ. ಶಿವನು ಪೀಠದ ಮೇಲೆ ಸುಖಾಸೀನದಲ್ಲಿ ಕುಳಿತಿದ್ದು, ಪೀಠದಿಂದ ಕೆಳಗೆ ಇಳಿಬಿಟ್ಟ ಬಲಗಾಲು ಭೂಮಿಯನ್ನು ಸ್ಪರ್ಶಿಸಿದಂತಿದೆ. ಹಾಗೂ ಪೀಠದ ಮೇಲೆಯೇ ಮಡಚಿದ ಎಡಗಾಲಿನ ತೊಡೆಯ ಮೇಲೆ ದೇವಿಯು ಆಸೀನಳಾಗಿರುವಳು. ಶಿವನು ಕಟಿಯಿಂದ ಪಾದದವರೆಗಿನ ವಸ್ತ್ರವನ್ನು ಧರಿಸಿರುವನು ಹಾಗೂ ಜಟಾಮುಕುಟಧಾರಿಯಾಗಿದ್ದು, ಸಕಲ ಆಭರಣಗಳನ್ನು ಧರಿಸಿರುವನು. ಎಡಭಾಗದ ಬಾಹುಗಳಲ್ಲಿ ಮೇಲಿನದು ಡಮರುವನ್ನು ಹಿಡಿದಿದ್ದು, ಕೆಳಗಿನದು ಭಗ್ನಗೊಂಡಿದೆ. ಶಿವನ ಎಡತೊಡೆಯ ಮೇಲೆ ಆಸೀನಳಾದ ದೇವಿಯ ಪಾದಗಳು ಪೀಠದ ಕೆಳಗಿರುವ ಪದ್ಮ ಪುಷ್ಪದ ಮೇಲೆ ಸ್ಥಿತವಾಗಿವೆ. ಕರಂಡಮುಕುಟವನ್ನು ಧರಿಸಿರುವ ದೇವಿಯು ಇಂದಿನ ಸೀರೆ ಹಾಗೂ ಕುಪ್ಪಸದಂತಹ ವಸ್ತ್ರವನ್ನು ಧರಿಸಿರುವಳು. ದ್ವಿಭುಜಗಳನ್ನು ಹೊಂದಿರುವ ಈಕೆಯ ಎಡಬಾಹು ಶಿವನ ತೊಡೆಯನ್ನು ಸ್ಪರ್ಶಿಸಿದೆ. ಬಲಗೈಯಲ್ಲಿ ಬಹುಶಃ

ಪುಷ್ಪವನ್ನು ಹಿಡಿದಿದ್ದಿರಬಹುದು. ಆದರೆ ಅದು ಭಗ್ನಗೊಂಡಿದೆ. ಪೀಠದ ಕೆಳಭಾಗದಲ್ಲಿ ಎಡಗಡೆಗೆ ನಂದಿಯನ್ನು ತೋರಿಸಲಾಗಿದೆ. ನಂದಿ ಶಿಲ್ಪವು ಕುಳಿತಿದ್ದು, ಅದರ ಶಿರಭಾಗವು ಭಗ್ನಗೊಂಡಿದೆ. ಶಿವನ ಬಲಪಕ್ಕದಲ್ಲಿ ಭೃಂಗಿಯ ಶಿಲ್ಪವಿದೆ. ತ್ರಿಪಾದಗಳನ್ನು ಹೊಂದಿರುವ ಭೃಂಗಿಯು ಮೊಣಕಾಲ ಮೇಲಿನ ವಸ್ತ್ರವನ್ನು ಧರಿಸಿರುವನು. ನೃತ್ಯಭಂಗಿಯಲ್ಲಿರುವ ಈತನು ತನ್ನ ಬಲಗೈಯನ್ನು ತನ್ನ ಎದೆ ಭಾಗಕ್ಕೆ ಚಾಚಿದ್ದು, ಎಡಗೈಯಲ್ಲಿ ಚೌರಿಯನ್ನು ಹಿಡಿದಿರುವನು. ತಲೆಗೆ ಚಿಕ್ಕದಾದ ಕಿರೀಟದಂತಹ ಮುಕುಟವನ್ನು ಧರಿಸಿರುವನು. ಹಾಗೂ ಈ ಶಿಲ್ಪಗಳ ಪಕ್ಕಗಳಲ್ಲಿ ಅಂಜಲಿ ಮುದ್ರೆಯಲ್ಲಿರುವ ಯತಿಗಳ ಶಿಲ್ಪಗಳು ಹಾಗೂ ಪರಿಚಾರಿಕೆಯರ ಶಿಲ್ಪಗಳಿವೆ.

ಮೇಲಿನ ಎರಡೂ ಶಿಲ್ಪಗಳೂ ಗಾರೆಯಲ್ಲಿ ನಿರ್ಮಿತವಾಗಿದ್ದು, ವಿರೂಪಾಕ್ಷ ದೇವಾಲಯದ ಎಡ-ಬಲಕ್ಕಿರುವ ಪ್ರಾಕಾರ ಮಂಟಪದ ಮೇಲ್ಭಾಗದಲ್ಲಿರುವ ಕೀರ್ತಿಮುಖ ಪ್ರಭಾವಳಿಯಲಂಕೃತ ದೇವಕೋಷ್ಠಗಳಲ್ಲಿವೆ. ಈ ಎರಡೂ ಶಿಲ್ಪಗಳಲ್ಲಿ ಮೊದಲನೆಯದು ಯಾವುದೇ ಶಿಲ್ಪಶಾಸ್ತ್ರಗಳ ನಿಯಮಗಳಿಗೆ ಒಳಪಟ್ಟಿಲ್ಲ. ಎರಡನೆಯದು ರೂಪಮಂಡನವು ವಿವರಿಸುವ ವಿವರಣೆಗಳಿಗೆ ಭಾಗಶಃ ಹೋಲಿಕೆಯಾಗುತ್ತದೆ. ಆಯುಧಗಳನ್ನು ಹೊರತುಪಡಿಸಿ ಉಳಿದ ವಿವರಗಳು ಸಂಪೂರ್ಣವಲ್ಲದಿದ್ದರೂ ಭಾಗಶಃ ಹೋಲಿಕೆಯಾಗುತ್ತವೆ.

ಇನ್ನೆರಡು ಶಿಲ್ಪಗಳಲ್ಲಿ ಒಂದು ತಾರಕೇಶ್ವರ ಸ್ವಾಮಿ ಎಂಬ ಪರಿವಾರಾಲಯದಲ್ಲಿದೆ. ವಿರೂಪಾಕ್ಷ ದೇವಾಲಯದ ಪ್ರಾಕಾರ ಮಂಟಪಕ್ಕೆ ತಾಗಿಕೊಂಡಂತೆಯೇ ಉತ್ತರಾಭಿಮುಖವಾಗಿರುವ ಇದು ಮುಕ್ತಿ ನರಸಿಂಹ ದೇವಾಲಯದ ಪಕ್ಕದಲ್ಲಿದೆ. ಪ್ರಸ್ತುತ ವಿವರಿಸುತ್ತಿರುವ ಶಿಲ್ಪವು ತಾರಕೇಶ್ವರ ದೇವಾಲಯದಲ್ಲಿ ಇನ್ನಿತರ ಶಿಲ್ಪಗಳೊಂದಿಗಿದ್ದು ಅದೇ ಹೆಸರಿನಿಂದ ಕರೆಯಲ್ಪಡುತ್ತಿದೆ. ಈ ಶಿಲ್ಪವು ಕಪ್ಪು ಶಿಲೆಯಲ್ಲಿ ನಿರ್ಮಿತಗೊಂಡಿದೆ. ಇಲ್ಲಿ ಶಿವನು ಒಂದು ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿರುವನು. ಅವನ ಚತುರ್ಬಾಹುಗಳಲ್ಲಿ ಬಲಭಾಗದ ಮುಂದಿನ ಹಸ್ತವು ಅಭಯ ಮುದ್ರೆಯಲ್ಲಿದ್ದು ಹಿಂದಿನ ಹಸ್ತದಲ್ಲಿ ಪರಶುವನ್ನು ಹಿಡಿದಿರುವನು. ಎಡ ಭಾಗದ ಮುಂದಿನ ಹಸ್ತವು ದೇವಿಯನ್ನು ಆಲಂಗಿಸಿದ್ದು ಹಿಂದಿನ ಹಸ್ತದಲ್ಲಿ ಮೃಗವನ್ನು ಹಿಡಿದಿರುವನು. ಜಟಾಮುಕುಟ, ತ್ರಿನೇತ್ರ, ಕರ್ಣಾಭರಣಗಳು, ಕೊರಳ ಆಭರಣಗಳು, ವಕ್ಷಬಂಧ, ಕಟಿಆಭರಣಗಳು, ಭುಜವಳಯ, ಕಟಿಯಿಂದ ಪಾದದವರೆಗಿನ ವಸ್ತ್ರವನ್ನು ಧರಿಸಿರುವನು. ಶಿವನ ಎಡ ತೊಡೆಯ ಮೇಲೆ ದೇವಿಯು ಆಸೀನಳಾಗಿರುವಳು. ಇವಳು ದ್ವಿಭುಜಳಾಗಿದ್ದು ಬಲಬಾಹುವಿನಿಂದ ಶಿವನನ್ನು ಆಲಂಗಿಸಿದ್ದು ಎಡ ಹಸ್ತದಲ್ಲಿ ಪುಷ್ಪವನ್ನು ಹಿಡಿದಿರುವಳು. ಕಿರೀಟಮುಕುಟ, ಕಂಕಣಗಳು, ಹಾಗೂ ಪಾದದವರೆಗಿನ ವಸ್ತ್ರಗಳನ್ನು ಧರಿಸಿದ್ದು, ಪಾದಗಳನ್ನು ಮುಖ್ಯ ಪೀಠದ ಸ್ವಲ್ಪ ಕೆಳಕ್ಕಿರುವ ವೃತ್ತಾಕಾರದ ಪೀಠದ ಮೇಲೆ ಇರಿಸಿರುವಳು. ಈ ಇಡಿ ಶಿಲ್ಪವು ಕೀರ್ತಿಮುಖದ ಪ್ರಭಾವಳಿಯಿಂದ ಅಲಂಕೃತವಾಗಿದೆ. ಈ ಶಿಲ್ಪದ ಹಿಂಭಾಗದಲ್ಲಿ ಶಿಲೆಯಿಂದಲೇ ಸರ್ಪದಂತೆ ಕೆತ್ತಲಾಗಿದ್ದು ಅದರ ಹೆಡೆಯಂತಿರುವ ಭಾಗವು ಶಿಲ್ಪಕ್ಕೆ ರಕ್ಷಣೆ ನೀಡಿದಂತೆ ರಚಿಸಲಾಗಿದೆ. ಇದೊಂದು ದುಂಡು ಶಿಲ್ಪವಾಗಿದ್ದು ಅತ್ಯಂತ ಸುಂದರವಾಗಿದೆ.

ಇನ್ನೊಂದು ಶಿಲ್ಪವು ಎಡಬದಿಯ ಪ್ರಾಕಾರ ಮಂಟಪದ ೨೫ನೇ ಕಂಬದಲ್ಲಿದೆ. ಈ ಶಿಲ್ಪದಲ್ಲಿ ಶಿವನು ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿರುವನು. ಹಾಗೂ ಚತುರ್ಭುಜಗಳನ್ನು ಹೊಂದಿದ್ದು, ಬಲಭಾಗದ ಬಾಹುಗಳಲ್ಲಿ ಮೇಲಿನದು ಅಂಕುಶ ಹಿಡಿದಿದ್ದು, ಉಳಿದಂತೆ ಮೇಲೆ ವಿವರಿಸಿದ ಶಿಲ್ಪದ ಲಕ್ಷಣಗಳನ್ನೇ ಹೊಂದಿರುವುದು. ಆದರೆ ಈ ಶಿಲ್ಪದಲ್ಲಿ ಶಿವನು ಕಿರೀಟಮುಕುಟವನ್ನು ಹಾಗೂ ದೇವಿಯು ಕರಂಡ ಮುಕುಟವನ್ನು ಧರಿಸಿರುವಳು. ಆಳವಾದ ಕೆತ್ತನೆಯ ಕೊರತೆಯಿಂದಾಗಿ ಶಿಲ್ಪವು ಸವೆದಿರುವುದರಿಂದ ಅದರಲ್ಲಿರುವ ವಸ್ತ್ರಾಭರಣದ ಅಲಂಕರಣೆಗಳು ಅಸ್ಪಷ್ಟವಾಗಿವೆ. ಈ ಶಿಲ್ಪದ ಲಕ್ಷಣಗಳನ್ನೇ ಹೊಂದಿರುವ ಶಿಲ್ಪಗಳು ಚಂದ್ರಶೇಖರ ದೇವಾಲಯದ ನವರಂಗದ ೫ನೇ ಕಂಬದಲ್ಲಿ ಹಾಗೂ ಪಾನಸುಪಾರಿ ಬಜಾರಿನಲ್ಲಿರುವ ಉಮಾಮಹೇಶ್ವರ ದೇವಾಲಯದ ಲಲಾಟ ಬಿಂಬದಲ್ಲಿ ಮತ್ತು ಇದೇ ದೇವಾಲಯದ ಮಂಟಪದ ೯ನೇ ಕಂಬದಲ್ಲಿವೆ. ಉಮಾಮಹೇಶ್ವರ ದೇವಾಲಯದಲ್ಲಿ ದೊರೆಯುವ ಎರಡೂ ಶಿಲ್ಪಗಳಲ್ಲಿ ಶಿವನ ಬಲಭಾಗದ ಮೇಲಿನ ಹಸ್ತದಲ್ಲಿ ಮೃಗವನ್ನು ಹಿಡಿದಿದ್ದು ಎಡಭಾಗದ ಮೇಲಿನ ಹಸ್ತವು ಅಸ್ಪಷ್ಟವಾಗಿವೆ. ದೇವಿಯು ತನ್ನ ಎಡಹಸ್ತದಲ್ಲಿ ಪುಷ್ಪವನ್ನು ಹಿಡಿದಿರುವಳು. ಇವಿಷ್ಟು ಲಕ್ಷಣಗಳನ್ನು ಹೊರತುಪಡಿಸಿದರೆ, ಉಳಿದಂತೆ ಮೇಲೆ ವಿವರಿಸಿದ ಶಿಲ್ಪದ ಲಕ್ಷಣಗಳನ್ನೇ ಈ ಶಿಲ್ಪಗಳು ಹೊಂದಿರುವವು.

ಮತ್ತೊಂದು ಶಿಲ್ಪವು ತಿಮ್ಮಲಾಪುರದ ತ್ರಿಕೂಟ ದೇವಾಲಯದ ನವರಂಗದ ೪ನೇ ಕಂಬದಲ್ಲಿದೆ. ಇಲ್ಲಿಯೂ ಶಿವನು ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿದ್ದು, ಎಡತೊಡೆಯ ಮೇಲೆ ದೇವಿಯನ್ನು ಕುಳ್ಳಿರಿಸಿಕೊಂಡಿರುವನು. ಬಲಗಾಲನ್ನು ಪೀಠದಿಂದ ಇಳಿಬಿಟ್ಟಿದ್ದು, ಕೆಳಗೆ ಕುಳಿತಿರುವ ನಂದಿಯ ಮೇಲೆ ಸ್ಥಿತವಾಗಿದೆ. ದೇವಿಯ ಪಾದಗಳೂ ಪೀಠದಿಂದ ಕೆಳಗಿರುವ ತಾವರೆ ಪುಷ್ಪದ ಮೇಲೆ ಸ್ಥಿತವಾಗಿದೆ. ಶಿವನು ಕಿರೀಟ ಮುಕುಟವನ್ನು ಧರಿಸಿದ್ದು, ಕಟಿಯಿಂದ ಪಾದದವರೆಗಿನ ವಸ್ತ್ರವನ್ನು ಧರಿಸಿರುವನು. ಹಾಗೂ ಉದ್ದನೆಯ ವನಮಾಲೆಯನ್ನು ಧರಿಸಿರುವನು. ಆದರೆ ಆಭರಣಗಳ ಸ್ಪಷ್ಟತೆಯಿಲ್ಲ. ಚತುರ್ಭುಜಗಳನ್ನು ಹೊಂದಿದ ಈತನು ಬಲಗೈಗಳಲ್ಲಿ ಮೇಲಿನದು ಪರಶುವನ್ನು ಹಿಡಿದಿದ್ದು, ಕೆಳಗಿನದು ಅಭಯ ಮುದ್ರೆಯಲ್ಲಿದೆ. ಎಡಗೈಗಳಲ್ಲಿ ಮೇಲಿನದು ಮೃಗವನ್ನು, ಕೆಳಗಿನದು ದೇವಿಯ ಎಡತೊಡೆಯನ್ನು ಸ್ಪರ್ಷಿಸಿರುವುದು. ದೇವಿಯು ಕರಂಡಮುಕುಟ ಧರಿಸಿದ್ದು, ದ್ವಿಭುಜಗಳನ್ನು ಹೊಂದಿರುವಳು. ಎಡಗೈಯಲ್ಲಿ ಪುಷ್ಪವನ್ನು ಹಿಡಿದಿದ್ದು, ಬಲಗೈಯು ಶಿವನನ್ನು ಆಲಂಗಿಸಿರಬಹುದು. ಏಕೆಂದರೆ ಸ್ಪಷ್ಟವಾಗಿ ಗೋಚರಿಸುವುದಿಲ್ಲ. ಹಾಗೂ ಆಭರಣಗಳು ಅಸ್ಪಷ್ಟವಾಗಿವೆ.

ಮೇಲಿನ ಎಲ್ಲ ಶಿಲ್ಪಗಳಲ್ಲಿ ಶಿವನು ಸುಖಾಸನದಲ್ಲಿ ಕುಳಿತಿದ್ದು, ದೇವಿಯನ್ನು ತೊಡೆಯ ಮೇಲೆ ಕುಳ್ಳಿರಿಸಿ ಆಲಂಗಿಸಿರುವ ಶಿಲ್ಪಗಳಾದ್ದರಿಂದ ಇವನ್ನು ಉಮಾಮಹೇಶ್ವರ ಶಿಲ್ಪಗಳೆಂದು ಗುರುತಿಸಬಹುದು. ಮತ್ತು ಇದೇ ಉಮಾಸಹಿತ ಹಾಗೂ ಉಮಾಮಹೇಶ್ವರ ಶಿಲ್ಪಗಳಿಗೂ ಇರುವ ವ್ಯತ್ಯಾಸ ಎನ್ನಬಹುದು. ಮೇಲೆ ವಿವರಿಸಿದ ಉಮಾ-ಮಹೇಶ್ವರ ಶಿಲ್ಪಗಳಾವುವು ಶಿಲ್ಪಶಾಸ್ತ್ರದ ನಿಯಮಗಳ ಪ್ರಕಾರ ರಚಿತಗೊಂಡಿಲ್ಲ. ಆಯುಧಗಳ ವಿಷಯದಲ್ಲಿ ಇವು ಉಮಾ ಸಹಿತಮೂರ್ತಿಯ ಲಕ್ಷಣಗಳನ್ನೇ ಹೊಂದಿವೆ.

ಉಮಾಮಹೇಶ್ವರಮೂರ್ತಿ ಗಾರೆಶಿಲ್ಪ, ವಿರೂಪಾಕ್ಷ
ದೇವಾಲಯ, ಹಂಪಿ





ಉಮಾಮಹೇಶ್ವರಮೂರ್ತಿ,
ಉಮಾಮಹೇಶ್ವರ ದೇವಾಲಯ, ಹಂಪಿ



ಉಮಾಮಹೇಶ್ವರಮೂರ್ತಿ
ಚಂದ್ರಶೇಕರ ದೇವಾಲಯ, ಹಂಪಿ



ಉಮಾಮಹೇಶ್ವರಮೂರ್ತಿ
ತ್ರಿಕೂಟ ದೇವಾಲಯ, ತಿಮ್ಮಾಲಾಪುರ

**ಉಮಾಮಹೇಶ್ವರಮೂರ್ತಿ**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ಪರಿವಾರ ದೇವಾಲಯವಾದ ತಾರಕೇಶ್ವರ ದೇವಾಲಯ | ೧ |
| ಹಂಪಿ | ವಿರೂಪಾಕ್ಷ | ಎಡಬದಿಯ ಪ್ರಾಕಾರ ಮಂಟಪದ ೨೫ನೇ ಕಂಬ | ೧ |
| ಹಂಪಿ | ವಿರೂಪಾಕ್ಷ | ಎಡಬದಿಯ ಪ್ರಾಕಾರಮಂಟಪದ ಮೇಲಿರುವ ಗಾರೆಯ ದೇವಕೋಷ್ಠ | ೧ |
| ಹಂಪಿ | ವಿರೂಪಾಕ್ಷ | ಬಲಬದಿಯ ಪ್ರಾಕಾರಮಂಟಪದ ಮೇಲಿರುವ ಗಾರೆಯ ದೇವಕೋಷ್ಠ | ೧ |
| ಹಂಪಿ | ಉಮಾಮಹೇಶ್ವರ<br>ಉಮಾಮಹೇಶ್ವರ | ದೇವಾಲಯದ ಲಲಾಟಬಿಂಬ<br>ದೇವಾಲಯದ ಮಂಟಪದ ೯ನೇ ಕಂಬ | ೨ |
| ಕಮಲಾಪುರ | ಚಂದ್ರಶೇಖರ | ನವರಂಗದ ೫ನೇ ಕಂಬ | ೧ |
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ನವರಂಗದ ೪ನೇ ಕಂಬ | ೧ |
| | | ಒಟ್ಟು | ೮ |

**ಗಜಾಸುರ ಸಂಹಾರಮೂರ್ತಿಶಿಲ್ಪ**

ಶಿವನು ಗಜರೂಪದಲ್ಲಿರುವ ಅಸುರನನ್ನು ಸಂಹರಿಸಲು ತಾಳಿದ ರೂಪವನ್ನು ಗಜಾಸುರ ಸಂಹಾರಮೂರ್ತಿ ಎನ್ನಲಾಯಿತು. ಶಿವನು ಈ ರೂಪವನ್ನು ಧರಿಸಿದ ಕಥೆಯು ಕೂರ್ಮಪುರಾಣದಲ್ಲಿ ದೊರೆಯುತ್ತದೆ. ಕಾಶಿಯಲ್ಲಿರುವ ಕೃತ್ತಿ ವಾಸೇಶ್ವರನೆಂದು ಪ್ರಸಿದ್ಧವಾದ ಲಿಂಗದ ಮಹತ್ವವನ್ನು ಸೂತ ಪುರಾಣಿಕರು ವಿವರಿಸುತ್ತಾ ಈ ಉದಂತವನ್ನು ತಿಳಿಸಿದ್ದಾರೆ. ಈ ಲಿಂಗದ ಆರಾಧನೆಯಲ್ಲಿ ತೊಡಗಿದ್ದ ಭಕ್ತರನ್ನು ಹಿಂಸಿಸಲೆಂದು ಆನೆಯ ರೂಪದಲ್ಲಿ ಒಬ್ಬ ಅಸುರ ಬಂದು ತೊಂದರೆ ಕೊಡಲಾರಂಭಿಸಿದ. ಭಕ್ತರು ಕೃತ್ತಿವಾಸೇಶ್ವರನ ಮೊರೆ ಹೋಗಲು ಶಿವನು ಲಿಂಗದಿಂದಲೇ ಉದ್ಭವಿಸಿ ಬಂದು ಆ ಆನೆಯನ್ನು ಕೊಂದು ಅದರ ಚರ್ಮವನ್ನು ತನ್ನುಡೆಯನ್ನಾಗಿ ಧರಿಸಿದನಂತೆ.

ವರಾಹ ಪುರಾಣವು ಬೇರೊಂದು ತೆರನಾದ ಕತೆಯನ್ನು ಹೇಳುತ್ತದೆ. ಅಂಧಕಾಸುರನು ತನ್ನ ತಪಸ್ಸಿನಿಂದ ಬ್ರಹ್ಮನನ್ನು ಮೆಚ್ಚಿಸಿ ನಾನಾ ವರಗಳನ್ನು ಪಡೆದುಕೊಂಡ. ಈ ಶಕ್ತಿಯಿಂದ ಉನ್ಮತ್ತನಾಗಿ ದೇವತೆಗಳನ್ನು ಕಾಡತೊಡಗಿದ. ದೇವತೆಗಳು ಕೈಲಾಸಕ್ಕೆ ಬಂದು ಶಿವನನ್ನು ಪ್ರಾರ್ಥಿಸಿದರು. ಅವರೆಲ್ಲರೂ ಅಲ್ಲಿರುವಾಗಲೇ ಅಂಧಕಾಸುರ ಕೈಲಾಸಕ್ಕೆ ಬಂದ. ಶಿವನು ಅಸುರನೊಂದಿಗೆ ಯುದ್ಧ ಮಾಡಲು ಸನ್ನದ್ಧನಾದ. ನೀಲ ಎಂಬ ಅಸುರನು ಶಿವನನ್ನು ಕೊಲ್ಲುವ ರಹಸ್ಯ ಯೋಜನೆಯನ್ನು ತಯಾರಿಸಿ ಅದರಂತೆ ಆನೆಯ ರೂಪಧರಿಸಿದ. ಇದನ್ನು ಗಮನಿಸಿದ ನಂದಿಯು ವೀರಭದ್ರನಿಗೆ ತಿಳಿಸಿದ. ವೀರಭದ್ರನು ಸಿಂಹದ ರೂಪವನ್ನು ಪಡೆದುಕೊಂಡು ಆನೆಯೊಂದಿಗೆ ಹೋರಾಡಿ ಅದನ್ನು ಕೊಂದು, ಅದರ ಚರ್ಮವನ್ನು ತಂದು ಶಿವನಿಗೆ ಅರ್ಪಿಸಿದ. ಈ ಚರ್ಮವನ್ನು ಮೇಲುಡುಗೆಯಾಗಿ ಧರಿಸಿ,

ವಾಸುಕಿ, ತಾರಾಕ್ಷ ಮತ್ತು ಧನಂಜಯ ಎಂಬ ಸರ್ಪಗಳನ್ನು ಸೊಂಟದಲ್ಲಿ ಸುತ್ತಿಕೊಂಡು ತನ್ನ ತ್ರಿಶೂಲವನ್ನು ತಿರುಗಿಸುತ್ತಾ ಗಣಗಳೊಂದಿಗೆ ತಾರಕಾಸುರನ ಸಂಹಾರಕ್ಕೆ ಶಿವನು ಉದ್ಯುಕ್ತನಾದ.

ಸುಪ್ರಭೇದಾಗಮದಲ್ಲಿ ಶಿವನು ಭಿಕ್ಷಾಟನ ಮೂರ್ತಿಯಾಗಿ ಮೇರುಪರ್ವತದ ತಪ್ಪಲಲ್ಲಿ ಸುತ್ತುತ್ತಿದ್ದಾಗ ಋಷಿ ಪತ್ನಿಯರು ಶಿವನ ಸೌಂದರ್ಯಕ್ಕೆ ಮರುಳಾಗಿ ಅಧರ್ಮದ ಹಾದಿ ಹಿಡಿದಾಗ ಕೃದ್ಧಗೊಂಡ ಋಷಿಗಳು ಯಜ್ಞವನ್ನು ನಡೆಸಿ ಯಜ್ಞಕುಂಡದಿಂದ ಸರ್ಪಗಳು, ಅಪಸ್ಮಾರ ಪುರುಷ, ಹುಲಿ, ಆನೆ ಇತ್ಯಾದಿಗಳನ್ನು ಸೃಷ್ಟಿಸಿ ಶಿವನನ್ನು ಕೊಲ್ಲುವಂತೆ ಆಜ್ಞಾಪಿಸಿ ಕಳುಹಿಸಿದರು. ಆಗ ಶಿವನು ಸರ್ಪಗಳನ್ನು ತನ್ನ ಆಭರಣಗಳನ್ನಾಗಿ ಮಾಡಿಕೊಂಡ, ಅಪಸ್ಮಾರನನ್ನು ತನ್ನ ಪಾದದ ಕೆಳಗಿನ ಒತ್ತುಗೆಯಾಗಿ ಮಾಡಿಕೊಂಡ, ಹುಲಿ ಆನೆಗಳನ್ನು ಕೊಂದು ಅವುಗಳ ಚರ್ಮಗಳನ್ನು ಧರಿಸಿದ.

ಈ ಎಲ್ಲ ಕಥೆಗಳಲ್ಲಿ ಒಂದು ಸಮಾನ ವಿವರವೆಂದರೆ ಅಸುರ ರೂಪದಲ್ಲಿರುವ ಗಜವನ್ನು ಕೊಂದು ಅದರ ಚರ್ಮವನ್ನು ಉಡುಗೆಯನ್ನಾಗಿ ಧರಿಸಿರುವುದು. ಈ ಘಟನೆಯು ಇಂದಿನ ತಮಿಳುನಾಡಿನಲ್ಲಿರುವ ತಂಜಾವೂರಿನ ಬಳಿಯ ವಳೂವೂರಿನಲ್ಲಿ ನಡೆಯಿತು ಎಂದು ಅಲ್ಲಿಯ ಸ್ಥಳ ಪುರಾಣ ಹೇಳುತ್ತದೆ. ಅಲ್ಲಿ ಗಜಾಸುರ ಸಂಹಾರ ಮೂರ್ತಿಯ ದೇವಾಲಯವಿದೆ.[೪೭]

ಈ ಮೂರ್ತಿಶಿಲ್ಪದ ಲಕ್ಷಣಗಳನ್ನು ಕಾಶ್ಯಪಶಿಲ್ಪ ಶಾಸ್ತ್ರ, ಶಿಲ್ಪರತ್ನ, ಉತ್ತರಕಾರಣಾಗಮ, ಅಂಶುಮದ್ಭೇದಾಗಮ ಮತ್ತು ಶ್ರೀ ತತ್ವ ನಿಧಿಯಲ್ಲಿ ವಿವರಿಸಲಾಗಿದೆ. ಅವು ಈ ಕೆಳಗಿನಂತಿವೆ.

ಈ ಮೂರ್ತಿಯನ್ನು ಸಕಲ ಆಭರಣಗಳಿಂದಲೂ ಅಲಂಕರಿಸಬೇಕು. ಈ ಸ್ವಾಮಿಗೆ ನಾಲ್ಕು ತೋಳುಗಳಾಗಲಿ, ಎಂಟು ತೋಳುಗಳಾಗಲಿ ಇರುವಂತೆ ಮಾಡಬಹುದು. ನಾಲ್ಕು ತೋಳುಗಳಿದ್ದರೆ ಬಲಭಾಗದ ಹಸ್ತಗಳಲ್ಲಿ ಪಾಶ, ಗಜಚರ್ಮ ಇದ್ದರೆ, ಎಡಭಾಗದ ಹಸ್ತಗಳಲ್ಲೂ ಗಜಚರ್ಮ ಮತ್ತು ಆನೆಯ ದಂತ ಇರಬೇಕು. ಇದು ನಾಲ್ಕು ತೋಳುಗಳಿರುವ ಮೂರ್ತಿಯ ವರ್ಣನೆ. ಎಂಟು ತೋಳುಗಳಿರುವಂತೆ ರೂಪಿಸಿದಾಗ ಶೂಲ ಡಮರುಗ, ಪಾಶ, ಗಜಚರ್ಮ ಈ ನಾಲ್ಕು ಬಲಹಸ್ತಗಳಲ್ಲಿರುತ್ತವೆ. ದಂತ, ಕಪಾಲ, ಗಜಚರ್ಮ, ವಿಸ್ಮಯ ಮುದ್ರೆ ಎಡಹಸ್ತಗಳಲ್ಲಿರುತ್ತವೆ. ಶಿವನ ಎಡಪಾದದ ಅಡಿಯಲ್ಲಿ ಗಜಾಸುರನ ತಲೆಯನ್ನು ಇರಿಸಬೇಕು. ಮುಕುಟದ ಮೇಲೆ ಆನೆಯ ಬಾಲವನ್ನು ಕಲ್ಪಿಸಬೇಕು. ಸ್ವಾಮಿಯ ಮೇಲೆ ಎರಡು ಕಡೆ ಆನೆಯ ಪಾದಗಳನ್ನು ಸುಂದರವಾಗಿ ರೂಪಿಸಬೇಕು. ಆನೆಯ ಚರ್ಮವು ಪ್ರಭಾಮಂಡಲದಂತೆ ವಿಸ್ತರಿಸಿರುವ ಹಾಗೆ ಕಲ್ಪಿಸಬೇಕು. ಸ್ವಾಮಿಯನ್ನು ವ್ಯಾಘ್ರಚರ್ಮಾಂಬರ ದುಕೂಲಗಳಿಂದ ಅಲಂಕರಿಸಬೇಕು. ಎಲ್ಲಾ ಅಲಂಕಾರಗಳನ್ನು ಸ್ವಾಮಿಗೆ ಮಾಡಬಹುದು. ಸ್ವಾಮಿಯ ಶರೀರವು ಕೆಂಪು ಬಣ್ಣದ್ದಾಗಿರುತ್ತದೆ. ಹೀಗೆ ಇದು ಒಂದು ಬಗೆಯದಾದರೆ ಎರಡನೆಯ ಬಗೆಯ ಗಜಸಂಹಾರ ಮೂರ್ತಿಯನ್ನು ಈ ಕೆಳಗಿನಂತೆ ವಿವರಿಸಲಾಗುತ್ತದೆ. ಶೂಲ, ಖಡ್ಗ, ಚರ್ಮ, ದಂತಗಳನ್ನು ಬಲಹಸ್ತಗಳಲ್ಲಿಯೂ, ಕಪಾಲ, ಖೇಟಕ (ಗುರಾಣಿ), ಘಂಟೆ ಗಜಚರ್ಮ ಎಡಹಸ್ತಗಳಲ್ಲಿಯೂ ಅಲಂಕರಿಸಬೇಕು. ಈ ಮೂರ್ತಿಗೆ ಬ್ರಹ್ಮಸೂತ್ರವು ಲಲಾಟದ ಮಧ್ಯದಿಂದ;

ಮೂಗಿನ ತುದಿಯಿಂದ ಬಲಸ್ತನದ ಮಧ್ಯಭಾಗದಿಂದ ಹಾದು ಎಡಗಡೆಯ ಪೃಷ್ಠ ಮಧ್ಯದ ಮೇಲೆ ತೂಗಾಡಬೇಕು. ಸ್ವಾಮಿಯ ಎಡಪಾದವು ಗಜಾಸುರನ ತಲೆಯ ಮೇಲೆ ಸ್ಥಿರವಾಗಿರಬೇಕು. ಬಲಗಾಲನ್ನು ಎತ್ತಿ ಅಡ್ಡಲಾಗಿ ಕುಂಚಿತವಾಗಿರಿಸಬೇಕು. ಈ ಪಾದವು ಉತ್ಕುಟಿಕಾಸನದಲ್ಲಿ ಇರಬೇಕು. ಈ ಪಾದದ ಹಿಮ್ಮಡಿಯ ಪೃಷ್ಠದಿಂದ ೪ ಅಂಗುಳ ದೂರದಲ್ಲಿರುತ್ತದೆ. ಈ ಪಾದದ ಮೊಣಕಾಲಿನಿಂದ ಸೀವಾಸೂತ್ರವನ್ನು ಇಳಿಸಬೇಕು. ಈ ಮೂರ್ತಿಯ ಎಡಪಾರ್ಶ್ವದಲ್ಲಿ ಉಮಾದೇವಿಯು ಕುಮಾರಸ್ವಾಮಿಯನ್ನು ಎತ್ತಿಕೊಂಡು ಭಯದಿಂದ ನಿಂತಿರುತ್ತಾಳೆ. ಇದು ಶ್ರೀಕಾಶ್ಯಪಶಿಲ್ಪಶಾಸ್ತ್ರಂ[೪೮] ದಲ್ಲಿ ಕೊಟ್ಟಿರುವ ವಿವರಣೆ. ಇದೇ ವಿವರಣೆಯು ಶಿಲ್ಪರತ್ನ,[೪೯] ಅಂಶುಮದ್ಭೇದಾಗಮಗಳಲ್ಲಿಯೂ[೫೦] ಇರುವುದು. ಆದರೆ ಉತ್ತರ ಕಾರಣಾಗಮದಲ್ಲಿ[೫೧] ಸ್ವಲ್ಪ ಭಿನ್ನವಾದ ವಿವರಣೆಯನ್ನು ಕಾಣಬಹುದು. ಇದು ಶೀವನು ಕೆಂಪುವರ್ಣದಿಂದ ಕೂಡಿ ತ್ರಿನೇತ್ರಗಳುಳ್ಳವನಾಗಿರಬೇಕು. ಪೂಜಾಷ್ಟಕಗಳಿಂದ ಕೂಡಿ ಕೋರೆದಾಡೆಗಳುಳ್ಳ ಕರಾಳ ವದನ ಹಾಗೂ ವೃತ್ತಪಿಂಗಳ ಜಟಾಧರನಾಗಿರಬೇಕು. ಎರಡೂ ಪಕ್ಕಗಳಲ್ಲಿ ಆನೆಯ ಪಾದವಿದ್ದು, ಆನೆಯ ಬಾಲವು ತಲೆಯ ಮೇಲೆ ಇರಬೇಕು. ಶಿವನ ಎಡಪಾದವು ಗಜದೇವನ ತಲೆಯ ಮೇಲಿದ್ದು, ಬಲಪಾದವು ಮೇಲಕ್ಕೆತ್ತಿ ಬಾಗಿಸಿದ್ದಿರಬೇಕು. ಶೂಲ, ಡಮರು, ಪಾಶಗಳನ್ನು ಎಡಕರಗಳಲ್ಲೂ, ಕಪಾಲ ಖಡ್ಗ, ಖೇಟಗಳನ್ನು ಬಲಭಾಗದ ಕರಗಳಲ್ಲೂ ಇರಿಸಿರಬೇಕು. ಪ್ರಭಾಮಂಡಲ ಮಧ್ಯದಲ್ಲಿದ್ದು, ಎಲ್ಲ ಅವಯವಗಳಿಂದಲೂ ಸುಂದರನಾಗಿ ದ್ವಿಭುಜ, ದ್ವಿನೇತ್ರ ಕಿರೀಟ ಮಕುಟಗಳಿಂದ ಉಜ್ವಲನಾಗಿ ಶೋಭಿಸುತ್ತಿರಬೇಕು ಎಂದು ಹೇಳುತ್ತದೆ. ಹಾಗೂ ಎಡಗೈಯಲ್ಲಿ ಕಟಕವನ್ನು ಬಲಗೈಯಲ್ಲಿ ಗುಹನನ್ನೂ ಧರಿಸಿ ಎಲ್ಲ ಅವಯವಗಳನ್ನು ಸೌಂದರ್ಯವಿರುವಂತೆ ರಚಿಸಬೇಕು ಎಂದು ಹೇಳುತ್ತದೆ.

ಇಲ್ಲಿ ಉತ್ತರ ಕಾರಣಾಗಮವು ಹಿಂದೆ ವಿವರಿಸಿದ ಶಿಲ್ಪಶಾಸ್ತ್ರಗಳಲ್ಲಿರುವಂತೆ ಚತುರ್ಭುಜ ಮತ್ತು ಅಷ್ಟಭುಜಗಳ ಬದಲಾಗಿ ಷಡ್ಬುಜ ಮತ್ತು ದ್ವಿಭುಜಗಳನ್ನು ಹಾಗೂ ಅವುಗಳಲ್ಲಿರುವ ಆಯುಧಗಳನ್ನು ಹೇಳಿದೆ ಎಂಬುದು ತಿಳಿಯುತ್ತದೆ.

ಶ್ರೀ ತತ್ವನಿಧಿ[೫೨]ಯಲ್ಲಿ ಗಜಾಸುರನ ತಲೆಯ ಮೇಲೆ ತನ್ನ ಎಡಗಾಲನ್ನು ಇಟ್ಟಿರುವ, ಎಡಭಾಗದಲ್ಲಿ ಮೇಲೆತ್ತಿರುವ ತನ್ನ ಕೈಗಳಲ್ಲಿ ತ್ರಿಶೂಲ, ಖಡ್ಗ ಮತ್ತು ಕೊಂಬನ್ನು ಹಿಡಿದು ಕಂಗೊಳಿಸುತ್ತಿರುವ, ಬಲಭಾಗದ ಇತರ ಕೈಗಳಲ್ಲಿ ಉಳಿ ಮತ್ತು ಕಪ್ಪುಜಿಂಕೆಯನ್ನು ಹಿಡಿದಿರುವ ಭಯಂಕರವಾದ ಮುಖವುಳ್ಳ, ಚಂದ್ರನಂತೆ ಬಿಳಿಯ ಕಾಂತಿಯುಳ್ಳ ಎಡಭಾಗದಲ್ಲಿ ಹೆದರಿದ ಹಾಗೂ ತನ್ನ ಸುತನೊಡನಿರುವ ಗೌರಿಯನ್ನು ಹಾಗೂ ಸೂಜಿಯಂತೆ ಚೂಪಾದ ಆಯುಧವನ್ನು ಹಿಡಿದಿರುವ ಹರನನ್ನು ನಮಸ್ಕರಿಸುತ್ತೇನೆ ಎಂದು ವಿವರಣೆಯಿದೆ.

ಮೇಲಿನ ಎಲ್ಲ ಶಿಲ್ಪಶಾಸ್ತ್ರಗಳು ಹೇಳಿರುವ ಗಜಾಸುರ ಸಂಹಾರಮೂರ್ತಿ ಲಕ್ಷಣದಲ್ಲಿ ಸಾಮಾನ್ಯವಾಗಿರುವ ಲಕ್ಷಣಗಳೆಂದರೆ ಶಿವನು ಆನೆಯ ತಲೆಯ ಮೇಲೆ ತನ್ನ ಎಡಗಾಲನ್ನು ಸ್ಥಿರವಾಗಿಟ್ಟು ಬಲಗಾಲನ್ನು ಮೇಲೆತ್ತಿರುತ್ತಾನೆ. ಆನೆಯ ಚರ್ಮವು ಶಿವನಿಗೆ ಪ್ರಭಾಮಂಡಲದಂತೆ ವಿಸ್ತರಿಸಿರುತ್ತದೆ. ಹಲವು ಭುಜಗಳನ್ನು ಹೊಂದಿರುವ ಶಿವನು ವಿವಿಧ ಆಯುಧಗಳನ್ನು ಹಿಡಿದಿದ್ದು ಸರ್ವಾಭರಣಗಳಿಂದ ಅಲಂಕೃತನಾಗಿರುತ್ತಾನೆ ಎಂಬುದು.

ಹಂಪಿ ಪರಿಸರದಲ್ಲಿ ಒಟ್ಟು ನಾಲ್ಕು ಗಜಸಂಹಾರ ಮೂರ್ತಿ ಶಿಲ್ಪಗಳು ದೊರೆಯುತ್ತವೆ. ವಿರೂಪಾಕ್ಷ ದೇವಾಲಯದ ಎಡಬದಿಯ ಪ್ರಾಕಾರ ಮಂಟಪ, ಹೇಮಕೂಟದ ತ್ರಿಕೂಟ ದೇವಾಲಯದ ಗೋಡೆಯಲ್ಲಿ, ಕಮಲಾಪುರದ ವೇಣುಗೋಪಾಲಸ್ವಾಮಿ ದೇವಾಲಯದಲ್ಲಿ ಹಾಗೂ ತಿಮ್ಮಲಾಪುರದ ತ್ರಿಕೂಟ ದೇವಾಲಯದ ನವರಂಗದಲ್ಲಿ ಹೀಗೆ ಒಟ್ಟು ನಾಲ್ಕು ಶಿಲ್ಪಗಳು ದೊರೆಯುತ್ತವೆ.

ಮೊದಲನೆಯದು ಹಂಪಿಯ ವಿರೂಪಾಕ್ಷ ದೇವಾಲಯದ ಎಡಬದಿಯ ಪ್ರಾಕಾರಮಂಟಪದ ಮೊದಲನೇ ಕಂಬದಲ್ಲಿದೆ. ಇಲ್ಲಿ ಶಿವನು ಚತುರ್ಭುಜನಾಗಿದ್ದು, ಮೇಲಿನ ಎರಡು ಕೈಗಳಲ್ಲಿ ಗಜಚರ್ಮವನ್ನು ಹಿಡಿದಿರುವನು. ಮುಂದಿನ ಎರಡು ಹಸ್ತಗಳು ಕಾಣುತ್ತಿದ್ದರೂ ಅದರಲ್ಲಿರುವ ಆಯುಧಗಳು ಅಸ್ಪಷ್ಟವಾಗಿದೆ. ಗಜದ ಶಿರಭಾಗವು ಶಿವನ ಎಡಭಾಗಕ್ಕೆ ತಿರುಗಿದೆ. ಶಿವನ ಬಲಪಾದವು ಗಜದ ತಲೆ ಮೇಲೆ ಸ್ಥಿರವಾಗಿದೆ. ಎಡಗಾಲನ್ನು ಮೇಲೆತ್ತಿ ಗಜದ ಸೊಂಡಿಲ ಮೇಲಿಟ್ಟಿದ್ದು ನೃತ್ಯಭಂಗಿ ಯಲ್ಲಿರುವನು. ಜಟಾಮಂಡಲ(ಪೇಟದ ರೀತಿಯಲ್ಲಿ ಸುತ್ತಿರುವುದು)ಧಾರಿಯಾಗಿದ್ದು ಮುಖವು ನೋಡುತ್ತಿರುವಂತಿದೆ. ತನ್ನ ಎಡಭಾಗಕ್ಕೆ ತಿರುಗಿಸಿರುವನು. ಗಜದ ಬಾಲವು ಶಿವನ ಶಿರದ ಮೇಲ್ಭಾಗದಲ್ಲಿದ್ದು, ಅದರ ಚರ್ಮವು ಶಿವನ ಸುತ್ತ ಪ್ರಭಾಮಂಡಲದಂತೆ ವಿಸ್ತರಿಸಿರುವುದು. ಆಳವಾದ ಕೆತ್ತನೆಯ ಕೊರತೆಯಿಂದಾಗಿ ಶಿವನ ವಸ್ತ್ರಾಭರಣಗಳು ಅಸ್ಪಷ್ಟವಾಗಿವೆ. ಇನ್ನೊಂದು ಶಿಲ್ಪವು ವಿರೂಪಾಕ್ಷ ದೇವಾಲಯದ ಪಕ್ಕದಲ್ಲಿರುವ ಹೇಮಕೂಟ ಬೆಟ್ಟದಲ್ಲಿ ಒಂದೇ ವೇದಿಕೆಯಲ್ಲಿರುವ ತ್ರಿಕೂಟಗಳಲ್ಲಿ ಮಧ್ಯಭಾಗದಲ್ಲಿರುವ ದೇವಾಲಯದ ಗೋಡೆಯಲ್ಲಿದೆ. ಇಲ್ಲಿ ಶಿವನು ತನ್ನ ಬಲಗಾಲನ್ನು ಗಜದ ತಲೆಯ ಮೇಲೆ ಸ್ಥಿರವಾಗಿರಿಸಿದ್ದು, ಎಡಗಾಲನ್ನು ಮೇಲೆತ್ತಿ ನೃತ್ಯಭಂಗಿಯಲ್ಲಿರುವನು. ಚತುರ್ಭುಜನಾಗಿ ಶಿವನು ನಾಲ್ಕು ಕೈಗಳಿಂದ ಗಜಚರ್ಮವನ್ನು ಹಿಡಿದಿರುವನು. ತ್ರಿನೇತ್ರಗಳನ್ನು ಹೊಂದಿದ್ದು, ಎರಡೂ ಕಣ್ಣುಗಳನ್ನು ಮುಚ್ಚಿರುವನು. ಕರ್ಣಕುಂಡಲಗಳೂ ಇದ್ದು ಜಟಾಮುಕುಟಧಾರಿಯಾಗಿರುವನು. ಉದ್ದನೆಯ ಜಟೆಗಳು ಬೆನ್ನ ಹಿಂದೆ ಹರಡಿರುವವು. ಕೊರಳಲ್ಲಿ ಹಾರ ಹಾಗೂ ಉದ್ದನೆಯ ವನಮಾಲೆಯನ್ನು ಧರಿಸಿರುವನು.

ಮತ್ತೊಂದು ಶಿಲ್ಪವು ಕಮಲಾಪುರದಲ್ಲಿ ರಾಘವೇಂದ್ರ ಮಠದ ಬಳಿಯಲ್ಲಿರುವ ವೇಣುಗೋಪಾಲ ಸ್ವಾಮಿ ದೇವಾಲಯದ ಕಂಬವೊಂದರಲ್ಲಿದೆ. ವಿಶೇಷವೆಂದರೆ ಇಲ್ಲಿ ಶಿವನು ದ್ವಿಭುಜನಾಗಿರುವುದು. ಇಲ್ಲಿಯೂ ಸಹ ಶಿವನು ಬಲಗಾಲನ್ನು ಗಜದ (ಆನೆಯ) ಶಿರದ ಮೇಲೆ ಸ್ಥಿರವಾಗಿಟ್ಟಿದ್ದು, ಎಡಗಾಲನ್ನು ಎದೆಯಭಾಗದವರೆಗೆ ಮೇಲೆತ್ತಿರುವನು. ಮೇಲೆತ್ತಿದ ಎರಡು ಕೈಗಳಿಂದ ಗಜಚರ್ಮವನ್ನು ಹಿಡಿದಿರುವನು. ಆನೆಯ ಸೊಂಡಿಲು ಶಿವನ ಎಡಕ್ಕೆ ತಿರುಗಿದ್ದು, ಅದರ ದೇಹವು ಶಿವನ ಸುತ್ತ ಪ್ರಭಾಮಂಡಲದಂತೆ ವಿಸ್ತರಿಸಿದೆ. ಶಿವನು ಕಿರೀಟಮುಕುಟ, ಕೊರಳಹಾರ, ಕಂಕಣಗಳನ್ನು ಧರಿಸಿರುವನು. ಕೊನೆಯದಾಗಿ ಹಂಪಿ ಪರಿಸರದಲ್ಲಿ ದೊರೆಯುವ ಗಜಸಂಹಾರ ಶಿಲ್ಪವೆಂದರೆ ತಿಮ್ಮಲಾಪುರದ ತ್ರಿಕೂಟ ದೇವಾಲಯದ ನವರಂಗದ ಳನೇ ಕಂಬದಲ್ಲಿರುವ ಶಿಲ್ಪ. ಈ ಶಿಲ್ಪವು ಮೇಲಿನ ಎಲ್ಲ ಶಿಲ್ಪಗಳಿಗಿಂತ ಸುಂದರವಾಗಿದೆ. ಇಲ್ಲಿ ಗಜಾಸುರನ ದೇಹವನ್ನು ಸುಂದರವಾಗಿ ತೋರಿಸಲಾಗಿದೆ. ಅದರ ಆಕಾರ, ದೇಹದಲ್ಲಿನ ಮೂಳೆಗಳ ಸಾಲುಗಳನ್ನು ಶಿಲ್ಪಿಯು ಸುಂದರವಾಗಿ ಕಂಡರಿಸಿದ್ದಾನೆ. ವಿಸ್ತರಿಸಿರುವ ಆನೆಯ ದೇಹದ ಮಧ್ಯದಲ್ಲಿ ಶಿವನ ಶಿಲ್ಪವನ್ನು ತೋರಿಸಿರುವರು. ಶಿವನು ಚತುರ್ಭುಜಗಳನ್ನು ಹೊಂದಿದ್ದು, ಆನೆಯ ತಲೆಯ ಮೇಲೆ ಸಮಪಾದದಲ್ಲಿ ತ್ರಿಭಂಗಿಯಲ್ಲಿ ನಿಂತಿರುವನು. ಬಲಭಾಗದ ಎರಡು ಕೈಗಳಲ್ಲಿ

ಮುಂದಿನದು ಉದ್ದನೆಯ ತ್ರಿಶೂಲವನ್ನು ಹಿಡಿದಿದ್ದು, ಅದು ಆನೆಯ ಶಿರಕ್ಕೆ ಚುಚ್ಚಿರುವಂತೆ ಕೆತ್ತಲಾಗಿದೆ. ಹಿಂದಿನ ಕೈಯಿಂದ ಗಜಚರ್ಮವನ್ನು ಹಿಡಿದಿರುವನು. ಎಡಭಾಗದ ಕೈಗಳಲ್ಲಿ ಮುಂದಿನದು ಗಜಚರ್ಮವನ್ನು ಹಾಗೂ ಹಿಂದಿನ ಕೈಯಲ್ಲಿ ಪರಶುವನ್ನು ಹಿಡಿದಿರುವನು. ಕಿರೀಟಮುಕುಟ, ತ್ರಿನೇತ್ರ, ಕರ್ಣಕುಂಡಲಗಳು, ಕೊರಳಹಾರ, ಯಜ್ಞೋಪವೀತ, ವಕ್ಷಬಂಧ, ಕಟಿಯಲ್ಲಿ ಅಲಂಕೃತ ಆಭರಣಗಳು, ಉದ್ದನೆಯ ವಸ್ತ್ರ (ಧೋತಿ) ಹಾಗೂ ಉದ್ದನೆಯ ವನಮಾಲೆಯನ್ನು ಧರಿಸಿರುವನು. ಆನೆಯ ಸೊಂಡಿಲು ಶಿವನ ಎಡಪಾದದ ಬಳಿ ಇರುವುದು. ಈ ಶಿಲ್ಪವನ್ನು ಕುರಿತು ಸುರೇಶ ಕೆ.ಎಂ. ಅವರು ಲೇಖನವನ್ನು[೫೩] ಪ್ರಕಟಿಸಿರುತ್ತಾರೆ. ಅವರು ಮೇಲಿನ ವಿವರಣೆಗಳನ್ನೇ ನೀಡಿದ್ದರೂ, ಶಿಲ್ಪವು ಕರಂಡ ಮುಕುಟ ಹಾಗೂ ಎಡಭಾಗದ ಮೇಲಿನ ಕೈಯಲ್ಲಿ ಅಕುಂಶವನ್ನು ಹಿಡಿದಿರುವನು ಎಂದು ಉಲ್ಲೇಖಿಸಿರುತ್ತಾರೆ. ಆದರೆ ಮೂರ್ತಿಯು ಕಿರೀಟ ಮುಕುಟ ಮತ್ತು ಪರಶುವನ್ನು ಹಿಡಿದಿರುವುದು ಕಂಡುಬರುತ್ತದೆ. ಇದೇ ಲೇಖಕರು ಮೇಲಿನ ಎಲ್ಲ ಶಿಲ್ಪಗಳಲ್ಲಿ ಕಮಲಾಪುರದ ವೇಣುಗೋಪಾಲಸ್ವಾಮಿ ದೇವಾಲಯದಲ್ಲಿನ ದ್ವಿಭುಜ ಗಜಸಂಹಾರ ಶಿಲ್ಪವನ್ನು ಹೊರತುಪಡಿಸಿ ಉಳಿದ ಮೂರೂ ಶಿಲ್ಪಗಳ ಕುರಿತು ತಮ್ಮ Vijayanagara Sculptures at Hampi[೫೪] ಗ್ರಂಥದಲ್ಲಿ ಉಲ್ಲೇಖಿಸಿರುವರು.

ಹಂಪಿಯಲ್ಲಿ ದೊರೆತ ಈ ಮೇಲಿನ ನಾಲ್ಕು ಗಜಸಂಹಾರ ಶಿಲ್ಪಗಳು ಯಾವುದೇ ಆಗಮ ಹಾಗೂ ಶಿಲ್ಪಶಾಸ್ತ್ರ ಗ್ರಂಥಗಳು ತಿಳಿಸುವ ಮೂರ್ತಿ ಲಕ್ಷಣಗಳನ್ನು ಅನುಸರಿಸಿ ಕೆತ್ತಿಲ್ಲವೆಂಬುದು ತಿಳಿಯುತ್ತದೆ. ಎಲ್ಲ ಶಿಲ್ಪಗಳಲ್ಲಿ ಶಿಲ್ಪಿಯ ಸ್ವಂತಿಕೆ ಇರುವುದನ್ನು ಕಾಣಬಹುದು.



ಗಜಾಸುರ ಸಂಹಾರ ಮೂರ್ತಿ,
ವಿರೂಪಾಕ್ಷ ದೇವಾಲಯ, ಹಂಪಿ



ಗಜಾಸುರ ಸಂಹಾರ ಮೂರ್ತಿ,
ಹೇಮಕೂಟ ಬೆಟ್ಟ, ಹಂಪಿ



ಗಜಾಸುರ ಸಂಹಾರಮೂರ್ತಿ,
ವೇಣುಗೋಪಾಲಸ್ವಾಮಿ ದೇವಾಲಯ, ಕಮಲಾಪುರ



ಗಜಾಸುರ ಸಂಹಾರಮೂರ್ತಿ, ತ್ರಿಕೂಟ
ದೇವಾಲಯ, ತಿಮ್ಮಾಲಾಪುರ

**ಗಜಾಸುರ ಸಂಹಾರಮೂರ್ತಿ**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ಎಡಬದಿಯ ಪ್ರಾಕಾರ ಮಂಟಪದ ೧ನೇ ಕಂಬ | ೧ |
| ಹಂಪಿ | ಹೇಮಕೂಟ ಬೆಟ್ಟದ ತ್ರಿಕೂಟ ದೇವಾಲಯ | ದೇವಾಲಯದ ಹೊರಭಿತ್ತಿ | ೧ |
| ಕಮಲಾಪುರ | ವೇಣುಗೋಪಾಲ ಸ್ವಾಮಿ ದೇವಾಲಯ | ಮಂಟಪದ ೫ನೇ ಕಂಬ | ೧ |
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ನವರಂಗದ ೪ನೇ ಕಂಬ | ೧ |
| ಒಟ್ಟು | | | ೪ |

**ಕಾಲಾರಿ ಅಥವಾ ಕಾಲಸಂಹಾರ ಮೂರ್ತಿ**

ಮಾರ್ಕಂಡೇಯನ ಪ್ರಾಣವನ್ನು ತೆಗೆಯಲು ಬಂದ ಕಾಲನನ್ನು ಅಥವಾ ಯಮನನ್ನು ಸಂಹರಿಸಲೆತ್ನಿಸಿದ ಶಿವನ ರೂಪವೇ ಕಾಲಾರಿ ಅಥವಾ ಕಾಲಸಂಹಾರ ಮೂರ್ತಿ ಎಂದು ಕರೆಯಲ್ಪಟ್ಟಿದೆ. ಈ ಘಟನೆಯು ಮಾರ್ಕಂಡೇಯ ಮುನಿಗೆ ಸಂಬಂಧಿಸಿದ್ದುದಾಗಿದೆ. ಮಾರ್ಕಂಡೇಯನ ಉಲ್ಲೇಖವು ವಿವಿಧ ಪುರಾಣಗಳಲ್ಲಿ ಬೇರೆ-ಬೇರೆಯಾಗಿ ನಿರೂಪಿತವಾಗಿದೆ. ಮಾರ್ಕಂಡೇಯನು ಪ್ರಾಚೀನ ಋಷಿಗಳಲ್ಲಿ ಒಬ್ಬನಾಗಿದ್ದು, ಅವನು ಹಿಂದೂ ಪರಂಪರೆಯಲ್ಲಿ ಭೃಗು ಋಷಿಯ ಕುಲಕ್ಕೆ ಸೇರಿದವನಾಗಿದ್ದಾನೆ. ಹಲವಾರು ಪುರಾಣಗಳಲ್ಲಿ ಉಲ್ಲೇಖಿತವಾಗಿರುವಂತೆ, ಮಾರ್ಕಂಡೇಯನು ಶಿವ ಮತ್ತು ವಿಷ್ಣುವಿನ ಪರಮಭಕ್ತ. ಹದಿನೆಂಟು ಮುಖ್ಯ ಪುರಾಣಗಳಲ್ಲಿ ಮಾರ್ಕಂಡೇಯ ಪುರಾಣವು ಒಂದಾಗಿದೆ. ಈ ಪುರಾಣವು ಜೈಮಿನಿ ಮಾರ್ಕಂಡೇಯರ ನಡುವೆ ನಡೆದ ಸಂವಾದದಂತೆ ಇದೆ.

ಭಾಗವತ ಪುರಾಣದ ಹಲವಾರು ಅಧ್ಯಾಯಗಳು ಅವನ ಪ್ರಾರ್ಥನೆ ಮತ್ತು ಸಂವಾದಗಳನ್ನು ಒಳಗೊಂಡಿದೆ. ಮಾರ್ಕಂಡೇಯ ಪುರಾಣವು ಯಾವುದೇ ನಿರ್ದಿಷ್ಟ ಪಂಥ ಅಥವಾ ಧರ್ಮಕ್ಕೆ ಸೀಮಿತವಾಗಿರದೆ, ಶಿವ ಮತ್ತು ವಿಷ್ಣುವಿನ ಹಾಗೂ ಇತರೆ ದೇವ-ದೇವತೆಗಳ ವಿವರಗಳು ನಿಷ್ಪಕ್ಷಪಾತವಾಗಿವೆ. ಜೈಮಿನಿಯು ಮಾರ್ಕಂಡೇಯನಿಗೆ ನಾಲ್ಕು ಪ್ರಶ್ನೆಗಳನ್ನು ಕೇಳುವ ಸಂದರ್ಭದಿಂದ ಪುರಾಣವು ಪ್ರಾರಂಭವಾಗುತ್ತದೆ. ಹಾಗೆಯೇ ಮಹಾಭಾರತವೂ ಮಾರ್ಕಂಡೇಯನನ್ನು ಉಲ್ಲೇಖಿಸುತ್ತದೆ. ಮಾರ್ಕಂಡೇಯನನ್ನು ಹಿಂದೂಗಳೆಲ್ಲರೂ ಗೌರವಾದರಗಳನ್ನು ತೋರಿ ಆರಾಧಿಸುತ್ತಾರೆ.[೫೫]

ನಾರಸಿಂಹ ಪುರಾಣದಲ್ಲಿಯೂ ಮಾರ್ಕಂಡೇಯನ ನಿರೂಪಣೆಯಿದೆ. ಇಲ್ಲಿ ಮಾರ್ಕಂಡೇಯನು ಮೃತ್ಯುಂಜಯ ಸ್ತೋತ್ರವನ್ನು ಪಠಿಸಿದ ನಂತರ ವಿಷ್ಣುವು ಮಾರ್ಕಂಡೇಯನನ್ನು ರಕ್ಷಿಸುತ್ತಾನೆ. ಭಾಗವತ ಪುರಾಣದಂತೆ ಭೂಮಿಯು ಬಲದಿಂದ ಆವೃತವಾಗಿ ಮುಳುಗುವ ಸಂದರ್ಭ ಉಂಟಾದಾಗ ಮಾರ್ಕಂಡೇಯನು ವಿಷ್ಣುವಿನ ಮೊರೆ ಹೋಗಿ ರಕ್ಷಿಸಲು ಕೋರುತ್ತಾನೆ. ಆಗ ವಿಷ್ಣುವು ಮಗುವಾಗಿ ಎಲೆ ಮೇಲೆ ತೇಲುತ್ತ ಬಂದು ಮಾರ್ಕಂಡೇಯನಿಗೆ ದರ್ಶನ ನೀಡಿ, ತಾನು ಕಾಲ ಮತ್ತು ಮರಣ ಎಂದು ಸೃಷ್ಟಿಯ ನಿಯಮವನ್ನು ಮಾರ್ಕಂಡೇಯನಿಗೆ ತಿಳಿಸುತ್ತಾನೆ. ನಂತರ ಮುನಿಗೆ ವಿಷ್ಣುವು ತನ್ನ ಬಾಯಿಯಲ್ಲಿ ಹೋಗಿ ಜಲಪ್ರಳಯದಿಂದ ರಕ್ಷಿಸಿಕೊಳ್ಳಲು ತಿಳಿಸುತ್ತಾನೆ. ಮಾರ್ಕಂಡೇಯನು ಮಗುವಿನ ಹೊಟ್ಟೆಯನ್ನು ಪ್ರವೇಶಿಸಿದಾಗ ಅಲ್ಲಿ ಎಲ್ಲಾ ಪ್ರಪಂಚಗಳನ್ನು, ಸಪ್ತ ಪ್ರದೇಶಗಳನ್ನು ಮತ್ತು ಸಪ್ತ ಸಾಗರಗಳನ್ನು ಕಾಣುತ್ತಾನೆ. ಅಂತೆಯೇ ಎಲ್ಲಾ ಜೀವರಾಶಿಗಳನ್ನು ನೋಡಿ ಅವನಿಗೆ ಏನು ಮಾಡಬೇಕೆಂದು ತಿಳಿಯದೆ ವಿಷ್ಣುವನ್ನು ಮತ್ತೇ ಪ್ರಾರ್ಥಿಸಿಕೊಳ್ಳುತ್ತಾನೆ. ಅವನು ಪ್ರಾರ್ಥಿಸಲು ಆರಂಭಿಸಿದಾಗ ವಿಷ್ಣುವಿನ ಬಾಯಿಂದ ಹೊರಬರುತ್ತಾನೆ. ವಿಷ್ಣುವು ಪ್ರತ್ಯಕ್ಷನಾಗಿ ಮುನಿಗೆ ಆಶೀರ್ವದಿಸುತ್ತಾನೆ. ಮುನಿಯು ವಿಷ್ಣುವಿನೊಂದಿಗೆ ಒಂದು ಸಾವಿರ ವರ್ಷಗಳ ಕಾಲ ಇರುತ್ತಾನೆ. ಮಹಾಮೃತ್ಯುಂಜಯ ಸ್ತೋತ್ರವನ್ನು ಮಾರ್ಕಂಡೇಯನು ರಚಿಸಿದನು ಎನ್ನಲಾಗುತ್ತದೆ.[೫೬]

ಆದರೆ ಶಿಲ್ಪಗಳಲ್ಲಿ ಮಾರ್ಕಂಡೇಯನು ಶಿವಭಕ್ತನಾಗಿ, ಶಿವನಿಂದ ವರಪಡೆದವನಾಗಿ ಕಂಡುಬಂದಿರುವನು. ಈ ಘಟನೆಯ ವಿವರಣೆ ಪುರಾಣಗಳಲ್ಲಿ ದೊರೆಯುತ್ತದೆ. ಮೃಕಂಡು ಮಹರ್ಷಿಗೆ ಬಹುಕಾಲವಾದರೂ ಸಂತಾನವಿರಲಿಲ್ಲ. ಆತನ ದೀರ್ಘ ತಪಸ್ಸಿಗೆ ಮೆಚ್ಚಿದ ಶಿವನು ಪ್ರತ್ಯಕ್ಷನಾಗಿ ಅಪ್ರಯೋಜಕರಾದ ನೂರಾರು ಮಂದಿ ಮಕ್ಕಳು ಬೇಕೆ? ಅಥವಾ ಅಲ್ಪಾಯುವಾದ ಸುಪುತ್ರನು ಸಾಕೆ? ಎಂದು ಕೇಳಿದನು. ಋಷಿ ಅಲ್ಪಾಯು ಸುಪುತ್ರ ಸಾಕೆಂದು ಹೇಳಿದನು. ಇದರ ನಂತರ ಮೃಕಂಡುವಿನ ಪತ್ನಿ ಮನಸ್ವಿನಿಯು ಗಂಡು ಮಗುವನ್ನು ಹೆತ್ತಳು. ಮಗುವನ್ನು ಮಾರ್ಕಂಡೇಯ ಎಂದು ಕರೆದರು. ಮಗು ಬೆಳೆದು ಬುದ್ಧಿವಂತನಾಗುತ್ತಾನೆ. ಆದರೆ ಅವನು ಬೆಳೆಯುತ್ತಿದ್ದಂತೆಲ್ಲಾ ತಂದೆ-ತಾಯಿಗಳ ಮನಸ್ಸು ದುಃಖದಿಂದ ತುಂಬಿತು. ಹದಿನಾರು ವರ್ಷ ತುಂಬುತ್ತಲೇ ಆ ಮಗುವಿನ ಆಯಸ್ಸು ಮುಗಿಯುತ್ತಿತ್ತು. ತಾನು ಅಲ್ಪಾಯು ಎಂದು ಮಾರ್ಕಂಡೇಯನ ಕಿವಿಗೂ ತಲುಪಿತು. ಪುಣ್ಯಕ್ಷೇತ್ರಗಳಲ್ಲಿ ಪೂಜೆ ಸಲ್ಲಿಸಬೇಕೆಂದುಕೊಂಡನು. ಈ ತೀರ್ಥಯಾತ್ರೆಯಲ್ಲಿ ತಿರುಕ್ಕಡವೂರು (ತಮಿಳುನಾಡು) ತಲುಪಿ, ಅಲ್ಲಿಯ ಶಿವಾಲಯದಲ್ಲಿ ಪೂಜೆಯಲ್ಲಿ ನಿರತನಾಗಿದ್ದ. ಆ ಸಮಯಕ್ಕೆ

ಯಮಕಿಂಕರರು ಮಾರ್ಕಂಡೇಯನ ಪ್ರಾಣವನ್ನು ಪಾಶಗಳಿಂದ ಬಂಧಿಸಿ ಕೊಂಡೊಯ್ಯಲು ಬಂದರು. ಶಿವಪೂಜೆಯಲ್ಲಿದ್ದ ಮಾರ್ಕಂಡೇಯನ ಪ್ರಾಣವನ್ನು ತೆಗೆದುಕೊಳ್ಳುವುದು ಅವರಿಗೆ ಸಾಧ್ಯವಾಗಲಿಲ್ಲ. ಹದಿನಾರು ವರ್ಷಗಳಿಗಿಂತಲೂ ಹೆಚ್ಚು ಆಯಸ್ಸಿಲ್ಲದ ಮಾರ್ಕಂಡೇಯನನ್ನು ಭೂಮಿಯಲ್ಲಿ ಬಿಡಲಾರದೆ ಯಮನೇ ಅವನ ಪ್ರಾಣವನ್ನು ಕೊಂಡೊಯ್ಯಲು ಸನ್ನದ್ಧನಾಗಿ ಬಂದ. ಶಿವಪೂಜೆಯಲ್ಲಿ ನಿರತನಾಗಿದ್ದ ಮಾರ್ಕಂಡೇಯನ ಪ್ರಾಣವನ್ನು ತೆಗೆದುಕೊಳ್ಳಲು ಯಮ ಪಾಶವನ್ನು ಬೀಸಿದ. ಇದರಿಂದ ಕ್ರೋಧಗೊಂಡ ಶಿವನು ಲಿಂಗದಿಂದಲೇ ಆವಿರ್ಭವಿಸಿ ಬಂದು ಉಗ್ರಕೋಪದಲ್ಲಿ ಯಮನ ಎದೆಗೆ ಬಲವಾಗಿ ಒದ್ದನು. ಈ ಏಟಿಗೆ ಯಮನು ಮೂರ್ಛಿತನಾದ. ಯಮನು ಮೂರ್ಛೆಯಿಂದ ಎಚ್ಚರಗೊಂಡು ಶಿವಭಕ್ತನಾದ ಈ ಬಾಲಕನನ್ನು ಸಾಧಾರಣ ಮಾನವರಂತೆ ಪರಿಗಣಿಸಬಾರದಿತ್ತು ಎಂದು ತಿಳಿದುಕೊಂಡು ಅಲ್ಲಿಂದ ಹೊರಟು ಹೋದನು. ಶಿವನು ಮಾರ್ಕಂಡೇಯನನ್ನು ಚಿರಂಜೀವಿಯಾಗಿರುವಂತೆ ಆಶೀರ್ವದಿಸಿ, ಸದಾ ಹದಿನಾರು ವರ್ಷಗಳವನೇ ಆಗಿರುವಂತೆ ಮಾಡಿದ. ಹೀಗೆ ಚಿರಂಜೀವಿಗಳಲ್ಲಿ ಮಾರ್ಕಂಡೇಯನೂ ಒಬ್ಬನಾದ. ಹೀಗೆ ಕಾಲವನ್ನು ತಡೆದು ಸೋಲಿಸಿ ಓಡಿಸಿದ ಶಿವನ ರೂಪವೇ ಕಾಲಾರಿಮೂರ್ತಿ ಎಂದು ಪ್ರಖ್ಯಾತವಾಗಿದೆ.[೫೭]

ಈ ಕಾಲಾರಿ ಮೂರ್ತಿಯ ಕುರಿತು ವಿವಿಧ ಆಗಮಗಳು ಪ್ರತಿಮಾ ಲಕ್ಷಣಗಳನ್ನು ಹೇಳುತ್ತವೆ. ಅಂಶುಮದ್ಭೇದಾಗಮ ಅಥವಾ ಶ್ರೀಕಾಶ್ಯಪ ಶಿಲ್ಪಶಾಸ್ತ್ರ,[೫೮] ಕಾಮಿಕಾಗಮ,[೫೯] ಕಾರಣಾಗಮ,[೬೦] ರೌರವಾಗಮ,[೬೧] ಅಜಿತಾಗಮ,[೬೨] ಶಿಲ್ಪರತ್ನ[೬೩]ಗಳಲ್ಲಿ ಕಾಲಾರಿ ಮೂರ್ತಿಯ ಪ್ರತಿಮಾ ಲಕ್ಷಣಗಳನ್ನು ಹೇಳಲಾಗಿದೆ.

ಎಲ್ಲ ಆಗಮಗಳಲ್ಲಿ ದೊರೆಯುವ ವಿವರಣೆಯೆಂದರೆ,[೬೪] ಕಾಲಾರಿ ಮೂರ್ತಿಯ ಪಾದವು ಪದ್ಮಪೀಠದ ಮೇಲಿರಬೇಕು. ಯಮನ ಎದೆಯ ಮೇಲೆ ಇನ್ನೊಂದು ಪಾದವಿರಬೇಕು: ಮೂರುಕಣ್ಣಿರುವ ಶಿವನು ಚತುರ್ಭುಜ ಅಥವಾ ಅಷ್ಟಭುಜಗಳನ್ನು ಹೊಂದಿರಬಹುದು. ಜಟಾಮುಕುಟವನ್ನು ಧರಿಸಿರಬೇಕು. ಚತುರ್ಭುಜಗಳಲ್ಲಿ ಬಲಹಸ್ತಗಳಲ್ಲಿ ಒಂದು ಶೂಲವನ್ನು ಹಿಡಿದಿರಬೇಕು. ಅದು ಕಿವಿಗಳ ಎತ್ತರಕ್ಕೆ ಎತ್ತಿರಬೇಕು. ಇನ್ನೊಂದು ಹಸ್ತದಲ್ಲಿ ಪರಶುವನ್ನು ಅಥವಾ ವರದ ಮುದ್ರೆಯನ್ನು ಹೊಂದಿರಬೇಕು. ಪರಶು ಹಿಡಿದಿದ್ದರೆ ಆಯುಧವು ಶಿವನ ಕಡೆಗೆ ತಿರುಗಿದ್ದು, ಈ ಹಸ್ತವು ಹಿಕ್ಕಸೂತ್ರದ ಬಳಿ ಇರಬೇಕು. ಹಿಂದಿನ ಎಡಹಸ್ತವು ವಿಸ್ಮಯ ಮುದ್ರೆಯಲ್ಲಿರಬೇಕು. ಈ ಹಸ್ತದ ಉಂಗುರ ಬೆರಳು ಉಷ್ಣೀಶದ ಎತ್ತರಕ್ಕೆ ಇರಬೇಕು. ಅಷ್ಟಭುಜಗಳಿದ್ದರೆ ಬಲ ಪಾರ್ಶ್ವದಲ್ಲಿ ಶೂಲ, ಪರಶು, ವಜ್ರ, ಖಡ್ಗ ಧರಿಸಿರಬೇಕು. ಎಡಭಾಗದ ಎರಡು ಬಾಹುಗಳಲ್ಲಿ ಖೇಟಕ ಮತ್ತು ಪಾಶಗಳು ಇರಬೇಕು. ಇನ್ನೆರಡು ಹಸ್ತಗಳಲ್ಲಿ ವಿಸ್ಮಯ ಮತ್ತು ಸೂಚಿಮುದ್ರೆಗಳನ್ನು ಧರಿಸಿರಬೇಕು. ಸಕಲಾಭರಣಗಳಿಂದ ಅಲಂಕೃತನಾಗಿರುವ ಶಿವನ ಬಣ್ಣವು ಹವಳದ ಕೆಂಪು ಬಣ್ಣದವನಾಗಿರುತ್ತಾನೆ. ಕಾಲನಾದ ಯಮನು ಎರಡು ಬಾಹು, ಎರಡು ಕಾಲುಗಳು, ಕೋರೆಹಲ್ಲುಗಳಿದ್ದು, ಕರಂಡ ಮುಕುಟ ಧರಿಸಿದವನಾಗಿರಬೇಕು. ಆತನ ಒಂದು ಕೈಯಲ್ಲಿ ಪಾಶ ಇರಬೇಕು. ಯಮನು ಶಿವನಿಗೆ ಅಂಜಲಿಬದ್ಧನಾಗಿ ನಮಸ್ಕರಿಸುತ್ತಿರಬೇಕು. ಹೆದರಿಕೆಯಿಂದ ನಡುಗುತ್ತಾ ರಕ್ತಸಿಕ್ತನಾಗಿರಬೇಕು. ಯಮನ ಕಾಲುಗಳು ದೂರವಾಗಿದ್ದು, ತಾನು ನಿಲ್ಲಲು

ಪ್ರಯತ್ನಿಸುತ್ತಿರುವಂತೆ ಇರಬೇಕು. ಶಿವನ ಕರುಣೆಗಾಗಿ ಯಾಚಿಸುತ್ತಿರುವಂತೆ ಅವನ ಮುಖಭಾವ ಇರಬೇಕು.

ಮೇಲಿನ ಇದೇ ವಿವರಣೆಗೆ ಕಾಮಿಕಾಗಮವು ಇನ್ನೂ ಕೆಲವು ಹೆಚ್ಚಿನ ವಿವರಗಳನ್ನು ಸೇರಿಸುತ್ತದೆ. ಯಮನನ್ನು ಶಿವನು ಬಲಗಾಲಿನಿಂದ ಒದೆಯುತ್ತಿರುವಂತೆ ತೋರಿಸಬೇಕು. ಎಡಗಾಲು ನೆಲದ ಮೇಲೆ ಊರಿರಬೇಕು. ಶಿವನ ಬಲಹಸ್ತಗಳಲ್ಲಿ ಶೂಲ, ಪರಶು, ಎಡಹಸ್ತದಲ್ಲಿ ನಾಗಪಾಶ ಇರಬೇಕು. ಇನ್ನುಳಿದ ಹಸ್ತದಲ್ಲಿ ಸೂಚೀ ಮುದ್ರೆ ಇರಬೇಕು. ಶಿವನ ನೋಟವು ಯಮನ ಕಡೆಗೆ ಇರಬೇಕು. ಶೂಲವು ಯಮನ ಕೊರಳಿನ ಕಡೆಗೆ ಗುರಿಯಾಗಿರಿಸಿಕೊಂಡಿರಬೇಕು. ಕಾಲನು ಮೂರ್ಛಿತನಾಗಿ ನೆಲದ ಮೇಲೆ ಬಿದ್ದಿರಬೇಕು. ಅವನ ಕಣ್ಣು ಕಂಬನಿಯಿಂದ ತುಂಬಿ ಮುಚ್ಚಿರಬೇಕು. ಯಮನು ಕೆಲವು ವಸ್ತ್ರಗಳನ್ನು ಧರಿಸಿರಬೇಕು. ತಲೆಗೂದಲೂ ಕೆಂಪಾಗಿರಬೇಕು. ಕೋರೆಗಳು ಇರಬೇಕು. ಯಮನನ್ನು ನವತಾಳಕ್ಕೆ ಸರಿಯಾಗಿ ರೂಪಿಸಬೇಕು. ಮತ್ತು ಅವನ ಎತ್ತರವು ಶಿವನ ನಾಭಿಯಷ್ಟಿರಬೇಕು.

ಕಾಮಿಕಾಗಮದಲ್ಲಿ ಇನ್ನೊಂದು ಬಗೆಯ ವರ್ಣನೆ ದೊರೆಯುತ್ತದೆ. ಶಿವನು ಮಾರ್ಕಂಡೇಯನು ಪೂಜಿಸುತ್ತಿರುವ ಲಿಂಗದಿಂದಲೇ ಆವಿರ್ಭವಿಸಿ ಬಂದಂತೆ ತೋರಿಸಬೇಕು. ಯಮನು ನೆಲದ ಮೇಲೆ ಸಾಷ್ಟಾಂಗ ಮುದ್ರೆಯಲ್ಲಿ ಬಿದ್ದಿರಬೇಕು. ಈ ಸಂದರ್ಭದಲ್ಲಿ ಶಿವನನ್ನು ಈಗಾಗಲೇ ಹೇಳಲಾಗಿರುವ ಲಿಂಗೋದ್ಭವ ಮೂರ್ತಿಯಂತೆ ರೂಪಿಸಿರಬೇಕು. ಶಿವನು ವಿಭೂತಿಧಾರಿಯಾಗಿರಬೇಕು. ಕಾಲನಿಗೆ ಹೆದರಿರುವಂತೆ ಕಾಣಿಸುವ ಮಾರ್ಕಂಡೇಯನು ಶಿವಪೂಜೆಯಲ್ಲಿ ನಿರತನಾಗಿರುವಂತೆ ಚಿತ್ರಿತವಾಗಬೇಕು. ಶಿವನು ತನ್ನ ರಕ್ಷಣೆಗೆ ಪ್ರತ್ಯಕ್ಷವಾಗಿರುವುದಕ್ಕೆ ಸಂತೋಷವು ಅವನ ಮುಖದ ಮೇಲೆ ಕಾಣಿಸಬೇಕು.

ಕಾರಣಾಗಮವು ಶೂಲವನ್ನು ಹಿಡಿದಿರುವ ಎರಡು ಮುಂದಿನ ಹಸ್ತಗಳು ಕಟಕ ಮುದ್ರೆಯಲ್ಲಿರ ಬೇಕೆಂದು ಹೇಳುತ್ತವೆ. ಇದು ಸ್ಪಷ್ಟವಾಗಿ ಎರಕದ(ಲೋಹ) ಮೂರ್ತಿಗಳಿಗೆ ಸಂಬಂಧಿಸಿದೆ. ಸಾಧಾರಣ ವಾಗಿ ಈ ರೀತಿಯ ಆಯುಧಗಳನ್ನು ಮೂರ್ತಿಯೊಂದಿಗೆ ಸಿದ್ಧಪಡಿಸುವುದಿಲ್ಲ. ಆಯುಧವನ್ನು ಪ್ರತ್ಯೇಕವಾಗಿ ತಯಾರಿಸಿ ನಂತರದಲ್ಲಿ ಹಸ್ತಗಳಲ್ಲಿ ಸೇರಿಸಲಾಗುತ್ತದೆ. ಈ ಮೂರ್ತಿಯನ್ನು ಕಾಲಸಂಹಾರಮೂರ್ತಿ, ಕಾಲಾರಿಮೂರ್ತಿ, ಕಾಲಹಮೂರ್ತಿ, ಕಾಲದಹನ ಮೂರ್ತಿ ಎಂದು ಕರೆಯುತ್ತಾರೆ. ಶಿವನ ರೌದ್ರವತಾರಗಳಲ್ಲಿ ಇದು ಒಂದು. ಅಕಾಲ ಮೃತ್ಯುವನ್ನು ದೂರ ಮಾಡುವುದೆಂದು ಈ ಮೂರ್ತಿಯ ಆರಾಧನೆ ಇಂದಿಗೂ ಬಹುವ್ಯಾಪಕವಾಗಿ ರೂಢಿಯಲ್ಲಿದೆ.

ಹಂಪಿ ಪರಿಸರದಲ್ಲಿ ಒಟ್ಟು ೫ ಕಾಲಾರಿ ಮೂರ್ತಿಶಿಲ್ಪಗಳು ದೊರೆತಿವೆ. ಅವುಗಳು ವಿರೂಪಾಕ್ಷ ದೇವಾಲಯ(೨), ವಿಠಲ ದೇವಾಲಯ(೧), ಮಲಪನಗುಡಿಯ ಮಲ್ಲಿಕಾರ್ಜುನ ದೇವಾಲಯ(೧) ಹಾಗೂ ಸೌಮ್ಯಸೋಮೇಶ್ವರ ದೇವಾಲಯದಲ್ಲಿ(೧) ದೊರೆತಿವೆ. ಇವುಗಳಲ್ಲಿ ಎರಡು ಶಿಲ್ಪಗಳು ನಿರೂಪಣಾತ್ಮಕ ಶಿಲ್ಪಗಳಾಗಿವೆ. ಇವುಗಳ ಕುರಿತು ವಾಸುದೇವನ್ ಸಿ.ಎಸ್.[೬೫]ರವರು ಲೇಖನವನ್ನು ಪ್ರಕಟಿಸಿರುತ್ತಾರೆ. ಹಾಗೂ ವಿರೂಪಾಕ್ಷ ದೇವಾಲಯದಲ್ಲಿನ ೨ ಶಿಲ್ಪಗಳ ಕುರಿತು ಸುರೇಶ್ ಕೆ.ಎಂ.[೬೬] ರವರು ತಮ್ಮ Vijayanagara Sculptures at Hampi ಎಂಬ ಗ್ರಂಥದಲ್ಲಿ ವಿವರಿಸಿರುವರು.

ಮೊದಲನೆಯದು ವಿರೂಪಾಕ್ಷ ದೇವಾಲಯದ ಪ್ರಸ್ತುತ ಪ್ರವೇಶದ್ವಾರ ಹಾಗೂ ಗೋಪುರದ ಕೆಳಗಿರುವ ಕಲ್ಲಿನ ಕಟ್ಟಡದ ಭಿತ್ತಿಯಲ್ಲಿನ ಒಂದು ಫಲಕದಲ್ಲಿ ಈ ಶಿಲ್ಪವಿದೆ. ಇದೊಂದು ನಿರೂಪಣಾತ್ಮಕ ಶಿಲ್ಪವಾಗಿದೆ. ಈ ನಿರೂಪಣಾತ್ಮಕ ಶಿಲ್ಪವು ಮಾರ್ಕಂಡೇಯನ ಸಂಪೂರ್ಣ ವೃತ್ತಾಂತವನ್ನು ಬಿಂಬಿಸುತ್ತದೆ. ಈ ಫಲಕದಲ್ಲಿ ಯಮನು ಕಾರ್ಯಪ್ರವೃತ್ತವಾಗಿರುವಂತೆ ಎರಡು ಬಾರಿ ತೋರಲಾಗಿದೆ. ಇಲ್ಲಿಯವರೆಗೂ ದೊರೆತ ಯಾವುದೇ ಫಲಕಗಳಲ್ಲಿ ಯಮನನ್ನು ಎರಡು ಬಾರಿ ತೋರಿಲ್ಲ. ಯಮನನ್ನು ಫಲಕದ ಎಡಭಾಗದಲ್ಲಿ ಮಾರ್ಕಂಡೇಯನತ್ತ ಪಾಶವನ್ನು ಬೀಸುತ್ತಿರುವಂತೆ ತೋರಲಾಗಿದೆ. ಅವನು ಬೀಸಿರುವ ನಾಗಪಾಶದಲ್ಲಿ ನಾಗ/ಸರ್ಪದ ಹೆಡೆಯ ರೂಪವನ್ನು ಕಾಣಬಹುದು. ನಾಗದ ಬಾಲದ ಭಾಗವು ಲಿಂಗ ಮತ್ತು ಮಾರ್ಕಂಡೇಯನನ್ನು ಸ್ಪರ್ಶಿಸಿರುವಂತೆ ತೋರಲಾಗಿದೆ. ಯಮನು ತನ್ನ ಎತ್ತಿದ ಬಲಗೈಯಲ್ಲಿ ತ್ರೀಶೂಲದಂತಹ ಆಯುಧವನ್ನು ಹಿಡಿದು ಬಾಲಕನತ್ತ ಗುರಿಯಾಗಿರಿಸಿರುವಂತೆ ಇದೆ. ಅವನು ಧೋತಿ ಧರಿಸಿ, ಕೆಲವು ಆಭರಣಗಳನ್ನು ಧರಿಸಿರುವನು. ಮುಕುಟವನ್ನು ಧರಿಸಿಲ್ಲ. ಹಾಗೂ ಅವನು ಬಲಗಾಲನ್ನು ಮುಂದಿರಿಸಿದ್ದಾನೆ. ಯಮನ ಶಿಲ್ಪವು ಮಾರ್ಕಂಡೇಯನ ಪ್ರಾಣವನ್ನು ತೆಗೆಯಲು ಬಂದಿರುವ ಉದ್ದೇಶವು ಸ್ಪಷ್ಟವಾಗಿದೆ. ಅವನು ತನ್ನ ಕೈಯಲ್ಲಿ ಹಿಡಿದಿರುವ ಎಲ್ಲಾ ವಸ್ತುಗಳು ಪ್ರಯೋಗ ಮುದ್ರೆಯಲ್ಲಿವೆ. ಇದು ಚಲನಶೀಲತೆಯನ್ನು ತೋರುತ್ತದೆ. ಯಮನು ಧರಿಸಿರುವ ವಸ್ತು ಮತ್ತು ಆಭರಣಗಳು ವಿಜಯನಗರ ಕಾಲದ ಶಿಲ್ಪಗಳಲ್ಲಿ ಕಂಡುಬರುವ ವಸ್ತ್ರಾಭರಣಗಳನ್ನು ಹೋಲುತ್ತವೆ. ಅದರಲ್ಲಿಯೂ ಮುಖ್ಯವಾಗಿ ಸೊಂಟದ ಭಾಗದಲ್ಲಿ ತೋರಲಾಗಿರುವ ಧೋತಿಯ ನೆರಿಗೆ.

ಮಾರ್ಕಂಡೇಯನನ್ನು ಯಮನ ಪಕ್ಕದಲ್ಲಿ ತೋರಲಾಗಿದ್ದು, ಅವನು ಲಿಂಗವನ್ನು ಪೂಜಿಸುತ್ತಿದ್ದಾನೆ. ತನ್ನ ಎರಡು ಕೈಗಳಿಂದ ಲಿಂಗವನ್ನು ತಬ್ಬಿ ಹಿಡಿದಿದ್ದಾನೆ. ಲಿಂಗವು ಪ್ರಧಾನವಾಗಿದ್ದು ಅದು ಮಂಟಪದಲ್ಲಿರುವಂತೆ ತೋರಲಾಗಿದೆ. ಈ ಮಂಟಪವು ಒಂದು ಕಿರುದೇವಾಲಯದ ಪ್ರತಿರೂಪವಾಗಿದೆ. ಅದರಲ್ಲಿ ಅಧಿಷ್ಠಾನ, ಕಂಬ ಮತ್ತು ಶಿಖರಗಳಿವೆ. ಈ ಮಂಟಪದ ನಿರೂಪಣೆಯನ್ನು ನಾವು ದೇವಾಲಯದ ಪ್ರತಿರೂಪವೆಂದು ಪರಿಗಣಿಸಿ, ಅದು ತಿರುಕ್ಕಡವೂರ್‌ನ ದೇವಾಲಯವೆಂದು ಪರಿಗಣಿಸಬಹುದು. ಏಕೆಂದರೆ ತಿರುಕ್ಕಡವೂರ್ ದೇವಾಲಯದಲ್ಲಿ ಮಾರ್ಕಂಡೇಯನಿಗೆ ಶಿವನು ಪ್ರತ್ಯಕ್ಷವಾಗಿದ್ದು ಮತ್ತು ಅವನು ಕಾಲಾರಿಮೂರ್ತಿಯಾಗಿ ಯಮನನ್ನು ದಂಡಿಸಿದನೆಂಬ ಬಲವಾದ ಪ್ರತೀತಿಯ ಹಿನ್ನೆಲೆಯಲ್ಲಿ ಮಂಟಪವನ್ನು ದೇವಾಲಯವೆಂದು ಭಾವಿಸಬಹುದು. ಮಂಟಪವನ್ನು ಉಬ್ಬುಶಿಲ್ಪದಲ್ಲಿ ತೋರಿಸಲಾಗಿದೆಯಾದ್ದರಿಂದ ದೇವಾಲಯದ ಪೂರ್ಣ ವಾಸ್ತು ವಿವರಗಳನ್ನು ಗುರುತಿಸಲು ಸಾಧ್ಯವಾಗಿಲ್ಲ. ಶಿಲಾಫಲಕದಲ್ಲಿ ದೊರಕುವ ಅತ್ಯಲ್ಪ ಜಾಗದಲ್ಲಿ ಶಿಲ್ಪಿಯೂ ಸಾಂಕೇತಿಕವಾಗಿ ವಿಷಯವನ್ನು ನಿರೂಪಿಸಿದ್ದಾನೆ. ಆದ್ದರಿಂದ ಇಲ್ಲಿರುವ ಮಂಟಪವನ್ನು ತಿರುಕ್ಕಡವೂರ್ ದೇವಾಲಯವೆಂದು ಗುರುತಿಸಬಹುದು.

ಮಂಟಪದ ಬಲಭಾಗದಲ್ಲಿ ಶಿವನನ್ನು ಕಾಲಾರಿ ಮೂರ್ತಿಯಾಗಿ ತೋರಲಾಗಿದೆ. ಅವನು ಚತುರ್ಭುಜನಾಗಿದ್ದು, ಹಿಂದಿನ ಎರಡು ಕೈಗಳಲ್ಲಿರುವ ಆಯುಧಗಳು ಅಸ್ಪಷ್ಟವಾಗಿದ್ದು, ಮುಂದಿನ

ಎರಡು ಕೈಗಳಿಂದ ಕಟಕ ಹಸ್ತದಲ್ಲಿ (ಹಿಕ್ಕಸೂತ್ರ) ತ್ರಿಶೂಲವನ್ನು ಹಿಡಿದು ಯಮನ ಕುತ್ತಿಗೆಯ ಬಳಿ ಇರಿಸಿದ್ದಾನೆ. ಯಮನು ಕೆಳಗೆ ಸಾಷ್ಟಾಂಗವಾಗಿ ಬಿದ್ದಿದ್ದು, ಅಂಜಲಿ ಮುದ್ರೆಯಲ್ಲಿದ್ದಾನೆ. ಶಿವನು ತನ್ನ ಬಲಗಾಲನ್ನು ಮೇಲಕ್ಕೆತ್ತಿದ್ದು, ಎಡಗಾಲು ಯಮನ ಮೇಲೆ ಕುಂಚಿತ ಪಾದದಲ್ಲಿ ಸ್ಥಿತವಾಗಿದೆ. ಒಟ್ಟಾರೆ ನರ್ತನ ರೂಪದಲ್ಲಿ ಶಿವನು ಕಂಡುಬರುವನು. ಮುಖದಲ್ಲಿ ರೌದ್ರಭಾಗವು ತೋರುತ್ತದೆ. ಜಟಾಮುಕುಟ, ಕರ್ಣಾಭರಣಗಳನ್ನು ಧರಿಸಿರುವನು. ಈ ನಿರೂಪಣಾತ್ಮಕ ಶಿಲಾಫಲಕವು ಮಾರ್ಕಂಡೇಯನ ಪ್ರಸಂಗವನ್ನು ನಿರೂಪಿಸುವ ಏಕಮೇವ ವಿಶಿಷ್ಟ ಶಿಲಾಫಲಕವಾಗಿದೆ. ಈ ಫಲಕದಲ್ಲಿ ಮೂರು ಕ್ರಿಯೆಗಳನ್ನು ತೋರಲಾಗಿದೆ. ಅವುಗಳು ಮಾರ್ಕಂಡೇಯನತ್ತ ಯಮನು ಪಾಶವನ್ನು ಬೀಸುವುದು. ಮಾರ್ಕಂಡೇಯನು ಶಿವಲಿಂಗವನ್ನು ತಬ್ಬಿ ಹಿಡಿದು ಕುಳಿತಿರುವುದು. ಆಗ ಯಮನ ಪಾಶವು ಮಾರ್ಕಂಡೇಯ ಮತ್ತು ಲಿಂಗವನ್ನು ಸ್ಪರ್ಶಿಸಿರುವುದು. ಹಾಗೂ ಕೊನೆಯಲ್ಲಿ ಶಿವನು ಕಾಲಾರಿ ಮೂರ್ತಿಯಾಗಿ ಯಮನನ್ನು ತುಳಿಯುತ್ತಿರುವಂತೆ ಕೆತ್ತಲಾಗಿದೆ.

ಇದೇ ರೀತಿಯ ಇನ್ನೊಂದು ನಿರೂಪಣಾತ್ಮಕ ಕಾಲಾರಿ ಮೂರ್ತಿಶಿಲ್ಪವು ನಿಂಬಾಪುರದ ಸೌಮ್ಯ ಸೋಮೇಶ್ವರ ದೇವಾಲಯದ ನವರಂಗದ ಒಂದು ಕಂಬದಲ್ಲಿ ಕಂಡುಬರುತ್ತದೆ. ಇಲ್ಲಿ ಮೇಲಿನಂತೆ ಒಂದೇ ಫಲಕದಲ್ಲಿ ಕಂಡರಿಸದೆ, ಒಂದು ಕಂಬದ ನಾಲ್ಕು ಪಾರ್ಶ್ವಗಳನ್ನು ಬಳಸಿಕೊಂಡು ನಿರೂಪಿಸಲಾಗಿದೆ. ನವರಂಗದ ಮೊದಲನೆ ಕಂಬದ ಉತ್ತರದಿಕ್ಕಿನ ಪಾರ್ಶ್ವದಲ್ಲಿ ಮಾರ್ಕಂಡೇಯನ ತಾಯಿ ಮನಸ್ವಿನಿ ಮತ್ತು ತಂದೆ ಮೃಕಂಡು ಮುನಿಯು ಮಗ ಮಾರ್ಕಂಡೇಯನಿಗೆ ತೀರ್ಥಯಾತ್ರೆಗೆ ಹೋಗಲು ಅಂಜಲಿಮುದ್ರೆಯಲ್ಲಿ ನಿಂತು ಬಿಳ್ಕೊಡುತ್ತಿರುವ ಶಿಲ್ಪದಿಂದ ಕಥೆ ಆರಂಭಗೊಳ್ಳುತ್ತದೆ. ಈ ಶಿಲ್ಪದ ಪಕ್ಕದ ಪಾರ್ಶ್ವದಲ್ಲಿ ಮೇಲೆ ಮಾರ್ಕಂಡೇಯನು ಒಂದು ಬುಟ್ಟಿಯನ್ನು ಹಿಡಿದು ಮುನ್ನಡೆಯುತ್ತಿರುವ ಶಿಲ್ಪವಿದೆ. ಕೆಳಗೆ ಯಮನು ಎಡಹಸ್ತದಲ್ಲಿ ಗಧೆಯನ್ನು, ಬಲಹಸ್ತದಲ್ಲಿ ನಾಗಪಾಶವನ್ನು ಎಸೆಯುತ್ತಿರುವ ಶಿಲ್ಪವಿದೆ. ಅದರ ಪಕ್ಕದ ಪಾರ್ಶ್ವದಲ್ಲಿ ಮೇಲೆ ಮಾರ್ಕಂಡೇಯನು ಒಂದು ಪೀಠಸ್ಥ ಲಿಂಗವನ್ನು ಅಪ್ಪಿಕೊಂಡಿರುವನು. ಅದರ ಕೆಳಗಿನ ಶಿಲ್ಪದಲ್ಲಿ ಶಿವನನ್ನು ತೋರಿಸಲಾಗಿದೆ. ಇಲ್ಲಿ ಶಿವನು ಮುಂದಿನ ಎರಡು ಕೈಗಳಲ್ಲಿ ತ್ರಿಶೂಲವನ್ನು ಹಿಡಿದಿರುವನು. ತ್ರಿಶೂಲದ ಮುಖವು ಯಮನೆಡೆಗೆ ಇರುವುದು. ಶಿವನ ಎಡ ಹಿಂದಿನ ಹಸ್ತದಲ್ಲಿ ಡಮರು ಹಿಡಿದಿರುವನು. ಬಲ ಹಿಂದಿನ ಹಸ್ತದಲ್ಲಿರುವ ಆಯುಧವು ಅಸ್ಪಷ್ಟವಾಗಿದೆ. ಈ ಶಿಲ್ಪದ ನಂತರದ ಪಾರ್ಶ್ವದಲ್ಲಿ ಶಿವನು ರಾಜಲೀಲಾಸನದಲ್ಲಿ ಕುಳಿತಿರುವನು. ಹಿಂದಿನ ಹಸ್ತಗಳಲ್ಲಿ ತ್ರಿಶೂಲ, ಡಮರುವನ್ನು ಧರಿಸಿದ್ದು ಮುಂದಿನ ಎಡಹಸ್ತವನ್ನು ಅಭಯ ಮುದ್ರೆಯಲ್ಲಿರಿಸಿ ಬಲಹಸ್ತವನ್ನು ತನ್ನ ಕಾಲಬಳಿ ನಿಂತಿರುವ ಮಾರ್ಕಂಡೇಯನ ತಲೆಯ ಮೇಲಿರಿಸಿ ಆಶೀರ್ವದಿಸುತ್ತಿರುವನು. ಕೆಳಗಿನ ಶಿಲ್ಪದಲ್ಲಿ ಮಾರ್ಕಂಡೇಯನು ಶಿವನ ಅನುಗ್ರಹ ಪಡೆದ ನಂತರ ತಾಯಿಯ ಕಾಲುಗಳಿಗೆ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಿರುವನು.

ಉಳಿದ ಮೂರು ಶಿಲ್ಪಗಳಲ್ಲಿ ಒಂದು ವಿರೂಪಾಕ್ಷ ದೇವಾಲಯದ ನೂರು ಕಂಬಗಳ ಮಂಟಪದ ಳಳನೇ ಕಂಬದಲ್ಲಿ ಹಾಗೂ ಇನ್ನೊಂದು ವಿಠಲ ದೇವಾಲಯದ ದಕ್ಷಿಣ ದಿಕ್ಕಿನ ಪ್ರಾಕಾರ ಮಂಟಪದ

೩೪ನೇ ಕಂಬದಲ್ಲಿ ಕಂಡುಬರುತ್ತವೆ. ಈ ಎರಡೂ ಶಿಲ್ಪಗಳಲ್ಲೂ ಯಮನು ಸಾಷ್ಟಾಂಗವಾಗಿ ಅಂಜಲಿ ಮುದ್ರೆಯಲ್ಲಿ ಕೆಳಗೆ ಬಿದ್ದಿರುವನು. ಶಿವನು ಅವನ ಮೇಲೆ ನರ್ತನ ಭಂಗಿಯಲ್ಲಿ ನಿಂತಿರುವನು. ಹಾಗೂ ಮುಂದಿನ ಎರಡೂ ಕೈಗಳಿಂದ ತ್ರಿಶೂಲವನ್ನು ಕೆಳಮುಖ ಮಾಡಿ ಯಮನಿಗೆ ಚುಚ್ಚುತ್ತಿರುವಂತೆ ಕಂಡರಿಸಲಾಗಿದೆ. ವಿರೂಪಾಕ್ಷ ದೇವಾಲಯದಲ್ಲಿ ಕಂಡುಬರುವ ಶಿಲ್ಪದಲ್ಲಿ ಯಮನು ಶಿವನ ಎಡಭಾಗಕ್ಕೆ ಮುಖಮಾಡಿ ಬಿದ್ದಿದ್ದರೆ, ವಿಠಲ ದೇವಾಲಯದಲ್ಲಿ ಕಂಡುಬರುವ ಶಿಲ್ಪದಲ್ಲಿ ಬಲಭಾಗಕ್ಕೆ ಮುಖಮಾಡಿ ಬಿದ್ದಿರುವನು. ಉಳಿದಂತೆ ಶಿವನ ಹಿಂದಿನ ಎರಡು ಕೈಗಳಲ್ಲಿ ಎಡಹಸ್ತದಲ್ಲಿ ಮೃಗವನ್ನು ಹಿಡಿದಿರುವನು. ಬಲಹಸ್ತದಲ್ಲಿರುವ ಆಯುಧ ಎರಡೂ ಶಿಲ್ಪಗಳಲ್ಲಿ ಅಸ್ಪಷ್ಟವಾಗಿದೆ. ಶಿವನು ಸಕಲ ಆಭರಣಭೂಷಿತ ನಾಗಿರುವನು. ಈ ಶಿಲ್ಪಗಳು ಸುಣ್ಣ ಬಳಿದಿರುವುದರಿಂದ ಆಭರಣಗಳಂತಹ ಸೂಕ್ಷ್ಮ ಲಕ್ಷಣಗಳು ಮರೆಮಾಚಿವೆ.

ಮಲಪನಗುಡಿಯ ಮಲ್ಲಿಕಾರ್ಜುನ ದೇವಾಲಯದ ಪ್ರಾಕಾರ ಮಂಟಪದ ಮೇಲೆ ಗಾರೆಯಿಂದ ನಿರ್ಮಿತಗೊಂಡ ದೇವಕೋಷ್ಠದಲ್ಲಿ ಕಾಲಾರಿ ಮೂರ್ತಿ ಇದೆ. ಆದರೆ ಇದು ಭಾಗಶಃ ಭಗ್ನಗೊಂಡಿದ್ದು ಉಳಿದಿರುವ ಅವಶೇಷಗಳಿಂದ ಕಾಲಾರಿಮೂರ್ತಿ ಎನ್ನಬಹುದು. ಇಲ್ಲಿ ಯಮ ಕೆಳಗೆ ಮೂರ್ಛಿತನಾಗಿ ಬಿದ್ದಿದ್ದು ಆತನ ಮೇಲೆ ಶಿವನು ನಿಂತಿರುವಂತೆ ಕೆತ್ತಲಾಗಿದೆ. ಆದರೆ ಶಿವನೆಂದು ಹೇಳಲು ಕೈಗಳಲ್ಲಿ ಯಾವುದೇ ಆಯುಧಗಳಿಲ್ಲ. ಕೇವಲ ನಿಂತ ಭಂಗಿಯಿಂದ ಇದನ್ನು ಕಾಲಾರಿಮೂರ್ತಿ ಎಂದು ಊಹಿಸಬಹುದು. ಒಟ್ಟಾರೆ ಮೇಲೆ ವಿವರಿಸಿದ ಐದು ಶಿಲ್ಪಗಳಲ್ಲಿ ವಿರೂಪಾಕ್ಷ ದೇವಾಲಯದ ಪ್ರವೇಶ ದ್ವಾರದ ಬಳಿಯಿರುವ ಒಂದೇ ಶಿಲಾಫಲಕದಲ್ಲಿ ನಿರೂಪಣಾತ್ಮಕವಾಗಿ ಕೆತ್ತಿರುವ ಮಾರ್ಕಂಡೇಯನ ಶಿಲ್ಪವು ಅಂಶಮದ್ಭೇದಾಗಮ, ಕಾಮಿಗಾಮ ಮತ್ತು ಕಾರಣಾಗಮಗಳು ಹೇಳುವ ಲಕ್ಷಣಗಳಿಂದ ಕೂಡಿದೆ. ಇದನ್ನು ವಾಸುದೇವನ್ ಸಿ.ಎಸ್.ರವರೂ ತಮ್ಮ ಲೇಖನದಲ್ಲಿ ಗುರುತಿಸಿರುವರು. ಒಟ್ಟಾರೆ ಆಗಮಗಳಲ್ಲಿ ಉಲ್ಲೇಖಿತವಾಗಿರುವ ಎಲ್ಲಾ ಅಂಶಗಳಿಲ್ಲದಿದ್ದರೂ ಕೆಲವು ಅಂಶಗಳನ್ನು ಶಿಲ್ಪಿಯು ಶಿಲ್ಪದಲ್ಲಿ ಅಳವಡಿಸಿಕೊಂಡಿರುವನು. ಹಾಗೆಯೇ ನಂಬಿಕೆ ಮತ್ತು ಐತಿಹ್ಯವನ್ನು ಸಹ ಈ ಫಲಕದಲ್ಲಿ ಅಳವಡಿಸಿದ್ದಾನೆ. ಒಟ್ಟಾರೆ ಇದು ಆಗಮ ಅನುಸಾರವಾಗಿ ಕೆತ್ತಿದ ಶಿಲ್ಪವೇ ಆಗಿದೆ. ಉಳಿದ ನಾಲ್ಕು ಶಿಲ್ಪಗಳಲ್ಲಿ ಯಾವುದೇ ಆಗಮವನ್ನು ಅನುಸರಣೆ ಮಾಡಲಾಗಿಲ್ಲ. ಅದು ಶಿಲ್ಪಿಯ ಸ್ವಂತಿಕೆಯ ಮೇರೆಗೆ ಕೆತ್ತಲ್ಪಟ್ಟಿವೆ.

# ಕಾಲಾರಿ ಅಥವಾ ಕಾಲ ಸಂಹಾರಮೂರ್ತಿ

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೪೪ನೇ ಕಂಬ | ೧ |
| ಹಂಪಿ | ವಿರೂಪಾಕ್ಷ | ದೇವಾಲಯದ ಪ್ರವೇಶದ್ವಾರದ ಬಿಡಬದಿಯ ಭಿತ್ತಿ | ೧ |
| ಹಂಪಿ | ವಿಠಲ ದೇವಾಲಯ | ದಕ್ಷಿಣ ದಿಕ್ಕಿನ ಪ್ರಾಕಾರ ಮಂಟಪದ ೩೪ನೇ ಕಂಬ | ೧ |
| ಮಲಪನಗುಡಿ | ಮಲ್ಲಿಕಾರ್ಜುನ | ಪ್ರಾಕಾರ ಮಂಟಪದ ಮೇಲಿನ ದೇವಕೋಷ್ಠ | ೧ |
| ನಿಂಬಾಪುರ | ಸೌಮ್ಯ ಸೋಮೇಶ್ವರ | ನವರಂಗದ ೨ನೇ ಕಂಬ | ೧ |
| ಒಟ್ಟು | | | ೫ |



ನಿರೂಪಣಾತ್ಮಕ ಕಾಲಾರಿಮೂರ್ತಿಶಿಲ್ಪ,
ವಿರೂಪಾಕ್ಷ ದೇವಾಲಯ, ಹಂಪಿ



ಕಾಲಾರಿಮೂರ್ತಿ, ವಿಠಲ
ದೇವಾಲಯ, ಹಂಪಿ



ಮಾರ್ಕಂಡೇಯನ ತಂದೆ-
ತಾಯಿ ಮಗನನ್ನು ಯಾತ್ರೆಗೆ
ಬೀಳ್ಕೊಡುತ್ತಿರುವುದು



ಯಾತ್ರೆಗೆ ಹೋಗುತ್ತಿರುವ
ಮಾರ್ಕಂಡೇಯ



ಮಾರ್ಕಂಡೇಯನಿಗೆ ಪಾಶ
ಬೀಸುತ್ತಿರುವ ಯಮ



ಲಿಂಗವನ್ನು ಆಲಂಗಿಸಿರುವ
ಮಾರ್ಕಂಡೇಯ



ಮಾರ್ಕಂಡೇಯನನ್ನು ರಕ್ಷಿಸಲು ಶಿವನು
ಪ್ರತ್ಯೇಕ್ಷನಾದುದು



ಮಾರ್ಕಂಡೇಯನಿಗೆ ಶಿವನ
ಅನುಗ್ರಹ

## ವೀರಭದ್ರ ಮೂರ್ತಿ

ದಕ್ಷಬ್ರಹ್ಮನು ನಡೆಸಿದ ಯಜ್ಞವನ್ನು ನಾಶಮಾಡಲು ರೂಪಿಸಿದ ಶಿವನ ಮೂರ್ತಿಯನ್ನು 'ವೀರಭದ್ರ ಮೂರ್ತಿ' ಎನ್ನುವರು. ಈ ಘಟನೆಯನ್ನು ಕೂರ್ಮಪುರಾಣ, ವರಾಹ ಪುರಾಣ ಮತ್ತು ಭಾಗವತ ಪುರಾಣಗಳು[೬೨] ಈ ಕೆಳಗಿನಂತೆ ತಿಳಿಸುತ್ತವೆ.

**ಕೂರ್ಮಪುರಾಣ:** ಒಮ್ಮೆ ದಕ್ಷ ಪ್ರಜಾಪತಿ ತನ್ನ ಪತ್ನಿಯೊಂದಿಗೆ ಶಿವನ ವಾಸಸ್ಥಾನಕ್ಕೆ ಹೋದಾಗ, ಶಿವನು ತನ್ನನ್ನು ಸರಿಯಾಗಿ ಗಮನಿಸಲಿಲ್ಲವಾದ್ದರಿಂದ ಅವಮಾನಿತನಾದನೆಂದು ತಿಳಿದು ಅಲ್ಲಿಂದ ಹೊರಟುಹೋದನು. ನಂತರದ ಒಂದು ಸಂದರ್ಭದಲ್ಲಿ ದಕ್ಷನ ಪುತ್ರಿ ಮತ್ತು ಶಿವನ ಮಡದಿಯಾದ ಸತಿಯು ತಂದೆಯ ಮನೆಗೆ ಹೋದಾಗ ಅವಳ ಮುಂದೆಯೇ ಶಿವನನ್ನು ಜರೆದು ಮಗಳನ್ನು ಮನೆಯಿಂದ ಹೊರಹೋಗುವಂತೆ ಹೇಳಿದನು. ಇದರಿಂದ ನೊಂದ ಸತಿಯು ಅಗ್ನಿ ಪ್ರವೇಶ ಮಾಡಿದಳು. ಆದರೆ ನಂತರದಲ್ಲಿ ಹಿಮವಂತನಿಗೆ ಮಗಳಾಗಿ ಪಾರ್ವತಿ ಎಂಬ ಹೆಸರಿನಿಂದ ಜನಿಸಿದಳು. ಇದನ್ನು ತಿಳಿದ ಶಿವನು ಕುಪಿತನಾಗಿ ದಕ್ಷನಿಗೆ 'ಕ್ಷತ್ರಿಯನಾಗಿ ಜನಿಸಿ ಮಗಳೊಂದಿಗೆ ಅಗಮ್ಯಗಮನ ಮಾಡು' ಎಂದು ಶಾಪವಿತ್ತನು. ಇದರಂತೆ, ದಕ್ಷನು 'ಪ್ರಚೇತಸ್' ಎಂಬ ಹೆಸರಿನ ರಾಜನಾದನು. ಗಂಗಾದ್ವಾರದಲ್ಲಿ ಪ್ರಚೇತಸನು ಯಾಗವೊಂದನ್ನು ಆರಂಭಿಸಿ ಅದರಲ್ಲಿ ಶಿವನ ಭಾಗವನ್ನು ನೀಡುವುದಿಲ್ಲವೆನ್ನುವನು. ಆಗ ದಧೀಚಿ ಮಹರ್ಷಿಯು ಈ ಅನ್ಯಾಯವನ್ನು ಆಕ್ಷೇಪಿಸುವುದಲ್ಲದೇ, ಅಲ್ಲಿದ್ದವರನ್ನೆಲ್ಲ 'ವೇದಬಾಹ್ಯ'ರಾಗಿ ಎಂದು ಶಪಿಸಿದನು. ಇದರಿಂದ ಅವರಿಗೆಲ್ಲ ಇದ್ದ ವೈಷ್ಣವ ಪ್ರೀತಿಯು ನಾಶವಾಗಿ ಕೀಳುಧರ್ಮ ಪದ್ಧತಿಗಳನ್ನು ಅನುಸರಿಸಿದರು. ಇವೆಲ್ಲವನ್ನು ಕಂಡ ಪಾರ್ವತಿಯು ಶಿವನಿಗೆ ಅನುಚಿತವಾದ ಯಾಗವನ್ನು ನಿಲ್ಲಿಸಬೇಕೆಂದು ಪ್ರಾರ್ಥಿಸಿದಳು. ಆಗ ಶಿವನು ವೀರಭದ್ರನನ್ನು ಸೃಷ್ಟಿಸಿದನು. ವೀರಭದ್ರನು ಸಾವಿರ ತಲೆಗಳು, ಸಾವಿರ ಕಣ್ಣುಗಳು ಮತ್ತು ಬಲಿಷ್ಠವಾದ ಸಾವಿರ ಬಾಹುಗಳನ್ನು ಹೊಂದಿದ್ದನು. ಪ್ರಳಯ ಕಾಲದ ಅಗ್ನಿಯಂತೆ ತೇಜೋವಂತನಾದ ಇವನಿಗೆ ಕೋರೆಹಲ್ಲುಗಳು ಇದ್ದವು. ಶರೀರವು ಭಸ್ಮಧಾರಣೆಯಿಂದ ಕೂಡಿದ್ದು ಕೈಗಳಲ್ಲಿ ಶಂಖ, ಚಕ್ರ ಮತ್ತು ಧನಸ್ಸನ್ನು ಹಿಡಿದಿದ್ದನು. ವೀರಭದ್ರನು ಪ್ರಚೇತಸನ ಯಜ್ಞಧ್ವಂಸಕಾರ್ಯಕ್ಕೆ ಸಿದ್ಧನಾದನು. ಆಗ ಪಾರ್ವತಿಯು ಭದ್ರಕಾಳಿಯನ್ನು ಸೃಷ್ಟಿಮಾಡಿ, ಅವಳನ್ನೂ ಗಣಪರಿವಾರದವರನ್ನು ವೀರಭದ್ರನೊಂದಿಗೆ ಕಳಿಸಿದಳು. ವೀರಭದ್ರನು ದಕ್ಷನ ಯಜ್ಞವನ್ನು ಧ್ವಂಸ ಮಾಡಿ, ಅವನ ತಲೆಯನ್ನು ಕಡಿದು ಹಾಕಿದನು. ದಕ್ಷನು ಶಿವನನ್ನು ಪ್ರಾರ್ಥಿಸಲು ಶಿವನು ಅವನಿಗೆ ಪ್ರಾಣದಾನ ಮಾಡಿ ಗಣಗಳ ಒಡೆಯನನ್ನಾಗಿ ಮಾಡಿದನು.

**ವರಾಹ ಪುರಾಣ:** ರುದ್ರನು ಬ್ರಹ್ಮನ ಕೋಪದಿಂದ ಜನಿಸಿದನು. ನಂತರದಲ್ಲಿ ದಕ್ಷ ಮತ್ತು ಆರು ಮಂದಿ ಪ್ರಜಾಪತಿಗಳು ಸೃಷ್ಟಿತರಾದರು. ಈ ಪುರಾಣವು ಹೇಳುವಂತೆ ಇಂದ್ರ ಮತ್ತು ಇತರ ದೇವತೆಗಳು ದಕ್ಷನ ಅನುಗ್ರಹಕ್ಕಾಗಿ ಯಾಗವನ್ನಾರಂಭಿಸಿದರು. ಆಗ ರುದ್ರನ ಕೋಪದಿಂದ ಹಲವಾರು ರಾಕ್ಷಸರು ಜನಿಸಿ ದೇವತೆಗಳ ವಿರುದ್ಧವಾಗಿ ಬಂದು ಈ ಯಾಗವನ್ನು ನಾಶಪಡಿಸಿದರು ಮತ್ತು

ಯಾಗದಲ್ಲಿನ ಶಿವನ ಒಂದು ಭಾಗವನ್ನು ನೀಡಬೇಕೆಂದು ಬಲವಂತಪಡಿಸಿದರು. ಆಗ ದಕ್ಷನು ರುದ್ರನನ್ನು ಪ್ರಾರ್ಥಿಸಿ, ತನ್ನ ಪುತ್ರಿಯಾದ ಗೌರಿಯನ್ನು ಆತನಿಗೆ ವಿವಾಹ ಮಾಡಿಕೊಟ್ಟನು. ಆಗ ಬ್ರಹ್ಮನು ಕೈಲಾಸದಲ್ಲಿ ಶಿವನಿಗೆ ಉತ್ತಮ ಸ್ಥಾನವನ್ನು ನೀಡಿದನು.

**ಭಾಗವತ ಪುರಾಣ:** ಭಾಗವತ ಪುರಾಣವು ದಕ್ಷ ಮತ್ತು ರುದ್ರರ ವೈರತ್ವದ ಘಟನೆಯನ್ನು ಪೂರ್ಣವಾಗಿ ನೀಡುತ್ತದೆ. ದೇವತೆಗಳು ಮತ್ತು ಋಷಿಗಳು ಯಾಗ ಮಾಡುವಲ್ಲಿಗೆ ದಕ್ಷನು ಬಂದಾಗ, ತನಗೆ ಗೌರವ ನೀಡದಿದ್ದ ಶಿವನನ್ನು ಕಂಡು ಕೋಪಿಸಿದನು. ಹಾಗೂ ಈ ಯಾಗದಲ್ಲಿ ಶಿವನಿಗೆ ಹವಿಸ್ಸನ್ನು ನೀಡಲಿಲ್ಲ. ಬದಲಾಗಿ ಶಿವನು 'ಸ್ಮಶಾನವಾಸಿ, ನಗ್ನದೇಹಿ' ಎಂದು ನಿಂದಿಸಿದನು. ಇದರಿಂದ ಕೋಪಗೊಂಡ ಶಿವನು ಯಜ್ಞಶಾಲೆಯಿಂದ ಹಿಂತಿರುಗಿದನು. ಕೆಲವರ್ಷಗಳ ನಂತರ ದಕ್ಷಬ್ರಹ್ಮನೇ 'ಬೃಹಸ್ಪತಿಸವ' ಎಂಬ ಯಾಗವನ್ನು ಮಾಡಿದನು. ಆದರೆ ಇದಕ್ಕೆ ಶಿವನನ್ನು ಕರೆಯಲಿಲ್ಲ. ಶಿವನು ಬೇಡವೆಂದರೂ ಕೇಳದೆ ಪತ್ನಿ ಸತಿಯು ತನ್ನ ತಂದೆ ದಕ್ಷನ ಮನೆಗೆ ಬಂದಳು. ಆದರೆ ದಕ್ಷನು ಅವಳನ್ನು ಗೌರವಿಸದೆ ಶಿವನಿಂದೆ ಮಾಡಲು ಸತಿಯು ಆತ್ಮಾಹುತಿ ಮಾಡಿಕೊಂಡಳು. ವಿಷಯ ಶಿವನ ಕಿವಿಗೆ ಬೀಳಲು ಶಿವನು ಕೋಪದಿಂದ ತನ್ನ ಜಟೆಯನ್ನು ಬಂಡೆಗೆ ಅಪ್ಪಳಿಸಲು ವೀರಭದ್ರನು ಉದ್ಭವಿಸಿ ಯಜ್ಞವನ್ನು ಧ್ವಂಸ ಮಾಡಿ ದಕ್ಷನನ್ನು ಎಳೆದುತಂದು ಶಿವನಿಗೆ ಒಪ್ಪಿಸಿದನೆಂದು ತಿಳಿಸಿದೆ.

ಪುರಾಣಗಳು ವೀರಭದ್ರನ ಉತ್ಪತ್ತಿಯ ಬಗೆಗೆ ತಿಳಿಸಿದರೆ ಕಾರಣಾಗಮ, ಶ್ರೀತತ್ವನಿಧಿ ಮತ್ತು ಮಯಮತಗಳು ವೀರಭದ್ರನ ಪ್ರತಿಮಾ ಲಕ್ಷಣಗಳನ್ನು ತಿಳಿಸುತ್ತವೆ. ಕಾರಣಾಗಮವು[೬೮] ದಕ್ಷನ ಯಜ್ಞವನ್ನು ನಾಶಮಾಡಲು ಅವತರಿಸಿದ ಶಿವನ ರೂಪವೇ ವೀರಭದ್ರ ಎಂದು ಹೇಳುತ್ತದೆ. ಹಾಗೂ ಈತನಿಗೆ ಚತುರ್ಭುಜಗಳು, ತ್ರಿನೇತ್ರ, ಅಗ್ನಿಜ್ವಾಲೆಯಂತಿರುವ ಕೇಶಗಳು, ಚೂಪಾದ ಕೋರೆದಾಡೆಗಳು ಇರುತ್ತವೆ. ಘಂಟಾಮಾಲೆಯಿಂದಲೂ, ರುಂಡಮಾಲೆಯಿಂದಲೂ ಅಲಂಕೃತಗೊಂಡು ಘೋರವಾಗಿರುವನು. ಚೇಳುಗಳನ್ನು ಆಭರಣಗಳನ್ನಾಗಿ ಹಾಗೂ ನಾಗಯಜ್ಞೋಪವೀತವನ್ನು ಧರಿಸಿರುವನು. ಶುಭ್ರವಾದ ಪಾದಗಳಲ್ಲಿ ನೂಪುರಗಳನ್ನು, ಪಾದುಕೆಗಳನ್ನು ಧರಿಸಿರುವನು. ನೀಲಕಂಠನಾಗಿದ್ದು, ತೊಡೆಯವರೆಗಿನ ವಸ್ತ್ರವನ್ನು ಧರಿಸಿರುವನು. ಖಡ್ಗ, ಖೇಟ, ಬಿಲ್ಲು, ಬಾಣ, ಕಪಾಲ, ಭಿಂಡಿಪಾಲ ಆಯುಧಗಳನ್ನು ಧರಿಸಿದ್ದು, ಉಗ್ರದೃಷ್ಟಿಯುಳ್ಳವನಾಗಿ ಕೆಂಪು ವರ್ಣಿತನಾಗಿರುತ್ತಾನೆ ಎಂದು ಹೇಳುತ್ತದೆ.

ಹಾಗೆಯೇ ಶ್ರೀತತ್ವನಿಧಿಯು[೬೯] ವೀರಭದ್ರ ಮೂರ್ತಿಯು ನಾಲ್ಕು ತೋಳುಗಳು, ಮೂರು ಕಣ್ಣುಗಳು ಇರುವ ಜಟಾಮುಕುಟವನ್ನು ಕಟ್ಟಿರುವ, ಬಲಭಾಗದ ಕೈಗಳಲ್ಲಿ ಖಡ್ಗ ಮತ್ತು ಬಾಣಗಳನ್ನು, ಎಡಭಾಗದ ಕೈಗಳಲ್ಲಿ ಬಿಲ್ಲು ಮತ್ತು ಗದೆಗಳನ್ನು ಧರಿಸಿರುವ ಕೋರೆದಾಡೆಗಳಿಂದ ಭಯಂಕರ ಮುಖವುಳ್ಳ ರುಂಡಮಾಲೆಗಳನ್ನು ಹಾಕಿಕೊಂಡಿರುವ, ಪಾದುಕೆಗಳನ್ನು ತೊಟ್ಟು ನಿಂತಿದ್ದಾನೋ ಹಾಗೇ ಖಡ್ಗ ಮತ್ತು ಕಪಾಲಗಳನ್ನು ಹಿಡಿದಿರುವ ಹಾಗೂ ಪಾದುಕೆಗಳನ್ನು ತೊಟ್ಟು ನಿಂತಿರುವ, ಭದ್ರಕಾಳಿಯು ಹೇಗೆ ಖಡ್ಗ ಮತ್ತು ಕಪಾಲಗಳನ್ನು ಹಿಡಿದಿರುವ ಪಾದುಕೆಗಳನ್ನು ತೊಟ್ಟು ನಿಂತಿರುವ

ವೀರಭದ್ರ ಮೂರ್ತಿಯನ್ನು ರಚಿಸಬೇಕು ಎಂದು ಹೇಳಿದೆ. ಹಾಗೂ ದಕ್ಷಬ್ರಹ್ಮನು ವೀರಭದ್ರನ ಎಡಭಾಗದಲ್ಲಿ ನಿಂತಿರುವನು. ಅವನದು ಕುರಿಯ ಮುಖ ಎರಡು ಕಣ್ಣುಗಳಿವೆ. ತಲೆಯ ಮೇಲೆ ಎರಡು ಕೊಂಬುಗಳಿದ್ದು, ಅಂಜಲಿ ಮುದ್ರೆಯಲ್ಲಿರುತ್ತಾನೆ. ಮಯಮತವು[೨೦] ವೀರಭದ್ರನನ್ನು ವೃಷಾರೂಢ ಎಂದಿದೆ. ಅಲ್ಲದೆ ಚತುರ್ಭುಜನಾದ ಇವನ ಹಿಂದಿನ ಬಲಗೈ ತ್ರಿಶೂಲ, ಹಿಂದಿನ ಎಡಗೈ ಗದೆಯನ್ನು ಹಿಡಿದಿದ್ದು, ಮುಂದಿನ ಎರಡು ಕೈಗಳಿಂದ ವೀಣೆಯನ್ನು ಧರಿಸಿರುತ್ತಾನೆ. ಅಥವಾ ಅಭಯ, ವರದ ಹಸ್ತಗಳಾಗಿರುತ್ತವೆ ಎಂದಿದೆ. ಇದರೊಂದಿಗೆ ಜಟಾಬಂಧದಲ್ಲಿ ಚಂದ್ರನಿರುವ ವೀರಭದ್ರನಿಗೆ ಮೂರು ಕಣ್ಣುಗಳಿರುತ್ತವೆ. ಇವನು ಸರ್ವಾಭರಣಗಳನ್ನು ಧರಿಸಿದ್ದು, ಪದ್ಮಾಸನ ಭಂಗಿಯಲ್ಲಿ ವಟವೃಕ್ಷದ ಬಳಿ ಕುಳಿತಿರುತ್ತಾನೆ. ಲೋಕನಾಥ ಶಂಕರ, ಶಂಭೂ ಎನ್ನಿಸಿರುವ ಇವನು ಮಾತೃಗಣಗಳೊಂದಿಗೆ ಆರಂಭದಲ್ಲಿ ಮೊದಲಿಗನಾಗಿರುತ್ತಾನೆ ಎಂದಿದೆ. ಶಿಲ್ಪಸಂಗ್ರಹವು[೨೧] ದ್ವಿಭುಜವುಳ್ಳ ಸಾತ್ವಿಕ, ಚತುರ್ಭುಜವುಳ್ಳ ರಾಜಸಿಕ ಮತ್ತು ಅಷ್ಟಭುಜವುಳ್ಳ ತಾಮಸ ಭಾವದ ವೀರಭದ್ರ ಮೂರ್ತಿಯ ಪ್ರಕಾರಗಳನ್ನು ಹೇಳಿದೆ. ದ್ವಿಭುಜವುಳ್ಳ ಯೋಗವೀರ ವೀರಭದ್ರನು ಕುಳಿತ ಭಂಗಿಯಲ್ಲಿದ್ದು ಕೈಗಳಲ್ಲಿ ಖಡ್ಗ ಮತ್ತು ಖೇಟಕಗಳನ್ನು ಹೊಂದಿರುವನು ಹಾಗೂ ಒಂದು ಕಾಲನ್ನು ಕುಳಿತಿರುವ ಪೀಠದಿಂದ ಇಳಿ ಬಿಟ್ಟಿರಬೇಕು ಎಂದಿದೆ. ಹಾಗೂ ಚತುರ್ಭುಜವುಳ್ಳ ಭೋಗವೀರನು ಚತುರ್ಭುಜಗಳನ್ನು ಹೊಂದಿ ಸ್ಥಾನಕ ಭಂಗಿಯಲ್ಲಿದ್ದು ಬಿಲ್ಲು, ಬಾಣ, ಖಡ್ಗ ಮತ್ತು ಖೇಟಕಗಳನ್ನು ಹಿಡಿದಿದ್ದು ಕೈಗಳಲ್ಲಿ ಕಟಕ ಮುದ್ರೆ ಇರುತ್ತದೆ. ಮತ್ತು ಮುಕುಟದಲ್ಲಿ ಲಿಂಗವಿದ್ದು ರುಂಡಮಾಲೆಯನ್ನು ಧರಿಸಿರಬೇಕು ಹಾಗೂ ದಕ್ಷನು ವೀರಭದ್ರನ ಬಲಬದಿಯಲ್ಲಿ ಸ್ಥಾನಿಕನಾಗಿರಬೇಕು. ವೀರವೀರನು ಅಷ್ಟಭುಜಗಳನ್ನು ಹೊಂದಿದ್ದು ಮುನ್ನಡೆಯು ವಂತಿದ್ದು, ತ್ರಿಶೂಲ, ಖಡ್ಗ, ಬಾಣ ಮತ್ತು ಮೃಗವನ್ನು, ಬಲಗೈಗಳಲ್ಲಿ ಕಪಾಲ, ಖೇಟಕ, ಬಾಣ ಮತ್ತು ಅಂಕುಶಗಳನ್ನು ಹಿಡಿದಿರುತ್ತಾನೆ ಎಂದು ತಿಳಿಸಿದೆ.

ಹೀಗೆ ಆಗಮಗಳು ಮತ್ತು ಇತರ ಶಿಲ್ಪಶಾಸ್ತ್ರಗಳಿಲ್ಲಿ ವೀರಭದ್ರ ಮೂರ್ತಿಯ ಪ್ರತಿಮಾ ಲಕ್ಷಣಗಳನ್ನು ಹೇಳಿವೆ.

ಹಂಪಿ ಪರಿಸರದಲ್ಲಿ ಒಟ್ಟು ೮೨ ಕ್ಕಿಂತಲೂ ಹೆಚ್ಚು ವೀರಭದ್ರ ಶಿಲ್ಪಗಳು ಕಂಡುಬರುತ್ತವೆ. ಬಾಲಸುಬ್ರಮಣ್ಯರು[೨೨] ಹಂಪಿ ಪರಿಸರದಲ್ಲಿನ ವೀರಭದ್ರ ಶಿಲ್ಪಗಳನ್ನು ಕುರಿತು ಲೇಖನವನ್ನು ಪ್ರಕಟಿಸಿರುವರು. ವಿಜಯನಗರ ಅರಸರ ಕಾಲದಲ್ಲಿ ವೀರಭದ್ರನ ಆರಾಧನೆಯು ಹಂಪಿ ಪರಿಸರದಲ್ಲಿ ವ್ಯಾಪಕವಾಗಿ ಕಂಡುಬರುತ್ತದೆ. ಹಂಪಿಯ ಉದ್ಧಾನ ವೀರಭದ್ರ ದೇವಾಲಯವು ಸಾಮಾಜಿಕ ಹಾಗೂ ಧಾರ್ಮಿಕ ಕೇಂದ್ರವಾಗಿತ್ತು. ಮತ್ತು ಮತಂಗ ಪರ್ವತದ ಶಿಖರದಲ್ಲಿರುವ ವೀರಭದ್ರನು ಮುಖ್ಯವಾಗಿ ಪೂಜೆಗೊಳ್ಳುತ್ತಿದ್ದನು. ಹಾಗೂ ವೀರಭದ್ರನು ವಿಜಯನಗರದ ಆರಂಭ ಕಾಲದಲ್ಲಿ ಅತ್ಯಂತ ಪ್ರಮುಖ ದೇವತೆಯಾಗಿತ್ತು. ಹಾಗೂ ಇಲ್ಲಿಯ ಶಾಸನಗಳು ಈತನನ್ನು ಮತಂಗೇಶ್ವರ ಎಂದು ಕರೆದಿವೆ ಎಂದು ಹೇಳಿರುವರು. ಹಾಗೂ ಇವರು ಅ. ಸಾಮಾನ್ಯ ವೀರಭದ್ರ, ಆ. ಖೇಟಕವನ್ನು ಭುಜಗಳ ಸಮಾನನಾಗಿ ಹಿಡಿದಿರುವ ವೀರಭದ್ರ, ಇ. ದಕ್ಷಬ್ರಹ್ಮನನ್ನು ಕೊಲ್ಲುವ ಯತ್ನದಲ್ಲಿರುವ ವೀರಭದ್ರ,

ಈ. ಮಂಡಿ ವೀರಭದ್ರ, ಉ. ದ್ವಿಭುಜ ವೀರಭದ್ರ, ಊ. ಬಹುಭುಜಗಳ ವೀರಭದ್ರ ಋ. ಗಾರೆಯಲ್ಲಿರುವ ವೀರಭದ್ರ ಎಂಬ ವಿಂಗಡಣೆಗಳನ್ನು ಮಾಡಿ ಅವುಗಳ ಮೂಲಕ ವಿವರಣೆಯನ್ನು ನೀಡಿರುವರು. ಈ ಪ್ರಕಾರಗಳನ್ನು ಅನುಸರಿಸಿ ನನ್ನ ಕ್ಷೇತ್ರಕಾರ್ಯದಲ್ಲಿ ದೊರೆತ ವೀರಭದ್ರ ಶಿಲ್ಪಗಳನ್ನು ಕೆಳಗೆ ವಿವರಿಸಲಾಗಿದೆ.

**ಸಾಮಾನ್ಯ ವೀರಭದ್ರ ಶಿಲ್ಪಗಳು**

ಈ ಪ್ರಕಾರದ ಶಿಲ್ಪಗಳು ಹಂಪಿ ಪರಿಸರದಲ್ಲಿ ಸಾಮಾನ್ಯವಾಗಿ ಎಲ್ಲೆಡೆಯೂ ಕಂಡುಬರುತ್ತವೆ. ದುಂಡು ಶಿಲ್ಪಗಳಾಗಿಯೂ, ನೈಸರ್ಗಿಕ ಬಂಡೆಗಳ ಮೇಲೆ ಹಾಗೂ ದೇವಾಲಯದ ಕಂಬಗಳಲ್ಲಿಯೂ ಸಾಮಾನ್ಯವಾಗಿ ಕಂಡುಬರುತ್ತವೆ. ಸಾಮಾನ್ಯವಾಗಿ ವೀರಭದ್ರ ತ್ರಿಭಂಗದಲ್ಲಿ ಸ್ಥಾನಿಕನಾಗಿದ್ದು, ಚತುರ್ಬಾಹುಗಳನ್ನು ಹೊಂದಿರುವವನು. ಅವು ಬಲಭಾಗದ ಕೈಗಳಲ್ಲಿ ಮುಂದಿನದು ಖಡ್ಗ, ಹಿಂದಿನದು ಬಾಣವನ್ನು ಹಾಗೂ ಎಡಭಾಗದ ಕೈಗಳಲ್ಲಿ ಮುಂದಿನದು ಖೇಟಕವನ್ನು ಮತ್ತು ಹಿಂದಿನದು ಧನಸ್ಸನ್ನು ಹಿಡಿದಿರುತ್ತದೆ. ಕಿರೀಟ ಮುಕುಟ ಧರಿಸಿದಸ್ಸು, ಅದರಲ್ಲಿ ಸಣ್ಣ ಪೀಠಸ್ಥ ಲಿಂಗವೂ ಇರುತ್ತದೆ. ತ್ರಿನೇತ್ರ, ಕರ್ಣಕುಂಡಲಗಳು, ಯಜ್ಞೋಪವೀತ, ಕೊರಳಹಾರಗಳು, ಭುಜವಳಯ, ಬಾಹುವಳಯ, ಕಂಕಣಗಳು, ಬೆರಳುಗಳಲ್ಲಿ ಉಂಗುರುಗಳೂ, ಕಾಲ್ಕಡಗಗಳು, ನೂಪುರ ಮುಂತಾದ ಆಭರಣಗಳನ್ನು ಧರಿಸಿರುವವನು. ತೊಡೆಯ ಭಾಗದವರೆಗಿನ ವಸ್ತ್ರವನ್ನು ಧರಿಸಿದ್ದು, ರುಂಡಮಾಲೆಯನ್ನು ಧರಿಸಿರುವವನು. ಕಟಿಯ ಬಲಭಾಗದಲ್ಲಿ ಸಣ್ಣ ಬಾಕೊಂದನ್ನು ಸಿಕ್ಕಿಸಿಕೊಂಡಿರುವವನು. ಮುಖದಲ್ಲಿ ಕೋರೆದಾಡೆಗಳ ಹಾಗೂ ಮೀಸೆಗಳಿಂದ ಕೂಡಿದ ಉಗ್ರ ಸ್ವರೂಪದ ಮುಖಭಾವವನ್ನು ಹೊಂದಿರುವವನು. ಹಾಗೂ ಮೂರ್ತಿಯ ಸುತ್ತಲೂ ಕೀರ್ತಿಮುಖ ಅಲಂಕೃತ ಪ್ರಭಾವಳಿಯು ಇರುತ್ತದೆ. ವೀರಭದ್ರ ಮೂರ್ತಿಯ ಬಲಭಾಗದಲ್ಲಿ ದಕ್ಷನ ಮೂರ್ತಿಯು ಇರುತ್ತದೆ. ಇವನು ಟಗರಿನ ತಲೆಯನ್ನು ಹೊಂದಿದ್ದು, ಸಾಮಾನ್ಯ ವಸ್ತ್ರಾಭರಣಧರಿತನಾಗಿ ಸಮಭಂಗದಲ್ಲಿ ಅಂಜಲಿ ಮುದ್ರೆಯಲ್ಲಿ ಸ್ಥಾನಿಕನಾಗಿರುತ್ತಾನೆ. ಕೆಲವೆಡೆ ವಿಶೇಷವೆಂಬಂತೆ ಅಂಜಲಿ ಮುದ್ರೆಯಲ್ಲಿ ಪದ್ಮಾಸನದಲ್ಲಿ ಕುಳಿತಿರುವಂತೆಯೂ ಕೆತ್ತಲ್ಪಟ್ಟಿರುವನು. ಇಂತಹ ಶಿಲ್ಪಗಳು ವಿರೂಪಾಕ್ಷ ದೇವಾಲಯದ ಕಡಲೆಕಾಳು ಗಣೇಶ ದೇವಾಲಯ, ಮತಂಗಪರ್ವತದ ವೀರಭದ್ರ ದೇವಾಲಯ, ತಿಮ್ಮಲಾಪುರದ ತ್ರಿಕೂಟ ದೇವಾಲಯ, ಉದ್ಧಾನ ವೀರಭದ್ರ ದೇವಾಲಯದ ಗರ್ಭಗೃಹಮಂಟಪ ರಾಜ್ಯ ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ಉಪನಿರ್ದೇಶಕರ ಕಚೇರಿ ಹಾಗೂ ಕಮಲಾಪುರದ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ವಸ್ತುಸಂಗ್ರಹಾಲಯಗಳಲ್ಲಿ ಕಂಡುಬರುತ್ತವೆ. ಆನೆಗೊಂದಿಯ ಪಂಪಾಸರೋವರದಲ್ಲಿನ ಭುವನೇಶ್ವರಿ ದೇವಾಲಯದಲ್ಲಿನ ವೀರಭದ್ರಮೂರ್ತಿ ಶಿಲ್ಪದಲ್ಲಿ ದಕ್ಷನು ಪದ್ಮಾಸನದಲ್ಲಿ ಕುಳಿತ ಭಂಗಿಯಲ್ಲಿ ಕಂಡುಬರುವನು.

ಈ ಎಲ್ಲಾ ಶಿಲ್ಪಗಳು ಕಾರಣಾಗಮ, ಶ್ರೀತತ್ವನಿಧಿ ಉಲ್ಲೇಖಿಸುವ ಲಕ್ಷಣಗಳನ್ನು ಹೊಂದಿವೆ. ಹಾಗೂ ಶಿಲ್ಪಸಂಗ್ರಹವು ಹೇಳುವಂತೆ ಕಿರೀಟದಲ್ಲಿ ಲಿಂಗವನ್ನು ಹೊಂದಿದ ಶಿಲ್ಪಗಳಾಗಿವೆ. ಆದ್ದರಿಂದ ಈ ಎರಡೂ ಶಿಲ್ಪಶಾಸ್ತ್ರಗಳನ್ವಯ ಕೆತ್ತಲಾಗಿದೆ.



ವೀರಭದ್ರ ವಸ್ತುಸಂಗ್ರಹಾಲಯ, ರಾಜ್ಯ ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ಉಪನಿರ್ದೇಶಕರ ಕಚೇರಿ ಆವರಣ, ಹಂಪಿ



ವೀರಭದ್ರಮೂರ್ತಿ, ವೀರಭದ್ರ ದೇವಾಲಯ, ತಿಮ್ಮಲಾಪುರ

**ಸಮಭಂಗದಲ್ಲಿ ನಿಂತಿದ್ದು ಖೇಟವನ್ನು ಎತ್ತಿ ಹಿಡಿದಿರುವ ವೀರಭದ್ರನ ಶಿಲ್ಪಗಳು**

ಇಂತಹ ಎರಡು ಶಿಲ್ಪಗಳು ಮಾತ್ರ ಹಂಪಿ ಪರಿಸರದಲ್ಲಿ ಕಂಡುಬರುತ್ತವೆ. ಮೊದಲನೆಯದು ಜನಾನಾ ಆವರಣದ ಈಶಾನ್ಯ ದಿಕ್ಕಿನಲ್ಲಿರುವ ನೈಸರ್ಗಿಕ ಬಂಡೆಯ ಮೇಲೆ ಕೆತ್ತಲಾಗಿದೆ. ಇಲ್ಲಿ ವೀರಭದ್ರನು ಸಮಭಂಗದಲ್ಲಿ ಸ್ಥಾನಿಕನಾಗಿದ್ದು, ಬಲಭಾಗದ ಕೈಗಳಲ್ಲಿ ಖಡ್ಗ, ಬಾಣ, ಎಡಗೈ ಕೈಗಳಲ್ಲಿ ಖೇಟ ಮತ್ತು ಧನಸ್ಸನ್ನು ಹಿಡಿದಿರುವನು. ಖೇಟವನ್ನು ಭೂಮಿಗೆ ತಾಗಿಸದೆ ಭುಜದವರೆಗೆ ಎತ್ತಿಹಿಡಿದಿರುವನು. ಇಂತಹ ಇನ್ನೊಂದು ಶಿಲ್ಪವು ಹಂಪಿಯ ಕುದುರೆಲಾಯದಲ್ಲಿರುವ ವಸ್ತು ಸಂಗ್ರಹಾಲಯದಲ್ಲಿ ಹಾಗೂ ಆನೆಗೊಂದಿಯ ದುರ್ಗಾ ದೇವಾಲಯದ ಪೂರ್ವಕ್ಕಿರುವ ಈಶ್ವರ ದೇವಾಲಯದಲ್ಲಿಯೂ ಕಂಡುಬರುತ್ತದೆ. ಇಲ್ಲಿಯೂ ಖೇಟವನ್ನು ಎತ್ತಿ ಹಿಡಿದಿರುವನು. ಆದರೆ ಈ ಶಿಲ್ಪದಲ್ಲಿ ಖೇಟದ ಗಾತ್ರವನ್ನು ಅತೀ ಚಿಕ್ಕದಾಗಿ ಕೆತ್ತಲಾಗಿದೆ. ಈ ಎರಡೂ ಶಿಲ್ಪಗಳಲ್ಲಿ ವೀರಭದ್ರನು ಎತ್ತರದ ಪಾದುಕೆಗಳನ್ನು ಧರಿಸಿರುವನು.



ಖೇಟಕವನ್ನು ಎತ್ತಿ ಹಿಡಿದಿರುವ ವೀರಭದ್ರ, ವಸ್ತುಸಂಗ್ರಹಾಲಯ, ಕುದುರೆಲಾಯ, ಹಂಪಿ

**ದಕ್ಷನನ್ನು ಕೊಲ್ಲಲು ಮುನ್ನಡೆಯುತ್ತಿರುವ ವೀರಭದ್ರ ಶಿಲ್ಪಗಳು**

ಹಂಪಿ ಪರಿಸರದಲ್ಲಿ ಈ ರೀತಿಯ ಶಿಲ್ಪಗಳು ಒಟ್ಟು ೭ ಕಂಡುಬರುತ್ತವೆ. ಅವುಗಳು ಜನಾನಾ ಆವರಣದ ಈಶಾನ್ಯ ದಿಕ್ಕಿನಲ್ಲಿರುವ ಬೆಟ್ಟದ ಮೇಲೆ ಹೊಸಪೇಟೆಯ ಜಂಬುನಾಥ ದೇವಾಲಯದ ಮಹಾಮಂಟಪದ ಕಂಬಗಳಲ್ಲಿ, ವಿರೂಪಾಕ್ಷ ದೇವಾಲಯ ಪ್ರಾಕಾರದ ಮಂಟಪದಲ್ಲಿ ಹಾಗೂ ಮಾಲ್ಯವಂತ ದೇವಾಲಯದ ಹಿಂಭಾಗದಲ್ಲಿ ಬೆಟ್ಟದ ಮೇಲೆ ಕಂಡುಬರುತ್ತದೆ. ಇವುಗಳಲ್ಲಿ ಜನಾನಾ ಆವರಣದ ಈಶಾನ್ಯ ದಿಕ್ಕಿನಲ್ಲಿರುವ ನೈಸರ್ಗಿಕ ಬಂಡೆಯ ಮೇಲೆ ಸುಮಾರು ೮ ಅಡಿ ಎತ್ತರವಿರುವ ವೀರಭದ್ರನ ಮೂರ್ತಿಯು ಪ್ರಮುಖವಾದುದು. ಇದು ನೈಸರ್ಗಿಕ ಬಂಡೆಯ ಮೇಲೆ ಕೆತ್ತಲ್ಪಟ್ಟಿದ್ದು. ಶಿಲ್ಪಕ್ಕೆ ರಕ್ಷಣೆ ಒದಗಿಸಲು ಆ ಬಂಡೆಯನ್ನಾಧರಿಸಿ ಗರ್ಭಗೃಹದ ರೀತಿಯಲ್ಲಿ ಮಂಟಪವನ್ನು ನಿರ್ಮಿಸಿದ್ದಾರೆ. ಇಷ್ಟು ಎತ್ತರವಿರುವ ಈ ಮೂರ್ತಿಯು ಸುಂದರವಾಗಿದ್ದು, ಚತುರ್ಭುಜಗಳನ್ನು ಹೊಂದಿದೆ. ಬಲಭಾಗದ ಕೈಗಳಲ್ಲಿ ಖಡ್ಗ, ಬಾಣ ಹಾಗೂ ಎಡಭಾಗದ ಕೈಗಳಲ್ಲಿ ಖೇಟಕ ಮತ್ತು ಧನಸ್ಸನ್ನು ಹಿಡಿದಿರುವನು. ಈ ಎಲ್ಲ ಆಯುಧಗಳನ್ನು ಸಾಧಾರಣ ಭಂಗಿಯಲ್ಲಿ ಹಿಡಿಯದೆ ಎಲ್ಲ ಕೈಗಳನ್ನು ಮೇಲೆತ್ತಿ ಹಿಡಿದಿರುವನು. ಅಂದರೆ ಧಾಳಿಗೆ ಸಿದ್ಧನಾಗಿ ಹೋಗುತ್ತಿರುವಂತೆ ಭಾಸವಾಗುತ್ತದೆ. ಹಾಗೂ ಪಾದಗಳು ಮುನ್ನಡೆಯುತ್ತಿರುವ ಭಂಗಿಯಲ್ಲಿದ್ದು ಎಡಗಾಲಿನ ಪಾದದಲ್ಲಿ ಮಾತ್ರ ದಪ್ಪನೆಯ ಕಡಗದಂತಹ ಆಭರಣವನ್ನು ಧರಿಸಿರುವಂತೆ ಕೆತ್ತಲಾಗಿದೆ. ಬಲಪಕ್ಕದಲ್ಲಿ ಅಂಜಲಿ ಮುದ್ರೆಯಲ್ಲಿ ನಿಂತಿರುವ ದಕ್ಷನ ತಲೆಯ ಮೇಲೆ ಟಗರಿನ ಶೃಂಗಗಳನ್ನು ತೋರಿಸುವ ಬದಲು ಮೇಕೆಯ ಶೃಂಗಗಳನ್ನು ತೋರಿಸಿರುವರು. ಉಳಿದಂತೆ ಸಾಮಾನ್ಯ ವೀರಭದ್ರನಂತೆಯೇ ಸಕಲ ಆಭರಣಗಳನ್ನು ಹೊಂದಿರುವನು. ಇದೇ ರೀತಿಯ ಲಕ್ಷಣಗಳನ್ನು ಜಂಬುನಾಥ ದೇವಾಲಯ ಹಾಗೂ ವಿರೂಪಾಕ್ಷ ದೇವಾಲಯದಲ್ಲಿನ ಶಿಲ್ಪಗಳು ಹೊಂದಿವೆ. ಸ್ವಲ್ಪ ಭಿನ್ನವಾಗಿ ಮೇಲೆ ವಿವರಿಸಿದ ದೇವಾಲಯದ ಹತ್ತಿರವಿರುವ ಇನ್ನೊಂದು ದೇವಾಲಯದಲ್ಲಿ ವೀರಭದ್ರನ ಇನ್ನೊಂದು ಶಿಲ್ಪವಿದೆ. ಇದು ಸುಮಾರು ೬ ಅಡಿ ಎತ್ತರವಾಗಿದ್ದು, ಮೇಲೆ ವಿವರಿಸಿದ ಶಿಲ್ಪದ ಲಕ್ಷಣಗಳನ್ನು ಹೊಂದಿದ್ದರೂ ಸ್ವಲ್ಪ ವ್ಯತ್ಯಾಸಗಳನ್ನು ಕಾಣಬಹುದು. ಇಲ್ಲಿ ವೀರಭದ್ರನಿಗೆ ಜಟಾಮುಕುಟವನ್ನು ತೋರಿಸಿದ್ದು, ಬಲ ಹಿಂದಿನ ಕೈಯ ಬಾಣವನ್ನು ಹಿಡಿದುಕೊಂಡಿರದೆ, ಬೆನ್ನ ಹಿಂದಿರುವ ಬತ್ತಳಿಕೆಯಲ್ಲಿಂದ ಬಾಣವನ್ನು ತೆಗೆಯುತ್ತಿರುವಂತೆ ಕಂಡರಿಸಲಾಗಿದೆ. ಉಳಿದ ಲಕ್ಷಣಗಳು ಮೇಲೆ ವಿವರಿಸಿದ ಲಕ್ಷಣಗಳನ್ನೇ ಹೊಂದಿವೆ ಹಾಗೂ ಇಲ್ಲಿ ದಕ್ಷನು ಟಗರು ತಲೆಯುಳ್ಳವನಾಗಿರುವನು. ಇದೇ ಲಕ್ಷಣಗಳುಳ್ಳ ಮತೊಂದು ಶಿಲ್ಪ ಮಾಲ್ಯವಂತದ ದಕ್ಷಿಣಕ್ಕಿರುವ ದೇವಾಲಯವೊಂದರಲ್ಲಿದೆ.



ವೀರಭದ್ರ ಜನಾನ ಆವರಣದ ಈಶಾನ್ಯಕ್ಕಿರುವ
ಬೆಟ್ಟದ ಮೇಲೆ, ಹಂಪಿ



ವೀರಭದ್ರ, ಜನಾನ ಆವರಣದ ಈಶಾನ್ಯಕ್ಕಿರುವ
ಬೆಟ್ಟದ ಮೇಲೆ, ಹಂಪಿ



ವೀರಭದ್ರ ಜಂಬುನಾಥ ದೇವಾಲಯ, ಹೊಸಪೇಟೆ

## ಮಂಡಿ ವೀರಭದ್ರ

ಹಂಪಿ ಪರಿಸರದಲ್ಲಿ ಮಂಡಿ ವೀರಭದ್ರನ ಮೂರು ಶಿಲ್ಪಗಳು ದೊರೆಯುತ್ತವೆ. ಇದರಲ್ಲಿ ಒಂದು ನಿರೂಪಣಾತ್ಮಕ ಶಿಲ್ಪವಾಗಿದೆ. ಉಳಿದ ವೀರಭದ್ರ ಶಿಲ್ಪಗಳಿಗಿಂತ ಭಿನ್ನ ಭಂಗಿಯಲ್ಲಿರುವುದೇ ಈ ವೀರಭದ್ರ ಶಿಲ್ಪದ ವಿಶೇಷ. ಮತಂಗ ಪರ್ವತದ ಪೂರ್ವಕ್ಕಿರುವ ಒಂದು ಪಾಳುಬಿದ್ದ ದೇವಾಲಯದಲ್ಲಿ ಸುಮಾರು ೬-೭ ಅಡಿ ಎತ್ತರವಿರುವ ಮಂಡಿ ವೀರಭದ್ರನ ಶಿಲ್ಪವಿದೆ. ಬಿಲ್ಲು, ಬಾಣ, ಖಡ್ಗ, ಖೇಟಗಳನ್ನು ಹಿಡಿದಿದ್ದು, ಎಡಕ್ಕೆ ಅಭಿಮುಖವಾಗಿ ಬಲಗಾಲಿನ ಮೊಣಕಾಲನ್ನು ಭೂಮಿಗೆ ಸ್ಪರ್ಶಿಸಿರುವನು. ಸ್ಥಳೀಯ ಕನ್ನಡ ಭಾಷೆಯಲ್ಲಿ ಮೊಣಕಾಲ ಭಾಗವನ್ನು ಮಂಡಿ ಎಂದು ಕರೆಯುವರು. ಆದ್ದರಿಂದ ಮಂಡಿಯೂರಿ ಕುಳಿತ ವೀರಭದ್ರನನ್ನು ಮಂಡಿ ವೀರಭದ್ರ ಎಂದು ಕರೆದಿರುವರು. ಉಳಿದಂತೆ ಶಿಲ್ಪವು ಸಾಮಾನ್ಯ ವೀರಭದ್ರ ಮೂರ್ತಿಯು ಹೊಂದಿರುವಂತೆ ವಸ್ತ್ರಾಭರಣಗಳನ್ನು ಧರಿಸಿರುವನು. ಇದೇ ಲಕ್ಷಣಗಳುಳ್ಳ ವೀರಭದ್ರನು ಗುಡಿಓಬಳಾಪುರದ ಚೆನ್ನ ಬಸವೇಶ್ವರ ದೇವಾಲಯದಲ್ಲಿ ಕಂಡುಬರುತ್ತದೆ. ೪ ಅಡಿ ಎತ್ತರದ ಶಿಲ್ಪವು ಬಳಪದಕಲ್ಲಿನಲ್ಲಿ ಕೆತ್ತಲ್ಪಟ್ಟಿದ್ದು, ಮೇಲೆ ವಿವರಿಸಿದ ಶಿಲ್ಪದ ಲಕ್ಷಣಗಳನ್ನೇ ಹೊಂದಿದೆ. ಆದರೆ ದಕ್ಷಬ್ರಹ್ಮನ ಶಿಲ್ಪವು ವೀರಭದ್ರನ ಬಲಭಾಗಕ್ಕೆ ಬದಲಾಗಿ ಎಡಕ್ಕೆ ಕೆತ್ತಲ್ಪಟ್ಟಿದ್ದು, ಪೀಠದ ಮೇಲೆ ಪದ್ಮಾಸೀನನಾಗಿ ಅಂಜಲಿ ಮುದ್ರೆಯಲ್ಲಿ ವೀರಭದ್ರನೆಡೆಗೆ ಮುಖ ಮಾಡಿ ಕುಳಿತಿರುವಂತೆ ಕೆತ್ತಲಾಗಿದೆ.



ಮಂಡಿವೀರಭದ್ರ, ಮಾತಂಗ ಪರ್ವತದ ಪೂರ್ವಕ್ಕಿರುವ ಪಾಳುಬಿದ್ದ ದೇವಾಲಯ, ಹಂಪಿ



ಮಂಡಿವೀರಭದ್ರ, ಚನ್ನಬಸವೇಶ್ವರ ದೇವಾಲಯ, ಗುಡಿ ಓಬಳಾಪುರ

ಇನ್ನೊಂದು ಮಂಡಿ ವೀರಭದ್ರ ಶಿಲ್ಪವು ತಿಮ್ಮಲಾಪುರದ ಮುಖಮಂಟಪದಲ್ಲಿನ ಒನೇ ಕಂಬದಲ್ಲಿದೆ. ಇದೊಂದು ನಿರೂಪಣಾತ್ಮಕ ಶಿಲ್ಪವಾಗಿದೆ. ಈ ಒಂದೇ ಕಂಬದಲ್ಲಿ ಮೂರು ಪಟ್ಟಿಕೆಗಳನ್ನು ಬಳಸಿ ದಕ್ಷಬ್ರಹ್ಮನ ಸಂಹಾರ ಸಂದರ್ಭವನ್ನು ತೋರಿಸಲೆತ್ನಿಸಿರುವರು. ಒಂದು ಪಟ್ಟಿಕೆಯಲ್ಲಿ ಮಂಡಿಯೂರಿ ಕುಳಿತ ವೀರಭದ್ರನು ಬಿಲ್ಲು, ಬಾಣ, ಖಡ್ಗ, ಖೇಟಗಳನ್ನು ಹಿಡಿದು ಎಡಕ್ಕೆ ಅಭಿಮುಖವಾಗಿರುವಂತೆ ಇರುವನು. ಇದರ ಪಕ್ಕದ ಪಟ್ಟಿಕೆಯಲ್ಲಿ ರುಂಡವಿರದ ಕೇವಲ ಮುಂಡ

ಮಾತ್ರ ಇರುವ ಶಿಲ್ಪವು ಯಜ್ಞದ ಮುಂದೆ ಕುಳಿತು, ಅಗ್ನಿಗೆ ಹವಿಸ್ಸನ್ನು ಹಾಕುತ್ತಿರುವಂತೆ ಕಂಡರಿಸಲಾಗಿದೆ. ಇದರ ಪಕ್ಕದ ಪಟ್ಟಿಕೆಯಲ್ಲಿ ಟಗರು ತಲೆಯ ದಕ್ಷಬ್ರಹ್ಮನು ಈ ಯಜ್ಞದ ಪಟ್ಟಿಕೆಗೆ ಮುಖಮಾಡಿ ಅಂಜಲಿ ಮುದ್ರೆಯಲ್ಲಿರುವನು. ಹೀಗೆ ಒಂದೇ ಕಂಬದ ಮೂರು ಪಟ್ಟಿಕೆಗಳನ್ನು ಬಳಸಿ ಶಿಲ್ಪವನ್ನು ರಚಿಸಲಾಗಿದೆ.

## ದ್ವಿಭುಜ ವೀರಭದ್ರ

ದ್ವಿಭುಜಗಳುಳ್ಳ ವೀರಭದ್ರನ ಶಿಲ್ಪಗಳು ಹಂಪಿ ಪರಿಸರದಲ್ಲಿ ಒಟ್ಟು ನಾಲ್ಕು ದೊರೆತಿವೆ. ಅವುಗಳು ಆನೆ ಲಾಯದ ಬಳಿಯಿರುವ ವಸ್ತುಸಂಗ್ರಹಾಲಯದಲ್ಲಿ (೨) ಹಾಗೂ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿ ಹಾಗೂ ಕಮಲಾಪುರದ ವೀರಭದ್ರ ದೇವಾಲಯದಲ್ಲೊಂದು ಶಿಲ್ಪ ಕಂಡುಬರುತ್ತದೆ. ಈ ಶಿಲ್ಪಗಳು ಸಾಮಾನ್ಯ ವೀರಭದ್ರ ಶಿಲ್ಪದ ಲಕ್ಷಣಗಳನ್ನೇ ಕಂಡರಿಸಲಾಗಿದೆ. ಆದರೆ ಇಲ್ಲಿ ವೀರಭದ್ರನು ಚತುರ್ಭುಜನಾಗಿರದೇ, ದ್ವಿಭುಜಗಳನ್ನು ಮಾತ್ರ ಹೊಂದಿರುವನು. ಬಲಗೈ ಖಡ್ಗ ಮತ್ತು ಎಡಗೈಯಲ್ಲಿ ಖೇಟ ಹಿಡಿದಿರುವನು. ಕಮಲಾಪುರದ ವೀರಭದ್ರ ದೇವಾಲಯದ ಪ್ರಾಚೀನ ವೀರಭದ್ರ ಶಿಲ್ಪದಲ್ಲಿ ಎಡಗೈಯಲ್ಲಿ ಹಿಡಿದ ಖೇಟದ ಕೆಳಭಾಗದಲ್ಲಿ ಮಾನವನ ರುಂಡವನ್ನು ಕೆತ್ತಿರುವರು. ಇದು ಬಹುಶಃ ದಕ್ಷನ ತಲೆಯನ್ನು ಸಂಹಾರ ಮಾಡಿದುದರ



ದ್ವಿಭುಜ ವೀರಭದ್ರ, ವಸ್ತುಸಂಗ್ರಹಾಲಯ, ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ, ಕಮಲಾಪುರ



ದ್ವಿಭುಜ ವೀರಭದ್ರ, ವೀರಭದ್ರ ದೇವಾಲಯ, ಕಮಲಾಪುರ

ಸಂಕೇತವಾಗಿರಬಹುದು ಹಾಗೂ ಪಕ್ಕದಲ್ಲಿ ಅಂಜಲಿಮುದ್ರೆಯಲ್ಲಿರುವ ದಕ್ಷನನ್ನು ತೋರಿಸಲಾಗಿದೆ.

## ಬಹುಬಾಹುಗಳುಳ್ಳ ವೀರಭದ್ರ ಶಿಲ್ಪ

ಬಹುಬಾಹುಗಳನ್ನು ಹೊಂದಿರುವ ವೀರಭದ್ರನ ಶಿಲ್ಪವು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ವಸ್ತುಸಂಗ್ರಹಾಲಯದಲ್ಲಿ ಕಂಡುಬರುತ್ತದೆ. ಇಲ್ಲಿರುವ ವೀರಭದ್ರನ ಶಿಲ್ಪವು ದಶಭುಜಗಳನ್ನು

ಹೊಂದಿರುತ್ತದೆ. ಇಲ್ಲಿ ವೀರಭದ್ರನು ಬಲಭಾಗದ ಕೈಗಳಲ್ಲಿ ಖಡ್ಗ, ಬಾಣ, ಅಂಕುಶ, ತ್ರಿಶೂಲ, ಡಮರುಗಳನ್ನು ಹಾಗೂ ಎಡಭಾಗದಲ್ಲಿನ ಮುಂದಿನ ಹಸ್ತವು ಭಗ್ನಗೊಂಡಿದೆ. ಉಳಿದ ಹಸ್ತಗಳಲ್ಲಿ ಬಿಲ್ಲು, ಖೇಟ, ಪಾಶ ಮತ್ತು ಬಾಕನ್ನು ಹಿಡಿದಿರುವನು. ದಕ್ಷನನ್ನು ಶಿವನ ಎಡಭಾಗದಲ್ಲಿ ಕಂಡರಿಸಲಾಗಿದೆ. ಹಾಗೂ ಶಿಲ್ಪದ ಸುತ್ತ ಬಳ್ಳಿ, ಅಲಂಕರಣೆಯ ಪ್ರಭಾವಳಿ ಇದೆ. ಇನ್ನೊಂದು, ಅಷ್ಟಭುಜಗಳನ್ನು ಹೊಂದಿರುವ ಶಿಲ್ಪವು ಜಂಬುನಾಥ ದೇವಾಲಯದ ಮಹಾಮಂಟಪದ ೩೪ ನೇ ಕಂಬದಲ್ಲಿ ಕಂಡುಬರುತ್ತದೆ. ಇದು ಬಲಗೈಗಳಲ್ಲಿ ಖಡ್ಗ, ಬಾಕು, ಬಾಣ, ತ್ರಿಶೂಲವನ್ನು ಹಾಗೂ ಎಡಗೈಗಳಲ್ಲಿ ಖೇಟ, ಪಾಶ(ಅಸ್ಪಷ್ಟ), ಬಿಲ್ಲು, ಡಮರುವನ್ನು ಹಿಡಿದಿದ್ದು ದಕ್ಷನನ್ನು ಸಂಹರಿಸಲು ಮುನ್ನಡೆಯುತ್ತಿರುವಂತೆ ಇದೆ.



ದಶಭುಜ ವೀರಭದ್ರ, ವಸ್ತುಸಂಗ್ರಹಾಲಯ, ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ, ಕಮಲಾಪುರ



ಅಷ್ಟಭುಜ ವೀರಭದ್ರ, ಜಂಬುನಾಥ ದೇವಾಲಯ, ಹೊಸಪೇಟೆ

**ಗಾರೆಯಲ್ಲಿರುವ ವೀರಭದ್ರನ ಶಿಲ್ಪ**

ಗಾರೆಯಲ್ಲಿ ನಿರ್ಮಿತ ನಾಲ್ಕು ವೀರಭದ್ರ ಶಿಲ್ಪಗಳು ದೊರೆತಿದ್ದು, ಅವು ವಿರೂಪಾಕ್ಷ ದೇವಾಲಯದ ಮುಖ್ಯ ದ್ವಾರ ಗೋಪುರದ ದಕ್ಷಿಣ ದಿಕ್ಕಿನ ಪಾರ್ಶ್ವದಲ್ಲಿ ಕಂಡುಬರುತ್ತವೆ. ಇವು ಮೇಲೆ ವಿವರಿಸಿದ ಸಾಮಾನ್ಯ ವೀರಭದ್ರ ಶಿಲ್ಪದ ಲಕ್ಷಣಗಳನ್ನು ಹೊಂದಿವೆ.

ಒಟ್ಟಾರೆ ಹಂಪಿ ಪರಿಸರದಲ್ಲಿ ವಿಜಯನಗರದ ಪ್ರಾರಂಬದಲ್ಲಿಯೇ ವೀರಭದ್ರನ ಆರಾಧನೆಯು ಇದ್ದು, ಅದು ವ್ಯಾಪಕವಾಗಿ ಹರಡಿತ್ತೆಂಬುದು ಇಲ್ಲಿ ದೊರೆಯುವ ೮೫ ಕ್ಕಿಂತಲೂ ಹೆಚ್ಚು ವೀರಭದ್ರನ ಶಿಲ್ಪಗಳು ಸ್ಪಷ್ಟಪಡಿಸುತ್ತವೆ. ಈ ಶಿಲ್ಪಗಳ ಸಂಖ್ಯೆಯೂ ೧೦೦ಕ್ಕಿಂತಲೂ ಹೆಚ್ಚು ಇದ್ದಿರಬಹುದಾದ ಸಾಧ್ಯತೆಯೂ ಇದೆ.





ವೀರಭದ್ರನ ಗಾರೆಯ ಶಿಲ್ಪಗಳು, ವಿರೂಪಾಕ್ಷ ದೇವಾಲಯದ ಮುಖ್ಯ ದ್ವಾರಗೋಪುರ, ಹಂಪಿ

## ವೀರಭದ್ರ ಶಿಲ್ಪಗಳು

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ | ಒಟ್ಟು ಸಂಖ್ಯೆ |
|---|---|---|---|---|
| ಹಂಪಿ | ವಿರೂಪಾಕ್ಷ | ಮಹಾರಂಗ ಮಂಟಪದ ೩ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ಮಹಾರಂಗ ಮಂಟಪದ ೩೬ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ಮಹಾರಂಗ ಮಂಟಪದ ೪೦ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ಬಡಬದಿಯ ಪ್ರಾಕಾರ ಮಂಟಪದ ೨೭ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ಬಡಬದಿಯ ಪ್ರಾಕಾರ ಮಂಟಪದ ೨೯ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ಬಡಬದಿಯ ಪ್ರಾಕಾರ ಮಂಟಪದ ೩೭ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೪೯ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೫೬ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೧೦೪ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೧೦೬ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೧೧೫ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ಕಿರಿಯ ಗೋಪುರದ ದ್ವಾರದ ಬಲಭಾಗದಲ್ಲಿ ವೀರಭದ್ರ ಶಿಲ್ಪವನ್ನು ನಿಲ್ಲಿಸಲಾಗಿದೆ | ೧ | |

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ | ಒಟ್ಟು ಸಂಖ್ಯೆ |
|---|---|---|---|---|
| ಹಂಪಿ | ವಿರೂಪಾಕ್ಷ | ಮುಖ್ಯದ್ವಾರ ಗೋಪುರದ ಪಶ್ಚಿಮ ದಿಕ್ಕಿನ ಪಾರ್ಶ್ವ ದಲ್ಲಿ ಶಿಲ್ಪಗಳಿವೆ | ೪ | |
| ಹಂಪಿ | ವಿರೂಪಾಕ್ಷ | ದೇವಾಲಯದ ಎಡಭಾಗಕ್ಕೆ ನದಿಯಲ್ಲಿರುವ ನೈಸರ್ಗಿಕ ಬಂಡೆಯ ಮೇಲೆ(ಗಣೇಶ, ನಾಗ, ಶಿವಲಿಂಗ, ನಂದಿ ಮತ್ತು ಇತರ ಶಿಲ್ಪಗಳ ಜೊತೆಯಲ್ಲಿವೆ) | ೧ | ೧೭ |
| ಹಂಪಿ | ಕೋಟಿಲಿಂಗ | ಕೋಟಿಲಿಂಗದ ಶೈವದೇವಾಲಯದ ಹೊರಗೋಡೆ | ೧ | |
| ಹಂಪಿ | ಕೋಟಿಲಿಂಗ | ಕೋಟಿಲಿಂಗದ ಶೈವದೇವಾಲಯದ ಹತ್ತಿರದ ನೈಸರ್ಗಿಕ ಬಂಡೆ | ೧ | ೨ |
| ಹಂಪಿ | ಮತಂಗ ಪರ್ವತದ ವೀರಭದ್ರ ದೇವಾಲಯ | ಗರ್ಭಗೃಹದ ಒಳಗೆ ೨ ಶಿಲ್ಪಗಳಿವೆ | ೨ | ೨ |
| ಹಂಪಿ | ಕಡಲೆಕಾಳು ಗಣೇಶ ದೇವಾಲಯ | ಮಂಟಪದ ೪ನೇ ಕಂಬ | ೧ | |
| | ಕಡಲೆಕಾಳು ಗಣೇಶ ದೇವಾಲಯ | ಮಂಟಪದ ೧೮ನೇ ಕಂಬ | ೧ | ೨ |
| ಹಂಪಿ | ಹೇಮಕೂಟ ಬೆಟ್ಟ | ಹೇಮಕೂಟ ಬೆಟ್ಟಕ್ಕೆ ಹೋಗುವ ದ್ವಾರದ ಗೋಡೆ ಭಾಗ | ೧ | ೧ |
| ಹಂಪಿ | ಬಾಲಕೃಷ್ಣ | ಮಹಾಮಂಟಪದ ೩೦ನೇ ಕಂಬ | ೧ | ೧ |
| ಹಂಪಿ | ಉದ್ಧಾನ ವೀರಭದ್ರ | ಗರ್ಭಗೃಹದಲ್ಲಿನ ಮೂರ್ತಿ | ೧ | ೧ |
| ಹಂಪಿ | ರಾಜ್ಯ ಪುರಾತತ್ವ ಮತ್ತು ಸಂಗ್ರಹಾಲಯ ಉಪನಿರ್ದೇಶಕರ ಕಚೇರಿಯ ವಸ್ತು ಸಂಗ್ರಹಾಲಯ | ವಸ್ತು ಸಂಗ್ರಹಾಲಯದ ಹೊರ ಆವರಣ | ೫ | ೫ |
| ಹಂಪಿ | ಕಮಲ್‌ಮಹಲ್‌ನ ಹಿಂಭಾಗದ ಪ್ರದೇಶ | ಈ ಪ್ರದೇಶದ ಬೇರೆ ಬೇರೆ ಸ್ಥಳಗಳಲ್ಲಿ ೩ ಸಣ್ಣ ದೇವಾಲಯಗಳು ಇದ್ದು, ಅವುಗಳ ಗರ್ಭಗೃಹ ಗಳಲ್ಲಿ ಈ ಶಿಲ್ಪಗಳಿವೆ | ೩ | ೩ |
| ಹಂಪಿ | ರಾಜ ಪ್ರಮುಖರ ವಸತಿ ನೆಲೆಯ ಬಳಿಯಲ್ಲಿ | ವಸತಿ ನೆಲೆಯ ಬಳಿಯಲ್ಲಿಯೇ ವೀರಭದ್ರ ದೇವಾಲಯವಿದೆ | ೧ | |
| ಹಂಪಿ | ರಾಜ ಪ್ರಮುಖರ ವಸತಿ ನೆಲೆಯ ಬಳಿಯಲ್ಲಿ | ವಸತಿ ನೆಲೆಯ ಬಳಿಯಲ್ಲಿಯೇ ನೈಸರ್ಗಿಕ ಬಂಡೆಯ ಮೇಲೆ | ೧ | ೨ |

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ | ಒಟ್ಟು ಸಂಖ್ಯೆ |
|---|---|---|---|---|
| ಹಂಪಿ | ಕುದುರೆಲಾಯ | ಕುದುರೆಲಾಯದ ಒಳ ಆವರಣದಲ್ಲಿ ೨ ಶಿಲ್ಪಗಳನ್ನು ಪ್ರದರ್ಶಿಸಲಾಗಿದೆ | ೨ | ೨ |
| ಕಮಲಾಪುರ | ಪ್ರಸನ್ನ ವಿರೂಪಾಕ್ಷ ದೇವಾಲಯ | ಉತ್ಸವ ಮಂಟಪದ ೧೦ನೇ ಕಂಬ | ೧ | ೧ |
| ಕಮಲಾಪುರ | ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ವಸ್ತುಸಂಗ್ರಹಾಲಯ | ಒಳ ಆವರಣದಲ್ಲಿ ೪ ಶಿಲ್ಪಗಳು | ೪ | |
| ಕಮಲಾಪುರ | ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ವಸ್ತುಸಂಗ್ರಹಾಲಯ | ಹೊರ ಆವರಣದಲ್ಲಿ ೧೨ ಶಿಲ್ಪಗಳು | ೧೨ | ೧೬ |
| ಕಮಲಾಪುರ | ರಾಘವೇಂದ್ರ ಮಠ | ಮಂಟಪದ ೪ನೇ ಕಂಬ | ೧ | ೧ |
| ಕಮಲಾಪುರ | ರಾಘವೇಂದ್ರ ಮಠದ ಬಳಿಯಿರುವ ಆಂಜನೇಯ | ಮಂಟಪದ ೨ನೇ ಕಂಬ | ೧ | |
| ಕಮಲಾಪುರ | ದೇವಾಲಯ | ಮಂಟಪದ ೫ನೇ ಕಂಬ | ೧ | ೨ |
| ಕಮಲಾಪುರ | ವೀರಭದ್ರ | ದೇವಾಲಯದ ಬೇರೆ ಬೇರೆ ಗರ್ಭಗೃಹಗಳಲ್ಲಿ ೨ ಶಿಲ್ಪಗಳಿವೆ | ೨ | ೨ |
| ಕಮಲಾಪುರ | ವೀರಭದ್ರ | ದೇವಾಲಯದ ಗರ್ಭಗೃಹದಲ್ಲಿನ ಮೂರ್ತಿ | ೧ | ೧ |
| ಆನೆಗೊಂದಿ | ವಿಜಯಲಕ್ಷ್ಮಿ ದೇವಾಲಯ ಪಂಪಸರೋವರ | ದೇವಾಲಯದ ಒಳಭಾಗದಲ್ಲಿ ಶೈವ ದೇವಾಲಯದ ಗರ್ಭಗೃಹದ ದ್ವಾರಕ್ಕೆ ನಿಲ್ಲಿಸಲಾಗಿದೆ | ೧ | ೧ |
| ಆನೆಗೊಂದಿ | ವೀರಭದ್ರ | ಗರ್ಭರ್ಗಹ | ೧ | ೧ |
| ಆನೆಗೊಂದಿ | ಊರಮ್ಮ ದೇವಾಲಯದ ಬಳಿಯ ವೀರಭದ್ರ ದೇವಾಲಯ | ದೇವಾಲಯದ ಗರ್ಭಗೃಹ | ೧ | ೧ |
| ಆನೆಗೊಂದಿ | ದುರ್ಗಾ ದೇವಾಲಯದ ಬಳಿಯ ಈಶ್ವರ ದೇವಾಲಯ | ದೇವಾಲಯದ ಆವರಣದಲ್ಲಿ | ೧ | ೧ |
| ಮಲಪನಗುಡಿ | ಮಲ್ಲಿಕಾರ್ಜುನ | ಪ್ರಾಕಾರ ಮಂಟಪಕ್ಕೆ ಅಂಟಿಕೊಂಡಂತಿರುವ ವೀರಭದ್ರ ದೇವಾಲಯದ ಗರ್ಭಗೃಹ | ೧ | |
| ಮಲಪನಗುಡಿ | ಮಲ್ಲಿಕಾರ್ಜುನ | ಪ್ರಾಕಾರ ಮಂಟಪದ ಮೇಲಿನ ಗಾರೆಯ ದೇವಕೊಷ್ಠ | ೧ | ೨ |

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ | ಒಟ್ಟು ಸಂಖ್ಯೆ |
|---|---|---|---|---|
| ನಾಗೇನಹಳ್ಳಿ | ಶೈವ ದೇವಾಲಯ | ನವರಂಗ ೧ನೇ ಕಂಬ | ೧ | ೧ |
| ಗುಡಿ ಓಬಳಾಪುರ | ಚೆನ್ನಬಸವೇಶ್ವರ | ದೇವಾಲಯದ ಗರ್ಭಗೃಹ | ೧ | ೧ |
| ಸಣಾಪುರ | ಆಂಜನೇಯ | ದೇವಾಲಯದ ಆವರಣದಲ್ಲಿ | ೧ | ೧ |
| ಹೊಸಪೇಟೆ | ಜಂಬುನಾಥ | ದೇವಾಲಯದ ನವರಂಗದಲ್ಲಿ ನಿಲ್ಲಿಸಲಾಗಿದೆ | ೧ | |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೨ನೇ ಕಂಬ | ೧ | |
| ಹೊಸಪೇಟೆ | ಜಂಬುನಾಥ | ಮಹಾಮಂಪಟದ ೧೬ನೇ ಕಂಬ | ೧ | |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೧೭ನೇ ಕಂಬ | ೧ | |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೨೮ನೇ ಕಂಬ | ೧ | |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೩೨ನೇ ಕಂಬ | ೧ | |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೩೪ನೇ ಕಂಬ | ೧ | |
| ಹೊಸಪೇಟೆ | ಜಂಬುನಾಥ | ದೇವಾಲಯದ ಹೊರಭಾಗದಲ್ಲಿರುವ ಪರಿವಾರ ದೇವಾಲಯ | ೧ | ೮ |
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ನವರಂಗದ ೫ನೇ ಕಂಬ | ೧ | |
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ನವರಂಗಕ್ಕೆ ಆಗಮಿಸುವ ದ್ವಾರಮಂಟಪದ ೧ನೇ ಕಂಬ | ೧ | |
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ಮಹಾಮಂಟಪದ ೭ನೇ ಕಂಬ | ೧ | |
| ತಿಮ್ಮಲಾಪುರ | ವೀರಭದ್ರ | ಪಾಳುಬಿದ್ದ ದೇವಾಲಯದಲ್ಲಿ ನಿಲ್ಲಿಸಲಾಗಿದೆ | ೧ | ೪ |
| ಒಟ್ಟು | | | ೮೨ | ೮೨ |

## ಬ್ರಹ್ಮಶಿರಶ್ಛೇದಕ ಮೂರ್ತಿ ಅಥವಾ ಭೈರವಮೂರ್ತಿ

ಭೈರವ ಪದದ ಅರ್ಥವು ಯಾರ ಧ್ವನಿಯು ಭೀಕರವಾಗಿದೆಯೋ ಅವನು ಭೈರವ. 'ಭಿರ್‌ಭಯಾನಕೋ ರವೋ ಯಸ್ಯ ಸಃ ಭೈರವ' ಎಂದಿದ್ದು ಈ ಮಾತು ರುದ್ರನಿಗೆ ಅನ್ವಯಿಸುತ್ತದೆ.[೭೩]

ವರಾಹ ಪುರಾಣವು ಶಿವನು ಬ್ರಹ್ಮನ ಐದನೇ ಶಿರವನ್ನು ಕತ್ತರಿಸಿದನೆಂದು ತಿಳಿಸುತ್ತದೆ. ಬ್ರಹ್ಮನು ರುದ್ರನನ್ನು ಸೃಷ್ಟಿಸಿ, ಅವನನ್ನು 'ಕಪಾಲಿ' ಎಂದು ಕರೆದು, ಜಗತ್ತನ್ನು ರಕ್ಷಿಸಲು ಹೇಳಿದನಂತೆ. ಆದರೆ ರುದ್ರನು ತನ್ನನ್ನು 'ಕಪಾಲಿ' ಎಂದು ಕರೆದು ಅಪಮಾನ ಮಾಡಿದನೆಂದು ಕೋಪಗೊಂಡು, ತನ್ನ ಎಡಗೈಯ ಹೆಬ್ಬರಳಿನ ಉಗುರಿನಿಂದ ಬ್ರಹ್ಮನ ಐದನೇ ತಲೆಯನ್ನು ಚಿವುಟಿಹಾಕಿದನು. ಆದರೆ ಕತ್ತರಿಸಿದ ಈ ತಲೆಯು ಶಿವನ ಕೈಗೆ ಅಂಟಿಕೊಂಡಿತು. ರುದ್ರನು ಬ್ರಹ್ಮನಲ್ಲಿ ಈ ತಲೆಯನ್ನು ಬೇರ್ಪಡಿಸಲು ಪ್ರಾರ್ಥಿಸಿದಾಗ ಬ್ರಹ್ಮನು, ಹನ್ನೆರಡು ವರ್ಷ ಕಾಲ ಕಾಪಾಲಿಕನ ಜೀವನ ನಡೆಸಿದರೆ, ಶಿರವು ಕಳಚಿ ಬೀಳುವುದೆಂದು ತಿಳಿಸಿದನು. ಇದರಂತೆ ರುದ್ರನು ಮಹೇಂದ್ರಗಿರಿಗೆ ಹೋಗಿ, ಕೇಶವ ಯಜ್ಞೋಪವೀತವನ್ನೂ, ಮೂಳೆಗಳ ಹಾರವನ್ನೂ, ರುಂಡಯುಕ್ತ ಜಟಾಮುಕುಟವನ್ನು ಧರಿಸಿ, ಕಪಾಲದಲ್ಲಿ ರಕ್ತವನ್ನು ತುಂಬಿಕೊಂಡು, ಕಾಪಲಿಕನಂತೆ, ನಾನಾ ಪವಿತ್ರ ಸ್ಥಳಗಳಿಗೆ ಹೋದನು.

ಹನ್ನೆರಡು ವರ್ಷಗಳ ಅಂತ್ಯದ ಸಮಯದಲ್ಲಿ ವಾರಣಾಸಿಗೆ ಬಂದಾಗ ಶಿವನಿಗೆ ಅಂಟಿದ್ದ ಬ್ರಹ್ಮಕಪಾಲವು ಕಳಚಿ ಬಿದ್ದಿತು. ಆದ್ದರಿಂದ ಈ ಸ್ಥಳಕ್ಕೆ ಕಪಾಲ ವಿಮೋಚನ ಎಂದು ಕರೆಯಲಾಯಿತು. ನಂತರ ರುದ್ರನು ಗಂಗೆಯಲ್ಲಿ ಸ್ನಾನಮಾಡಿ, ಕಾಶಿಯಲ್ಲಿ ವಿಶ್ವೇಶ್ವರನನ್ನು ಪೂಜಿಸಿ ಕೈಲಾಸಕ್ಕೆ ಹಿಂತಿರುಗಿದನೆಂದು ವರಾಹ ಪುರಾಣವು ತಿಳಿಸುತ್ತದೆ.[೭೪]

ಕೂರ್ಮಪುರಾಣವು ಮೇಲಿನ ವಿವರಣೆಗಿಂತ ಭಿನ್ನವಾದ ವಿವರಣೆಯನ್ನು ನೀಡುತ್ತದೆ. 'ಒಮ್ಮೆ ಋಷಿಗಳೆಲ್ಲರೂ ಒಟ್ಟಾಗಿ, ಜಗತ್ತಿನ ಸೃಷ್ಟಿಗೆ ಮೂಲ ಯಾರು? ಎಂದು ಕೇಳಿದಾಗ ಬ್ರಹ್ಮನು ತಾನೇ ಸಕಲ ಸೃಷ್ಟಿಕರ್ತನೆಂದು ಹೆಮ್ಮೆಯಿಂದ ಹೇಳಿದನು. ಅದೇ ಸಮಯಕ್ಕೆ ಅಲ್ಲಿಗೆ ಬಂದ ಶಿವನು ಇದನ್ನು ಕೇಳಿ ಸಿಟ್ಟಿನಿಂದ 'ಸಕಲ ಜಗತ್ತಿನ ಮೂಲ ಶಿವನೆಂದು' ಸಾರಿದನು ಈ ಕಾರಣಕ್ಕಾಗಿ ಬ್ರಹ್ಮ ಮತ್ತು ಶಿವನಲ್ಲಿ ವಾಗ್ವಾದ ನಡೆದಾಗ ವೇದಗಳು ಶಿವನೇ 'ಮಹಾದೇವ'ನೆಂದು ಸಾರಿದವು. ಇದನ್ನು ಒಪ್ಪದಿರಲು ಶಿವನಿಂದ ಬೃಹತ್ ಪ್ರಕಾಶವೊಂದು ಹೊರಹೊಮ್ಮಿ ಶಿವನ ಆಕಾರವನ್ನು ತಾಳಿತು. ಆ ಆಕಾರವೇ ಭೈರವ, ಭೈರವನಿಗೆ ಶಿವನು ಬ್ರಹ್ಮನ ಐದನೇ ತಲೆಯನ್ನು ಕತ್ತರಿಸಲು ಆದೇಶಿಸಿದನು. ಬ್ರಹ್ಮನು ಯೋಗಶಕ್ತಿಯಿಂದ ಸಾವಿನಿಂದ ಪಾರಾದರೂ ತನ್ನ ಪಂಚಶಿರಗಳಲ್ಲೊಂದನ್ನು ಕಳೆದುಕೊಂಡು ಶಿವನ ಶ್ರೇಷ್ಠತೆಯನ್ನು ಅರಿತನು.[೭೫]

ಶಿವಪುರಾಣವು 'ಭೈರವ'ನನ್ನೇ ಶಿವನ ಪೂರ್ಣರೂಪವೆಂದು ತಿಳಿಸುತ್ತಾ, ಮಾಯೆಯಿಂದ ಕೂಡಿರುವ ಜನರು ಇವನ ಮಹತ್ವವನ್ನು ತಿಳಿಯಲಾಗದೆ, ಪೂಜಿಸುವುದಿಲ್ಲ ಎಂದಿದೆ. ಭರಣ–ಎಂದರೆ, ರಕ್ಷಸುವವ ಎಂದರ್ಥ. ಸಕಲ ಜಗತ್ತನ್ನು ಕಾಪಾಡುವವನು ಇವನೇ ಆದ್ದರಿಂದ ಇವನು 'ಭೀಷಣ'. ಇವನನ್ನೇ 'ಕಾಲಭೈರವ' ಎನ್ನುವರು. ಇವನಿಗೆ ಯಮನು ಹೆದರುತ್ತಾನೆ. ದುಷ್ಟರನ್ನು ಮರ್ದಿಸುವ ಇವನು 'ಆಮರ್ದಕ', ಭಕ್ತರ ಪಾಪಗಳನ್ನು ಭಕ್ಷಿಸುವ ಇವನು ಪಾಪಭಕ್ಷಣ; ಇವನೇ ಕಾಶಿಯ ಒಡೆಯನಾದ ಕಾಳಭೈರವ ಎಂದು ಹೇಳುತ್ತದೆ.[೭೬]

ವಾಮನ ಪುರಾಣವು ಭೈರವನ ಮೂಲಕ್ಕೆ ಶಿವ ಹಾಗೂ ಅಂಧಕಾಸುರನ ಹೋರಾಟವನ್ನು ತಿಳಿಸುತ್ತದೆ. ಅಸುರನು ಗದೆಯಿಂದ ಶಿವನ ಎದೆಗೆ ಹೊಡೆದಾಗ ಚಿಮ್ಮಿದ ರಕ್ತಧಾರೆಯಿಂದ ಅಷ್ಟಭೈರವರು ಸೃಷ್ಟಿಯಾದರು. ವಿದ್ಯಾರಾಜ (ಅಗ್ನಿಯಂತೆ ಪ್ರಕಾಶಿಸುತ್ತಿದ್ದ) ಕಾಮರಾಜ (ಶವಾರೂಢನಾದ ಕಾಡಿಗೆಯಂತೆ ಕಪ್ಪಾಗಿರುವವ), ನಾಗರಾಜ (ಭರ್ಜಿಯನ್ನು ಹಿಡಿದಿರುವ), ಸ್ವಚ್ಛಂದರಾಜ (ವಜ್ರಾಯುಧದಂತೆ ಕಂಗೊಳಿಸುತ್ತಿದ್ದ), ಲಂಬಿತರಾಜ (ಫಲವನ್ನು ಹಿಡಿದಿರುವ), ದೇವರಾಜ, ಉಗ್ರರಾಜ, ವಿಘ್ನರಾಜ ಇವರೇ ಮೊದಲಾದ ಅಷ್ಟಭೈರವರು ಸೃಷ್ಟಿಸಿದರು ಎಂದು ಹೇಳಿದೆ.[೭೭]

ಶ್ರೀ ತತ್ವನಿಧಿಯು ಬ್ರಹ್ಮಶಿರಶ್ಛೇದಕ ಮೂರ್ತಿಯು ಬಿಳಿಯ ವರ್ಣದವನಾಗಿದ್ದು, ಮೂರು ಕಣ್ಣು, ನಾಲ್ಕು ಕೈಗಳನ್ನು ಹೊಂದಿರುತ್ತದೆ. ಶಿರದಲ್ಲಿ ಜಟಾಮಕುಟವನ್ನು, ಬಲಗಿವಿಯಲ್ಲಿ ಪತ್ರಕುಂಡಲ ಮತ್ತು ಎಡಗಿವಿಯಲ್ಲಿ ಮಕರ ಕುಂಡಲವನ್ನು ಧರಿಸಿರುತ್ತದೆ; ಈ ಬಿಂಬದ ಬಲಗೈಗಳಲ್ಲಿ ವಜ್ರ, ಪರಶುಗಳಿದ್ದು, ಎಡಗೈಗಳಲ್ಲಿ ಬ್ರಹ್ಮಕಪಾಲ ಮತ್ತು ಶೂಲವಿರುತ್ತದೆ. ಬ್ರಹ್ಮಶಿರಶ್ಛೇದಕ ರೂಪದ ಹುಲಿಚರ್ಮವನ್ನು ತೊಟ್ಟಿರುತ್ತಾನೆ ಎಂದು ತಿಳಿಸುತ್ತದೆ.[೭೮]

ವಿಷ್ಣು ಧರ್ಮೋತ್ತರಪುರಾಣದ ಪ್ರಕಾರ-ಭೈರವನ ಶಿಲ್ಪದಲ್ಲಿ ಭೈರವನಿಗೆ ದೊಡ್ಡದಾದ (ಉಬ್ಬಿದ) ಹೊಟ್ಟೆ, ದುಂಡಾದ ಕಣ್ಣುಗಳು, ಕೋರೆಹಲ್ಲುಗಳು, ಅಗಲವಾದ ಮೂಗಿನ ಹೊಳ್ಳೆಗಳು ಇರುತ್ತವೆ. ರುಂಡಮಾಲೆಯನ್ನು ಧರಿಸಿದ ಭೈರವನು ನಾಗಾಭರಣಗಳನ್ನು ತೊಟ್ಟಿರುತ್ತಾನೆ. ಕಾಳಮೇಘ ವರ್ಣದ ಭೈರವನು ಗಜಚರ್ಮಾಂಬರಧಾರಿ; ಅನೇಕ ಕೈಗಳಲ್ಲಿ ಆಯುಧಗಳನ್ನು ಹಿಡಿದಿರುವ, ಸರ್ಪದೊಂದಿಗೆ ಇರುವ ಇವನ ಬಳಿ ಭೀತಳಾದ ಪಾರ್ವತಿಯು ಇರುತ್ತಾಳೆ.

ಶಾರದತಿಲಕತಂತ್ರವು, ಭೈರವನ ಸಾತ್ವಿಕ, ರಾಜಸ, ತಾಮಸ ರೂಪಗಳನ್ನು ತಿಳಿಸಿದೆ. ಭಾರತದ ದಕ್ಷಿಣದ ಭಾಗದಲ್ಲಿ ಭೈರವನ ಸಾತ್ವಿಕ ರೂಪವು ಹೆಚ್ಚು ಬಳಕೆಯಲ್ಲಿದೆ. ಸಾತ್ವಿಕ ರೂಪದ ಭೈರವನು ಪ್ರಸನ್ನ ವದನದ ದ್ವಿಭುಜದ ಮೂರ್ತಿ; ನಗ್ನ ದೇಹಿಯಾದ ಈ ಭೈರವನ ವಾಹನ ನಾಯಿಯಾಗಿದೆ. ರಾಜಸ ಭೈರವನ ಬಿಂಬದಲ್ಲಿ ಚತುರ್ಭುಜಗಳಿದ್ದು, ಕೈಗಳಲ್ಲಿ ಕ್ರಮವಾಗಿ ಖಡ್ಗ, ಡಮರು, ಪಾಶ ಅಥವಾ ಶೂಲ ಮತ್ತು ರುಂಡವನ್ನು ಹಿಡಿದಿದ್ದು ಈ ರುಂಡವನ್ನು ನಾಯಿ ಕಚ್ಚಿರುತ್ತದೆ. ಜಟಾಮುಕುಟವನ್ನು ಧರಿಸಿದ ನಗ್ನದೇಹಿಯಾದ ಭೈರವನಿಗೆ ನಾಗಾಭರಣಗಳೂ, ರುಂಡಮಾಲೆಯೂ ಇರುತ್ತದೆ. ವಿಶೇಷವಾಗಿ ಭೈರವನ ಪಾದಗಳಲ್ಲಿ, ಅಂದುಗೆ, ಗೆಜ್ಜೆಗಳಲ್ಲದೇ, ಎತ್ತರವಾದ ಪಾದುಕೆಗಳೂ ಇರುತ್ತವೆ; ಸಾಮಾನ್ಯವಾಗಿ ಎಲ್ಲೆಡೆ ಭೈರವನ ಈ ರೂಪದ ಬಿಂಬಗಳು ಕಾಣಬರುತ್ತವೆ. ಭೈರವನ ತಾಮಸಿಕ ರೂಪದಲ್ಲಿ ಭೀಕರ ವದನದ ಬಿಂಬಕ್ಕೆ ಎಂಟು ಕೈಗಳಿರುತ್ತವೆ. ನಾಗಾಭರಣಗಳನ್ನು, ಜಟಾಭಾರವನ್ನೂ ಹೊಂದಿದ ಬಿಂಬದಲ್ಲಿ ಕೋರೆದಾಡೆಗಳು ಇರುತ್ತವೆ.[೭೯]

ರುದ್ರ-ಯಾಮಲವು ಭೈರವನ ೬೪ ರೂಪಗಳನ್ನು ಹೇಳುತ್ತದೆ.[೮೦] ಪ್ರಮುಖವಾದ ಎಂಟು ಭೈರವನ ರೂಪಗಳು. ೧. ಅಸಿತಾಂಗ, ೨. ರುರು, ೩. ಚಂಡ, ೪.ಕ್ರೋಧ, ೫. ಉನ್ಮತ್ತ ಭೈರವ, ೬. ಕಾಪಾಲ, ೭. ಭೀಷಣ, ೮. ಸಂಹಾರ. ಈ ಎಂಟು ಭೈರವನ ರೂಪಗಳಲ್ಲಿ ಪ್ರತಿಯೊಂದು ಮತ್ತೆ ಎಂಟು ಉಪರೂಪಗಳನ್ನು ಹೊಂದಿವೆ. ಅವುಗಳು ಈ ಕೆಳಗಿನಂತಿವೆ.

೧. ಅಸಿತಾಂಗ ರೂಪದಲ್ಲಿ ಅಸಿತಾಂಗ, ವಿಶಾಲಾಕ್ಷ, ಮಾರ್ತಾಂಡ, ಮೋದಕ ಪ್ರಿಯ, ಸ್ವಚ್ಛಂದ, ವಿಘ್ನ-ಸಂತುಷ್ಟ, ಕೇಚರ, ಸಚರಾಚರ. ಇವೆಲ್ಲವುಗಳು ಸ್ವರ್ಣ ವರ್ಣ, ಆಕರ್ಷಕ ದೇಹವನ್ನು ಹೊಂದಿದ್ದು, ತ್ರಿಶೂಲ, ಡಮರು, ಪಾಶ, ಖಡ್ಗ, ಆಯುಧಗಳನ್ನು ಹೊಂದಿರುತ್ತವೆ.

೨. ರುರು ಒಳಗೊಂಡಂತೆ ಕ್ರೋಧದಂಷ್ಟ್ರ, ಜಟಾಧರ, ವಿಶ್ವರೂಪ, ವಿರೂಪಾಕ್ಷ, ನಾನಾ ರೂಪಧರ, ವಜ್ರಹಸ್ತ, ಮಹಾಕಾಯ. ಈ ಗುಂಪಿನ ಭೈರವನ ವರ್ಣವು ಶುದ್ಧ ಶ್ವೇತವರ್ಣ. ಇವರೆಲ್ಲರೂ ಮಾಣಿಕ್ಯಗಳಗೊಂಡ ಆಭರಣಗಳಿಂದ ಅಲಂಕೃತರಾಗಿ ಕೈಗಳಲ್ಲಿ ಅಕ್ಷಮಾಲೆ, ಅಂಕುಶ, ಪುಸ್ತಕ ಮತ್ತು ವೀಣೆಯನ್ನು ಹೊಂದಿರುವರು.

೩. ಚಂಡನನ್ನು ಒಳಗೊಂಡಂತೆ, ಪ್ರಳಯಾಂತಕ, ಭೂಮಿಕಂಪ, ನೀಲಕಂಠ ವಿಷ್ಣು, ಕುಲಪಾಲಕ, ಮುಂಡಪಾಲ ಮತ್ತು ಕಾಮಪಾಲ. ಇವರು ನೀಲ ವರ್ಣದವರಾಗಿದ್ದು, ಸುಂದರರಾಗಿರುವರು. ಇವರ ಹಸ್ತಗಳಲ್ಲಿ ಅಗ್ನಿ, ಶಕ್ತಿ, ಗದೆ ಮತ್ತು ರುಂಡಗಳನ್ನು ಹಿಡಿದಿರುವರು.

೪. ಕ್ರೋಧನನ್ನು ಒಳಗೊಂಡು ಪಿಂಗಳೇಕ್ಷಣ, ಅಭ್ರರೂಪ, ಧರಾಪಾಲ, ಕುಟಿಲ, ಮಂತ್ರನಾಯಕ, ರುದ್ರ ಮತ್ತು ಪಿತಾಮಹ ಇವರೆಲ್ಲರೂ ಧೂಮ್ರ ವರ್ಣದವರಾಗಿದ್ದು ಹಸ್ತಗಳಲ್ಲಿ ಖಡ್ಗ, ಖೇಟಕ, ಉದ್ದನೆಯ ಕತ್ತಿ ಮತ್ತು ಪರಶುವನ್ನು ಹಿಡಿರುತ್ತಾರೆ.

೫. ಉನ್ಮತ್ತ ಭೈರವನನ್ನು ಒಳಗೊಂಡಂತೆ, ವಟುಕ–ನಾಯಕ, ಶಂಕರ, ಭೂತ–ವೇತಾಳ, ತ್ರಿನೇತ್ರ, ತ್ರಿಪುರಾಂತಕ, ವರದ, ಪರ್ವತಾವಾಸ, ಇವರು ಶ್ವೇತ ವರ್ಣಿತರಾಗಿದ್ದು, ಆಕರ್ಷಕ ದೇಹವನ್ನು ಹೊಂದಿರುವರು. ಇವರು ಹಸ್ತಗಳಲ್ಲಿ ರುಂಡ, ಖೇಟಕ, ಪರಿಘ ಮತ್ತು ಭಿಂಡಿಪಾಲವನ್ನು ಹಿಡಿದಿರುವರು.

೬. ಕಪಾಲ, ಶಶಿಭೂಷಣ, ಹಸ್ತಿಚರಮಾಂಬರಧರ, ಯೋಗೀಶ, ಬ್ರಹ್ಮರಾಕ್ಷಸ, ಸರ್ವಜ್ಞ, ಸರ್ವದೇವೇಶ ಮತ್ತು ಸರ್ವ–ಭೂತ ಹೃದಿಸ್ಥಿತ, ಹಳದಿ ವರ್ಣಿತರಾಗಿದ್ದು, ಹಿಂದಿನ ಗುಂಪಿನ ಆಯುಧಗಳನ್ನು ಹೊಂದಿರುವರು.

೭. ಭೀಷಣ, ಭಯಹರ, ಸರ್ವಜ್ಞ, ಕಾಲಾಗ್ನಿ, ಮಹಾರುದ್ರ, ದಕ್ಷಿಣ, ಮುಖರ ಮತ್ತು ಅಸ್ಥಿರ ಇವರು ಕೆಂಪು ವರ್ಣಿತರಾಗಿದ್ದು, ಹಿಂದಿನ ಗುಂಪಿನ ಆಯುಧಗಳನ್ನು ಹೊಂದಿರುವರು.

೮. ಸಂಹಾರ ಭೈರವನನ್ನು ಒಳಗೊಂಡು ಅತಿರೀಕ್ತಾಂಗ, ಕಾಲಾಗ್ನಿ, ಪ್ರಿಯಂಕರ, ಘೋರನಾದ, ವಿಶಾಲಾಕ್ಷ, ಯೋಗೀಶ, ದಕ್ಷ–ಸಂಸ್ಥಿತ, ಇವರೂ ಸಹ ಹಿಂದಿನ ಗುಂಪಿನ ಆಯುಧಗಳನ್ನು ಹೊಂದಿರುವರು.

ಹೀಗೆ ಶಿವನ ಸಂಹಾರ ಮೂರ್ತಿಗಳಲ್ಲಿ ಒಂದಾದ ಭೈರವನು ಅನೇಕ ರೂಪಗಳಲ್ಲಿ ಆರಾಧಿಸಲ್ಪಡುತ್ತಾನೆ. ಪ್ರಸ್ತುತ ಈ ೬೪ ಭೈರವ ರೂಪದ ಶಿಲ್ಪಗಳನ್ನು ಆದಿಚುಂಚನಗಿರಿಯ ಶ್ರೀಕಾಲಭೈರವೇಶ್ವರ ದೇವಾಲಯದಲ್ಲಿ ಕಂಡುಬರುತ್ತವೆ.

ಹಂಪಿಯು ಮೊದಲು ಭೈರವನ ಆರಾಧನಾ ಕೇಂದ್ರವಾಗಿತ್ತು. ಇದನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ. ಹಂಪಿಗೆ ಸಮೀಪದಲ್ಲಿ ಗೋನಾಳು ಎಂಬ ಗ್ರಾಮದಲ್ಲಿ ದೊರೆತ ಕ್ರಿ.ಶ.೧೦೧೪ರ ಶಾಸನದ[೮೧] ಪ್ರಕಾರ ಹಂಪೆಯ ಮಹಾಕಾಳ ದೇವರಿಗೆ ಇರಿವ ನೊಳಂಬಾಧಿರಾಜನ ಅರಸಿ ವೃದ್ಧಿಮಬ್ಬರಸಿ ಎಂಬುವಳು ಕೆಲವೊಂದು ತೆರಿಗೆಗಳನ್ನು ದಾನವಾಗಿ ಕೊಟ್ಟುದುದನ್ನು ತಿಳಿಸುತ್ತದೆ. ಇದು ಹಂಪಿಯಲ್ಲಿನ ಮಹಾಕಾಳ ದೇವಾಲಯವಿದ್ದುದನ್ನು ನೇರವಾಗಿ ತಿಳಿಸುತ್ತದೆ. ಹಾಗೆಯೇ ಕ್ರಿ.ಶ.೧೧೯೯ರ ಶಾಸನವು[೮೨] ಮೈದುನ ಚೌಡನೆಂಬುವವನು ಪಂಪಾದೇವಿಗೆ ಚಿನ್ನದ ಕಲಶಗಳನ್ನು ಮಾಡಿಸುತ್ತಾನೆ. ಹಾಗೂ ಭೈರವ ಗೃಹಕ್ಕೆ ಸುಣ್ಣ ಬಳಿಸುತ್ತಾನೆ. ಮತ್ತು ಇನ್ನೂ ಅನೇಕ ದಾನಗಳನ್ನು ನೀಡಿದ ಉಲ್ಲೇಖವಿದೆ. ಹೀಗೆ ಇಂತಹ ಶಾಸನಗಳ ಉಲ್ಲೇಖದಿಂದ ಹಂಪಿ ಪರಿಸರದಲ್ಲಿ ಭೈರವನ ಆರಾಧನೆ ಇತ್ತೆಂಬುದು ಸ್ಪಷ್ಟ. ಆದರೆ ಭೈರವನಿಗಾಗಿ ನಿರ್ಮಿಸಲ್ಪಟ್ಟ ದೇವಾಲಯಗಳು ಕಡಿಮೆ ಪ್ರಮಾಣದಲ್ಲಿವೆ. ಭೈರವ ಮುಖ್ಯ ದೇವತೆಯಾಗಿ ಪೂಜಿಸಲ್ಪಡದೇ ಪರಿವಾರ ದೇವತೆಯಾಗಿ ಪೂಜಿಸಲ್ಪಟ್ಟಿರುವುದು ಹೆಚ್ಚು. ಈತನು ಕ್ಷೇತ್ರಪಾಲನಾಗಿಯೂ ದ್ವಾರ ಬಾಗಿಲುಗಳ ಬಳಿಯಲ್ಲಿಯೂ ಕಂಡುಬಂದಿರುವನು.[೮೩] ಹಾಗೆಯೇ ಹಂಪಿಯಲ್ಲಿ ಭೈರವನ ಶಿಲ್ಪಗಳು ಹೆಚ್ಚಾಗಿ ನೈಸರ್ಗಿಕ ಬಂಡೆಗಳ ಮೇಲೆಯೇ ಹೆಚ್ಚು ಕಂಡುಬರುತ್ತವೆ.

ಹಂಪಿ ಪರಿಸರದಲ್ಲಿ ಇರುವ ಪ್ರತಿಯೊಂದು ದೇವಾಲಯ, ಮಂಪಟದ ಕಂಬಗಳಲ್ಲಿ ಭೈರವನ ಶಿಲ್ಪಗಳು ಕಂಡುಬರುತ್ತವೆ. ವೈಷ್ಣವ ದೇವಾಲಯಗಳಲ್ಲಿ ಶೈವ ಶಿಲ್ಪಗಳು ಹೆಚ್ಚಾಗಿ ಕಂಡುಬರುವುದಿಲ್ಲ ಎಂಬುದು ಸತ್ಯವಾದರೂ ಹಜಾರರಾಮ ದೇವಾಲಯ, ವಿಠಲ ದೇವಾಲಯ, ಬಾಲಕೃಷ್ಣದೇವಾಲಯ ಮುಂತಾದ ಮುಖ್ಯ ದೇವಾಲಯಗಳಲ್ಲಿಯೂ ಭೈರವನ ಶಿಲ್ಪಗಳು ದೊರೆಯುತ್ತವೆ. ಹಾಗೆಯೇ ಮೇಲೆ ಹೇಳಿದಂತೆ ಬೆಟ್ಟ ಪ್ರದೇಶಗಳಲ್ಲಿ ಎಲ್ಲೆಂದರಲ್ಲಿ ನೈಸರ್ಗಿಕ ಬಂಡೆಗಳ ಮೇಲೆ ಭೈರವನ ಶಿಲ್ಪಗಳು ಕಂಡುಬರುತ್ತವೆ. ಸಂಖ್ಯೆಯ ತುಲನೆ ಮಾಡುವುದಾದರೆ ವೀರಭದ್ರ ಶಿಲ್ಪಗಳಿಗಿಂತಲೂ ಭೈರವನ ಶಿಲ್ಪಗಳೇ ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿವೆ.

ಒಟ್ಟಾರೆ ಹಂಪಿ ಪರಿಸರದಲ್ಲಿ ಎಲ್ಲ ದೇವಾಲಯ, ಮಂಟಪಗಳ ಕಂಬಗಳಲ್ಲಿ ಭೈರವ ಶಿಲ್ಪವು ಕಂಡುಬರುತ್ತವೆ. ಇಲ್ಲಿ ದೊರೆಯುವ ಎಲ್ಲ ಭೈರವನ ಶಿಲ್ಪಗಳು ಸಾಮಾನ್ಯವಾಗಿ ಚತುರ್ಭುಜಗಳನ್ನು ಹೊಂದಿದ್ದು ಬಲಭಾಗದ ಕೈಗಳಲ್ಲಿ ಖಡ್ಗ, ತ್ರಿಶೂಲ ಹಾಗೂ ಎಡಭಾಗದ ಕೈಗಳಲ್ಲಿ ಕಪಾಲ, ಡಮರುಗವನ್ನು ಹಿಡಿದಿರುವವು. ಕಪಾಲ ಹಿಡಿದ ಹಸ್ತಕ್ಕೆ ಮನುಷ್ಯನ ರುಂಡಭಾಗವೊಂದು ನೇತಾಡುತ್ತಿರುತ್ತದೆ. ಭೈರವನು ತ್ರಿಭಂಗದಲ್ಲಿ ನಿಂತಿದ್ದು, ನಗ್ನ ದೇಹಿಯಾಗಿರುವನು. ಜಟಾಭಾರ ಅಥವಾ ಕೇಶಗಳನ್ನು ಜ್ವಾಲೆಯ ರೂಪದಲ್ಲಿ ಕೆತ್ತಲಾಗಿದೆ. ತ್ರಿನೇತ್ರ, ಕರ್ಣಕುಂಡಲಗಳು, ಕೊರಳಹಾರಗಳು, ವಕ್ಷಬಂಧ, ಯಜ್ಞೋಪವೀತ, ಅಲಂಕೃತ ಕಟಿಸೂತ್ರ ಅಥವಾ ಉದರಬಂಧ, ಉದ್ದನೆಯ ರುಂಡಮಾಲೆಯನ್ನು ಧರಿಸಿರುವನು. ಎಡಗೈಯಲ್ಲಿ ಹಿಡಿದ ರುಂಡವನ್ನು ನಾಯಿಯೊಂದು ಕಚ್ಚಿರುತ್ತದೆ. ಪಾದದ ಬಳಿ ಸರ್ಪಗಳು, ಚೇಳುಗಳನ್ನು ಸಾಮಾನ್ಯವಾಗಿ ಕೆತ್ತಲಾಗಿದೆ. ಎಲ್ಲ ಪ್ರತಿಮಾ ಲಕ್ಷಣಗಳು ಹಂಪಿ ಪರಿಸರದಲ್ಲಿ ಕಂಡುಬರುವ ಭೈರವನ ಪ್ರತಿಮಾ ಲಕ್ಷಣಗಳಾಗಿವೆ. ಇವುಗಳನ್ನು ಹೊರತು ಪಡಿಸಿಯೂ ಕೆಲವೊಂದು ಭಿನ್ನ ಪ್ರತಿಮಾ ಲಕ್ಷಣಗಳುಳ್ಳ ಶಿಲ್ಪಗಳು ದೊರೆಯುತ್ತವೆ.

ವಿರೂಪಾಕ್ಷ ದೇವಾಲಯದಲ್ಲೊಂದು ವಿಭಿನ್ನವಾದ ಭೈರವ ಮೂರ್ತಿ ಇದೆ. ನೂರು ಕಂಬಗಳ ಮಂಟಪದ ೨೭ನೇ ಕಂಬದಲ್ಲಿ ಕಂಡುಬರುತ್ತದೆ. ಇಲ್ಲಿ ಭೈರವನು ಚತುರ್ಭುಜಗಳನ್ನು ಹೊಂದಿದ್ದು, ಸಮಭಂಗದಲ್ಲಿ ಸ್ಥಾನಿಕನಾಗಿರುವನು. ಜಟಾಭಾರ, ಕರ್ಣಕುಂಡಲ, ಕೊರಳಹಾರ, ಯಜ್ಞೋಪವೀತ ಕಟಿಸೂತ್ರ, ಕಂಕಣಗಳನ್ನು ಹೊಂದಿದ್ದು ನಗ್ನವಾಗಿರುವನು. ಚತುರ್ಭುಜಗಳಲ್ಲಿ ಬಲಭಾಗದ ಮುಂದಿನ ಹಸ್ತವು ಅಭಯ ಮುದ್ರೆಯಲ್ಲಿದ್ದು, ಹಿಂದಿನದು ಡಮರುವನ್ನು ಹಿಡಿದಿರುತ್ತದೆ. ಎಡಭಾಗದ ಕೈಗಳಲ್ಲಿ ಮುಂದಿನದು ವರದ ಮುದ್ರೆಯಲ್ಲಿದ್ದು, ಹಿಂದಿನದು ತ್ರಿಶೂಲವನ್ನು ಹಿಡಿದುಕೊಂಡಿರುವನು. ಉದ್ದನೆಯ ರುಂಡಮಾಲೆ ಧರಿಸಿದ್ದು ಭೈರವನ ಬಲಕ್ಕೆ ಮುಖಮಾಡಿ ನಿಂತಿರುವ ನಾಯಿಯನ್ನು ತೋರಿಸಲಾಗಿದೆ. ಈ ಶಿಲ್ಪದಲ್ಲಿ ಅಭಯ ಮತ್ತು ವರದ ಮುದ್ರೆಗಳನ್ನು ತೋರಿಸಿರುವುದು ವಿಶೇಷ ಎನ್ನಬಹುದು.

ಇನ್ನೊಂದು ಆಕರ್ಷಕ ಭೈರವ ಶಿಲ್ಪವೆಂದರೆ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ವಸ್ತುಸಂಗ್ರಹಾಲಯದಲ್ಲಿದೆ. ಇದು ಕಪ್ಪು ಶಿಲೆಯನ್ನು ಬಳಸಿ ಕೆತ್ತಿರುವ ದುಂಡುಶಿಲ್ಪ. ಸುಮಾರು ೭ ಅಡಿ ಎತ್ತರವಿರುವ ಈ ಶಿಲ್ಪವು ನೋಡಲು ಆಕರ್ಷಕವಾಗಿದೆ. ಭೈರವನು ಚತುರ್ಭುಜಗಳನ್ನು ಹೊಂದಿದ್ದು, ಖಡ್ಗ, ಡಮರು, ಕಪಾಲ ಹಾಗೂ ತ್ರಿಶೂಲವನ್ನು ಹಿಡಿದಿರುವನು. ಉರಿಯುತ್ತಿರುವ ಜ್ವಾಲೆಯಂತಹ ಕೇಶಾಲಂಕರಣೆ, ಕೊರಳಲ್ಲಿ ರುದ್ರಾಕ್ಷಿ ಮಾಲೆ, ವಕ್ಷ ಬಂಧ, ಭುಜವಳಯ, ಬಾಹುವಳಯ,

ಕಂಕಣಗಳನ್ನು, ಕಾಲ್ಕಡಗಗಳನ್ನು ಹಾಗೂ ಉದ್ದನೆಯ, ರುಂಡಮಾಲೆಯನ್ನು ಧರಿಸಿರುವನು. ಭೈರವನ ಹಿಂದೆ ನಾಯಿಯಿದ್ದು ಭೈರವನು ಹಿಡಿದಿರುವ ಕಪಾಲವನ್ನು ಕಚ್ಚಿರುವುದು. ಈ ಶಿಲ್ಪದಲ್ಲಿ ಸಾಮಾನ್ಯ ಲಕ್ಷಣಗಳಿದ್ದರೂ ಇದು ಬಳಪದ ಕಲ್ಲಿನಲ್ಲಿ ನಿರ್ಮಿಸಿದ ಶಿಲ್ಪವಾಗಿರುವುದು ವಿಶೇಷ. ಸಾಮಾನ್ಯವಾಗಿ ಹಂಪಿ ಪರಿಸರದಲ್ಲಿ ಇಂತಹ ಶಿಲೆಯನ್ನು ಬಳಸಿರುವುದು ಅಪರೂಪ.

ಭೈರವನ ಮೂರ್ತಿಯು ಕೆಲವೊಮ್ಮೆ ನೃತ್ಯಭಂಗಿಯಲ್ಲಿಯೂ ಕೆತ್ತಲ್ಪಟ್ಟಿದೆ. ಇಂತಹ ಶಿಲ್ಪಗಳು ಹಜಾರರಾಮಚಂದ್ರ ದೇವಾಲಯದ ಮುಖ್ಯ ದ್ವಾರ ಗೋಪುರದಲ್ಲಿ ಮತ್ತು ಜಂಬುನಾಥ ದೇವಾಲಯದ ಮಹಾಮಂಟಪದ ೨೩ನೇ ಕಂಬದಲ್ಲಿ ಪ್ರಮುಖವಾಗಿ ಕಂಡುಬರುತ್ತವೆ. ಹಜಾರರಾಮ ದೇವಾಲಯದಲ್ಲಿರುವ ಭೈರವನು ನೃತ್ಯಭಂಗಿಯಲ್ಲಿರುವನು. ಚತುರ್ಭುಜಗಳನ್ನು ಹೊಂದಿರುವ ಈತನು ಬಲಭಾಗದ ಕೈಗಳಲ್ಲಿ ಖಡ್ಗ, ತ್ರಿಶೂಲಗಳಿದ್ದು, ಎಡಭಾಗದ ಕೈಗಳಲ್ಲಿ ಮುಂದಿನ ರುಂಡವನ್ನು ವಿಶಿಷ್ಟ ಭಂಗಿಯಲ್ಲಿ ಹಿಡಿದಿದ್ದು, ಅದನ್ನು ಕೆಳಗೆ ನಿಂತ ನಾಯಿಯು ಕತ್ತನ್ನು ಮೇಲೆತ್ತಿ ನೋಡುತ್ತಿರುವಂತೆ ಕೆತ್ತಲಾಗಿದೆ. ಹಿಂದಿನ ಕೈಯಲ್ಲಿ ಡಮರುಗವಿದ್ದು ಅದನ್ನು ಕೆಳಮುಖ ಮಾಡಿ ಹಿಡಿದಿರುವನು. ಜಟಾಭಾರ, ಕರ್ಣಕುಂಡಲಗಳು, ಕೊರಳಹಾರ, ಕಟಿ ಆಭರಣ ಉದ್ದನೆಯ ರುಂಡಮಾಲೆಯನ್ನು ಧರಿಸಿದ್ದು, ನಗ್ನವಾಗಿರುವನು. ಎರಡೂ ಕಾಲುಗಳನ್ನು ಒಳಗೊಂಡಂತೆ ನಾಗಬಂಧವನ್ನು ತೋರಿಸಲಾಗಿದೆ. ಭೈರವ ಶಿಲ್ಪದ ಬಲಕ್ಕೆ ಕೃಷ ದೇಹದ ಒಬ್ಬ ವ್ಯಕ್ತಿಯು ಮುಂದೆ ಮಡಕೆಯೊಂದನ್ನು ಇರಿಸಿಕೊಂಡು ದೀನನಾಗಿ ಅಂಜಲಿ ಮುದ್ರೆಯಲ್ಲಿ ಭೈರವನನ್ನು ನೋಡುತ್ತಾ ಕುಳಿತಿರುವಂತೆ ಕೆತ್ತಲಾಗಿದೆ.

ಹಾಗೆಯೇ ವಿಠಲ ದೇವಾಲಯದ ಮುಖ್ಯ ದ್ವಾರಗೋಪುರದಲ್ಲಿ ಗಾರೆಯಲ್ಲಿರುವ ಭೈರವನ ಶಿಲ್ಪವು ನೃತ್ಯಭಂಗಿಯಲ್ಲಿದೆ. ಈ ಶಿಲ್ಪವು ಷಡ್ಭುಜಗಳನ್ನು ಹೊಂದಿದ್ದು, ಬಲಗೈಗಳಲ್ಲಿ ಖಡ್ಗ, ತ್ರಿಶೂಲ, ನಾಗಸರ್ಪಗಳನ್ನು ಹಿಡಿದಿದ್ದು, ಎಡಗೈಗಳಲ್ಲಿ ಡಮರು, ಘಂಟೆ, ಕಪಾಲಗಳನ್ನು ಹಿಡಿದಿರುವನು. ಈ ಶಿಲ್ಪವು ಜಟಾಭಾರವನ್ನು ಹೊಂದಿದ್ದು, ಕೊರೆಹಲ್ಲುಗಳನ್ನು ತೋರಿಸಿರುವುದರಿಂದ ಮುಖದಲ್ಲಿ ರೌದ್ರಭಾವವನ್ನು ತೋರಿಸಲಾಗಿದೆ. ಕರ್ಣಕುಂಡಲ, ಯಜ್ಞೋಪವೀತ, ನಾಗವಕ್ಷಬಂಧ, ಕಟಿ ಆಭರಣ ಗಳನ್ನು ಹೊಂದಿದ್ದು ನಗ್ನನಾಗಿರುವನು.

ಜಂಬುನಾಥ ದೇವಾಲಯದಲ್ಲಿರುವ ಶಿಲ್ಪವೂ ಸಹ ನೃತ್ಯಭಂಗಿಯಲ್ಲಿರುವುದು. ಈ ಶಿಲ್ಪದಲ್ಲಿ ಭೈರವನು ಬಲಗೈನಲ್ಲಿರುವ ಖಡ್ಗವನ್ನು ಕೆಳಮುಖ ಮಾಡಿ ಹಿಡಿದಿರುವನು. ಹಿಂದಿನ ಬಲಗೈಯಲ್ಲಿ ತ್ರಿಶೂಲವಿದ್ದು, ಎಡಭಾಗದ ಹಸ್ತಗಳಲ್ಲಿ ಮುಂದಿನದು ಕಪಾಲವನ್ನು(ರುಂಡ) ಹಿಂದಿನದು ಡಮರುವನ್ನು ಹಿಡಿದಿರುತ್ತದೆ. ಕಪಾಲವನ್ನು ನಾಯಿಯು ಕಚ್ಚುತ್ತಿರುವಂತೆ ಕೆತ್ತಲಾಗಿದೆ. ಇನ್ನೊಂದು ಭೈರವನ ವಿಭಿನ್ನ ಶಿಲ್ಪವು ಕಮಲ್ ಮಹಲ್‌ನ ಹಿಂಭಾಗದಲ್ಲಿರುವ ಬೆಟ್ಟ ಪ್ರದೇಶದಲ್ಲಿ ನೈಸರ್ಗಿಕ ಬಂಡೆಯ ಮೇಲೆ ಕಂಡುಬರುತ್ತದೆ. ಇಲ್ಲಿರುವ ಭೈರವನು ಸಾಮಾನ್ಯವಾದ ಲಕ್ಷಣಗಳನ್ನು ಹೊಂದಿರುವನು. ಈ ಶಿಲ್ಪಕ್ಕೆ ದೇವಕೋಷ್ಠಕದ ಅಲಂಕರಣೆಯಿದ್ದು, ಈ ದೇವಕೋಷ್ಠದ ಬಲಕ್ಕೆ ಭೈರವ ಶಿಲ್ಪದಷ್ಟೇ ಎತ್ತರದ ಏಳು ಹೆಡೆಯ ನಾಗಸರ್ಪವನ್ನು ಹಾಗೂ ಎಡಭಾಗಕ್ಕೆ ಕೆಳಮುಖ ಮಾಡಿರುವ ಚೇಳನ್ನು ಕೆತ್ತಿರುವರು. ಹೀಗೆ ನಾಗಸರ್ಪ ಮತ್ತು ಚೇಳು ದ್ವಾರಪಾಲಕರೆಂಬಂತೆ ಕೆತ್ತಿರುವುದು ವಿಶೇಷವೆನ್ನಬಹುದು.

ಒಟ್ಟಾರೆ ಹಂಪಿ ಪರಿಸರದಲ್ಲಿ ಒಟ್ಟು ೧೦೦ಕ್ಕಿಂತಲೂ ಹೆಚ್ಚು ಭೈರವ ಶಿಲ್ಪಗಳು ಕಂಡುಬರುತ್ತಿದ್ದು, ಇಷ್ಟು ಪ್ರಮಾಣದ ಶಿಲ್ಪಗಳು ದೊರೆಯುವುದರಿಂದ ಭೈರವನೂ ವಿರೂಪಾಕ್ಷನಂತೆ ಮುಖ್ಯ ಆರಾಧಕ ದೇವತೆಯಾಗಿ ಕಂಡುಬರುತ್ತಾನೆ.



ಭೈರವ, ವಿರೂಪಾಕ್ಷ ದೇವಾಲಯ, ಹಂಪಿ



ಭೈರವ ವಿಠಲ, ದೇವಾಲಯದ ದ್ವಾರಗೋಪುರ, ಹಂಪಿ



ಭೈರವ. ವಸ್ತುಸಂಗ್ರಹಾಲಯ. ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ. ಕಮಲಾಪುರ



ಭೈರವ. ಹಜಾರರಾಮ ದೇವಾಲಯ. ಹಂಪಿ



ಭೈರವ, ಜನಾನ ಆವರಣದ ಈಶಾನ್ಯಕ್ಕಿರುವ ಬೆಟ್ಟದ ನೈಸರ್ಗಿಕ ಬಂಡೆಯ ಮೇಲೆ, ಹಂಪಿ



ಭೈರವ, ಜಂಬುನಾಥ ದೇವಾಲಯ, ಹೊಸಪೇಟೆ

## ಭೈರವ ಶಿಲ್ಪಗಳು

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ | ಒಟ್ಟು ಸಂಖ್ಯೆ |
|---|---|---|---|---|
| ಹಂಪಿ | ವಿರೂಪಾಕ್ಷ | ಮಹಾರಂಗಮಂಟಪದ ೧ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ಮಹಾಮಂಟಪದ ೩೬ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ಮಹಾಮಂಟಪದ ೩೮ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ಎಡಬದಿಯ ಪ್ರಾಕಾರ ಮಂಟಪದ ೩೭ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೨೭ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೩೬ನೇ ಕಂಬ | ೧ | |

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ | ಒಟ್ಟು ಸಂಖ್ಯೆ |
| --- | --- | --- | --- | --- |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೧೦೬ನೇ ಕಂಬ | ೧ | |
| ಹಂಪಿ | ವಿರೂಪಾಕ್ಷ | ದೇವಾಲಯ ಪರಿವಾಲಯದ ಗರ್ಭಗೃಹದಲ್ಲಿ | ೧ | ೮ |
| ಹಂಪಿ | ಕೋಟಿಲಿಂಗ | ಕೋಟಿಲಿಂಗ ಸ್ಥಳದಲ್ಲಿನ ಶೈವ ದೇವಾಲಯದ ಹೊರಗೋಡೆ ಸೇರಿದಂತೆ ಬೇರೆ ಬೇರೆ ಬಂಡೆಗಳ ಮೇಲೆ | ೬ | ೬ |
| ಹಂಪಿ | ಅಚ್ಯುತರಾಯ | ನೂರು ಕಂಬಗಳ ಮಂಟಪದ ೧೪ನೇ ಕಂಬ | ೧ | |
| ಹಂಪಿ | ಅಚ್ಯುತರಾಯ | ನೂರು ಕಂಬಗಳ ಮಂಟಪದ ೫೪ನೇ ಕಂಬ | ೧ | |
| ಹಂಪಿ | ಅಚ್ಯುತರಾಯ | ನೂರು ಕಂಬಗಳ ಮಂಟಪದ ೮೧ನೇ ಕಂಬ | ೧ | ೩ |
| ಹಂಪಿ | ವರಹಾ ದೇವಾಲ ಲಯದ ಬಳಿಯ ಲ್ಲಿರುವ ಪಾಳು ಬಿದ್ದ ದೇವಾಲಯ | ಪ್ರಾಕಾರ ಮಂಟಪದ ೧ನೇ ಕಂಬ<br>ಪ್ರಾಕಾರ ಮಂಟಪದ ೧೧ನೇ ಕಂಬ | ೧<br>೧ | ೨ |
| ಹಂಪಿ | ವಿಠಲ | ದೇವಾಲಯದ ಮುಖ್ಯ ದ್ವಾರ ಗೋಪುರದಲ್ಲಿನ ಗಾರೆಶಿಲ್ಪ | ೧ | |
| ಹಂಪಿ | ವಿಠಲ | ದೇವಾಲಯದ ಮುಖ್ಯ ದ್ವಾರಗೋಪುರದಲ್ಲಿನ ಎಡಕ್ಕಿರುವ ಮಂಟಪದ ೨ನೇ ಕಂಬ | ೧ | |
| ಹಂಪಿ | ವಿಠಲ | ದೇವಾಲಯದ ಮುಖ್ಯ ದ್ವಾರಗೋಪುರದಲ್ಲಿನ ಎಡಕ್ಕಿರುವ ಮಂಟಪ ೪ನೇ ಕಂಬ | ೧ | ೩ |
| ಹಂಪಿ | ಕಡಲೆಕಾಳು ಗಣೇಶ | ಮಂಟಪದ ೧ನೇ ಕಂಬ | ೧ | ೧ |
| ಹಂಪಿ | ಕೃಷ್ಣದೇವಾಲಯದ ಸಮೀಪಕ್ಕೆ ಪ್ರಾಚೀನ ರಸ್ತೆ ಬಳಿ | ಒಂದು ಮಂಟಪದ ಒಳಭಾಗದಲ್ಲಿ ನಿಲ್ಲಿಸಲಾಗಿದೆ | ೧ | ೧ |
| ಹಂಪಿ | ಉದ್ದಾನ ವೀರಭದ್ರ ದೇವಾಲಯ | ದೇವಾಲಯದ ಹೊರ ಆವರಣದಲ್ಲಿ | ೧ | ೧ |
| ಹಂಪಿ | ಹಜಾರರಾಮ | ದ್ವಾರ ಗೋಪುರದ ಅಧಿಷ್ಠಾನ ಭಾಗ ಹಾಗೂ ಕಂಬ | ೨ | |
| ಹಂಪಿ | ಹಜಾರರಾಮ | ದೇವಾಲಯದ ಮುಖಮಂಟಪದ ೧೨ನೇ ಕಂಬ | ೧ | |
| ಹಂಪಿ<br>ಹಂಪಿ | ಹಜಾರರಾಮ | ದೇವಾಲಯದ ದಕ್ಷಿಣ ದಿಕ್ಕಿನ ಪ್ರವೇಶ ದ್ವಾರದಲ್ಲಿನ ಮಂಟಪದ ೧ನೇ ಕಂಬ | ೧ | |
| ಹಂಪಿ | ಹಜಾರರಾಮ | ಆವರಣದಲ್ಲಿರುವ ಪರಿವಾರ ದೇವಾಲಯದ ೬ನೇ ಕಂಬ | ೧ | ೫ |
| ಹಂಪಿ | ರಾಜ್ಯ ಪುರಾತತ್ವ ಮತ್ತು ಸಂಗ್ರಹಾಲಯ ಗಳ ಉಪ ನಿರ್ದೇ ಶಕರ ಕಚೇರಿ | ವಸ್ತು ಸಂಗ್ರಹಾಲಯದ ಹೊರ ಆವರಣ | ೧ | ೧ |

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ | ಒಟ್ಟು ಸಂಖ್ಯೆ |
|---|---|---|---|---|
| ಹಂಪಿ | ಕಮಲ್‌ಮಹಲ್‌ನ ಹಿಂಭಾಗ | ಈ ಪ್ರದೇಶದಲ್ಲಿ ಬೇರೆ ಬೇರೆ ನೈಸರ್ಗಿಕ ಬಂಡೆಗಳ ಮೇಲೆ ಕಂಡರಿಸಿರುವ | ೪ | ೪ |
| ಹಂಪಿ | ಕುದುರೆ ಲಾಯ | ವಸ್ತು ಸಂಗ್ರಹಾಲಯದ ಒಳ ಆವರಣದಲ್ಲಿ ಪ್ರದರ್ಶಿಸಲಾಗಿದೆ | ೭ | ೭ |
| ಕಮಲಾಪುರ | ಪ್ರಸನ್ನ ವಿರೂಪಾಕ್ಷ | ಮಹಾಮಂಟಪದ ಉತ್ತವ ಮಂಟಪದ ೧೦ನೇ ಕಂಬ | ೨ | ೨ |
| ಕಮಲಾಪುರ | ಭಾರತೀಯ ಪುರ ತತ್ವ ಸರ್ವೇಕ್ಷಣಾ ಇಲಾಖೆ ವಸ್ತು ಸಂಗ್ರಹಾಲಯ | ಒಳ ಆವರಣದಲ್ಲಿನ ಶಿಲ್ಪಗಳು<br>ಹೊರ ಆವರಣದಲ್ಲಿನ ಶಿಲ್ಪಗಳು | ೧೦<br>೨೩ | ೩೩ |
| ಕಮಲಾಪುರ | ರಾಘವೇಂದ್ರಮಠ | ಮಂಟಪದ ೧ನೇ ಕಂಬ | ೧ | ೧ |
| ಆನೆಗೊಂದಿ | ವಿಜಯಲಕ್ಷ್ಮಿ | ದೇವಾಲಯದ ಒಳಭಾಗದಲ್ಲಿನ ಶೈವ ದೇವಾಲಯದಲ್ಲಿ | ೨ | |
| ಆನೆಗೊಂದಿ | ದುರ್ಗಾದೇವಾಲಯ ಬಳಿಯಲ್ಲಿರುವ ಈಶ್ವರ ದೇವಾಲಯ | ದುರ್ಗಾದೇವಾಲಯದ ಬಳಿಯ ಈಶ್ವರ ದೇವಾಲಯದ ಒಳಗೆ ಕೊಷ್ಠದಲ್ಲಿ | ೧ | |
| ಆನೆಗೊಂದಿ | ದುರ್ಗಾದೇವಾಲಯ ಬಳಿಯಲ್ಲಿರುವ ಈಶ್ವರ ದೇವಾಲಯ | ದುರ್ಗಾ ದೇವಾಲಯಕ್ಕೆ ಹೋಗುವ ಮಾರ್ಗದಲ್ಲಿ ಎರಡು ಬೇರೆ ಬೇರೆ ಸ್ಥಳಗಳಲ್ಲಿ ನೈಸರ್ಗಿಕ ಬಂಡೆಗಳ ಮೇಲೆ | ೨ | ೫ |
| ವೆಂಕಟಾಪುರ | ಮಧುವನ ಹನುಮಾನ ದೇವಾಲಯ | ದೇವಾಲಯದ ಪ್ರಾಕಾರ ಗೋಡೆಯ ಹೊರಭಾಗ | ೧ | |
| ವೆಂಕಟಾಪುರ | ಗುಡ್ಡದ ತಿಮ್ಮಪ್ಪ | ದೇವಾಲಯಕ್ಕೆ ಹೋಗುವ ಮಾರ್ಗದಲ್ಲಿ ನೈಸರ್ಗಿಕ ಬಂಡೆಯಲ್ಲಿ | ೧ | ೨ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೫ನೇ ಕಂಬ | ೧ | |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೧೮ನೇ ಕಂಬ | ೧ | |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೨೩ನೇ ಕಂಬ | ೧ | |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೩೪ನೇ ಕಂಬ | ೧ | ೪ |
| ತಿಮ್ಮಲಾಪುರ | ತ್ರಿಕೂಟ | ನವರಂಗದ ೫ನೇ ಕಂಬ | ೧ | |
| ತಿಮ್ಮಲಾಪುರ | ತ್ರಿಕೂಟ | ನವರಂಗದ ೧೦ನೇ ಕಂಬ | ೧ | ೨ |
| | | ಒಟ್ಟು | ೬೧ | ೬೧ |

**ಮೈಲಾರ**

ಅನಂತನಂದಗಿರಿಯು 'ಶಂಕರ ವಿಜಯ' ಕೃತಿಯಲ್ಲಿ ಉಜ್ಜಯಿನಿಯ 'ಮಲ್ಲ'ನನ್ನು ಉಲ್ಲೇಖಿಸಲಾಗಿದೆ. ಅಲ್ಲಿ ವಾಸವಿರುವ ಒಂದು ಪಂಥವು ಶಿವನನ್ನು ಮಲ್ಲಾರಿಯ ರೂಪದಲ್ಲಿ ಪೂಜಿಸುವರು.[೮೪] ಮಹಾರಾಷ್ಟ್ರದಲ್ಲಿ ಇವನನ್ನು ಖಂಡೋಬ ಎಂದು ಕರೆಯುತ್ತಾರೆ ಹಾಗೂ

ಖಂಡೇರಾಯ, ಮೈಲಾರ, ರಾವುಲನಾಥ ಎಂದು ಮೊದಲಾಗಿಯೂ ಕರೆಯುತ್ತಾರೆ. ಶಿವನ ಅವತಾರದ ಮಾರ್ತಾಂಡ ಭೈರವನೇ ಇವನೆಂದು ಪ್ರತೀತಿಯಿದೆ. ಮಲ್ಲನೆಂಬ ರಾಕ್ಷಸನನ್ನು ಕೊಂದು ಮಲ್ಲಾರಿಯಾದ. ವೀರಪೂಜೆಯ ನೆಲೆಯಲ್ಲಿ ಬೆಳೆದುಬಂದ ಜಾನಪದ ದೇವತೆ ಇವನೆಂಬುದು ಸ್ಪಷ್ಟವಾಗಿದೆ. ವಿಷ್ಣುವು ಸಂಹರಿಸಿದ ಮಧು–ಕೈಟಭ ದೈತ್ಯರ ಅವಶೇಷಗಳಿಂದ ಮೈದಳೆದ ಮಣಿ ಮತ್ತು ಮಲ್ಲ ಎಂಬಿಬ್ಬರು ಸೋದರರು, ವಿಷ್ಣುವಿನ ಮೇಲೆ ಸೇಡು ತೀರಿಸಿಕೊಳ್ಳಲು ಶಿವನನ್ನು ಒಲಿಸಿಕೊಂಡು ಲೋಕಕಂಟಕರಾದರಂತೆ. ಅನಂತರ ಭೈರವನು ಮಲ್ಲನನ್ನು ಕೊಂದು ಮಲ್ಲಾರಿಯಾದನಂತೆ. ಮಣಿಮಲ್ಲನೆಂಬ ಒಬ್ಬನೇ ದೈತ್ಯನೆಂದೂ ಅವನಿಗೆ ಎರಡು ತಲೆಗಳಿದ್ದುವೆಂದೂ ಹೇಳುವುದಿದೆ. ಶಿವನಂತೆ ಖಂಡೋಬನಿಗೂ ಲಿಂಗ ಪೂಜೆಯೂ, ಮೂರ್ತಿ ಪೂಜೆಯೂ ಉಂಟು.[೮೫]

ಮಲ್ಲಾರಿಯು ಸ್ವರ್ಣ ವರ್ಣದವನಾಗಿದ್ದು, ಜಟಾಮುಕುಟದಲ್ಲಿ ಬಾಲಚಂದ್ರನನ್ನು ಧರಿಸಿರುವನು. ಹಾಗೂ ಕರ್ಣಗಳಲ್ಲಿ ಕುಂಡಲಗಳನ್ನು, ಕೊರಳಲ್ಲಿ ಮುತ್ತು–ಹವಳದ ಮಾಲೆ, ಪುಷ್ಪಮಾಲೆಯನ್ನು ಧರಿಸಿರುವನು. ಬಾಹುಗಳಲ್ಲಿ ನಾಗಬಂಧ ಹೊಂದಿದ್ದು, ಪೀತಾಂಬರವನ್ನು(ರೇಷ್ಮೆ) ಧರಿಸಿರುವನು. ಶಿವ ಧರಿಸಿದ ಆಭರಣಗಳು ಕೆಲವೆಡೆ ಸರ್ಪಗಳಿಂದ ಮುಚ್ಚಿಹೋಗಿರುತ್ತವೆ. ಮತ್ತು ಖಡ್ಗಗಳನ್ನು ಹಿಡಿದಿರುವನು. ಇವನು ಕುದುರೆಯನ್ನು ವಾಹನವಾಗಿ ಹೊಂದಿದ್ದು ಇವನೊಂದಿಗೆ ಏಳು ನಾಯಿಗಳು ಸುತ್ತುವರೆದಿರುತ್ತವೆ ಎಂದು ಟಿ.ಎ.ಗೋಪಿನಾಥರಾವ್ [೮೬] ಅವರು ಉಲ್ಲೇಖಿಸಿರುವರು. ಆದರೆ ಎಸ್.ಕೆ.ರಾಮಚಂದ್ರರಾವ್ [೮೭] ಅವರು ಖಂಡೋಬನಿಗೆ ಕತ್ತಿ, ತ್ರಿಶೂಲ, ಡಮರು, ಕಪಾಲಗಳನ್ನು ಹಿಡಿದು ಕುದುರೆಯನ್ನೇರಿ ಕುಳಿತಂತೆ ಅಥವಾ ಭದ್ರಪೀಠದಲ್ಲಿ ಕುದುರೆಯ ಲಾಂಛನವನ್ನು ಪಡೆದು ಸುಖಾಸೀನನಾಗಿರುವಂತೆ ಚಿತ್ರಿಸುತ್ತಾರೆ. ಭೈರವನಾದುದರಿಂದ ನಾಯಿಯ ಸಂಬಂಧವೂ ಇವನಿಗುಂಟು. ಹಾಗೂ ಪತ್ನಿ ಮ್ಹಾಳಸೆಯನ್ನು ತೊಡೆಯ ಮೇಲೆ ಕೂರಿಸಿಕೊಂಡು ಬಿಳಿ ಕುದುರೆಯನ್ನೇರಿ ಕತ್ತಿ ಹಿಡಿದು ವೀರಾವೇಶದಿಂದ ಹೊರಟ ಮಲ್ಲಾರಿಯ ಸುತ್ತಲೂ ಬೇಟೆ ನಾಯಿಗಳು ಇರುತ್ತವೆ ಎಂದು ಉಲ್ಲೇಖಿಸುತ್ತಾರೆ.

ಹಂಪಿಯ ಪರಿಸರದಲ್ಲಿಯೂ ಮೈಲಾರ ಪರಂಪರೆ ಕಂಡುಬರುತ್ತದೆ. ವಿಜಯನಗರ ಪೂರ್ವದಿಂದಲೇ ಅಲ್ಲಿ ಮೈಲಾರನ ಆರಾಧನೆ ಇತ್ತು ಎಂದು ವಾಸುದೇವ ಬಡಿಗೇರ[೮೮] ಅವರು ಸುತ್ತಮುತ್ತಲು ದೊರೆಯುವ ಶಾಸನಗಳ ಆಧಾರದ ಮೇಲೆ ಹೇಳಿದ್ದಾರೆ. ಹಾಗೆಯೇ ಮುಂದುವರೆದು ವಿಜಯನಗರ ಕಾಲದಲ್ಲಿಯೂ ಮೈಲಾರನ ಆರಾಧನೆ ಮಲ್ಲಯ್ಯನ ಗುಡ್ಡ, ಹಿರೆಮೈಲಾರ ಮತ್ತು ಹಂಪಿಗಳಲ್ಲಿ ಇದ್ದುವೆಂದು, ಅವುಗಳಿಗೆ ಶಾಸನ ಉಲ್ಲೇಖವನ್ನು ಹೇಳಿದ್ದಾರೆ. ಹಂಪಿಯಲ್ಲಿ ಅತ್ಯಂತ ಪ್ರಾಚೀನ ಶೈವ ದೇವಾಲಯದ ಶಾಸನುಲ್ಲೇಖ ಸಿಗುವುದೇ ಮೈಲಾರ ದೇವರದ್ದು. ಕ್ರಿ.ಶ.೧೩೮೦ರ ಶಾಸನ.[೮೯] ಈ ಶಾಸನವು ಹಂಪಿ ಪರಿಸರದಲ್ಲಿ ವಿಜಯನಗರದ ಕಾಲದ ಅತ್ಯಂತ ಪ್ರಾಚೀನ ಶೈವ ದೇವಾಲಯ ಒರತೆಯ ಮೈಲಾರ ದೇವರನ್ನು ಪ್ರತಿಷ್ಠಾಪಿಸಿದ ಉಲ್ಲೇಖವನ್ನು ಒದಗಿಸುತ್ತದೆ. ಅಲ್ಲದೆ ಮಾಲ್ಯವಂತ ಪರ್ವತ ಅದರ ಸುತ್ತಲಿರುವ ಶಾಸನಗಳು ಸ್ಪಷ್ಟಪಡಿಸುತ್ತವೆ.

ಹಂಪಿಯಲ್ಲಿ, ತ್ರಿಶೂಲ ಮತ್ತು ಪಾನಪಾತ್ರೆಗಳನ್ನು ಹಿಡಿದು, ಕೆದರಿದ ಜಟೆಗಳು ಮತ್ತು ರುಂಡಮಾಲೆಯನ್ನು ಧರಿಸಿದಂತೆ ಕೆತ್ತಲ್ಪಟ್ಟಿರುವ ಹಲವು ಶಿಲ್ಪಗಳು ಕಂಡುಬರುತ್ತವೆ. ಇಂತಹದ್ದೆ ಒಂದು ಶಿಲ್ಪವು ಮಾಲ್ಯವಂತ ಪರ್ವತದ ಬಳಿಗೆ ಇದ್ದು ಟಿ.ಎಂ.ಮಂಜುನಾಥಯ್ಯರವರು[೧೦] ಅದನ್ನು ಮೈಲಾರ ದೇವರು ಎಂದು ಗುರುತಿಸಿರುವರು. ಆದರೆ ಹಂಪಿ ಪರಿಸರದಲ್ಲಿ ಇಂತಹದ್ದೆ ಹಲವಾರು ಶಿಲ್ಪಗಳು ಇದ್ದು, ಕೆಲವು ವಿದ್ವಾಂಸರು ಅವುಗಳನ್ನು ಭಿಕ್ಷಾಟನಾ ಮೂರ್ತಿಯೆಂದು ಕರೆದಿರುತ್ತಾರೆ. ಆದರೆ ಇವುಗಳು ಭಿಕ್ಷಾಟನಾ ಮೂರ್ತಿಶಿಲ್ಪಗಳಾಗಿರಲಿಕ್ಕಿಲ್ಲ. ಏಕೆಂದರೆ ಹಂಪಿ ಪರಿಸರದಲ್ಲಿ ಹಲವಾರು ಭಿಕ್ಷಾಟನಾ ಮೂರ್ತಿಗಳು ಈಗಾಗಲೇ ದೊರೆತಿದ್ದು, ಅವುಗಳ ಪ್ರತಿಮಾ ಲಕ್ಷಣಗಳನ್ನು ಗುರುತಿಸಲಾಗಿದೆ. ಹಾಗೂ ಅವುಗಳು ಆಗಮಗಳು ತಿಳಿಸುವ ಲಕ್ಷಣಗಳನ್ನು ಹೊಂದಿರುವವು. ಹಾಗಿದ್ದಲ್ಲಿ ಈಗಾಗಲೇ ಸಿದ್ದ ಪಥ್ಯದ ಅನ್ವಯದಂತೆ ಶಿಲ್ಪಗಳು ರಚಿಸಲ್ಪಟ್ಟಿವೆಯಾದ್ದರಿಂದ ಈ ರೀತಿಯಾಗಿ ಶಿವನು ದ್ವಿಭುಜಗಳನ್ನು ಹೊಂದಿರುವ ದೇವತೆಯಾಗಿ ರಚಿತವಾಗಿರುವುದು ಸಮಂಜಸವೆನಿಸುವುದಿಲ್ಲ. ಹಾಗಾಗಿ ಇವುಗಳನ್ನು ಮೈಲಾರಿ ಅಥವಾ ಮಲ್ಲಾರಿ ಶಿಲ್ಪಗಳು ಎಂದು ಹೇಳಬಹುದು. ಏಕೆಂದರೆ ಇಂತಹ ಶಿಲ್ಪಗಳು ಹೆಚ್ಚಾಗಿ ಬೆಟ್ಟ ಪರಿಸರದಲ್ಲಿ ಹಾಗೂ ಭೈರವನ ಶಿಲ್ಪಗಳೊಂದಿಗೆ ಕಂಡುಬರುತ್ತವೆ. ಆದರೆ ಇಲ್ಲಿಯೂ ಸಹ ಶಿಲ್ಪವನ್ನು ಗುರುತಿಸುವಲ್ಲಿ ಸಂಶಯಗಳು ಉದ್ಭವವಾಗುತ್ತವೆ. ಏಕೆಂದರೆ ಮೈಲಾರನೆಂದು ದೃಢವಾಗಿ ಹೇಳಲು ಅವನ ವಾಹನವಾದ ಕುದುರೆಯನ್ನಾಗಲಿ, ಶ್ವಾನಗಳನ್ನಾಗಲಿ ತೋರಿಸಲಾಗಿಲ್ಲ. ಆದರೆ ತ್ರಿಶೂಲ ಮತ್ತು ಕಪಾಲವನ್ನು ಅಥವಾ ಪಾನಪಾತ್ರೆಯನ್ನು ಹಿಡಿದಿದ್ದು ಬೆಟ್ಟ ಪರಿಸರದಲ್ಲಿ ನೈಸರ್ಗಿಕ ಬಂಡೆಗಳ ಮೇಲೆ ಕೆತ್ತಲ್ಪಟ್ಟಿರುವನು. ಇದೇ ರೀತಿಯಾಗಿ ಹಂಪಿ ಪರಿಸರದ ಗುಡ್ಡಗಳಲ್ಲಿ ನೈಸರ್ಗಿಕ ಬಂಡೆಗಳ ಮೇಲೆ ಹೆಚ್ಚು ಕಂಡುಬರುವ ಶಿಲ್ಪಗಳೆಂದರೆ ಭೈರವ ಮತ್ತು ವೀರಭದ್ರ, ಅದರಲ್ಲೂ ಭೈರವನ ಶಿಲ್ಪಗಳು ಹೆಚ್ಚು ಎಂದು ಹೇಳಬಹುದು. ಮೈಲಾರ ಮತ್ತು ಭೈರವನಿಗೂ ಸಂಬಂಧವಿರು ವುದರಿಂದ ಇಂತಹ ಶಿಲ್ಪಗಳು ಮೈಲಾರನದ್ದು ಎಂದು ಹೇಳುವುದು ಸೂಕ್ತವೆನಿಸುತ್ತದೆ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಈ ರೀತಿಯಾಗಿ ಕೆದರಿದ ಜಟೆಗಳು, ಬಲಗೈಯಲ್ಲಿ ತ್ರಿಶೂಲ, ಎಡಗೈಯಲ್ಲಿ ಕಪಾಲ ಅಥವಾ ಪಾನಪಾತ್ರೆ ಹಿಡಿದಿರುವ ಹಾಗೂ ಕೆಲವು ಶಿಲ್ಪಗಳಲ್ಲಿ ರುಂಡಮಾಲೆ, ಯಜ್ಞೋಪವೀತ, ಕೊರಳಹಾರ, ಕಂಕಣಗಳನ್ನು ಹಾಗೂ ಇನ್ನೂ ಕೆಲವು ಶಿಲ್ಪಗಳಲ್ಲಿ ಸಾಮಾನ್ಯವಾದ ವನಮಾಲೆಯನ್ನು ಧರಿಸಿದ ಶಿಲ್ಪಗಳೆಲ್ಲವನ್ನು ಮೈಲಾರನ ಶಿಲ್ಪಗಳೆಂದೇ ತಿಳಿದು ಅಧ್ಯಯನ ನಡೆಸಲಾಗಿದೆ.

ಈ ಲಕ್ಷಣಗಳುಳ್ಳ ಒಟ್ಟು ೧೫ ಶಿಲ್ಪಗಳು ನನ್ನ ಕ್ಷೇತ್ರ ಕಾರ್ಯದಲ್ಲಿ ಕಂಡುಬಂದಿವೆ. ಇವುಗಳು ಬೆಟ್ಟ ಪ್ರದೇಶಗಳಲ್ಲಿಯೂ ಕಂಡುಬರುವುದರಿಂದ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಇರುವ ಸಾಧ್ಯತೆಯೂ ಉಂಟು. ನನ್ನ ಕ್ಷೇತ್ರಕಾರ್ಯದಲ್ಲಿ ಕಂಡುಬಂದಿರುವ ಈ ಶಿಲ್ಪಗಳು ಹಂಪಿಯ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ಹಾಗೂ ರಾಜ್ಯ ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಉಪನಿರ್ದೇಶಕರ ಕಚೇರಿಯ ಆವರಣದಲ್ಲಿ ಹಾಗೂ ಕಮಲ್‌ಮಹಲ್‌ನ ಹಿಂಭಾಗದಲ್ಲಿ ಕಂಡುಬಂದಿವೆ.


ಮೈಲಾರ, ವಸ್ತುಸಂಗ್ರಹಾಲಯ, ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ, ಕಮಲಾಪುರ


ಮೈಲಾರ, ವೀರಭದ್ರದೇವಾಲಯ, ತಿಮ್ಮಾಲಾಪುರ


ಮೈಲಾರ, ವಸ್ತುಸಂಗ್ರಹಾಲಯ, ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ, ಕಮಲಾಪುರ

ಮೈಲಾರ

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ಉಮಾಮಹೇಶ್ವರ | ಮಂಟಪದ ೧೪ನೇ ಕಂಬ | ೧ |
| ಹಂಪಿ | ಕಮಲ್‌ಮಹಲ್‌ನ ಹಿಂಭಾಗ | ನೈಸರ್ಗಿಕ ಬಂಡೆಗಳ ಮೇಲೆ | ೩ |
| ಹಂಪಿ | ಕಡಲೆಕಾಳು ಗಣೇಶ ದೇವಾಲಯದ ಎದುರಿರುವ ಶೈವ ದೇವಾಲಯ | ದೇವಾಲಯದ ಮಂಟಪದ ೫ನೇ ಕಂಬ | ೧ |
| ಹಂಪಿ | ಪ್ರಾಚ್ಯವಸ್ತು ರಾಜ್ಯ ಪುರಾತತ್ವ ಮತ್ತು ಸಂಗ್ರಹಾಲಯಗಳ ಉಪ ನಿರ್ದೇಶಕರ ಕಚೇರಿ | ವಸ್ತು ಸಂಗ್ರಹಾಲಯದ ಹೊರ ಆವರಣ | ೨ |
| ಕಮಲಾಪುರ | ಭಾರತೀಯ ಪುರಾ ತತ್ವ ಸರ್ವೇಕ್ಷಣ ಇಲಾಖೆಯ ವಸ್ತು ಸಂಗ್ರಹಾಲಯ | ವಸ್ತು ಸಂಗ್ರಹಾಲಯದ ಹೊರ ಆವರಣ | ೬ |
| ಕಮಲಾಪುರ | ಮಾಲ್ಯವಂತ ಪರ್ವ ತದ ಬಳಿಯಿರುವ ವೀರಭದ್ರ ದೇವಾಲಯ | ನೈಸರ್ಗಿಕ ಬಂಡೆ ಮೇಲೆ | ೧ |
| ತಿಮ್ಮಲಾಪುರ | ಪಾಳುಬಿದ್ದ ವೀರ ಭದ್ರ ದೇವಾಲಯ | ದೇವಾಲಯ ಬಳಿಯಲ್ಲಿಯೇ ಈ ಶಿಲ್ಪವನ್ನು ಇರಿಸಲಾಗಿದೆ | ೧ |
| | | ಒಟ್ಟು | ೧೫ |

**ನಂದೀಶಾನುಗ್ರಹ ಮೂರ್ತಿ**

ನಂದೀಶ್ವರನಿಗೆ ಅನುಗ್ರಹಿಸಿದ ಶಿವನ ರೂಪವನ್ನೇ ನಂದೀಶಾನುಗ್ರಹ ಮೂರ್ತಿ ಎನ್ನುವರು. ನಂದಿಯು ಭೂಮಿಯ ಮೇಲೆ ತನ್ನ ಅಧಿಕಾರಾವಧಿಯು ಮುಗಿಯುತ್ತ ಬಂದ ಸಂದರ್ಭದಲ್ಲಿ ಶಿವನನ್ನು ಕುರಿತು ತನಗೆ ದೀರ್ಘವಾದ ಜೀವನವನ್ನು ದಯಪಾಲಿಸುವಂತೆ ಪ್ರಾರ್ಥಿಸಿದನು. ನಂದಿಯ ಈ ಪ್ರಾರ್ಥನೆಗೆ ಮೆಚ್ಚಿದ ಶಿವನು ಅವನ ಕೋರಿಕೆಯನ್ನು ಈಡೇರಿಸಿದ್ದಲ್ಲದೇ ಒಂದು ಗಣದ ಅಧಿಪತಿಯಾಗಿ ನೇಮಿಸಿದನು. ಹಾಗೂ ವೃದ್ಧಾಪ್ಯ ಮತ್ತು ನೋವಿನಿಂದ ಸಂಪೂರ್ಣ ವಿನಾಯಿತಿ ನೀಡಿದನು. ಬಳಿಕ ಶಿವನು ನಂದಿಯನ್ನು ತನ್ನ ಹತ್ತಿರ ಕರೆದುಕೊಂಡು ತಾನು ಧರಿಸಿದ ಮಾಲೆಯನ್ನು

ಆತನ ಕೊರಳಿಗೆ ಹಾಕಿದನು. ಆಗ ನಂದಿಯು ತ್ರೀನೇತ್ರ, ದಶಭುಜಗಳುಳ್ಳ ಶಿವನ ಪ್ರತಿರೂಪ ತಾಳಿದನು. ಶಿವನು ತನ್ನ ಜಟೆಯಲ್ಲಿದ್ದ ಗಂಗೆಯ ಸ್ವಲ್ಪ ನೀರನ್ನು ನಂದಿಯ ಮೇಲೆ ಚಿಮುಕಿಸಿದನು. ಇದೇ ಜಟೋದಕ ಎಂಬ ನದಿಯಾಯಿತು. ಶಿವನು ತನ್ನ ಸತಿಯಾದ ಪಾರ್ವತಿಗೆ ನಂದಿಯನ್ನು ತನ್ನ ಮಗನಂತೆ ನೋಡಿಕೊಳ್ಳಬೇಕೆಂದು ಹೇಳಿದನು. ಅವಳು ಸಹ ನಂದಿಯ ತಲೆಯನ್ನು ಮೂಸಿದಳು. ಆಗ ಅವಳ ಸ್ತನದಿಂದ ಹರಿದ ಹಾಲು ಮೂರು ನಳಿಕೆಗಳ ಮೂಲಕ ನಂದಿಯ ತಲೆಯ ಮೇಲೆ ಹರಿಯಿತು. ಇದು ಸಹ ತ್ರಿಸ್ರೋತಸ್ ಎಂಬ ಹೆಸರಿನ ನದಿಯಾಯಿತು. ಇದರಿಂದ ಸಂತಸಗೊಂಡ ನಂದಿಯು ವೃಷಭದಂತೆ ಧನಿ ಮಾಡಿದನು. ಈ ಧ್ವನಿಯು ಸಹ ವೃಷಧ್ವತಿ ಎಂಬ ನದಿಯನ್ನುಂಟುಮಾಡಿತು. ಇದೇ ಸಂದರ್ಭದಲ್ಲಿ ಶಿವನು ಇನ್ನಷ್ಟು ಸಂಪ್ರೀತನಾಗಿ ತನ್ನ ಚಿನ್ನದ ಮುಕುಟ, ರತ್ನ ಕುಂಡಲಗಳನ್ನು ಕೊಟ್ಟನು. ಇದನ್ನು ನೋಡಿದ ಸೂರ್ಯನು ನಂದಿಗೆ ಗೌರವಿಸಿ ಶಿವನ ಪ್ರೀತಿಗೆ ಪಾತ್ರನಾಗಿ ಮಳೆಯನ್ನು ಸುರಿಸಿದನು. ಈ ನೀರು ಚಿನ್ನದ ಮುಕುಟದೊಂದಿಗೆ ಬೆರೆತು ಸ್ವರ್ಣೋದಕ ಮತ್ತು ಜಂಬುನದಿ ಎಂಬ ಎರಡು ನದಿಗಳಾಗಿ ಹರಿದವು. ಈ ಎಲ್ಲ ಘಟನೆಗಳು ಜಪ್ಯೇಶ್ವರ ಎಂಬಲ್ಲಿ ನಡೆದು ಐದು ನದಿಗಳು ಹರಿದವು. ನಂತರದಲ್ಲಿ ನಂದಿಯು ಗಣಗಳ ಒಡೆಯನಾದನು ಹಾಗೂ ಮಾರುತಗಣಗಳ ಮಗಳಾದ ಸುಯೇಶಳನ್ನು ವಿವಾಹವಾದನು.[೯೧]

ಉತ್ತರ ಕಾರಣಾಗಮವು ನಂದೀಶಾನುಗ್ರಹ ಮೂರ್ತಿಯ ಕುರಿತು ಉಲ್ಲೇಖಿಸುತ್ತದೆ. ಇದರ ಪ್ರಕಾರ ಶಿವನ ಮೂರ್ತಿಯು ಚಕ್ರದಾನಮೂರ್ತಿಯಲ್ಲಿರುವಂತೆ (ಉಮೆಯೊಡನೆ ಸುಖಾಸನದಲ್ಲಿ ಕುಳಿತ ಶಿವನು ವಿಷ್ಣುವಿಗೆ ಚಕ್ರದಾನ ನೀಡುತ್ತಿರುವನು. ಇಲ್ಲಿ ಶಿವನು ಶಾಂತ, ಮೂರು ಕಣ್ಣುಗಳುಳ್ಳ ಚತುರ್ಭುಜನಾಗಿ ಕೃಷ್ಣಮೃಗ, ಪರಶು, ವರದ ಮತ್ತು ಚಕ್ರಗಳನ್ನು ಹಿಡಿದಿರುವನು. ಅಥವಾ ಟಂಕ, ಕೃಷ್ಣಮೃಗ ಮತ್ತು ವರದಹಸ್ತ ಚಕ್ರಗಳನ್ನು ಹಿಡಿದಿರಬಹುದು) ಇರುವನು. ನಂದಿಯು ಏಕವದನ, ದ್ವಿನೇತ್ರ, ದ್ವಿಭುಜ ಮತ್ತು ದೈನ್ಯಭಾವವುಳ್ಳವನಾಗಿರಬೇಕು. ಮುಖದಲ್ಲಿ ಶಾಂತತೆಯಿದ್ದು, ಸುವಿಕಿರಣ ಜಟೋಪೇತನಾಗಿರಬೇಕು.

ಹಂಪಿ ಪರಿಸರದಲ್ಲಿ ಏಕೈಕ ನಂದೀಶಾನುಗೃಹಮೂರ್ತಿಶಿಲ್ಪವು ಮಲಪನಗುಡಿಯ ಮಲ್ಲಿಕಾರ್ಜುನ ದೇವಾಲಯದಲ್ಲಿ ದೊರತಿದೆ. ಈ ಬಿಡಿಶಿಲ್ಪವು ದೇವಾಲಯದ ದೇವಿಯ ಗರ್ಭಗೃಹದ ಹೊರಗೆ ಬಲಭಾಗಕ್ಕೆ ಗೋಡೆಗೆ ತಾಕಿಸಿ ಇಟ್ಟಿರುವರು. ಸುಮಾರು ನಾಲ್ಕು ಅಡಿ ಎತ್ತರವಿರುವ ಈ ಶಿಲ್ಪದಲ್ಲಿ ಶಿವನು ಪದ್ಮಾಸನದಲ್ಲಿ ಕುಳಿತಿದ್ದು, ಚತುರ್ಭುಜಧಾರಿಯಾಗಿರುವನು. ಬಲಭಾಗದ ಕೈಗಳಲ್ಲಿ ಮುಂದಿನದು ಅಭಯ, ಹಿಂದನದು ತ್ರಿಶೂಲವನ್ನು ಹಿಡಿದಿದೆ. ಎಡಭಾಗದ ಕೈಗಳಲ್ಲಿ ಮುಂದಿನದು ಕುಳಿತ ನಂದಿ (ವೃಷಭ)ಯ ದೇಹದ ಮೇಲೆ, ಅನುಗ್ರಹ ನೀಡುತ್ತಿರುವಂತೆ ಇಟ್ಟಿದ್ದು, ಹಿಂದಿನ ಕೈಯಲ್ಲಿ ಡಮರುವನ್ನು ಹಿಡಿದಿರುವನು. ಶಿರದಲ್ಲಿ ಉದ್ದನೆಯ ಜಟೆಗಳು, ಎಡ-ಬಲ ಪಾರ್ಶ್ವಗಳಲ್ಲಿ ಹರಡಿಕೊಂಡಿವೆ. ಕರ್ಣಕುಂಡಲ, ಕಂಕಣಗಳು ಕೊರಳಹಾರ ಹಾಗೂ ಧೋತಿಯನ್ನು ಧರಿಸಿರುವನು. ಶಿಲ್ಪದಲ್ಲಿ ಮುಖದ ಭಾಗವು ಭಾಗಶಃ ಸವೆದು ಹೋಗಿರುವುದು. ಈ ಶಿಲ್ಪವನ್ನು ಕುರಿತಂತೆ ಸುರೇಶ ಕೆ.ಎಂ.[೯೨] ಅವರು

ಈಗಾಗಲೇ ಉಲ್ಲೇಖಿಸಿರುವರು. ಈ ಶಿಲ್ಪದ ಮೂರ್ತಿಲಕ್ಷಣಗಳು ಮೇಲೆ ವಿವರಿಸಿದ ಶಿಲ್ಪಶಾಸ್ತ್ರದಲ್ಲಿನ ಲಕ್ಷಣಗಳಿಗಿಂತ ಭಿನ್ನವಾಗಿರುವುದು ತಿಳಿಯುತ್ತದೆ. ಇದು ಹಂಪಿ ಪರಿಸರದಲ್ಲಿ ದೊರೆತ ಏಕೈಕ ನಂದೀಶಾನುಗ್ರಹ ಮೂರ್ತಿಶಿಲ್ಪವಾಗಿದೆ.



ನಂದೀಶಾನುಗ್ರಹಮೂರ್ತಿ, ಮಲ್ಲಿಕಾರ್ಜುನ ದೇವಾಲಯ, ಮಲಪನಗುಡಿ

**ನಂದಿಶಾನುಗ್ರಹಮೂರ್ತಿ**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಮಲಪನಗುಡಿ | ಮಲ್ಲಿಕಾರ್ಜುನ | ದೇವಿ ಗರ್ಭಗೃಹದ ಹೊರಭಾಗದಲ್ಲಿ | ೧ |
| | | ಒಟ್ಟು | ೧ |

**ಪಾಶುಪತಾಸ್ತ್ರದಾನ ಅಥವಾ ಕಿರಾತಾರ್ಜುನ ಮೂರ್ತಿ**

ಶಿವನು ಅರ್ಜುನನಿಗೆ ಪಾಶುಪತಾಸ್ತ್ರವನ್ನು ಅನುಗ್ರಹಿಸುವ ರೂಪವೇ ಪಾಶುಪತಾಸ್ತ್ರದಾನ ಮೂರ್ತಿ ಎಂದು ಕರೆಯಲಾಗಿದೆ. ಇದಕ್ಕೆ ಸಂಬಂಧಿಸಿದ ಕಥೆಯು ಮಹಾಭಾರತದ ವನಪರ್ವದಲ್ಲಿ ವಿವರವಾಗಿ ದೊರೆಯುತ್ತದೆ.

ಇಂದ್ರನು ಅರ್ಜುನನಿಗೆ ಶಿವನಿಂದ ಪಾಶುಪತಾಸ್ತ್ರವನ್ನು ಪಡೆದುಕೊಂಡರೆ ಕೌರವರನ್ನು ಎದುರಿಸುವುದಕ್ಕೆ ಅದು ಬಲವಾದ ಅಸ್ತ್ರವಾಗುತ್ತದೆ ಎಂದು ಹೇಳುತ್ತಾನೆ. ಈ ಅಸ್ತ್ರವನ್ನು ಪಡೆಯಲು ಅರ್ಜುನನು ಹಿಮಾಲಯಕ್ಕೆ ಹೋಗಿ ಶಿವನನ್ನು ಕುರಿತು ತಪಸ್ಸು ಮಾಡತೊಡಗುತ್ತಾನೆ. ಅರ್ಜುನನ

ತಪಸ್ಸಿನ ತೀವ್ರತೆಗೆ ಹೆದರಿದ ಋಷಿಗಳು ಶಿವನ ಮೊರೆ ಹೋಗುತ್ತಾರೆ. ಶಿವನಿಗೆ ಅರ್ಜುನನ ಉದ್ದೇಶ ಮೊದಲೇ ಗೊತ್ತಿತ್ತು. ಆದ್ದರಿಂದ ಕಿರಾತನ ವೇಷವನ್ನು ಧರಿಸಿ ಅರ್ಜುನನನ್ನು ಪರೀಕ್ಷಿಸಲೆಂದು ಬಳಿಗೆ ಬರುತ್ತಾನೆ. ಅದೇ ಕ್ಷಣದಲ್ಲಿ ಅಸುರನೊಬ್ಬ ವರಾಹದ ರೂಪದಲ್ಲಿ ಅರ್ಜುನನ ಮೇಲೆ ಎರಗಲಿದ್ದನು. ಇದನ್ನು ಗಮನಿಸಿ ಅರ್ಜುನ ಅದರ ಮೇಲೆ ಬಾಣ ಪ್ರಯೋಗ ಮಾಡಿದ. ಆದರೆ ಕಿರಾತ ತಾನು ಕೊಲ್ಲಲೆಂದು ಆ ವರಾಹಕ್ಕೆ ಮೊದಲು ಗುರಿ ಇರಿಸಿದ್ದರಿಂದ ಅರ್ಜುನನು ಅದನ್ನು ಕೊಲ್ಲುವಂತಿಲ್ಲ ಎಂದು ವಾದ ಪ್ರಾರಂಭಿಸಿದ. ಅರ್ಜುನನು ಈ ಮಾತಿಗೆ ಕಿವಿ ಕೊಡಲಿಲ್ಲ. ಇಬ್ಬರೂ ಒಂದೇ ಬಾರಿಗೆ ಗುರಿಯಿಟ್ಟು ಕೊಂದಿದ್ದೇವೆ ಎಂದು ಹೇಳಿದನು. ಈ ರೀತಿ ವಿವಾದ ಪ್ರಾರಂಭವಾಗಿ ಬರಬರುತ್ತಾ ಕಿರಾತ ಮತ್ತು ಅರ್ಜುನರ ಮಧ್ಯೆ ಹೋರಾಟವೇ ಪ್ರಾರಂಭವಾಯಿತು. ಈ ಹೋರಾಟದಲ್ಲಿ ಅರ್ಜುನ ಸೋಲುತ್ತ ಬಂದ. ಕೊನೆಗೆ ಪೆಟ್ಟು ತಿಂದು ಮೂರ್ಛಿತನಾದ. ಮತ್ತೆ ಕಣ್ತೆರೆಯುವ ವೇಳೆಗೆ ಕಿರಾತನೇ ಶಿವ ಎಂಬುದು ತಿಳಿಯಿತು. ನಂತರದಲ್ಲಿ ಶಿವನು ಅರ್ಜುನನ ಧೈರ್ಯ, ಸಾಹಸಗಳನ್ನು ಮೆಚ್ಚಿ ಪಾಶುಪತಾಸ್ತ್ರವನ್ನು ದಾನ ಮಾಡಿದನು.[೯೩]

ಈ ಕಿರಾತಾರ್ಜುನಮೂರ್ತಿ ಅಥವಾ ಪಾಶುಪತ ಮೂರ್ತಿಯ ಲಕ್ಷಣಗಳನ್ನು ಶ್ರೀಕಾಶ್ಯಪ ಶಿಲ್ಪಶಾಸ್ತ್ರವು,[೯೪] ಉತ್ತರ ಕಾರಣಾಗಮ[೯೫] ಹಾಗೂ ಶ್ರೀ ತತ್ವನಿಧಿಗಳಲ್ಲಿ[೯೬] ವಿವರಿಸಲಾಗಿದೆ.

ಶ್ರೀ ಕಾಶ್ಯಪಶಿಲ್ಪಶಾಸ್ತ್ರವು ಈ ಮೂರ್ತಿಯನ್ನು ಚಂದ್ರಶೇಖರಮೂರ್ತಿಯಂತೆ ಸಮಪಾದದಲ್ಲಿ ಸ್ಥಾನಿಕ ಭಂಗಿಯಲ್ಲಿ ರೂಪಿಸಬೇಕು. ಮೂರುಕಣ್ಣುಗಳು, ನಾಲ್ಕು ತೋಳುಗಳು, ಸೌಮ್ಯವಾದ ಮುಖ ಮಹಾಕಾಯನಾದ ಈ ದೇವನು ಬಲಗಡೆಯ ಎರಡು ಹಸ್ತಗಳಲ್ಲೂ ಅಭಯಮುದ್ರೆ ಮತ್ತು ಶೂಲಗಳನ್ನು, ಎಡಹಸ್ತಗಳಲ್ಲಿ ವರದಮುದ್ರೆ ಮತ್ತು ಅಕ್ಷಮಾಲೆಗಳನ್ನು ಹಿಡಿದಿದ್ದು, ಕೆಂಪಾದ ಮೈಕಾಂತಿಯಿಂದ ಸೌಮ್ಯಭಾವದ ಮುಖದೊಂದಿಗೆ ತಂಪಾದ ನೋಟವನ್ನು ಬೀರುತ್ತಿರುತ್ತಾನೆ. ಸರ್ವಾಭರಣ ಭೂಷಿತನಾಗಿ ಕಿರುನಗೆಯ ವೇಗದೊಂದಿಗೆ ಸ್ವಾಮಿಯು ಇರುತ್ತಾನೆ. ದೇವಾಲಯಗಳಲ್ಲಿ ನಿತ್ಯೋತ್ಸವಗಳಿಗಾಗಿ ಈ ಸ್ವಾಮಿಯನ್ನು ನಿಂತಿರುವಂತೆ ಅಥವಾ ಕುಳಿತಿರುವಂತೆ ರೂಪಿಸಬಹುದು. ಇದೇ ಮೂರ್ತಿಯು ಅಗ್ನಿವರ್ಣದಲ್ಲಿ ಕೆಂಪಾದ ಕಣ್ಣುಗಳೊಂದಿಗೆ ಏರಿಸಿದ ಹುಬ್ಬುಗಳೊಂದಿಗೆ, ಹೊರಕ್ಕೆ ಬಂದಿರುವ ಕೋರೆಹಲ್ಲುಗಳೊಂದಿಗೆ ಹಾವಿನ ಯಜ್ಞೋಪವೀತದೊಂದಿಗೆ ಅಗ್ನಿ ಜ್ವಾಲೆಗಳೊಂದಿಗೆ ಕೆಂಪಾದ ವಸ್ತ್ರಗಳನ್ನು ಧರಿಸಿ, ಕೆಳಕ್ಕೆ ಇಳಿಸಿರುವ ಶೂಲವನ್ನು ಹಿಡಿದು ಕಪಾಲ ಮತ್ತು ವರದ ಮುದ್ರೆಗಳನ್ನು ಪಡೆದಿರುತ್ತಾನೆ. ಶೂಲವು ಇಲ್ಲದಾಗ ಆ ಹಸ್ತದಲ್ಲಿ ಅಭಯ ಅಥವಾ ವರದ ಮುದ್ರೆಯನ್ನು ವರದ ಮುದ್ರೆಯಲ್ಲಿರುವ ಹಸ್ತದಲ್ಲಿ ಶೂಲಾಗ್ರವನ್ನು ಹಿಡಿದಿರಬಹುದು. ಬಲಗಡೆಯ ಮೇಲಿನ ಹಸ್ತದಲ್ಲಿ ಟಂಕ (ಢಕ್ಕೆ), ಎಡಗಡೆಗೆ ಮೇಲಿರುವ ಹಸ್ತದಲ್ಲಿ ಖಡ್ಗವನ್ನು ಹಿಡಿದು ರೌದ್ರನಾಗಿರುವ ಪಾಶುಪತ ಮೂರ್ತಿಯನ್ನು, ಚಲಲಿಂಗಗಳನ್ನು ಪೂಜಿಸುವಂತೆ ಪೂಜಿಸಬೇಕು. ಧ್ಯಾನಕ್ಕಾಗಿ ಪೂಜೆಗಾಗಿ ಮಾತ್ರವೇ ಈ ಮೂರ್ತಿಯನ್ನು ವಿವರಿಸಲಾಗಿದೆ. ಸಕಲವಿಧ ಶತ್ರು ವಿನಾಶಕ್ಕಾಗಿ ಇದು ಬಹುವಾಗಿ ಪ್ರಯೋಜನಕ್ಕೆ ಬರುವ ಮೂರ್ತಿ ಸಾಧಾರಣ ಪೂಜೆಗೆ ಈ ಮೂರ್ತಿಯನ್ನು ಉಪಯೋಗಿಸಬಾರದು. ಆದ್ದರಿಂದ

ಈ ರೌದ್ರ ಮೂರ್ತಿಯ ಪ್ರತಿಮೆಯನ್ನು ಶಿಲೆ ಅಥವಾ ಲೋಹದಲ್ಲಿ ಮಾಡಬಾರದು ಎಂದು ಹೇಳುತ್ತದೆ.

ಮೇಲೆ ವಿವರಿಸಿದ ಕಾಶ್ಯಪ ಶಿಲ್ಪಶಾಸ್ತ್ರದಲ್ಲಿನ ವಿವರಣೆಗಿಂತ ಭಿನ್ನವಾದ ವಿವರಣೆ ಶ್ರೀತತ್ವನಿಧಿ ಹಾಗೂ ಉತ್ತರ ಕಾರಣಾಗಮದಲ್ಲಿ ದೊರೆಯುತ್ತದೆ. ಶ್ರೀತತ್ವನಿಧಿಯು ವಿವರಿಸುವಂತೆ ಈ ಮೂರ್ತಿಗೆ ಚತುರ್ಭುಜಗಳು, ತ್ರಿನೇತ್ರಗಳು ಇರುತ್ತವೆ. ಜಟಾಮುಕುಟಧಾರಿಯಾಗಿದ್ದು, ಸರ್ವಾಭರಣಗಳು ಮತ್ತು ದಿವ್ಯವಸ್ತ್ರಗಳನ್ನು ಧರಿಸಿರುತ್ತಾನೆ. ಕೆಂಪು ವರ್ಣದವನಾಗಿದ್ದು, ಧನುರ್ಬಾಣಗಳು ಹಾಗೂ ಕೃಷ್ಣ ಪರಶುಗಳನ್ನು ಹಿಡಿದಿರುತ್ತಾನೆ. ಹಾಗೂ ಯಜ್ಞೋಪವೀತವನ್ನು ಧರಿಸಿರುವನು. ಸಮಭಂಗಿಯಲ್ಲಿ ನಿಂತಿದ್ದು, ಎಡಭಾಗದಲ್ಲಿ ಗೌರಿ, ಬಲಭಾಗದಲ್ಲಿ ಅರ್ಜುನನು ಇರಬೇಕು. ಅರ್ಜುನನು ಏಕವದನ, ದ್ವಿನಯನಗಳನ್ನು ಹೊಂದಿದ್ದು, ಜಟಾಮುಕುಟಧಾರಿಯಾಗಿರುತ್ತಾನೆ. ಸರ್ವಾಭರಣಗಳನ್ನು ಧರಿಸಿದ್ದು, ಕೃತಾಂಜಲಿ ಬದ್ಧನಾಗಿ ಕಿರಾತನ ಮುಂದೆ ನಿಂತಿರುತ್ತಾನೆ. ಉತ್ತರ ಕಾರಣಾಗಮ ಭಾಗಶಃ ಇದೇ ಲಕ್ಷಣಗಳನ್ನು ಹೇಳಿದೆ. ಆದರೆ ಚತುರ್ಭುಜ ಅಥವಾ ದ್ವಿಭುಜ ಎಂದು, ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಬಾಣ ಹಿಡಿದು ಶಿವನ ಎದುರಿನಲ್ಲಿ ತಲೆ ಕೆಳಗೆ ಹಾಕಿ ನಿಂತಿರಬೇಕು ಎಂದು ಹೇಳುತ್ತದೆ.

ಮೇಲೆ ವಿವರಿಸಿದ ಈ ಎಲ್ಲ ಲಕ್ಷಣಗಳನ್ನು ಹೊರತುಪಡಿಸಿದಂತೆ ಭಿನ್ನವಾಗಿ ಕೆತ್ತಲಾಗಿರುವ ಪಾಶುಪತಾಸ್ತ್ರದಾನ ಶಿಲ್ಪವು ವಿರೂಪಾಕ್ಷ ದೇವಾಲಯದಲ್ಲಿ ಪೂರ್ವದಿಕ್ಕಿನ ಬಾಗಿಲಿನ ಎಡಭಾಗದ ಭಿತ್ತಿಯಲ್ಲಿದೆ. ಈ ಶಿಲ್ಪದಲ್ಲಿ ಶಿವ ಪಾರ್ವತಿಯರು ವೃಷಭಾರೂಢರಾಗಿರುವುದು ವಿಶೇಷ. ವೃಷಭದ ಮೇಲೆ ಮುಂದೆ ಶಿವನು ತನ್ನ ಎಡಗೈಯಲ್ಲಿ ಬಾಣವನ್ನು ಹಿಡಿದಿರುವನು. ಬಲಗೈಯು ಅಸ್ಪಷ್ಟವಿದೆ. ಕಿರೀಟಮುಕುಟ ಧರಿಸಿರುವನು. ಉಳಿದ ಆಭರಣಗಳು ಅಸ್ಪಷ್ಟವಾಗಿವೆ. ಶಿವನ ಹಿಂದೆ ಪಾರ್ವತಿಯು ಕುಳಿತಿದ್ದು, ಬಲಹಸ್ತದಲ್ಲಿ ಪುಷ್ಪವನ್ನು ಹಿಡಿದಿರುವಳು. ನಂದಿಯು ತನ್ನ ಮುಂದಿನ ಎಡಗಾಲನ್ನು ಮೇಲೆತ್ತಿದ್ದು, ಓಡುವ ಭಂಗಿಯಲ್ಲಿದೆ. ಕೊರಳಲ್ಲಿ ಮಾಲೆಗಳಿಂದ ನಂದಿಯು ಅಲಂಕೃತಗೊಂಡಿದೆ. ಇದರ ಮುಂದೆ ಅರ್ಜುನನು ಎಡಬಾಹುವಿಗೆ ಧನಸ್ಸು ಹಾಕಿಕೊಂಡು ನಿಂತಿದ್ದರೆ, ಇವನ ಬಲಭಾಗದಲ್ಲಿರುವ ಚಿಕ್ಕದಾದ ಮೂರ್ತಿಯು ತನ್ನ ಎಡಗಾಲನ್ನು ಮೇಲೆತ್ತಿ, ಕೈಗಳನ್ನು ಜೋಡಿಸಿ (ಅಂಜಲಿಮುದ್ರೆ) ಶಿರದ ಮೇಲ್ಭಾಗದಲ್ಲಿ ನಮಸ್ಕರಿಸಿ ತಪಸ್ಸು ಮಾಡುತ್ತಿರುವಂತೆ ಕೆತ್ತಲಾಗಿದೆ. ಬಹುಶಃ ಇದು ಅರ್ಜುನನು ಶಿವನನ್ನು ಕುರಿತು ಮಾಡಿದ ತಪಸ್ಸನ್ನು ಸೂಚಿಸುತ್ತಿರಬೇಕು. ಒಟ್ಟಾರೆ ಹಂಪಿ ಪರಿಸರದಲ್ಲಿ ದೊರೆತ ಏಕೈಕ ಪಾಶುಪತಾಸ್ತ್ರದಾನ ಶಿಲ್ಪವು ಇದಾಗಿದೆ.

**ಪಾಶುಪತಾಸ್ತ್ರದಾನಮೂರ್ತಿ**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ದೇವಾಲಯದ ಉತ್ತರ ದಿಕ್ಕಿರುವ ಭಿತ್ತಿ | ೧ |
| | | ಒಟ್ಟು | ೧ |



ಪಾಶುಪತಾಸ್ತ್ರದಾನಮೂರ್ತಿ, ವಿರೂಪಾಕ್ಷ ದೇವಾಲಯ, ಹಂಪಿ

**ನಟರಾಜ**

ಶಿವನು ನಾಟ್ಯಕಲೆಗೆ ರಾಜನಾದವನು. ಹಾಗೂ ನಟರೆಲ್ಲರಿಗೂ ಪ್ರಭುವಾದ್ದರಿಂದ ನಾಟ್ಯಕಲೋಪಾಸಕರು ಪ್ರಧಾನವಾಗಿ ಈ ನಟರಾಜ ಮೂರ್ತಿಯನ್ನು ಉಪಾಸಿಸುತ್ತಾರೆ. ಚತುರ್ವಿಧವಾದ ಅಭಿನಯಗಳಿಂದ, ರಸಭಾವಗಳನ್ನು ಅಭಿವ್ಯಕ್ತಗೊಳಿಸುವುದು ನಾಟ್ಯ. ಈ ನಾಟ್ಯದ ಬಗ್ಗೆ ಭರತ ಮಹರ್ಷಿಯು ಒಂದು ಪ್ರತ್ಯೇಕ ಶಾಸ್ತ್ರವನ್ನೇ ಬರೆದಿದ್ದಾನೆ. ನಾಟ್ಯಶಾಸ್ತ್ರದಲ್ಲಿಯ ರಸಭಾವಗಳನ್ನು ಕುರಿತು, ನೃತ್ತ–ನೃತ್ಯ–ನಾಟ್ಯಗಳನ್ನು ಕುರಿತು, ಅವುಗಳ ಅಂಗ–ಉಪಾಂಗ ಪ್ರತ್ಯಂಗ ಸಾಮಗ್ರಿಗಳನ್ನು ಕುರಿತು ವಿಫುಲವಾದ ವಿವರಣೆಯು ದೊರೆಯುತ್ತದೆ. ಈ ನಾಟ್ಯವನ್ನು ಪ್ರದರ್ಶಿಸುವವರು ನಟರು. ಈ ನಟರಿಗೆ ರಾಜನಾದವನು ನಟರಾಜ.[೯೭]

ಭರತನ ನಾಟ್ಯಶಾಸ್ತ್ರದಲ್ಲಿ ನೂರಾ ಎಂಟು ನೃತ್ಯ ಪ್ರಕಾರಗಳು ಎಂದು ಉಲ್ಲೇಖಿಸುತ್ತದೆ. ಹಾಗೆಯೇ ಶೈವಾಗಮಗಳಲ್ಲಿ ಶಿವನು ನೂರಾ ಎಂಟು ಭಂಗಿಗಳಲ್ಲಿ ನೃತ್ಯಗೈದಿರುವನು ಎಂದು ಹೇಳುತ್ತವೆ. ಅಲ್ಲದೆ ಈ ನೂರಾಎಂಟು ಬಗೆಗಳು ಇದ್ದರೂ ಅವುಗಳು ೯ ಪ್ರಕಾರದ ನೃತ್ಯ ಪ್ರಕಾರಗಳನ್ನು ಮಾತ್ರ ವಿವರಿಸುತ್ತವೆ.[೯೮] ಶಿವನ ನೃತ್ಯವು ಪಂಚಕೃತ್ಯಗಳನ್ನು ಪ್ರತಿನಿಧಿಸುತ್ತದೆ. ಅವು ಸೃಷ್ಟಿ ಸ್ಥಿತಿ, ಸಂಹಾರ, ತೀರೋಭಾವ ಮತ್ತು ಅನುಗ್ರಹ ಇವುಗಳು ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರ ಮತ್ತು ಸದಾಶಿವರ ಪ್ರತ್ಯೇಕ ಕ್ರಿಯೆಗಳಾಗಿವೆ. ಈ ವಿಶ್ವದ ಚಟುವಟಿಕೆಯೇ ಈ ನೃತ್ಯದ ಮುಖ್ಯ ಉದ್ದೇಶವಾಗಿದೆ.[೯೯]

ಶೈವಾಗಮಗಳು ಶಿವನ ನೃತ್ಯಮೂರ್ತಿಯ ಪ್ರತಿಮಾ ಲಕ್ಷಣಗಳು ಹಾಗೂ ಅಳತೆ ಪ್ರಮಾಣಗಳನ್ನು ಹೇಳುತ್ತವೆ. ಕಾಮಿಕಾಗಮ,[೧೦೦] ಕಾರಣಾಗಮ,[೧೦೧] ಕಾಶ್ಯಪ ಶಿಲ್ಪಶಾಸ್ತ್ರ,[೧೦೨] ರೌರವಾಗಮ,[೧೦೩] ಅಜಿತಾಗಮ[೧೦೪] ಮತ್ತು ಶಿಲ್ಪರತ್ನಗಳು[೧೦೫] ಶಿವನ ನೃತ್ಯಮೂರ್ತಿ ರೂಪದ ಪ್ರತಿಮಾ ಲಕ್ಷಣಗಳನ್ನು ಹೇಳುತ್ತವೆ. ಈ ಎಲ್ಲ ಆಗಮಗಳಲ್ಲಿನ ವಿವರಣೆಯನ್ನು ಟಿ.ಎ.ಗೋಪಿನಾಥರಾವ್.[೧೦೬] ಮತ್ತು ಜ್ಞಾನಾನಂದ[೧೦೭] ಅವರು ಒಟ್ಟಾರೆಯಾಗಿ ಈ ರೀತಿಯಾಗಿ ನೀಡಿರುವರು.

ಅಂಶುಮಭ್ಭೇದಾಗಮವು ನಟರಾಜನ ಶಿಲ್ಪವು ಉತ್ತಮ ದಶತಾಲಮಾನದಲ್ಲಿರಬೇಕು. ನಟರಾಜ ಮೂರ್ತಿಗೆ ನಾಲ್ಕು ಬಾಹುಗಳು ಎರಡು ಕಾಲುಗಳು ಇದ್ದು, ಮುಂದಿನ ಎಡಬಾಹು ದಂಡಹಸ್ತ

ಅಥವಾ ಗಜಹಸ್ತದಲ್ಲಿರಬೇಕು. ಮೇಲಿರುವ ಎಡಗೈಯಲ್ಲಿ ಒಂದು ಪಾತ್ರೆಯಲ್ಲಾಗಲಿ ಅಥವಾ ಅಂಗೈಯಲ್ಲಿ ಆಗಲಿ ಅಗ್ನಿ ಇರುತ್ತದೆ. ಆದರೆ ಅಗ್ನಿಯು ಅಂಗೈ ಮಧ್ಯದಲ್ಲಿದ್ದು, ನಡು ಬೆರಳಿನ ಕೊನೆಯ ಅಥವಾ ಮಧ್ಯ ಪರ್ವದಿಂದಾಗಲಿ ಅಥವಾ ತುದಿ ಪರ್ವದಿಂದಾಗಲಿ ಹಿಡಿದಿರುವಂತಿರಬೇಕು. ಮುಂದಿನ ಬಲ ಹಸ್ತವನ್ನು ಅಭಯ ಮುದ್ರೆಯಲ್ಲಿರಿಸಿಕೊಂಡಿರಬೇಕು. ಆ ಹಸ್ತದ ಮಧ್ಯ ಬೆರಳು ಹಿಕ್ಕಾಸೂತ್ರವನ್ನು ಮುಟ್ಟುವಂತಿರಬೇಕು. ಈ ಬಾಹುವಿನ ಮುಂಗೈ ಮೇಲೆ ಸರ್ಪವಲಯವಿರಬೇಕು. ಅದನ್ನು ಭುಜಂಗ ವಲಯ ಎನ್ನುತ್ತಾರೆ. ಹಿಂದಿನ ಎಡಹಸ್ತದಲ್ಲಿ ಡಮರುಗ ಇರಬೇಕು. ಬಲಗಾಲು ಸ್ವಲ್ಪವಾಗಿ ಕುಂಚಿತವಾಗಿದ್ದು ಅಪಸ್ಮಾರ ಪುರುಷನ ಬೆನ್ನಿನ ಮೇಲೆ ಬಲವಾಗಿ ಊರಿರುತ್ತದೆ. ಎಡಗಾಲು ಬಲ ಮೊಣಕಾಲಿನ ತನಕ ಎತ್ತಲ್ಪಟ್ಟಿದ್ದು, ಎಡ ಮೊಣಕಾಲು ನಾಭಿಸೂತ್ರವನ್ನು ಸ್ಪರ್ಶಿಸುವಂತಿರಬೇಕು. ಎಡಗಾಲು ಮೇಲಕ್ಕೆ ಎತ್ತಲ್ಪಟ್ಟಿದ್ದು, ಬಲಗಾಲಿನ ಕಡೆಗೆ ತಿರುಗಿರುತ್ತದೆ. ಈ ಮೂರ್ತಿಯು ಜಟಾಮುಕುಟದಿಂದ ಅಲಂಕೃತನಾಗಿದ್ದು, ಹೂ, ಮಾಲೆಗಳು, ದತ್ತೂರ ಹೂ, ಅರ್ಕದ ಹೂ, ಸರ್ಪ, ತಲೆಬುರುಡೆ, ಬಾಲಚಂದ್ರ, ಹಲವು ಬಗೆಯ ಆಭರಣಗಳನ್ನು ಧರಿಸಿರುತ್ತಾನೆ. ತಾಂಡವ ನಾಟ್ಯದ ವೇಗದದಿಂದ ಜಟೆಗಳು ಇಕ್ಕೆಲಗಳಲ್ಲೂ ವ್ಯಾಪಿಸಿರುತ್ತವೆ. ಜಟೆಗಳ ಸಂಖ್ಯೆಯು ಇಕ್ಕೆಲಗಳಲ್ಲೂ ಐದು, ಆರು, ಏಳು ಅಥವಾ ಹನ್ನೊಂದು ಜಟೆಗಳು ಇರಬಹುದು. ಇದನ್ನು ಭೂಮಿಗೆ ಸಮತಲದಲ್ಲಿರುವಂತೆ ಅಥವಾ ತಲೆಯ ಸುತ್ತಲೂ ವರ್ತುಲವಾಗಿರುವಂತೆ ರೂಪಿಸಿ ಜೋಡಿಸಬಹುದು. ಶಿವನು ಯಜ್ಞೋಪವೀತ ಮತ್ತು ಉರುಸೂತ್ರಗಳನ್ನು ಧರಿಸಿರಬೇಕು. ಮಧ್ಯ ಬೆರಳುಗಳ ವಿನಾ ಇತರ ಎಲ್ಲಾ ಕೈಬೆರಳುಗಳಿಗೂ ಉಂಗುರಗಳು ಇರಬೇಕು. ಅದೇ ರೀತಿಯಾಗಿ ಕಾಲುಗಳಲ್ಲೂ ಮಧ್ಯ ಬೆರಳುಗಳ ವಿನಾ ಇತರ ಬೆರಳುಗಳಿಗೆ ಉಂಗುರ ಧರಿಸಿರಬೇಕು. ಪಾದಗಳಲ್ಲಿ ಅಂದಿಗೆಗಳನ್ನು, ಇತರ ಮಾಲೆಗಳನ್ನು ಧರಿಸಿರಬೇಕು. ಮುಖದಲ್ಲಿ ನಗು ಇರಬೇಕು. ಎದೆಯ ಮೇಲೆ ಗಂಧವನ್ನು ಸವರಿಕೊಂಡು ಉಳಿದ ಭಾಗಗಳಿಗೆ ವಿಭೂತಿಯನ್ನು ಹಚ್ಚಿಕೊಂಡಿರಬೇಕು. ದೇವನು ಧರಿಸಿರುವ ಉಡುಗೆಯು ಹುಲಿಯ ಚರ್ಮದಿಂದ ಮಾಡಿರಬೇಕು. ಅಪಸ್ಮಾರ ಮೂರ್ತಿಯು ಉತ್ತಮ ಚತುಸ್ತಾಲದಲ್ಲಿರಬೇಕು. ಎರಡು ತೋಳು, ಎರಡು ಕಣ್ಣುಗಳಿದ್ದು ಬೋರಲಾಗಿರಬೇಕು. ಅವನ ಮುಖವು ನೆಲವನ್ನಾಗಲಿ ಮೇಲಾಗಲಿ ನೋಡುವಂತಿರಬೇಕು. ಕೈಯಲ್ಲಿ ಹೆಡೆ ಎತ್ತಿಕೊಂಡಿರುವ ನಾಗ ಸರ್ಪವಿರಬೇಕು. ಅಪಸ್ಮಾರ ಪುರುಷನ ತಲೆಯು ಬಲಗಡೆಗೆ ಇದ್ದು ಶಿವನ ಕಾಲು ಎಡಗಡೆಗೆ ಇರಬೇಕು. ಹಾಗೂ ಅವನು ಕಪ್ಪು ಬಣ್ಣದಲ್ಲಿರಬೇಕು. ಅವನ ಹಸ್ತವು ನಾಗಮುದ್ರೆಯಲ್ಲಿರಬೇಕು. ಕೆಂಪುತಲೆಗೂದಲಿನೊಂದಿಗೆ ಜಟಾಬಂಧದೊಂದಿಗೆ ಇರಬೇಕು. ಕೊರಳಲ್ಲಿ ಕಂಠ ಮುಂಗೈಗಳಲ್ಲಿ ಕಡಗಗಳು, ಕಾಲಲ್ಲಿ ಅಂದಿಗೆಗಳು ಉದರ ಬಂಧ, ತೋಳ್ಬಂದಿಗಳೊಂದಿಗೆ ಇರಬೇಕು. ಹೊಟ್ಟೆ ಗುಡಾಣದಂತಿರಬೇಕು. ಮುಖ ತುಂಬಿಕೊಂಡು ಕುಬ್ಜಾಕಾರದ ರಾಕ್ಷಸ ರೂಪದಲ್ಲಿ ಹೆದರಿದವನಂತೆ ಇರಬೇಕು.

ನಟರಾಜ ಮೂರ್ತಿಯ ಎಡಪಾರ್ಶ್ವದಲ್ಲಿ ದೇವಿಯು ನಿಂತಿರಬೇಕು. ದೇವಿಯು ಉಮಾ ಸಹಿತ ಚಂದ್ರಶೇಖರ ಮೂರ್ತಿಯನ್ನು ವಿವರಿಸಿರುವಂತೆಯೇ ಇಲ್ಲೂ ಇರಬೇಕು.

ಇದು ಅಂಶುಮದ್ಭೇದಾಗಮದಲ್ಲಿರುವ ಮೊದಲನೇ ನೃತ್ಯ ಪ್ರಕಾರ. ಉತ್ತರ ಕಾಮಿಕಾಗಮದಲ್ಲಿ ಇನ್ನೂ ಕೆಲವು ಹೆಚ್ಚಿನ ವಿವರಗಳು ದೊರೆಯುತ್ತವೆ. ಶಿವನ ಜಟೆಗಳು ಜಟಾಮುಕುಟದ ಸುತ್ತಲೂ ಹರಡಿರಬೇಕು. ಈ ಜಟೆಗಳು ಒಂದರಿಂದ ಇನ್ನೊಂದು ಪ್ರತ್ಯೇಕವಾಗಿದ್ದು, ಇವುಗಳ ಸಂಖ್ಯೆಯು ಐದರಿಂದ ಮೂವತ್ತರ ತನಕ ಇರಬಹುದು. ಜಟೆಯಿಂದ ಜಟೆಗೆ ಇರುವ ಅಂತರದಲ್ಲಿ ದತ್ತೂರ ಮತ್ತು ಆರ್ಕದ ಹೂಗಳು ಇರಬಹುದು. ಜಟೆಗಳ ಬಣ್ಣವು ಕಂದು ಜಟೆಗಳಲ್ಲಿ ಬಲಗಡೆಗೆ ಗಂಗೆಯ ರೂಪ ಇರಬೇಕು. ಮೇಲ್ಭಾಗವು ಸ್ತ್ರೀರೂಪದಲ್ಲಿದ್ದು, ಕೆಳಭಾಗವು ನೀರಿನ ಪ್ರವಾಹದಂತೆ ಇರಬೇಕು. ಆಕೆಯು ಅಂಜಲೀಬದ್ಧ ಮುದ್ರೆಯಲ್ಲಿರಬೇಕು. ಜಟೆಗಳ ಎಡಗಡೆಗೆ ಬಾಲಚಂದ್ರ ಇರಬೇಕು. ಶಿವನ ಕೊರಳಲ್ಲಿ ಬಗೆ–ಬಗೆಯ ಮಾಲೆಗಳಿರಬೇಕು. ಮುತ್ತಿನಹಾರ, ಸರ್ಪಹಾರ, ವಕುಳ ಪುಷ್ಪಗಳ ಮಾಲೆ, ಕಪ್ಪೆ–ಚಿಪ್ಪುಗಳ ಮಾಲೆ, ಕಾಡುಹಂದಿಯ ಕೋರೆಗಳಿಂದ ಮಾಡಿರುವ ಮಾಲೆ, ಹುಲಿಯುಗುರುಗಳ ಮಾಲೆ, ಬಗೆಬಗೆಯ ಮಣಿಗಳ ಹಾರ, ಆಮೆಯ ಚಿಪ್ಪಿನ ಮುದ್ರಿಕೆ, ಎಡಭುಜದ ಮೇಲೆ ಹುಲಿಚರ್ಮದ ಉತ್ತರೀಯ, ಚಿರತೆಯ ಚರ್ಮದ ವಸ್ತ್ರ, ನಯವಾದ ನೂಲಿನ ಬಟ್ಟೆ, ಎಡಕಿವಿಯಲ್ಲಿ ಪತ್ರಕುಂಡಲ, ಬಲಕಿವಿಯಲ್ಲಿ ನಕ್ರಕುಂಡಲ, ಪಾದಗಳಲ್ಲಿ ಗೆಜ್ಜೆಗಳು, ಅಂದಿಗೆಗಳು ಇರಬೇಕು. ನಟರಾಜನ ದೇಹವು ಹಾಲು ಬಿಳುಪಾಗಿರಬೇಕು. ಗಂಗೆಯ ಎತ್ತರವು ಶಿವನ ಮುಖದಷ್ಟಿರಬೇಕು. ಆಕೆಗೆ ಮೂರು ಕಣ್ಣು ಎರಡು ಭುಜಗಳಿದ್ದು, ಅಂಜಲೀಬದ್ಧ, ಮುದ್ರೆಯಲ್ಲಿರಬೇಕು. ಕರಂಡ ಮುಕುಟದೊಂದಿಗೆ ಸರ್ವಾಭರಣಗಳಿಂದ ಅಲಂಕೃತಳಾಗಿರಬೇಕು. ನಟರಾಜನ ಬಲಕ್ಕೆ ಭೃಂಗಿಯಾಗಲಿ, ಭದ್ರಕಾಳಿಯಾಗಲೀ ಇರಬೇಕು.

ಭುಜಂಗತ್ರಾಸಿತ ನೃತ್ಯ ಭಂಗಿಯಲ್ಲಿ ನಟರಾಜನು ಇರುವ ಪ್ರತಿಮೆಗಳಿವೆ. ನಟನು ಈ ನೃತ್ಯದಲ್ಲಿ ಹಾವು ಹತ್ತಿರಕ್ಕೆ ಬಂದಾಗ ಹಠಾತ್ತನೆ ಕಾಲನ್ನು ಮೇಲಕ್ಕೆತ್ತಿರುವಂತೆ ಎತ್ತಿರುತ್ತಾನಾದ್ದರಿಂದ ಈ ನೃತ್ಯಕ್ಕೆ ಭುಜಂಗತ್ರಾಸಿತ ನೃತ್ಯವೆಂದು ಹೆಸರಾಗಿದೆ. ಇದರಲ್ಲಿ ಒಂದು ಕಾಲು ತ್ರಿಕೋನಾಕೃತಿಯಲ್ಲಿ ಮಡಚಿದ್ದು, ಪೃಷ್ಠಭಾಗ ಮತ್ತು ಮೊಣಕಾಲು ಒಂದು ಕಡೆಗೆ ಸ್ವಲ್ಪ ತಿರುಗಿಸಿರುತ್ತಾನೆ. ಈ ಭಂಗಿಯಲ್ಲಿ ನಟನು ಸ್ಥಿರನಾಗಿರುವುದಿಲ್ಲ ಎನಿಸುತ್ತದೆ. ಒಂದು ಕೈ ಡೋಲಹಸ್ತ ಮುದ್ರೆಯಲ್ಲಿಯೂ ಇನ್ನೊಂದು ಕಟಕ ಮುದ್ರೆಯಲ್ಲಿಯೂ ಇರಬೇಕು. ಹಸ್ತವು ಪತಾಕ ಹಸ್ತದಿಂದ ತೂಗಾಡುತ್ತಿರುವಂತೆ ಇರುತ್ತದೆ.

ಶಿಲ್ಪರತ್ನವು ನೃತ್ಯಮೂರ್ತಿಯ ಸುತ್ತಲೂ ಸೂರ್ಯ ಮಂಡಲದಂತೆ ಪ್ರಭಾಮಂಡಲವೊಂದಿರಬೇಕು ಎಂದು ಹೇಳಿದರೆ, ಪೂರ್ವ ಕಾರಣಾಗಮ ಬಲಕಿವಿಯಲ್ಲಿ ನಕ್ರಕುಂಡಲ ಮತ್ತು ಎಡಕಿವಿಯಲ್ಲಿ ಪತ್ರಕುಂಡಲವಿದ್ದು, ಶಿವನು ಹುಲಿ ಚರ್ಮವನ್ನು ಧರಿಸಿರಬೇಕು. ಎಡಹಸ್ತಲ್ಲಿರುವ ಅಗ್ನಿಯಲ್ಲಿ ಮೂರು ಜಾಲ್ವೆಗಳಿರಬೇಕು. ಅಪಸ್ಮಾರ ಪುರುಷನು ಚತುಸ್ತಾಲದಲ್ಲಿದ್ದು ತ್ರಿಭಂಗಿಯಲ್ಲಿರಬೇಕು ಎಂದು ಹೇಳುತ್ತದೆ.

ಹಂಪಿ ಪರಿಸರದಲ್ಲಿ ಒಟ್ಟು ೯ ನಟರಾಜ ಶಿಲ್ಪಗಳು ದೊರೆತಿವೆ. ಅವುಗಳು ವಿರೂಪಾಕ್ಷ ದೇವಾಲಯ (೧), ಹರಿಹರ ದೇವಾಲಯ (೧), ಉಮಾಮಹೇಶ್ವರ ದೇವಾಲಯ (೧), ತಿರುವೆಂಗಳ ನಾಥ ಅಥವಾ ಅಚ್ಯುತರಾಯ ದೇವಾಲಯ (೧), ನಿಂಬಾಪುರದ ಸೌಮ್ಯಸೋಮೇಶ್ವರ ದೇವಾಲಯ (೧), ತಿಮ್ಮಲಾಪುರದ ತ್ರಿಕೂಟ ದೇವಾಲಯ (೩) ಹಾಗೂ ಹೊಸಪೇಟೆಯ ಜಂಬುನಾಥ ದೇವಾಲಯ (೧)ದಲ್ಲಿ ಕಂಡುಬಂದಿವೆ.

ಹಂಪಿಯ ವಿರೂಪಾಕ್ಷ ದೇವಾಲಯದ ನೂರು ಕಂಬಗಳ ಮಂಟಪ ಅಥವಾ ಕಲ್ಯಾಣ ಮಂಟಪದ ಮೊದಲನೇ ಕಂಬದಲ್ಲಿ ಹಾಗೂ ತಿಮ್ಮಲಾಪುರದ ತ್ರಿಕೂಟ ದೇವಾಲಯದ ೪ನೇ ಮತ್ತು ೯ನೇ ಕಂಬಗಳಲ್ಲಿ ಹಾಗೂ ನಿಂಬಾಪುರದ ಸೌಮ್ಯಸೋಮೇಶ್ವರ ದೇವಾಲಯದ ೩ನೇ ಕಂಬದಲ್ಲಿ ಕಂಡುಬರುವ ನಟರಾಜ ಶಿಲ್ಪಗಳು ಒಂದೇ ಪ್ರತಿಮಾ ಲಕ್ಷಣಗಳನ್ನು ಹೊಂದಿವೆ. ಇಲ್ಲಿ ಶಿವನು ಚತುರ್ಭುಜಗಳನ್ನು ಹೊಂದಿದ್ದು, ಬಲಭಾಗದ ಮುಂದಿನ ಹಸ್ತವು ಅಭಯ ಮುದ್ರೆಯಲ್ಲಿ ಹಾಗೂ ಹಿಂದಿನ ಹಸ್ತದಲ್ಲಿ ಡಮರುಗವನ್ನು ಹಿಡಿದಿರುವನು. ಎಡಹಸ್ತಗಳಲ್ಲಿ ಮುಂದಿನದು ಗಜಹಸ್ತ ಅಥವಾ ದಂಡ ಹಸ್ತದಲ್ಲಿರುವುದು. ಹಿಂದಿನದು ಅಗ್ನಿಯನ್ನು ಹಿಡಿದಿರುವುದು. ಬಲಗಾಲನ್ನು ಪೀಠದ ಮೇಲೆ ಬೋರಲಾಗಿ ಮಲಗಿರುವ ಅಪಸ್ಮಾರನ ಬೆನ್ನ ಮೇಲೆ ಬಲವಾಗಿ ಊರಿರುವನು. ಹಾಗೂ ಅದು ಕುಂಚಿತಪಾದದಲ್ಲಿರುವುದು. ಎಡಗಾಲನ್ನು ಮೇಲೆತ್ತಿದ್ದು, ಭುಜಂಗತ್ರಾಸಿತ ಭಂಗಿಯಲ್ಲಿರುವನು. ಶಿವನ ಜಟೆಗಳು ಅವನ ಎಡ-ಬಲಗಳಲ್ಲಿ ಹರಡಿರುವನು. ಕರ್ಣಕುಂಡಲಗಳು, ಕೊರಳ ಹಾರಗಳು, ಕಂಕಣಗಳು, ಹಾಗೂ ಕಾಲ್ಕಡಗಳನ್ನು ಧರಿಸಿರುವನು. ಶಿವನ ಕಾಲ ಕೆಳಗೆ ಇರುವ ಅಪಸ್ಮಾರ ಪುರುಷನ ಮುಖವು ಶಿವನ ಬಲಕ್ಕೆ ಇರುವುದು. ಅವನ ಕೈಗಳಲ್ಲಿರುವ ವಸ್ತುವು ಸ್ಪಷ್ಟವಿಲ್ಲ. ಈ ನಾಲ್ಕು ಶಿಲ್ಪಗಳಲ್ಲಿ ತಿಮ್ಮಲಾಪುರದ ತ್ರಿಕೂಟ ದೇವಾಲಯದ ನವರಂಗದ ೯ನೇ ಕಂಬದಲ್ಲಿರುವ ಶಿಲ್ಪವನ್ನು ಹೊರತುಪಡಿಸಿ ಉಳಿದ ಮೂರು ಶಿಲ್ಪಗಳ ಸುತ್ತಲೂ ಪ್ರಭಾಮಂಡಲವಿದೆ. ಹಾಗೂ ಇದೇ ಶಿಲ್ಪಕ್ಕೆ ಜಟಾಮುಕುಟದ ಮಧ್ಯದಲ್ಲಿ ಗಂಗೆಯ ಮುಖವನ್ನು ತೋರಿಸಲಾಗಿದೆ. ಹಾಗೂ ಹರಿಹರ ದೇವಾಲಯದ ೧ನೇ ಕಂಬದಲ್ಲಿರುವ ನಟರಾಜ ಶಿಲ್ಪ, ಉಮಾ ಮಹೇಶ್ವರ ದೇವಾಲಯದ ೭ನೇ ಕಂಬದಲ್ಲಿರುವ ಶಿಲ್ಪ, ಹೊಸಪೇಟೆಯ ಜಂಬುನಾಥ ದೇವಾಲಯದಲ್ಲಿರುವ ನಟರಾಜ ಹಾಗೂ ತಿಮ್ಮಲಾಪುರದ ತ್ರಿಕೂಟ ದೇವಾಲಯ, ನವರಂಗದಲ್ಲಿನ ೫ನೇ ಕಂಬದಲ್ಲಿ ದೊರೆಯುವ ನಟರಾಜ ಶಿಲ್ಪಗಳು ಭಿನ್ನ-ಭಿನ್ನ ಲಕ್ಷಣಗಳನ್ನು ಹೊಂದಿವೆ. ಹರಿಹರ ದೇವಾಲಯದಲ್ಲಿನ ನಟರಾಜ ಶಿಲ್ಪವು ಬಲಗಾಲು(ನೇರವಾಗಿ) ಸ್ಥಿರಪಾದವಿದ್ದು, ಎಡಗಾಲನ್ನು ಮೇಲಕ್ಕೆತ್ತಿರುವನು. ಹಾಗೂ ಮುಂದಿನ ಕೈಗಳು ಅಭಯ ಮತ್ತು ವರದ ಮುದ್ರೆಯಲ್ಲಿರುವನು. ಹಿಂದಿನ ಕೈಗಳಲ್ಲಿರುವ ಆಯುಧಗಳು ಸ್ಪಷ್ಟವಾಗಿಲ್ಲ. ಜಂಬುನಾಥ ದೇವಾಲಯದಲ್ಲಿನ ಮಹಾಮಂಟಪದ ೨೬ನೇ ಕಂಬದಲ್ಲಿನ ಶಿಲ್ಪದಲ್ಲಿ ನಟರಾಜನು ಬಲಗಾಲನ್ನು ನೆಲಕ್ಕೆ ಭದ್ರವಾಗಿ ಊರಿದ್ದು, ಎಡಗಾಲನ್ನು ಮೇಲೆತ್ತಿರುವನು. ಮುಂದಿನ ಎರಡು ಹಸ್ತಗಳು ಅಭಯ ಮತ್ತು ದಂಡಹಸ್ತ ಅಥವಾ ಗಜಹಸ್ತದಲ್ಲಿರುವುದು. ಹಿಂದಿನ ಕೈಗಳಲ್ಲಿ ಬಲಗೈಯು ಮೃಗವನ್ನು ಎಡಗೈಯು ಡಮರುವನ್ನು ಹಿಡಿದಿರುವುದು. ಶಿವನ ಕಾಲಬಳಿ ಕತ್ತಿ ಮತ್ತು ಗುರಾಣಿಯನ್ನು ಹಿಡಿದ ಅಪಸ್ಮಾರ ಪುರುಷನಿರುವನು. ಆದರೆ ಶಿವನು ತನ್ನ ಕಾಲನ್ನು ಅಪಸ್ಮಾರನ ಮೇಲೆ ಇರಿಸದಿರುವುದು ವಿಶೇಷವಾಗಿದೆ. ಹಾಗೂ ತಿಮ್ಮಲಾಪುರದ ತ್ರಿಕೂಟದಲ್ಲಿನ ನವರಂಗದ ೫ನೇ ಕಂಬದಲ್ಲಿನ ನಟರಾಜ ಶಿಲ್ಪವು ಭಿನ್ನ ಲಕ್ಷಣಗಳನ್ನು ಹೊಂದಿದೆ. ಇಲ್ಲಿ ಶಿವನು ಅಪಸ್ಮಾರನ ಮೇಲೆ ತನ್ನ ಎಡಗಾಲನ್ನು ಊರಿ, ಬಲಗಾಲನ್ನು ಮೇಲಕ್ಕೆತ್ತಿರುವನು. ಮುಂದಿನ ಎಡಗೈಯು ಅಭಯ, ಮುಂದಿನ ಬಲಗೈಯು ಗಜಹಸ್ತದಲ್ಲಿರುವುದು. ಹಿಂದಿನ ಬಲಹಸ್ತವು ತ್ರಿಶೂಲವನ್ನು ಹಾಗೂ ಹಿಂದಿನ ಎಡಹಸ್ತವು ಡಮರುವನ್ನು ಹಿಡಿದಿರುವನು. ಹೀಗೆ ಈ ಮೂರ್ತಿ ಶಿಲ್ಪಗಳು ಭಿನ್ನ ಪ್ರತಿಮಾ ಲಕ್ಷಣಗಳನ್ನು ಹೊಂದಿವೆ. ಈ ಮೇಲಿನ ಎಲ್ಲ ಶಿಲ್ಪಗಳಿಗಿಂತ ಭಿನ್ನವಾದದ್ದು ಮತ್ತು

ಮುಖ್ಯವಾದದ್ದು ಅಚ್ಯುತರಾಯ ಅಥವಾ ತಿರುವೇಂಗಳನಾಥ ದೇವಾಲಯದ ನೂರು ಕಂಬಗಳ ಮಂಟಪದ ಕಂಬದಲ್ಲಿ ಕೆತ್ತಲಾಗಿರುವ ವಿಶಿಷ್ಟ ಪ್ರಕಾರದ ನಟರಾಜ ಶಿಲ್ಪ. ಇದು ಊರ್ಧ್ವ ತಾಂಡವ ಮೂರ್ತಿಯ ಪ್ರಕಾರವೆಂದು ವಸಂತಲಕ್ಷ್ಮಿಯವರು[೧೦೮] ಗುರುತಿಸಿರುವರು. ಇಲ್ಲಿ ಶಿವನು ಷಡ್ಭುಜಗಳನ್ನು ಹೊಂದಿರುವನು. ಬಲಭಾಗದ ಹಸ್ತಗಳಲ್ಲಿ ಮುಂದಿನದು ಎಡಭಾಗದ ಮುಂದಿನ ಹಸ್ತವು ಹಿಡಿದಿರುವ ಡಮರುಗವನ್ನು ಬಾರಿಸುತ್ತಿರುವಂತೆ ಕೆತ್ತಲಾಗಿದೆ. ಮಧ್ಯದಲ್ಲಿರುವ ಹಸ್ತವು ಕೆಳಭಾಗದಲ್ಲಿರುವ ಮೃಗದ ಬಾಯಿಯವರೆಗೆ ಚಾಚಿದೆ. ಹಿಂದಿನ ಹಸ್ತದಲ್ಲಿ ಡಮರುವನ್ನು ಹಿಡಿದಿರುವನು. ಎಡಭಾಗದಲ್ಲಿನ ಮಧ್ಯದಲ್ಲಿನ ಹಸ್ತವು ತ್ರಿಶೂಲವನ್ನು ಹಿಡಿದಿರುವುದು ಹಾಗೂ ಹಿಂದಿನ ಹಸ್ತವು ಮೇಲೆತ್ತಿರುವ ಕಾಲಿನ ಅಂಗುಷ್ಠವನ್ನು ಹಿಡಿದಿರುವನು. ಇಲ್ಲಿ ಶಿವನು ತನ್ನ ಬಲಗಾಲನ್ನು ಮುಕುಟದವರೆಗೆ ಎತ್ತಿ ನರ್ತಿಸುತ್ತಿದ್ದಾನೆ. ಹಾಗೂ ಭೂಮಿ ಸ್ಥಿರವಾಗಿರುವ ಎಡಗಾಲು ಬಾಗಿದಂತಿರುವುದು. ಶಿವನು ಕಿರೀಟಮುಕುಟ, ಕರ್ಣಾಭರಣಗಳನ್ನು ಧರಿಸಿರುವನು. ಹಾಗೂ ಮೊಣಕಾಲ ಮೇಲ್ಭಾದವರೆಗಿನ ವಸ್ತ್ರವನ್ನು ಧರಿಸಿರುವನು. ಗೋಪಿನಾಥರಾವ್ ಟಿ.ಎ.[೧೦೯] ಅವರು ಈ ರೀತಿ ಕಾಲನ್ನು ಮೇಲೆತ್ತಿರುವ ಲಕ್ಷಣಗಳುಳ್ಳ ಮೂರ್ತಿಯನ್ನು ಲಲಾಟ ತಿಲಕಮೂರ್ತಿ ಎಂದು ವಿವರಿಸಿರುವರು. ಹಾಗೂ ಇದನ್ನು ವೃಶ್ಚಿಕ ಭಂಗಿ ಎಂದು ಹೆಸರಿಸಿರಬೇಕು.

ಒಟ್ಟಾರೆ ಈ ಮೇಲಿನ ನಟರಾಜ ಶಿಲ್ಪಗಳಲ್ಲಿ ಮೊದಲು ವಿವರಿಸಿದ ನಾಲ್ಕು ಶಿಲ್ಪಗಳು ಅಂಶುಮದ್ಭೇದಾಗಮ ಮತ್ತು ಶಿಲ್ಪರತ್ನವು ಹೇಳಿರುವ ಲಕ್ಷಣಗಳನ್ನು ಒಳಗೊಂಡಿರುವುದರಿಂದ, ಇವುಗಳು ಆಗಮವನ್ನು ಅನುಸರಿಸಿ ಕೆತ್ತಲಾಗಿರುವ ಶಿಲ್ಪಗಳಾಗಿವೆ. ನಂತರದಲ್ಲಿ ವಿವರಿಸಿದ ಮೂರು ಶಿಲ್ಪಗಳು ಆಗಮ ರಹಿತ ಶಿಲ್ಪಗಳಾಗಿವೆ. ಹಾಗೂ ಕೊನೆಯಲ್ಲಿ ವಿವರಿಸಿದ ನಟರಾಜ ಶಿಲ್ಪವು ಆ ಭಂಗಿಯಲ್ಲಿ ದೊರೆತಿರುವ ಏಕೈಕ ಶಿಲ್ಪವಾಗಿದೆ. ಇದು ನಾಟ್ಯ ಪ್ರಕಾರಗಳಲ್ಲಿ ಒಂದು ಪ್ರಕಾರವನ್ನು ತೋರಿಸುತ್ತಿರುವ ಶಿಲ್ಪವಾಗಿದೆ.

**ನಟರಾಜ ಶಿಲ್ಪಗಳು**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ನೂರುಕಂಬಗಳ ಮಂಟಪದ ೧ನೇ ಕಂಬ | ೧ |
| ಹಂಪಿ | ಹರಿಹರ | ಮಂಟಪದ ೧ನೇ ಕಂಬ | ೧ |
| ಹಂಪಿ | ಉಮಾಮಹೇಶ್ವರ | ಮಂಟಪದ ೭ನೇ ಕಂಬ | ೧ |
| ಹಂಪಿ | ಅಚ್ಯುತರಾಯ | ನೂರುಕಂಬಗಳ ಮಂಟಪದ ೮೧ನೇ ಕಂಬ | ೧ |
| ನಿಂಬಾಪುರ | ಸೌಮ್ಯ ಸೋಮೇಶ್ವರ | ನವರಂಗದ ಕಂಬ | ೧ |
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ನವರಂಗದ ೪ನೇ ಕಂಬ | ೧ |
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ನವರಂಗದ ೫ನೇ ಕಂಬ | ೧ |
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ನವರಂಗದ ೯ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೨೬ನೇ ಕಂಬ | ೧ |
| ಒಟ್ಟು | | | ೯ |



ನಟರಾಜ, ವಿರೂಪಾಕ್ಷ ದೇವಾಲಯ, ಹಂಪಿ



ನಟರಾಜ, ಅಚ್ಯುತರಾಯ ದೇವಾಲಯ, ಹಂಪಿ



ನಟರಾಜ, ಜಂಬುನಾಥ ದೇವಾಲಯ, ಹೊಸಪೇಟೆ



ನಟರಾಜ, ತ್ರಿಕೂಟ ದೇವಾಲಯ, ತಿಮ್ಮಾಲಾಪುರ

## ದಕ್ಷಿಣಾ ಮೂರ್ತಿ

ದಕ್ಷಿಣಾಮೂರ್ತಿ ರೂಪವು ಶಿವನ ಲೀಲಾಮೂರ್ತಿಗಳಲ್ಲಿ ಒಂದು. ಇದು ಎಲ್ಲ ಶೈವ ದೇವಾಲಯಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಮೂರ್ತಿರೂಪವಾಗಿದೆ. ಶಿವನು ಯೋಗ ವಿದ್ಯಾ ಪ್ರವೀಣ. ನೃತ್ಯಮೂರ್ತಿಗಳ ಬಗ್ಗೆ ಹೇಳುವಾಗ ಸಂಗೀತ ಮತ್ತು ನೃತ್ಯಗಳಲ್ಲಿ ಶಿವನ ಪ್ರಾವೀಣ್ಯವನ್ನು ನಾವು ಕಂಡುಕೊಂಡಿದ್ದೇವೆ. ಸಂಗೀತ–ನೃತ್ಯ–ಯೋಗ ವಿದ್ಯೆಗಳ ಉಪದೇಶಕನಾಗಿ ಶಿವನು ದಕ್ಷಿಣಾ ಮೂರ್ತಿ ಎಂದು ಹೆಸರಾಗಿದ್ದಾನೆ. ಈ ಲೀಲಾಮೂರ್ತಿಯ ಹಿನ್ನಲೆಯ ಕಥೆ ಈ ಕೆಳಗಿನಂತೆ ಇದೆ.

ಋಷಿಗಳಿಗೆ ಶಿವನು ಯೋಗ ಮತ್ತು ಜ್ಞಾನಗಳನ್ನು ಬೋಧಿಸುವಾಗ ದಕ್ಷಿಣಾಭಿಮುಖವಾಗಿ ಕುಳಿತಿರುತ್ತಿದ್ದುದರಿಂದ, ದಕ್ಷಿಣಾಮೂರ್ತಿ ಎಂದು ಕರೆಯಲ್ಪಟ್ಟನಂತೆ. ಶಿವನ ಈ ಅವತಾರವನ್ನು ವಿದ್ಯಾರ್ಥಿಗಳು ಬಹುವಾಗಿ ಪೂಜಿಸುತ್ತಾರೆ. ಶಾಂತ ಭಾವಕ್ಕೆ ಹೆಸರಾದ ಈ ಮೂರ್ತಿಯನ್ನು ಸ್ತುತಿಸಿರುವ ಮಹನೀಯರಲ್ಲಿ ಶಂಕರಾಚಾರ್ಯರು ಕೂಡ ಒಬ್ಬರು. ನೃತ್ಯಮೂರ್ತಿಗಳು ಸಂತೋಷಕ್ಕೆ ಹೆಸರಾಗಿರುವಂತೆಯೇ, ದಕ್ಷಿಣಾ ಮೂರ್ತಿಯು ಶಾಂತಭಾವಕ್ಕೆ ಹೆಸರಾಗಿದ್ದಾನೆ. ದಕ್ಷಿಣಾಮೂರ್ತಿಯನ್ನು ನಾಲ್ಕು ವಿವಿಧ ರೂಪಗಳಲ್ಲಿ ದರ್ಶಿಸಲಾಗುತ್ತದೆ. ಯೋಗ, ಜ್ಞಾನ, ವ್ಯಾಖ್ಯಾನ ಮತ್ತು ವೀಣಾ ರೂಪಗಳಲ್ಲಿ ಶೈವ ಅಥವಾ ವೈಷ್ಣವ ದೇವಾಲಯಗಳಲ್ಲಿ ಪ್ರಧಾನವಾದ ಮಧ್ಯ ದಕ್ಷಿಣ ಗೋಡೆಯಲ್ಲಿ ದಕ್ಷಿಣಾಮೂರ್ತಿಗಾಗಿ ಒಂದು ಭಾಗವು ಕಾಯ್ದಿರಿಸಿ, ಅಲ್ಲಿ ದಕ್ಷಿಣಾಮೂರ್ತಿ ಯನ್ನು ರೂಪಿಸಲಾಗುತ್ತದೆ.[೧೧೦] ಆದರೆ ರಾಮಚಂದ್ರರಾವ್ ಎಸ್.ಕೆ.[೧೧೧] ಅವರು ಇದರ ಕುರಿತು ಕೆಲವು ಭಿನ್ನ ವಿಚಾರಗಳನ್ನು ಹೇಳಿರುವರು. ಇವರು ದಕ್ಷಿಣಾಮೂರ್ತಿಯನ್ನು ದಕ್ಷಿಣ ದಿಕ್ಕಿನಲ್ಲಿ ರಚಿಸುವುದಕ್ಕೆ ಕಾರಣ ಇದರ ಹೆಸರಿರಬಹುದು. ಏಕೆಂದರೆ ಈ ಶಿಲ್ಪವನ್ನು ದಕ್ಷಿಣ ದಿಕ್ಕಿನಲ್ಲೇ ರಚಿಸಬೇಕೆಂಬ ಯಾವುದೇ ನಿಯಮವಿಲ್ಲ. ಒಂದು ವೇಳೆ ಈ ಮೂರ್ತಿಯನ್ನು ದಕ್ಷಿಣ ದಿಕ್ಕಿಗೆ ರಚಿಸಬೇಕು ಎಂದು ನಿಯಮವಿದ್ದಿದ್ದರೆ ಅದನ್ನು 'ದಕ್ಷಿಣ ಮೂರ್ತಿ' ಎಂದು ಹೇಳಲಾಗುತ್ತಿತ್ತೇ ಹೊರತು 'ದಕ್ಷಿಣಾಮೂರ್ತಿ' ಎಂದು ಹೇಳಲಾಗುತ್ತಿರಲಿಲ್ಲ. ಕೆಲವೊಮ್ಮೆ ದಕ್ಷಿಣಾ ಎಂಬ ಪದಕ್ಕೆ 'ಜ್ಞಾನ' ಎಂಬ ಅರ್ಥ ವಿವರಣೆ ನೀಡಲಾಗುತ್ತದೆ. ಆದ್ದರಿಂದ ಈ ರೂಪವು ಜ್ಞಾನದ ಮೂರ್ತಿರೂಪವಾಗಿದೆ. ಒಂದು ಶ್ಲೋಕದ ಪ್ರಕಾರ ದಕ್ಷಿಣಾ ಎಂಬುದಕ್ಕೆ 'ಷೇಮುಶಿ' ಎಂಬ ಸಮನಾರ್ಥವು ಇದೆ (ಅಜ್ಞಾನ, ಮುಶಿ, ನಾಶ).

ಷೇಮುಶಿ ದಕ್ಷಿಣಾ ಪ್ರೋಕ್ತ, ಸಾಯಸ್ಯಭಿಕ್ಷಣೆ ಮುಖಂಃ
ದಕ್ಷಿಣಾಭಿಮುಖಃ ಪ್ರೋಕ್ತತಃ ಶಿವೊ ಬ್ರಹ್ಮ ವಾದಿಭಿಃ

ಈ ಶ್ಲೋಕವು ಅಜ್ಞಾನವನ್ನು ನಾಶಪಡಿಸಿ ಜ್ಞಾನವನ್ನು ಬೋಧಿಸಿದವನೇ ದಕ್ಷಿಣಾಮೂರ್ತಿ ಎಂದು ತಿಳಿಸುತ್ತದೆ. ಹಾಗೆಯೇ ಇದನ್ನು ದಕ್ಷಿಣ ದಿಕ್ಕಿನಲ್ಲಿ ತೋರಿಸುವುದರಿಂದ ಮೃತ್ಯು ದೇವತೆಯ ರೂಪ ಎಂದು ತಪ್ಪಾಗಿ ಭಾವಿಸಲಾಗಿದೆ. ಆದರೆ ಯಾವುದೇ ಆಗಮಗಳ ಪಠ್ಯಗಳಲ್ಲಿ ಈ ಅರ್ಥ ವಿವರಣೆಯನ್ನು ಸಮರ್ಥಿಸಿಲ್ಲ. ಆದರೆ ಕೆಲವು ತಾಂತ್ರಿಕ ಪಠ್ಯಗಳಲ್ಲಿ ಸಂಹಾರ ದಕ್ಷಿಣಾಮೂರ್ತಿಯ ಉಲ್ಲೇಖವಿದೆ. ಆದರೆ ಸಂಹಾರ ಎಂಬುದಕ್ಕೆ ಸಾವು ಎಂಬುದರ ಬದಲು, ತನ್ನಲ್ಲಿ ಸೆಳೆದುಕೊಳ್ಳುವಿಕೆ ಅಥವಾ ಸೇರಿಸಿಕೊಳ್ಳುವಿಕೆ ಎಂಬರ್ಥವಿರುವುದು ಎಂದು ಹೇಳಿರುವರು.

ಹಲವು ತಾಂತ್ರಿಕ ಪಠ್ಯಗಳಲ್ಲಿ ದಕ್ಷಿಣಾಮೂರ್ತಿಯನ್ನು ಪೂಜಿಸುವ ವಿವರಣೆಗಳು ದೊರೆಯುತ್ತವೆ. ಮಂತ್ರಮಹಾರ್ನವ ಮತ್ತು ಪ್ರಪಂಚ-ಸಾರ-ಸಂಗ್ರಹಗಳಂತಹ ತಾಂತ್ರಿಕ ಪಠ್ಯಗಳಲ್ಲಿ ದಕ್ಷಿಣಾಮೂರ್ತಿಯ ಕುರಿತ ಮಂತ್ರಗಳನ್ನಲ್ಲದೆ, ಯಂತ್ರಗಳನ್ನು(ಮೋಡಿ ರೇಖಾಚಿತ್ರ) ನೀಡಿರುವರು. ಮುಖ್ಯವಾಗಿ ಪ್ರಪಂಚಸಾರ ಸಂಗ್ರಹವು ಸಂಹಾರ ದಕ್ಷಿಣಾಮೂರ್ತಿ, ಲಕುಟಿ ದಕ್ಷಿಣಾಮೂರ್ತಿ, ಮೇಧಾ ದಕ್ಷಿಣಾಮೂರ್ತಿ, ಸಾಂಬ ದಕ್ಷಿಣಾಮೂರ್ತಿ ಮುಂತಾದವುಗಳನ್ನು ಉಲ್ಲೇಖಿಸುತ್ತದೆ.[೧೧೨] ಪ್ರಪಂಚ-ಸಾರಸಂಗ್ರಹ ವಿವರಿಸುವ ಈ ದಕ್ಷಿಣಾಮೂರ್ತಿ ರೂಪಗಳನ್ನು ನಂಜನಗೂಡಿನ ಶ್ರೀಕಂಠೇಶ್ವರ ದೇವಾಲಯದ ಪ್ರಾಕಾರ ಗೋಡೆಯ ಮೇಲ್ಭಾಗದಲ್ಲಿ ಗಾರೆಯಿಂದ ನಿರ್ಮಿಸಿದ ದೇವಕೋಷ್ಠಗಳಲ್ಲಿ ಕಂಡುಬರುತ್ತವೆ. ಇಲ್ಲಿ ವೀಣಾದಕ್ಷಿಣಾಮೂರ್ತಿ, ಸಾಂಬದಕ್ಷಿಣಾಮೂರ್ತಿ, ಯೋಗದಕ್ಷಿಣಾಮೂರ್ತಿ, ಸಂಹಾರ ದಕ್ಷಿಣಾಮೂರ್ತಿ, ಶಕ್ತಿ ದಕ್ಷಿಣಾಮೂರ್ತಿ, ಜ್ಞಾನ ದಕ್ಷಿಣಾಮೂರ್ತಿ, ಅನುಷ್ಠಾನ ದಕ್ಷಿಣಾಮೂರ್ತಿ, ವ್ಯಾಖ್ಯಾನ ದಕ್ಷಿಣಾಮೂರ್ತಿ, ವಿದ್ಯಾ ದಕ್ಷಿಣಾ ಮೂರ್ತಿ, ವಟಮೂಲ ದಕ್ಷಿಣಾಮೂರ್ತಿ(ಲಕುಟ) ಎಂಬ ೧೦ ಪ್ರಕಾರದ ದಕ್ಷಿಣಾಮೂರ್ತಿಗಳು ಕಂಡುಬರುತ್ತವೆ. ಆದರೆ ಆಗಮಗಳಲ್ಲಿ ಇಷ್ಟು ಪ್ರಕಾರದ ದಕ್ಷಿಣಾಮೂರ್ತಿಗಳ ವಿವರಣೆಯಿಲ್ಲ.

ಆಗಮಗಳು ಕೇವಲ ವ್ಯಾಖ್ಯಾನ, ಜ್ಞಾನ, ಯೋಗ ಮತ್ತು ವೀಣಾ, ದಕ್ಷಿಣಾ ಮೂರ್ತಿಗಳ ವಿವರಣೆಯನ್ನು ಮಾತ್ರ ಹೇಳುತ್ತವೆ.

### ವ್ಯಾಖ್ಯಾನ ದಕ್ಷಿಣಾ ಮೂರ್ತಿ ಮತ್ತು ಜ್ಞಾನ ದಕ್ಷಿಣಾಮೂರ್ತಿ

ವ್ಯಾಖ್ಯಾನ ದಕ್ಷಿಣಾ ಮೂರ್ತಿಯ ಕುರಿತಂತೆ ಗೋಪಿನಾಥರಾವ್ ಟಿ.ಎ.[೧೧೩] ಅವರು ತಮ್ಮ ಗ್ರಂಥದಲ್ಲಿ ಈ ಕೆಳಗಿನ ಪ್ರತಿಮಾ ಲಕ್ಷಣವನ್ನು ನೀಡಿದ್ದಾರೆ. ಶಾಸ್ತ್ರಗಳ ನಿರೂಪಣೆಯಂತೆ ದಕ್ಷಿಣಾಮೂರ್ತಿಯನ್ನು ಹಿಮಾಲಯಗಳ ಏಕಾಂತ ಸ್ಥಳದಲ್ಲಿ, ಆಲದ ವೃಕ್ಷದ ಕೆಳಗೆ ಹುಲಿಯ ಚರ್ಮದಿಂದ ಆವೃತಗೊಂಡ ಆಸನದ ಮೇಲೆ ಕುಳಿತಿರುವಂತೆ ರೂಪಿಸಬೇಕು. ಬಲಗಾಲು ಪೀಠದ ಕೆಳ ಚಾಚಿ, ಎಡಗಾಲನ್ನು ಮಡಚಿ ಬಲಗಾಲಿನ ತೊಡೆಯ ಮೇಲೆ ಇಟ್ಟಂತಹ ವೀರಾಸನದಲ್ಲಿ ಕುಳಿತಿರಬೇಕು. ಪೀಠದಿಂದ ಇಳಿಬಿಟ್ಟ ಬಲಗಾಲ ಕೆಳಗೆ ಅಪಸ್ಮಾರನನ್ನು ತೋರಿಸಬಹುದು. ಅಥವಾ ತೋರಿಸದೆಯೂ ಇರಬಹುದು. ದಕ್ಷಿಣಾಮೂರ್ತಿಯು ತ್ರಿನೇತ್ರಗಳು ಹಾಗೂ ಚತುರ್ಭುಜಗಳನ್ನು ಹೊಂದಿದ್ದು ಬಲಭಾಗದ ಮುಂದಿನ ಕೈಯು ಜ್ಞಾನಮುದ್ರೆಯಲ್ಲಿ ಅಥವಾ ಸಂದರ್ಶನ ಮುದ್ರೆಯಲ್ಲಿರಬೇಕು. ಎಡಭಾಗದ ಮುಂದಿನ ಹಸ್ತವು ವರದ ಮುದ್ರೆ ಅಥವಾ ಎಡಮೊಣಕಾಲಿನ ಮೇಲೆ ದಂಡ ಹಸ್ತದಲ್ಲಿರಬೇಕು. ಆಗ ಈ ಹಸ್ತದ ಮೊಣಕೈ ಭಾಗವು ಮೊಣಕಾಲನ್ನು ಸ್ಪರ್ಶಿಸುತ್ತಿರಬೇಕು. ಬಲ ಹಿಂದಿನ ಹಸ್ತವು ಅಕ್ಷಮಾಲೆಯನ್ನು ಹಿಡಿದಿರಬೇಕು. ಎಡ ಹಿಂದಿನ ಹಸ್ತದಲ್ಲಿ ಅಗ್ನಿ ಅಥವಾ ಸರ್ಪ ಇರಬೇಕು. ಅಥವಾ ಎಡಭಾಗದ ಒಂದು ಹಸ್ತದಲ್ಲಿ ಪುಸ್ತಕ ಹಾಗೂ ಇನ್ನೊಂದು ಹಸ್ತದಲ್ಲಿ ಸರ್ಪ ಅಥವಾ ಅಗ್ನಿ ಅಥವಾ ತಾವರೆ ಅಥವಾ ನೀಲೋತ್ಪಲ ಪುಷ್ಪವನ್ನು ಹಿಡಿದಿರಬೇಕು. ದಕ್ಷಿಣಾಮೂರ್ತಿಯ ದೇಹವು ವಕ್ರಗಳಿಂದ ದೂರವಾಗಿರಬೇಕು. ಈ ರೀತಿಯ ಶಿಸ್ತು, ದೃಢವಾದ

ಸಂಕಲ್ಪ ಶಕ್ತಿಯನ್ನು ಹಾಗೂ ಉಪದೇಶಿಕ ಗುಣವನ್ನು ಇದು ಸೂಚಿಸುತ್ತದೆ. ಈ ಮೂರ್ತಿಯ ಶಿರೋಭಾಗವು ಜಟಾಭಾರ, ಜಟಾಬಂಧ, ಜಟಾಮಂಡಲ, ಜಟಾಮುಕುಟ ಅಥವಾ ಜಟೆಗಳಿಂದ ಅಲಂಕರಿಸಿ ಪಟ್ಟಬಂಧಗಳಿಂದ ಹಿಡಿದಿರಿಸಿರುವಂತೆ ರೂಪಿಸಬೇಕು. ಈ ಜಟೆಗಳನ್ನು ದತ್ತೂರಿ ಹೂಗಳು ಮತ್ತು ಇತರ ವನಪುಷ್ಪಗಳಿಂದ ಅಲಂಕರಿಸಬೇಕು. ಎಡಪಾರ್ಶ್ವದಲ್ಲಿ ನಾಗ, ಗೆಜ್ಜೆಗಳು ಮತ್ತು ಬಲಭಾಗದಲ್ಲಿ ಬಾಲಚಂದ್ರ ಹಾಗೂ ಕಪಾಲಗಳಿಂದ ಅಲಂಕರಿಸಬೇಕು. ಜಟಾಭಾಗದ ಮಧ್ಯಭಾಗದಲ್ಲಿ ನಗು ಮೊಗದ ಗಂಗಾಮಾತೆಯು ಕಾಣಿಸುವಂತೆ ಇರಬೇಕು. ದಕ್ಷಿಣಾಮೂರ್ತಿಯ ವರ್ಣವು ಶುದ್ಧ ಸ್ಫಟಿಕ ವರ್ಣ. ಇನ್ನೂ ಕೆಲವು ಆಕರಗಳ ಪ್ರಕಾರ ಈತನ ವರ್ಣವು ಶ್ವೇತ, ಕೆಂಪು, ಹಳದಿ ಅಥವಾ ಶ್ಯಾಮಲ ವರ್ಣದವನಾಗಿರಬಹುದು. ಸಕಲ ಆಭರಣಗಳಿಂದಲೂ ಶುದ್ಧ ಶ್ವೇತ ವಸ್ತ್ರಗಳಿಂದಲೂ ಅಲಂಕೃತನಾಗಿರುವ ಈ ಮೂರ್ತಿಯು ಹುಲಿಯ ಚರ್ಮವನ್ನು ತೊಟ್ಟು ಯಜ್ಞೋಪವೀತವನ್ನು ಧರಿಸಿರಬೇಕು. ವಕ್ಷಸ್ಥಳದಲ್ಲಿ ಗಂಧವನ್ನು ಲೇಪಿಸಿಕೊಂಡಿರಬೇಕು. ಬಲಗಿವಿಯಲ್ಲಿ ಕುಂಡಲವನ್ನು ಎಡ ಕಿವಿಯಲ್ಲಿ ಶಂಖಪತ್ರವನ್ನು ಧರಿಸಿರಬೇಕು. ಅಥವಾ ಎರಡು ಕಿವಿಗಳಲ್ಲೂ ಇವುಗಳಲ್ಲಿ ಯಾವುದಾದರೂ ಒಂದೇ ಒಂದು ಬಗೆ ಇರಬಹುದು. ಕೊರಳಲ್ಲಿ ರುದ್ರಾಕ್ಷ ಮಾಲೆಗಳಿದ್ದು, ಅವು ಹೃದಯದ ತನಕ ತೂಗಾಡುತ್ತಿರಬಹುದು. ಮುಖದಲ್ಲಿ ಶಾಂತಭಾವವಿರಬೇಕು. ದೃಷ್ಟಿಯು ಮೂಗಿನ ತುದಿಯ ಮೇಲೆ ಕೇಂದ್ರೀಕರಿಸಬೇಕು. ಕಾರಣಾಗಮವು ದೃಷ್ಟಿಯು ಪಾದದ ಹೆಬ್ಬೆರಳಿನ ಮೇಲೆ ಕೇಂದ್ರೀಕರಿಸಿರಬೇಕೆಂದು ಹೇಳುತ್ತವೆ. ಧರ್ಮವನ್ನು ಬೋಧಿಸುವ ಶಿವನ ಈ ಲೀಲಾವತಾರವು ಭಕ್ತರಿಗೆ ಎಲ್ಲ ಸುಖ-ಸಂಪದಗಳನ್ನು ಕೊಡುತ್ತಾನೆ ಎಂದು ಶಿಲ್ಪರತ್ನದಲ್ಲಿ ಹೇಳಿದೆ.

ಈ ಮೂರ್ತಿಯ ಸುತ್ತಲೂ ಶಾಸ್ತ್ರ ರಹಸ್ಯಗಳನ್ನು ತಿಳಿಯಲು ಆಸಕ್ತರಾದ ಋಷಿಗಳು ಇರಬೇಕು. ಈ ಋಷಿಗಳ ಹೆಸರುಗಳನ್ನು ಬೇರೆ-ಬೇರೆಯಾಗಿ ಹೇಳಲಾಗಿದೆ. ಕಾಶ್ಯಪ ಶಿಲ್ಪ ಶಾಸ್ತ್ರದಲ್ಲಿ ನಾರದ, ಜಮದಗ್ನಿ, ವಸಿಷ್ಠ, ಭೃಗು, ಭರದ್ವಾಜ, ಸನಕ ಮತ್ತು ಅಗಸ್ತ್ಯ ಎಂದು ಹೇಳಿದ್ದಾರೆ. ಕಾಮಿಕಾಗಮವು ಕೌಶಿಕ, ಕಾಶ್ಯಪ, ಭಾರದ್ವಾಜ, ಅತ್ರಿ ಮತ್ತು ಗೌತಮ ಎಂದು ಹೆಸರಿಸಿ ಋಷಿಗಳ ಸಂಖ್ಯೆಯು ಏಳು ಎಂದು ಹೇಳಿದೆ. ಕಾರಣಾಗಮದಲ್ಲಿ ಅಗಸ್ತ್ಯ, ಪುಲಸ್ತ್ಯ, ವಿಶ್ವಾಮಿತ್ರ ಮತ್ತು ಅಂಗೀರಸರ ಹೆಸರುಗಳು ಮಾತ್ರವೇ ಇದೆ. ಋಷಿಗಳು ಜಟಾಮುಕುಟವನ್ನು ಧರಿಸಿರಬೇಕು. ರುದ್ರಾಕ್ಷ ಮಾಲೆಯು ಕೊರಳಲ್ಲಿ ಧರಿಸಿದ್ದು, ಬಿಳಿ ಯಜ್ಞೋಪವೀತವನ್ನು ಧರಿಸಿರಬೇಕು. ಅವರು ವಿಭೂತಿಧಾರಿಗಳಾಗಿರಬೇಕು. ಶುದ್ಧ ಶ್ವೇತ ವಸ್ತ್ರಗಳನ್ನು ಧರಿಸಿರಬೇಕು. ಋಷಿಗಳ ಎತ್ತರವು ದಕ್ಷಿಣಾಮೂರ್ತಿಯ ವಕ್ಷಸ್ಥಳಕ್ಕಿಂತ ಹೆಚ್ಚು ಎತ್ತರವಾಗಿರಕೂಡದು. ಕಾಮಿಕಾಗಮದಲ್ಲಿ ಕೌಶಿಕ ಮತ್ತು ಕಶ್ಯಪ ಋಷಿಗಳ ವರ್ಣವು ಕಪ್ಪಾಗಿದ್ದು, ಉಳಿದವರ ವರ್ಣವು ಹಳದಿಯಾಗಿರಬೇಕು. ಈ ಋಷಿಗಳನ್ನು ಚಿತ್ರಿಸುವಾಗ ಒಂದು ಕಡೆ ಇಬ್ಬರು ಇನ್ನೊಂದು ಕಡೆಗೆ ಮೂವರು ಅಥವಾ ಎರಡೂ ಕಡೆಗಳಲ್ಲಿ ಮೂವ್ವರು, ಮೂವ್ವರು ಅಥವಾ ಒಂದು ಕಡೆಗೆ ಮೂವ್ವರು ಇನ್ನೊಂದು ಕಡೆಗೆ ನಾಲ್ವರು ಇರುವಂತೆ ಚಿತ್ರಿಸಬಹುದು. ಇವರೊಂದಿಗೆ ಕಿನ್ನರರು, ದೇವತೆಗಳು ಇರಬೇಕು. ಅಪಸ್ಮಾರ ಪುರುಷನು ಎಡಗೈಯಲ್ಲಿ ನಾಗಸರ್ಪವನ್ನು ಹಿಡಿದು ತನ್ನ ಬಲಹಸ್ತವನ್ನು ನಾಗಮುದ್ರೆಯಲ್ಲಿ ಎಡಗೈಯ ಎದುರು ಹಿಡಿದಿರಬೇಕು.

ದಕ್ಷಿಣಾಮೂರ್ತಿ ಉಪನಿಷತ್ತು ಮತ್ತು ಸೂತ ಸಂಹಿತೆಯು ದಕ್ಷಿಣಾಮೂರ್ತಿಯ ರೂಪಕ್ಕೆ ತಾತ್ತ್ವಿಕ ಅರ್ಥವನ್ನು ವಿವರಿಸುತ್ತದೆ. ಕಲ್ಪಾಂತದಲ್ಲಿ ವಿಶ್ವಗಳನ್ನೆಲ್ಲಾ ತನ್ನೊಳಕ್ಕೆ ಸೆಳೆದುಕೊಂಡು ಆನಂದದಲ್ಲಿ ತಲ್ಲೀನನಾಗಿರುತ್ತಾನೆ. ಜ್ಞಾನವನ್ನು ದಕ್ಷಿಣ ಎಂದು ಕರೆಯುತ್ತಾರೆ. ಶಿವನು ಈ ಅವತಾರದಲ್ಲಿ ಸದಾ ದಕ್ಷಿಣವನ್ನೇ ನಿರುಕಿಸುತ್ತಿರುವುದರಿಂದ ದಕ್ಷಿಣ ಮುಖ ಎಂದೂ ಕರೆಯಲ್ಪಡುತ್ತಾನೆ. ಅಪಸ್ಮಾರ ಪುರುಷನು ಜೀವಿಗಳ ಅಜ್ಞಾನದ ಪ್ರತೀಕ. ಅದನ್ನು ತನ್ನ ಪಾದದ ಅಡಿಯಲ್ಲಿ ಎಂದರೆ ನಿಯಂತ್ರಣದಲ್ಲಿ ಶಿವನು ಇರಿಸಿಕೊಂಡಿರುತ್ತಾನೆ. ಶಿವನು ತನ್ನ ಕೈಯಲ್ಲಿ ಹಿಡಿದಿರುವ ಪುಸ್ತಕವು ಜೀವಿಗಳಲ್ಲಿ ಜ್ಞಾನವನ್ನು ತುಂಬುತ್ತದೆ. ವ್ಯಾಪಕವಾಗಿ ಹರಡಿಕೊಂಡಿರುವ ಆಲದ ವೃಕ್ಷದ ನೆರಳು ಮಾಯೆಯ ಸಂಕೇತ. ಶಿವನ ವೃಷಭವು ಧರ್ಮದ ಪ್ರತೀಕ. ಆತ್ಮ ವಿದ್ಯೆ ಮತ್ತು ವೇದ ವಿದ್ಯೆಯಲ್ಲಿ ಪರಿಣಿತರಾದ ಋಷಿಗಳಿಗೆ ದಕ್ಷಿಣಾಮೂರ್ತಿಯು ಉಪದೇಶಿಸಿ ಅವರನ್ನು ಸಂಸಾರ ಬಂಧದಿಂದ ಉದ್ಧರಿಸುತ್ತಿದ್ದಾನೆ. ಹಾಗೂ ಹುಟ್ಟು ಸಾವುಗಳಲ್ಲದೆ ಅಮರನಾಗಿರುವ ದಕ್ಷಿಣಾಮೂರ್ತಿಯು ಕುಳಿತಿರುವ ಕಮಲಾಸನವು ಓಂಕಾರದ ಪ್ರತೀಕ.

ವ್ಯಾಖ್ಯಾನ ದಕ್ಷಿಣಾಮೂರ್ತಿಗೂ ಜ್ಞಾನ ದಕ್ಷಿಣಾ ಮೂರ್ತಿಗೂ ಹೆಚ್ಚು ವ್ಯತ್ಯಾಸಗಳಿಲ್ಲ. ಹಿಂದಿನ ಬಲಹಸ್ತದಲ್ಲಿ ಅಕ್ಷಮಾಲೆ ಮತ್ತು ಹಿಂದಿನ ಎಡಹಸ್ತದಲ್ಲಿ ಉತ್ಪಲ ಇರುತ್ತದೆ. ಮುಂದಿನ ಬಲಹಸ್ತದಲ್ಲಿ ಜ್ಞಾನಮುದ್ರೆ ಇದ್ದು, ಎಡಹಸ್ತದಲ್ಲಿ ಅಭಯ ಮುದ್ರೆ ಅಥವಾ ದಂಡಹಸ್ತವಾಗಿರುತ್ತದೆ. ಉಳಿದ ಲಕ್ಷಣಗಳು ವ್ಯಾಖ್ಯಾನ ದಕ್ಷಿಣಾಮೂರ್ತಿಯ ಲಕ್ಷಣಗಳನ್ನು ಹೊಂದಿರುತ್ತದೆ.

ಹಂಪಿ ಪರಿಸರದಲ್ಲಿ ಒಟ್ಟು ೯ ವ್ಯಾಖ್ಯಾನ ದಕ್ಷಿಣಾಮೂರ್ತಿ ಶಿಲ್ಪಗಳು ದೊರೆತಿವೆ. ಅವುಗಳು ವಿರೂಪಾಕ್ಷ ದೇವಾಲಯ (೪), ಉಮಾಮಹೇಶ್ವರ ದೇವಾಲಯ (೧), ಪ್ರಸನ್ನ ವಿರೂಪಾಕ್ಷ ದೇವಾಲಯ (೧), ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ವಸ್ತುಸಂಗ್ರಹಾಲಯ (೧) ಹಾಗೂ ಜಂಬುನಾಥ ದೇವಾಲಯ (೨) ಗಳಲ್ಲಿ ಕಂಡುಬರುತ್ತವೆ.

ವಿರೂಪಾಕ್ಷ ದೇವಾಲಯದ ದಕ್ಷಿಣಾಭಿಮುಖವಾಗಿರುವ ಭಿತ್ತಿಯ ದೇವಕೋಷ್ಠದಲ್ಲಿ ವ್ಯಾಖ್ಯಾನ ದಕ್ಷಿಣಾಮೂರ್ತಿಯನ್ನು ಇರಿಸಲಾಗಿದೆ. ಈ ಶಿಲ್ಪವು ಚಿಕ್ಕ ಚಿಕ್ಕ ಬಂಡೆಗಳಂತಿರುವ ಪೀಠದ ಮೇಲೆ ಆಸೀನವಾಗಿದ್ದು ಬಲಪಾದವನ್ನು ಕೆಳಚಾಚಿ, ಎಡಪಾದವನ್ನು ಬಲಪಾದದ ತೊಡೆಯ ಮೇಲೆ ಇರಿಸಿರುವುದು. ಬಲಪಾದದ ಕೆಳಗೆ ಅಪಸ್ಮಾರನನ್ನು ತೋರಿಸಲಾಗಿದೆ. ಅಲ್ಲದೆ ಈ ಪಾದವು ಬೋರಲಾಗಿ ಮಲಗಿರುವ ಅಪಸ್ಮಾರನ ಮೇಲೆ ಸಂಪೂರ್ಣವಾಗಿ ಊರಿರದೆ ಬೆರಳುಗಳ ಭಾಗವನ್ನು ಮಾತ್ರ ಸ್ಪರ್ಶಿಸಿದಂತೆ ಕೆತ್ತಲಾಗಿದೆ. ಹಾಗೂ ಚತುರ್ಭುಜಗಳನ್ನು ಹೊಂದಿದ್ದು, ಬಲಭಾಗದ ಮುಂದಿನ ಹಸ್ತವು ವ್ಯಾಖ್ಯಾನ ಮುದ್ರೆ, ಹಿಂದಿನ ಹಸ್ತದಲ್ಲಿ ಸರ್ಪವನ್ನು ಹಿಡಿದಿರುವುದು. ಹಾಗೂ ಎಡಭಾಗದ ಮುಂದಿನ ಹಸ್ತದಲ್ಲಿ ಪುಸ್ತಕವನ್ನು(ಸ್ಪಷ್ಟತೆಯಿಲ್ಲ) ಹಿಡಿದಿದ್ದು, ಹಿಂದಿನ ಹಸ್ತದಲ್ಲಿ ಹಿಡಿದಿರುವ ಆಯುಧ ತೃಟಿತಗೊಂಡಿದೆ. ಜಟಾಭಾರ, ಕೊರಳಹಾರ, ಯಜ್ಞೋಪವೀತ, ಭುಜವಳಯ, ಕಂಕಣಗಳು ಹಾಗೂ ಕಾಲ್ಕಡಗಗಳನ್ನು ಧರಿಸಿದೆ.

ಇದೇ ದೇವಾಲಯದ ಮಹಾರಂಗಮಂಟಪದಲ್ಲಿ ಇನ್ನೂ ಮೂರು ವ್ಯಾಖ್ಯಾನ ದಕ್ಷಿಣಾಮೂರ್ತಿ ಶಿಲ್ಪಗಳನ್ನು ಕಂಡರಿಸಿರುವರು. ಇವುಗಳು ಕ್ರಮವಾಗಿ ಮಹಾರಂಗಮಂಟಪದ ೧೬, ೨೭, ಹಾಗೂ ೩೨ನೇ ಕಂಬಗಳಲ್ಲಿರುವವು. ಈ ಎಲ್ಲ ಶಿಲ್ಪಗಳು ಅಲ್ಪ ಭಿನ್ನತೆಗಳನ್ನು ಹೊರತುಪಡಿಸಿ ಬಹುತೇಕ ಒಂದೇ ರೀತಿಯ ಲಕ್ಷಣಗಳನ್ನು ಹೊಂದಿವೆ. ಮೂರೂ ಶಿಲ್ಪಗಳು ವೀರಾಸನದಲ್ಲಿ ಅಂದರೆ ಒಂದು ಪೀಠದಮೇಲೆ ಬಲಪಾದವನ್ನು ಕೆಳಚಾಚಿ ಎಡಪಾದವನ್ನು ಕರ್ತರಿಯಾಗಿ ಬಲಪಾದದ ತೊಡೆಯ ಮೇಲೆ ಇರಿಸಿ ಆಸೀನವಾಗಿರುವವು. ಮುಂದಿನ ಎರಡು ಕೈಗಳಲ್ಲಿ ಬಲಹಸ್ತವು ವ್ಯಾಖ್ಯಾನ ಮುದ್ರೆಯಲ್ಲಿದ್ದು ಎಡಹಸ್ತವು ಎಡಪಾದದ ಮೊಣಕಾಲ ಮೇಲೆ ದಂಡಹಸ್ತದಲ್ಲಿದೆ. ೧೬ ಹಾಗೂ ೩೨ನೇ ಕಂಬಗಳಲ್ಲಿರುವ ಶಿಲ್ಪಗಳೆರಡು ಬಲ ಹಿಂದಿನ ಹಸ್ತದಲ್ಲಿ ಸರ್ಪ; ಎಡ ಹಿಂದಿನ ಹಸ್ತದಲ್ಲಿ ಅಗ್ನಿಯನ್ನು ಹಿಡಿದಿವೆ. ಹಾಗೂ ಜಟಾಭಾರ, ಕೊರಳ ಆಭರಣಗಳು, ಯಜ್ಞೋಪವೀತ, ಉದರಬಂಧ, ಭುಜವಳಯ, ಬಾಹುವಳಯ, ಕಂಕಣಗಳು, ಮತ್ತು ವಸ್ತ್ರಗಳಿಂದ ಅಲಂಕೃತವಾಗಿರುವವು. ಆದರೆ ೨೭ನೇ ಕಂಬದಲ್ಲಿರುವ ಶಿಲ್ಪದಲ್ಲಿ ಬಲ ಹಿಂದಿನ ಹಸ್ತದಲ್ಲಿ ಪರಶು, ಎಡ ಹಿಂದಿನ ಹಸ್ತದಲ್ಲಿ ಮೃಗವನ್ನು ಹಿಡಿದಿರುವಂತೆ ಹಾಗೂ ಕಿರೀಟಮುಕುಟ ಧರಿಸಿರುವಂತೆ ಕೆತ್ತಲಾಗಿದೆ ಹಾಗೂ ಈ ಮೂರು ಶಿಲ್ಪಗಳಲ್ಲಿ ೨೭ ಮತ್ತು ೩೨ನೇ ಕಂಬಗಳಲ್ಲಿರುವ ಶಿಲ್ಪಗಳ ಬಲಪಾದದ ಅಡಿಯಲ್ಲಿ ಚಿಕ್ಕದಾಗಿ ಅಪಸ್ಮಾರನನ್ನು ಕೆತ್ತಲಾಗಿದೆ.

ಇನ್ನೊಂದು ವ್ಯಾಖ್ಯಾನ ದಕ್ಷಿಣಾಮೂರ್ತಿಶಿಲ್ಪವು ಉಮಾಮಹೇಶ್ವರ ದೇವಾಲಯದ ಮಂಟಪದ ೯ನೇ ಕಂಬದಲ್ಲಿದೆ. ಇಲ್ಲಿಯೂ ಶಿವನು ವೀರಾಸನ ಭಂಗಿಯಲ್ಲಿ ಪೀಠದ ಮೇಲೆ ಆಸೀನನಾಗಿರುವನು. ಆದರೆ ಎಡಪಾದವು ಬಲಪಾದದ ತೊಡೆಯ ಮೇಲೆ ಇಟ್ಟಿರದೆ ಪೀಠದ ಮೇಲೆಯೇ ಇರಿಸಿರುವಂತೆ ಕೆತ್ತಲಾಗಿದೆ. ಬಲ ಮುಂದಿನ ಹಸ್ತವು ವ್ಯಾಖ್ಯಾನ ಮುದ್ರೆಯಲ್ಲಿದ್ದು, ಹಿಂದಿನ ಹಸ್ತದಲ್ಲಿ ಮೃಗವನ್ನು ಹಿಡಿದಿರುವನು. ಎಡ ಮುಂದಿನ ಹಸ್ತವು ದಂಡಹಸ್ತದಲ್ಲಿದ್ದು ಹಿಂದಿನದರಲ್ಲಿ ಡಮರುವನ್ನು ಹಿಡಿದಿರುವನು. ಜಟಾಮುಕುಟ, ಕೊರಳಾಭರಣಗಳು, ಕರ್ಣಾಭರಣಗಳು, ಹಾಗೂ ವಸ್ತ್ರಗಳನ್ನು ಧರಿಸಿ ಅಲಂಕೃತಗೊಂಡಿರುವುದು. ಮತ್ತೊಂದು ಶಿಲ್ಪವು ಪ್ರಸನ್ನ ವಿರೂಪಾಕ್ಷ ದೇವಾಲಯದ ಉತ್ಸವ ಮಂಟಪದ ೧೧ನೇ ಕಂಬದಲ್ಲಿ ಕಂಡರಿಸಿರುವರು. ಇಲ್ಲಿನ ಶಿಲ್ಪದಲ್ಲಿ ಶಿವನು ಉತ್ಕುಟಿಕಾಸನದಲ್ಲಿ ಆಸೀನನಾಗಿರುವನು. ಅಂದರೆ ಬಲಪಾದವನ್ನು ಕೆಳಚಾಚಿ ಎಡಪಾದವನ್ನು ಪೀಠದ ಮೇಲೆಯೇ ಇರಿಸಿರುವನು. ಆತನ ಮುಂದಿನ ಬಲಹಸ್ತವು ವ್ಯಾಖ್ಯಾನ ಮುದ್ರೆಯಲ್ಲಿದ್ದಿರಬಹುದು ಅದು ತೃಟಿತಗೊಂಡಿದೆ. ಉಳಿದಂತೆ ಈ ಶಿಲ್ಪವು ವಿರೂಪಾಕ್ಷ ದೇವಾಲಯದ ೧೬ನೇ ಕಂಬದಲ್ಲಿರುವ ಶಿಲ್ಪದ ಲಕ್ಷಣಗಳನ್ನೆ ಒಳಗೊಂಡಿದೆ.

ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿ ಒಂದು ದಕ್ಷಿಣಾಮೂರ್ತಿಯನ್ನು ಇರಿಸಲಾಗಿದೆ. ಇದು ಬಹುತೇಕ ತೃಟಿತಗೊಂಡ ದುಂಡುಶಿಲ್ಪ. ಆದರೂ ಶಿಲ್ಪದಲ್ಲಿನ ಉಳಿದಿರುವ ಲಕ್ಷಣಗಳಿಂದ ಇದು ದಕ್ಷಿಣಾಮೂರ್ತಿಯ ಶಿಲ್ಪ ಎಂಬುದು ಸ್ಪಷ್ಟವಾಗುತ್ತದೆ. ಇಲ್ಲಿ ಶಿವನು ಚಿಕ್ಕ-ಚಿಕ್ಕ ಬಂಡೆಗಳನ್ನು ಜೋಡಿಸಿದಂತಿರುವ ಪೀಠದ ಮೇಲೆ ಆಸೀನನಾಗಿರುವನು. ಪಾದಗಳ ಭಾಗವು ತೃಟಿತಗೊಂಡಿದೆ. ಬಲಪಾದವು ಪೀಠದಿಂದ ಕೆಳಚಾಚಿರುವಂತೆ

ಇದ್ದು ಅದರ ಪಾದದ ಅಡಿಯಲ್ಲಿ ಅಪಸ್ಮಾರನನ್ನು ಕೆತ್ತಲಾಗಿದೆ. ಮುಂದಿನ ಎರಡೂ ಹಸ್ತಗಳೂ ತೃಟಿಗೊಂಡಿವೆ. ಬಲ ಹಿಂದಿನ ಹಸ್ತದಲ್ಲಿ ಸರ್ಪವನ್ನು ಹಾಗೂ ಎಡ ಹಿಂದಿನ ಹಸ್ತದಲ್ಲಿ ಅಗ್ನಿಯನ್ನು ಹಿಡಿದಿರುವನು. ಜಟಾಭಾರ, ಕರ್ಣಾಭರಣಗಳು, ಕೊರಳಾಭರಣಗಳನ್ನು ಧರಿಸಿರುವನು. ಹಾಗೂ ಈ ಶಿಲ್ಪದ ಎಡಬಲದಲ್ಲಿ ಅಂಜಲಿಮುದ್ರೆಯೊಂದಿಗೆ ಪದ್ಮಾಸನದಲ್ಲಿ ಕುಳಿತ ಯತಿಗಳನ್ನು ಕಂಡರಿಸಲಾಗಿದೆ.

ಹಾಗೆಯೇ ಇನ್ನೆರಡು ವ್ಯಾಖ್ಯಾನ ದಕ್ಷಿಣಾಮೂರ್ತಿಶಿಲ್ಪಗಳು ಹೊಸಪೇಯ ಜಂಬುನಾಥ ದೇವಾಲಯದ ನವರಂಗದ ೨ನೇ ಕಂಬ ಹಾಗೂ ಮಹಾರಂಗಮಂಟಪದ ೩೪ನೇ ಕಂಬದಲ್ಲಿ ಕಂಡುಬರುತ್ತವೆ. ನವರಂಗದ ಕಂಬದಲ್ಲಿ ಕಂಡರಿಸಿರುವ ಶಿಲ್ಪವು ಸಂಪೂರ್ಣವಾಗಿ ಪ್ರಸನ್ನ ವಿರೂಪಾಕ್ಷ ದೇವಾಲಯದಲ್ಲಿನ ಶಿಲ್ಪದ ಲಕ್ಷಣಗಳನ್ನು ಹಾಗೂ ಮಹಾರಂಗಮಂಟಪದ ೩೪ನೇ ಕಂಬದಲ್ಲಿರುವ ಶಿಲ್ಪವು ವಿರೂಪಾಕ್ಷ ದೇವಾಲಯದ ಮಹಾರಂಗಮಂಟಪದಲ್ಲಿರುವ ಶಿಲ್ಪಗಳ ಲಕ್ಷಣಗಳನ್ನು ಹೊಂದಿರುವವು. ಆದರೆ ಇಲ್ಲಿನ ಮಹಾಮಂಟಪದಲ್ಲಿರುವ ಶಿಲ್ಪವು ಸಾಮಾನ್ಯ ಪೀಠವನ್ನು ಹೊಂದಿರದೆ ಚಿಕ್ಕ ಬಂಡೆಗಳಿಂದ ಜೋಡಿಸಿದ ಪೀಠದ ಮೇಲೆ ಅಪಸ್ಮಾರ ರಹಿತನಾಗಿ ಆಸೀನನಾಗಿದ್ದು ಶಿಲ್ಪದ ಹಿಂದೆ ವಟವೃಕ್ಷವನ್ನು ಕಂಡರಿಸಿರುವರು. ಈ ಭಿನ್ನತೆಯನ್ನು ಹೊರತುಪಡಿಸಿ ಮೇಲೆ ತಿಳಿಸಿದಂತೆ ಇದು ವಿರೂಪಾಕ್ಷ ದೇವಾಲಯದ ಮಹಾರಂಗಮಂಟಪದಲ್ಲಿನ ಶಿಲ್ಪಗಳ ಲಕ್ಷಣಗಳನ್ನು ಒಳಗೊಂಡಿದೆ.

**ವ್ಯಾಖ್ಯಾನ ದಕ್ಷಿಣಮೂರ್ತಿ**

| ಗ್ರಾಮ | ದೇವಾಲಯಗಳು ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ದೇವಾಲಯದ ದಕ್ಷಿಣಾಭಿಮುಖದ ಭಿತ್ತಿ | ೧ |
| ಹಂಪಿ | ವಿರೂಪಾಕ್ಷ | ಮಹಾರಂಗಮಂಟಪದ ೧೬ನೇ ಕಂಬ | ೧ |
| ಹಂಪಿ | ವಿರೂಪಾಕ್ಷ | ಮಹಾರಂಗಮಂಟಪದ ೨೭ನೇ ಕಂಬ | ೧ |
| ಹಂಪಿ | ವಿರೂಪಾಕ್ಷ | ಮಹಾರಂಗಮಂಟಪದ ೩೨ನೇ ಕಂಬ | ೧ |
| ಹಂಪಿ | ಉಮಾಮಹೇಶ್ವರ | ಮಂಟಪದ ೯ನೇ ಕಂಬ | ೧ |
| ಕಮಲಾಪುರ | ಪ್ರಸನ್ನ ವಿರೂಪಾಕ್ಷ | ಉತ್ಸವ ಮಂಟಪದ ೧೧ನೇ ಕಂಬ | ೧ |
| ಕಮಲಾಪುರ | ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ವಸ್ತು ಸಂಗ್ರಹಾಲಯ | ವಸ್ತು ಸಂಗ್ರಹಾಲಯದ ಹೊರಭಾಗದ ಆವರಣ | ೧ |
| ಹೊಸಪೇಟೆ | ಜಂಬುನಾಥ | ನವರಂಗದ ೨ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೩೪ನೇ ಕಂಬ | ೧ |
| ಒಟ್ಟು | | | ೯ |



ವ್ಯಾಖ್ಯಾನ ದಕ್ಷಿಣಾಮೂರ್ತಿ, ವಿರೂಪಾಕ್ಷ
ದೇವಾಲಯದ ಭಿತ್ತಿ, ಹಂಪಿ



ವ್ಯಾಖ್ಯಾನ ದಕ್ಷಿಣಾಮೂರ್ತಿ ಪ್ರಸನ್ನ
ವಿರೂಪಾಕ್ಷ ದೇವಾಲಯ, ಹಂಪಿ



ವ್ಯಾಖ್ಯಾನ ದಕ್ಷಿಣಾಮೂರ್ತಿ,
ಜಂಬುನಾಥ ದೇವಾಲಯ,
ಹೊಸಪೇಟೆ

**ಯೋಗ ದಕ್ಷಿಣಾಮೂರ್ತಿ**

ಯೋಗ ದಕ್ಷಿಣಾ ಮೂರ್ತಿಯನ್ನು ಮೂರು ಬಗೆಗಳಲ್ಲಿ ರಚಿಸಬಹುದು.[೧೧೪] ಮೊದಲನೆಯದು ಎರಡು ಕಾಲುಗಳನ್ನು ಕತ್ತರಿಯಂತೆ ಸ್ವಸ್ತಿಕಾಸನದಲ್ಲಿ ಇರಿಸಿಕೊಂಡಿರುವುದು (ಬಲತೊಡೆಯ ಮೇಲೆ ಎಡಗಾಲು ಬರುವಂತೆ ಇರಿಸಿಕೊಂಡಿರುವುದು. ಕಾಲುಗಳು ಸ್ವಸ್ತಿಕ ಚಿಹ್ನೆಯನ್ನು ಹೋಲುವಂತೆ ಇರುತ್ತವೆ). ಮುಂದಿನ ಬಲಹಸ್ತವನ್ನು ಯೋಗ ಮುದ್ರೆಯಲ್ಲಿ ಎದೆಯ ಮೇಲೆ ಇರಿಸಿಕೊಂಡಿರಬೇಕು. ಮುಂದಿನ ಎಡಬಾಹು ಯೋಗಭಂಗಿಯಲ್ಲಿ ಎಡತೊಡೆಯ ಮೇಲೆ ಇರುತ್ತದೆ. ಹಿಂದಿನ ಬಲಹಸ್ತದಲ್ಲಿ ಅಕ್ಷಮಾಲೆ, ಎಡಹಸ್ತದಲ್ಲಿ ತಾವರೆ ಇರುತ್ತದೆ. ದೃಷ್ಟಿಯು ಮೂಗಿನ ತುದಿಯ ಮೇಲೆ ಇರಬೇಕು. ಭುಜಗಳ ಮೇಲೆ ಕೆಲವು ಜಟೆಗಳು ಹರಡಿಕೊಂಡಿರಬೇಕು. ಈ ಮೂರ್ತಿಯು ಋಷಿಗಳಿಂದ ಸುತ್ತುವರಿದಿದ್ದು ಅವರಿಂದ ಪೂಜೆಗಳನ್ನು ಕೈಗೊಳ್ಳುವಂತಿರಬೇಕು.

ಎರಡನೆಯ ವಿಧದಲ್ಲಿ ಯೋಗದಕ್ಷಿಣಾಮೂರ್ತಿಯ ಎಡಗಾಲು ಉತ್ಕುಟಿಕಾಸನದಲ್ಲಿರುವಂತೆ ಮಡಚಿಕೊಂಡಿರಬೇಕು. ಮೂರ್ತಿಯ ದೇಹ ಮತ್ತು ಎಡಗಾಲನ್ನು ಯೋಗಪಟ್ಟವು ಸುತ್ತುವರಿದಿರಬೇಕು. ಬಲಗಾಲು ಪೀಠದಿಂದ ಕೆಳಗೆ ಚಾಚಿರಬೇಕು. ಮುಂದಿನ ಎಡಬಾಹುವಿನ ಮೊಣಕೈ ಮಡಚಿರುವ ಎಡಗಾಲಿನ ಮೇಲೆ ಇರಬೇಕು. ಉಳಿದೆಲ್ಲಾ ವಿವರಣೆಗಳು ಮೊದಲನೆಯ ವಿಧದಲ್ಲಿರುವಂತೆಯೇ ಇರುತ್ತದೆ.

ಮೂರನೆಯ ಬಗೆಯಲ್ಲಿ ಎರಡು ಕಾಲುಗಳು ಕತ್ತರಿಯಂತೆ ಓರೆಯಾಗಿರಿಸಿ ಕೊಂಡಿರಲಾಗುತ್ತದೆ (ಯೋಗ ನರಸಿಂಹ ಮೂರ್ತಿಯಂತೆ). ಇದರ ಸುತ್ತಲೂ ಮತ್ತು ದೇಹವನ್ನು ಆವರಿಸಿರುವಂತೆ ಯೋಗಪಟ್ಟ ಇರುತ್ತದೆ. ಮುಂದಿನ ಎರಡೂ ಬಾಹುಗಳನ್ನು ಚಾಚಿಕೊಂಡು ಮೊಣಕಾಲುಗಳ ಮೇಲೆ ಇರಿಸಿಕೊಂಡಿರಲಾಗಿರುತ್ತದೆ. ಹಿಂದಿನ ಬಲಹಸ್ತದಲ್ಲಿ ಅಕ್ಷಮಾಲೆ ಮತ್ತು ಎಡಹಸ್ತದಲ್ಲಿ ಕಮಂಡಲ ಧರಿಸಿರಬೇಕು. ಜಟಾಮಂಡಲಧಾರಿಯಾಗಿದ್ದು, ಅದರಲ್ಲಿ ಬಾಲಚಂದ್ರ, ನಾಗ, ಗಂಗೆ ಇತರೆ ಅಲಂಕರಣಗಳು ಇರಬೇಕು. ಈ ಮೂರ್ತಿಯು ಶ್ವೇತ ವರ್ಣವನ್ನು ಹೊಂದಿದ್ದು ಕಂಠವು ಕಪ್ಪಾಗಿರಬೇಕು. ಮೂರ್ತಿಯನ್ನು ಸರ್ವಾಭರಣಗಳಿಂದ ಅಲಂಕರಿಸಬೇಕು ಹಾಗೂ ಕೆಲವು ಸರ್ಪಗಳನ್ನು ಅಲಂಕಾರದಲ್ಲಿ ಸೇರಿಸಬೇಕು.

ಹಂಪಿ ಪರಿಸರದಲ್ಲಿ ಒಟ್ಟು ೬ ಯೋಗ ದಕ್ಷಿಣಾಮೂರ್ತಿಗಳು ಕಂಡುಬರುತ್ತವೆ. ಅವುಗಳು ಹಂಪಿಯ ವಿರೂಪಾಕ್ಷ ದೇವಾಲಯ(೨), ಕೋಟಿಲಿಂಗದ ಬಳಿಯಿರುವ ಶಿವದೇವಾಲಯ(೧) ಹಾಗೂ ಹಂಪಿಯ ಪಾರ್ಶ್ವನಾಥ ಜಿನಾಲಯದ ಎದುರಿರುವ ವೈಷ್ಣವ ದೇವಾಲಯ(೧), ನಿಂಬಾಪುರದ ಸೌಮ್ಯ ಸೋಮೇಶ್ವರ ದೇವಾಲಯ(೧) ಹಾಗೂ ಹೊಸಪೇಟೆಯ ಜಂಬುನಾಥ ದೇವಾಲಯ(೧)ಗಳಲ್ಲಿ ಕಂಡುಬರುತ್ತವೆ.

ಜಂಬುನಾಥ ದೇವಾಲಯದ ಮಹಾಮಂಟಪದ ೩೪ನೇ ಕಂಬದಲ್ಲಿ ಸುಂದರ ದಕ್ಷಿಣಾ ಮೂರ್ತಿಯ ಶಿಲ್ಪವಿದೆ. ಇಲ್ಲಿಯ ದಕ್ಷಿಣಾಮೂರ್ತಿ ಶಿಲ್ಪವು ಚಿಕ್ಕ-ಚಿಕ್ಕ ಬಂಡೆಗಳ ಮೇಲೆ ವೀರಾಸನದಲ್ಲಿ

ಕುಳಿತಿದ್ದು ಶಿಲ್ಪಗಳಂತೆಯೇ ಚತುರ್ಭುಜಗಳನ್ನು ಹೊಂದಿದ್ದು, ಹಿಂದೆ ವಿವರಿಸಿದ ವ್ಯಾಖ್ಯಾನ ಮುದ್ರೆ, ಸರ್ಪ, ಅಗ್ನಿ ಹಾಗೂ ದಂಡಹಸ್ತವನ್ನು ಹೊಂದಿರುವನು. ಈ ದಕ್ಷಿಣಾಮೂರ್ತಿಯ ಹಿಂದೆ ವಟವೃಕ್ಷವನ್ನು ಕಂಡರಿಸಲಾಗಿದೆ. ಹಾಗೂ ಉಳಿದ ಲಕ್ಷಣಗಳು ಮೇಲಿನ ಶಿಲ್ಪದಲ್ಲಿದ್ದಂತೆಯೇ ಇವೆ.

ಪ್ರಸ್ತುತ ವಿರೂಪಾಕ್ಷ ದೇವಾಲಯದ ಉತ್ಸವ ಮಂಟಪದ ೧೦ನೇ ಕಂಬ ಹಾಗೂ ಜಂಬುನಾಥ ದೇವಾಲಯದ ೨ನೇ ಕಂಬದಲ್ಲಿ ಒಂದೇ ರೀತಿಯ ಲಕ್ಷಣಗಳುಳ್ಳ ದಕ್ಷಿಣಾಮೂರ್ತಿ ಶಿಲ್ಪಗಳು ಕಂಡುಬರುತ್ತವೆ. ಇವು ಮೇಲೆ ವಿವರಿಸಿದ ಪ್ರತಿಮಾ ಲಕ್ಷಣಗಳನ್ನೇ ಹೊಂದಿದ್ದರೂ ಭಿನ್ನವಾದ ಆಸನದಲ್ಲಿ ಕುಳಿತಿರುವುದು. ಬಲಗಾಲನ್ನು ಪೀಠದ ಕೆಳಕ್ಕೆ ಚಾಚಿದ್ದು, ಎಡಗಾಲನ್ನು ಮಡಚಿ ಪೀಠದ ಮೇಲೆಯೇ ಇರಿಸಿರುವನು. ಹಾಗೂ ಕಾಲಬಳಿ ಅಪಸ್ಮಾರನನ್ನು ತೋರಿಸಲಾಗಿಲ್ಲ. ಈ ಒಂದು ಲಕ್ಷಣವನ್ನು ಹೊರತಪಡಿಸಿ ಉಳಿದೆಲ್ಲ ಲಕ್ಷಣಗಳು ಮೇಲಿನ ಶಿಲ್ಪದ ವಿವರಣೆಯಂತೆಯೇ ಇವೆ. ಇನ್ನೊಂದು ದಕ್ಷಿಣಾಮೂರ್ತಿ ಶಿಲ್ಪವು ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ವಸ್ತುಸಂಗ್ರಹಾಲಯದ ಆವರಣದಲ್ಲಿದೆ. ಆದರೆ ಈ ಶಿಲ್ಪ ಭಾಗಶಃ ಭಗ್ನಗೊಂಡಿದೆ. ಆದರೂ ಉಳಿದ ಅವಶೇಷದ ಪ್ರತಿಮಾ ಲಕ್ಷಣಗಳಿಂದ ಇದು ವಿರೂಪಾಕ್ಷ ದೇವಾಲಯದ ಭಿತ್ತಿಯ ದೇವಕೋಷ್ಠದಲ್ಲಿ ಕಂಡುಬಂದಿರುವ ಶಿಲ್ಪದ ಲಕ್ಷಣಗಳನ್ನೇ ಹೊಂದಿರುವುದು ತಿಳಿಯುತ್ತದೆ.

ಮೇಲೆ ವಿವರಿಸಿದ ಶಿಲ್ಪಗಳಲ್ಲಿ ಯಾವುದೇ ಶಿಲ್ಪವು ಆಗಮಗಳು ತಿಳಿಸುವ ಪ್ರತಿಮಾ ಲಕ್ಷಣಗಳನ್ನು ಸಂಪೂರ್ಣವಾಗಿ ಹೊಂದಿಲ್ಲ. ಹಾಗೂ ಸಂಪೂರ್ಣವಾಗಿ ಅವುಗಳನ್ನು ಉಲ್ಲಂಘಿಸಿಯೂ ಇಲ್ಲ, ಆದ್ದರಿಂದ ಕೆಲವೊಂದು ಆಗಮಗಳಲ್ಲಿನ ಲಕ್ಷಣಗಳನ್ನು ಬಳಸಿಕೊಂಡು ಶಿಲ್ಪಿಯು ತನ್ನ ಸ್ವಂತಿಕೆಯನ್ನು ಈ ಶಿಲ್ಪಗಳಲ್ಲಿ ತೋರಿಸಿರುವನೆಂದು ಹೇಳಬಹುದು.

ವಿರೂಪಾಕ್ಷ ದೇವಾಲಯದ ಎಡಬದಿಯ ಪ್ರಾಕಾರ ಮಂಟಪದ ೧೦ನೇ ಕಂಬದಲ್ಲಿ ಹಾಗೂ ಪಾರ್ಶ್ವನಾಥ ಜಿನಾಲಯದ ಎದುರಿರುವ ವೈಷ್ಣವ ದೇವಾಲಯದಲ್ಲಿರುವ ಮತ್ತು ಜಂಬುನಾಥ ದೇವಾಲಯದ ಮಹಾಮಂಟಪದ ೭ನೇ ಕಂಬದಲ್ಲಿ ಕಂಡುಬರುವ ಯೋಗ ದಕ್ಷಿಣಾಮೂರ್ತಿಗಳು ಒಂದೇ ರೀತಿಯ ಪ್ರತಿಮಾ ಲಕ್ಷಣಗಳನ್ನು ಹೊಂದಿರುವುದು. ಇಲ್ಲಿ ಚಿಕ್ಕ-ಚಿಕ್ಕ ಬಂಡೆಗಳ ಮೇಲೆ ಹಿಂದೆ ವಿವರಿಸಿದಂತೆಯೇ ವೀರಾಸನದಲ್ಲಿ ಕುಳಿತಿದ್ದು ಯೋಗಪಟ್ಟವನ್ನು ತೋರಿಸಲಾಗಿದೆ. ಉಳಿದಂತೆ ವ್ಯಾಖ್ಯಾನ ದಕ್ಷಿಣಾಮೂರ್ತಿಯ ಲಕ್ಷಣಗಳನ್ನು ಹೊಂದಿವೆ. ಅಂದರೆ ಬಲಭಾಗದ ಹಸ್ತಗಳಲ್ಲಿ ವ್ಯಾಖ್ಯಾನ ಮುದ್ರೆ, ಸರ್ಪ ಹಾಗೂ ಎಡಭಾಗದ ಹಸ್ತಗಳಲ್ಲಿ ದಂಡಹಸ್ತ, ಅಗ್ನಿಯನ್ನು ಹಿಡಿದಿರುವುದು, ಜಟಾಭಾರ, ತ್ರಿನೇತ್ರ, ಕೊರಳಹಾರ, ಯಜ್ಞೋಪವೀತ, ಭುಜವಳಯ, ಬಾಹುವಳಯ, ಕಂಕಣಗಳು, ಕಾಲ್ಕಡಗಗಳನ್ನು ಧರಿಸಿರುವನು. ಜಂಬುನಾಥ ದೇವಾಲಯದಲ್ಲಿರುವ ಮೂರ್ತಿಯು ಬಲ ಮುಂದಿನ ಹಸ್ತದಲ್ಲಿ ವ್ಯಾಖ್ಯಾನ ಮುದ್ರೆಯ ಜೊತೆಗೆ ಅಕ್ಷಮಾಲೆಯನ್ನು ಹಿಡಿದಿರುವುದು. ಈ ಮೂರು ಶಿಲ್ಪಗಳಲ್ಲಿ ಅಪಸ್ಮಾರ ಪುರುಷನನ್ನು ತೋರಿಸಲಾಗಿಲ್ಲ.

ಇನ್ನೊಂದು ಅತ್ಯಂತ ಸುಂದರವಾದ ಯೋಗದಕ್ಷಣಾಮೂರ್ತಿಯು ಕೋಟಲಿಂಗದ ಶಿವ ದೇವಾಲಯದಲ್ಲಿದೆ. ಈ ಶಿಲ್ಪವು ದೇವಾಲಯದ ಗೋಡೆಗೆ ಇರುವ ಒಂದು ಪಟ್ಟಿಕೆಯಲ್ಲಿರುವುದು. ಇಲ್ಲಿಯೂ ದಕ್ಷಿಣಾ ಮೂರ್ತಿಯು ಮೇಲೆ ವಿವರಿಸಿದ ಭಂಗಿಯಲ್ಲಿಯೇ ಆಸೀನನಾಗಿರುವನು. ಸ್ಪಷ್ಟವಾದ ಯೋಗಪಟ್ಟಿಕೆ ಹಾಗೂ ತೊಡೆಯವರೆಗಿನ ವಸ್ತ್ರವನ್ನು ಧರಿಸಿರುವನು. ಬಲಪಾದದ ಕೆಳಗೆ ಅಪಸ್ಮಾರನನ್ನು ತೋರಿಸಲಾಗಿದೆ. ಅಪಸ್ಮಾರನು ತನ್ನ ಕೈಗಳಲ್ಲಿ ನಾಗ ಸರ್ಪವನ್ನು ಹಿಡಿದಿರುವನು. ದಕ್ಷಿಣಾಮೂರ್ತಿಯ ಪೀಠದ ಕೆಳಗೆ ಕುಳಿತಿರುವ ನಂದಿಯನ್ನು ಕೆತ್ತಲಾಗಿದೆ. ಮೇಲಿನ ಶಿಲ್ಪಗಳಲ್ಲಿ ಇದ್ದಂತೆಯೇ ಬಲಭಾಗದ ಮುಂದಿನ ಹಸ್ತವು ಅಕ್ಷಮಾಲೆಯನ್ನು ಹಿಡಿದಿದ್ದು ವ್ಯಾಖ್ಯಾನ ಮುದ್ರೆಯಲ್ಲಿರುವುದು. ಹಿಂದಿನ ಹಸ್ತದಲ್ಲಿ ಸರ್ಪ, ಎಡಭಾಗದ ಮುಂದಿನ ಹಸ್ತವು ಎಡ ಮೊಣಕಾಲ ಮೇಲೆ ದಂಡಹಸ್ತದಂತೆ ಇಟ್ಟಿರುವನು. ಹಿಂದಿನ ಹಸ್ತದಲ್ಲಿ ಅಗ್ನಿಯನ್ನು ಹಿಡಿದಿರುವನು. ಉದ್ದವಾದ ಜಟೆಗಳು ಇಳಿಬಿದ್ದಿರುವವು. ತ್ರಿನೇತ್ರ, ಬಲಗಿವಿಯಲ್ಲಿ ಸರ್ಪಕುಂಡ, ಎಡಗಿವಿಯಲ್ಲಿ ವೃತ್ತಕುಂಡಲಗಳನ್ನು ಧರಿಸಿರುವನು. ಹಾಗೂ ಕೊರಳಲ್ಲಿ ರುದ್ರಾಕ್ಷಿ ಮಾಲೆಗಳು, ಯಜ್ಞೋಪವೀತ, ವಕ್ಷಬಂಧವನ್ನು ಧರಿಸಿರುವನು. ದಕ್ಷಿಣಾಮೂರ್ತಿಯ ಪೀಠದ ಹಿಂಭಾಗದಲ್ಲಿರುವ ವಟವೃಕ್ಷವು ಅತ್ಯಂತ ಸುಂದರವಾಗಿ ಕೆತ್ತಲಾಗಿದ್ದು, ಇಡೀ ಪಟ್ಟಿಕೆಯನ್ನು ಈ ವೃಕ್ಷವು ಆವರಿಸಿಕೊಂಡಿದೆ. ಮರದ ರೆಂಬೆಗಳು ಎಲೆಗಳ ರಚನೆಯು ಸುಂದರವಾಗಿದ್ದು ಈ ರೆಂಬೆಗಳ ಮೇಲೆ ಕಪಿಗಳು ಚಲಿಸುತ್ತಿರುವಂತೆ ಕೆತ್ತಲಾಗಿದೆ. ದಕ್ಷಿಣಾಮೂರ್ತಿಯ ಎಡ ಹಾಗೂ ಬಲಗಳಲ್ಲಿ ಇಬ್ಬರು ಸಮಭಂಗದಲ್ಲಿ ನಿಂತಿರುವ ಯತಿಗಳನ್ನು ಕೆತ್ತಲಾಗಿದೆ. ಈ ಇಬ್ಬರು ಯತಿಗಳು ಕೊರಳಲ್ಲಿ, ಬಾಹುಗಳಲ್ಲಿ ರುದ್ರಾಕ್ಷಿ ಮಾಲೆಗಳನ್ನು ಧರಿಸಿದ್ದು ಅಂಜಲಿ ಮುದ್ರೆಗಳಲ್ಲಿ ನಿಂತಿರುವರು. ಕಟಿಯಿಂದ ಪಾದದವರೆಗಿನ ವಸ್ತ್ರಗಳನ್ನು ಧರಿಸಿರುವರು. ಜಟಾಬಂಧವನ್ನು ಹೊಂದಿದ್ದು ಉದ್ದನೆಯ ಮೀಸೆ ಹಾಗೂ ಗಡ್ಡಗಳನ್ನು ಕೆತ್ತಿರುವರು. ಹೀಗೆ ಹಂಪಿಯ ಅತ್ಯಂತ ಆಕರ್ಷಕ ಹಾಗೂ ಸ್ಪಷ್ಟವಾದ ಲಕ್ಷಣಗಳನ್ನು ಹೊಂದಿರುವ ದಕ್ಷಿಣಾಮೂರ್ತಿ ಇದಾಗಿದೆ. ಇದೇ ರೀತಿಯ ಲಕ್ಷಣಗಳನ್ನು ಹೊಂದಿದ ಶಿಲ್ಪವು ವಿರೂಪಾಕ್ಷ ದೇವಾಲಯದ ಪೂರ್ವಾಭಿಮುಖವಾಗಿರುವ ಗೋಡೆಯಲ್ಲಿ ಕೆತ್ತಲಾಗಿದೆ. ಈ ಶಿಲ್ಪದಲ್ಲಿ ಮೂರ್ತಿಯು ಮೇಲಿನ ಶಿಲ್ಪದ ಲಕ್ಷಣಗಳನ್ನು ಹೊಂದಿದೆ. ಆದರೆ ಈ ಶಿಲ್ಪದಲ್ಲಿ ಯತಿಗಳನ್ನು ಕೆತ್ತಲಾಗಿಲ್ಲ. ಉಳಿದ ಎಲ್ಲ ಲಕ್ಷಣಗಳನ್ನು ಹಿಂದೆ ವಿವರಿಸಿದ ಶಿಲ್ಪದ ಲಕ್ಷಣಗಳನ್ನೇ ಹೊಂದಿದೆ. ಸೌಮ್ಯ ಸೋಮೇಶ್ವರ ದೇವಾಲಯದ ೨ನೇ ಕಂಬದಲ್ಲಿ ಕಂಡುಬರುವ ದಕ್ಷಿಣಾಮೂರ್ತಿಯು ಸಹ ಇದೇ ಲಕ್ಷಣಗಳನ್ನು ಹೊಂದಿದೆ. ದೇಹವು ಸ್ವಲ್ಪ ಮುಂದೆ ಬಾಗಿರುವಂತೆ ಕೆತ್ತಲಾಗಿದೆ. ಇಲ್ಲಿ ಶಿವನ ಎಡ-ಬಲಗಳಲ್ಲಿ ಯತಿಗಳು ಕುಳಿತಿರುವರು. ಈ ಶಿಲ್ಪದಲ್ಲಿ ಬಲ ಮುಂದಿನ ಹಸ್ತವು ಜ್ಞಾನ ಮುದ್ರೆಯಲ್ಲಿ ಹಿಡಿದಿರುವನು. ಆದರೆ ಯೋಗ ಪಟ್ಟಿಕೆಯನ್ನು ಹೊಂದಿರುವುದರಿಂದ ಇದನ್ನು ಯೋಗ ದಕ್ಷಿಣಾಮೂರ್ತಿ ಎಂದು ಪರಿಗಣಿಸಲಾಗಿದೆ. ಈ ಶಿಲ್ಪಗಳಲ್ಲಿ ಯಾವುದೇ ಶಿಲ್ಪವು ಸಂಪೂರ್ಣವಾಗಿ ಆಗಮಗಳನ್ನು ಅನ್ವಯಿಸಿ ಕೆತ್ತಲ್ಪಟ್ಟಿಲ್ಲ.



ಯೋಗದಕ್ಷಿಣಾಮೂರ್ತಿ, ವಿರೂಪಾಕ್ಷ
ದೇವಾಲಯ, ಹಂಪಿ



ಯೋಗದಕ್ಷಿಣಾಮೂರ್ತಿ,
ಕೋಟಿಲಿಂಗ, ಹಂಪಿ



ಯೋಗದಕ್ಷಿಣಾಮೂರ್ತಿ.ಪಾರ್ಶ್ವನಾಥ
ಜಿನಾಲಯದ ಎದುರಿರುವ ವೈಷ್ಣವ
ದೇವಾಲಯ. ಹಂಪಿ



ಯೋಗದಕ್ಷಿಣಾಮೂರ್ತಿ, ಸೌಮ್ಯ ಸೋಮೇಶ್ವರ ದೇವಾಲಯ, ನಿಂಬಾಪುರ

**ಯೋಗ ದಕ್ಷಿಣಾಮೂರ್ತಿ**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ದೇವಾಲಯದ ಪೂರ್ವಾಭಿಮುಖದ ಭಿತ್ತಿ | ೧ |
| ಹಂಪಿ | ವಿರೂಪಾಕ್ಷ | ಎಡಬದಿಯ ಪ್ರಾಕಾರ ಮಂಟಪದ ೧೧ನೇ ಕಂಬ | ೧ |
| ಹಂಪಿ | ಕೋಟಿಲಿಂಗದ ಶೈವ ದೇವಾಲಯ | ದೇವಾಲಯದ ಒಳಭಿತ್ತಿ | ೧ |
| ಹಂಪಿ | ಪಾರ್ಶ್ವನಾಥ ಜಿನಾಲಯದ ಎದುರಿರುವ ವೈಷ್ಣವ ದೇವಾಲಯ | ದೇವಾಲಯದ ೧ನೇ ಕಂಬ | ೧ |
| ನಿಂಬಾಪುರ | ಸೌಮ್ಯ ಸೋಮೇಶ್ವರ | ದೇವಾಲಯದ ಮಂಟಪದ ೨ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೭ನೇ ಕಂಬ | ೧ |
| ಒಟ್ಟು | | | ೬ |

**ವೀಣಾಧರ ದಕ್ಷಿಣಾಮೂರ್ತಿ**

ಹಂಪಿ ಪರಿಸರದಲ್ಲಿ ಮೂರು ವೀಣಾಧರ ದಕ್ಷಿಣಾ ಮೂರ್ತಿ ಶಿಲ್ಪಗಳು ಕಂಡುಬರುತ್ತವೆ. ಹಂಪೆಯ ವಿರೂಪಾಕ್ಷ ದೇವಾಲಯದ ನವರಂಗದ ೧ ಕಂಬದಲ್ಲಿ ಹಾಗೂ ಪ್ರಸನ್ನ ವಿರೂಪಾಕ್ಷ ದೇವಾಲಯದ ಉತ್ಸವ ಮಂಟಪದ ೫ನೇ ಕಂಬದಲ್ಲಿ ಹಾಗೂ ಜಂಬುನಾಥ ದೇವಾಲಯದ ಮಹಾಮಂಟಪದ ೨೩ನೇ ಕಂಬದಲ್ಲಿ ಕಂಡುಬರುತ್ತವೆ. ವಿರೂಪಾಕ್ಷ ದೇವಾಲಯದಲ್ಲಿ ವೀಣಾಧರ ದಕ್ಷಿಣಾಮೂರ್ತಿಯು ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿರುವನು. ಮುಂದಿನ ಎರಡು ಕೈಗಳಿಂದ ವೀಣೆಯನ್ನು ಹಿಡಿದಿರುವನು. ಬಲಹಿಂದಿನ ಹಸ್ತದಲ್ಲಿ ಅಕ್ಷಮಾಲೆ ಎಡ ಹಿಂದಿನ ಹಸ್ತದಲ್ಲಿ ಅಗ್ನಿಯನ್ನು ಹಿಡಿದಿರುವನು. ಜಟಾಮುಕುಟ ಹಾಗೂ ವ್ಯಾಖ್ಯಾನ ಮೂರ್ತಿಯಲ್ಲಿರುವಂತೆ ಸಕಲ ವಸ್ತ್ರಾಭರಣಗಳನ್ನು

ಧರಿಸಿರುವನು. ಪ್ರಸನ್ನ ವಿರೂಪಾಕ್ಷ ದೇವಾಲಯದಲ್ಲಿ ಕಂಡುಬರುವ ಶಿಲ್ಪವೂ ಸಹ ಸುಖಾಸನದಲ್ಲಿ ಕುಳಿತಿದ್ದು, ಉದ್ದನೆಯ ವನಮಾಲೆಯನ್ನು ಧರಿಸಿರುವನು. ಮುಂದಿನ ಎರಡು ಕೈಗಳಿಂದ ವೀಣೆ, ಬಲ ಹಿಂದಿನ ಹಸ್ತದಲ್ಲಿ ಅಗ್ನಿ, ಎಡ ಹಿಂದಿನ ಹಸ್ತದಲ್ಲಿ ಸರ್ಪವನ್ನು ಶಿರದಲ್ಲಿ ಕಿರೀಟಮುಕುಟ ಧರಿಸಿದ್ದು, ಉಳಿದಂತೆ ವ್ಯಾಖ್ಯಾನ ದಕ್ಷಿಣಾ ಮೂರ್ತಿಯಲ್ಲಿರುವ ಪ್ರತಿಮಾ ಲಕ್ಷಣಗಳನ್ನು ಹೊಂದಿದೆ. ಜಂಬುನಾಥ ದೇವಾಲಯದಲ್ಲಿ ದೊರೆತ ದಕ್ಷಿಣಾಮೂರ್ತಿಯು ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತು ಮುಂದಿನ ಎರಡು ಕೈಗಳಿಂದ ವೀಣೆಯನ್ನು ಹಾಗೂ ಬಲ ಹಿಂದಿನ ಹಸ್ತವು ತ್ರಿಶೂಲ, ಎಡ ಹಿಂದಿನ ಹಸ್ತವು ಡಮರುವನ್ನು ಹಿಡಿದಿರುವುದು. ಜಟಾಮುಕುಟ ಹಾಗೂ ಸಕಲ ವಸ್ತ್ರಾಭರಣಗಳನ್ನು ಧರಿಸಿರುವನು.

ಮೇಲಿನ ಮೂರು ದಕ್ಷಿಣಾಮೂರ್ತಿಗಳಲ್ಲಿ ಸಂಪೂರ್ಣವಾಗಿ ಆಗಮ ಅನ್ವಯ ರಚಿಸಲಾಗಿಲ್ಲ. ಹಂಪಿಯ ವಿರೂಪಾಕ್ಷ ದೇವಾಲಯದಲ್ಲಿರುವ ದಕ್ಷಿಣಾಮೂರ್ತಿಯು ಭಾಗಶಃ ಆಗಮಗಳನ್ನು ಅನುಸರಿಸಿ ಕೆತ್ತಲ್ಪಟ್ಟಿದೆ. ಆದರೆ ಆಗಮವು ಹೇಳುವಂತೆ ಎಡಪಾದವು ಉತ್ಕುಟಿಕಾಸನದಲ್ಲಿರದೆ ಮಡಚಿ ಪೀಠದ ಮೇಲಿರಿಸಿ ಸುಖಾಸನ ಭಂಗಿಯಲ್ಲಿದೆ. ಈ ಒಂದು ವ್ಯತ್ಯಾಸವನ್ನು ಹೊರತುಪಡಿಸಿದರೆ ಉಳಿದಂತೆ ಆಗಮಗಳು ಉಲ್ಲೇಖಿಸುವ ಪ್ರತಿಮಾ ಲಕ್ಷಣಗಳನ್ನೇ ಹೊಂದಿದೆ. ಆದ್ದರಿಂದ ಈ ಎಲ್ಲಾ ಶಿಲ್ಪಗಳೂ ಸಂಪೂರ್ಣವಾಗಿ ಅಲ್ಲದಿದ್ದರೂ ಕೆಲವು ಲಕ್ಷಣಗಳನ್ನು ತೋರಿಸುವಲ್ಲಿ ಆಗಮಗಳನ್ನು ಅನ್ವಯಿಸಿವೆ. ಸುರೇಶ್ ಕೆ.ಎಂ.[೧೧೫] ಅವರು ಮೇಲೆ ವಿವರಿಸಿದ ಎಲ್ಲ ದಕ್ಷಿಣಾಮೂರ್ತಿಗಳಲ್ಲಿ ೫ ದಕ್ಷಿಣಾಮೂರ್ತಿಗಳನ್ನು ಮಾತ್ರ ಗುರುತಿಸಿರುವರು.

### ವೀಣಾಧರ ದಕ್ಷಿಣಾಮೂರ್ತಿ

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ನವರಂಗದ ೪ನೇ ಕಂಬ | ೧ |
| ಕಮಲಾಪುರ | ಪ್ರಸನ್ನ ವಿರೂಪಾಕ್ಷ | ಉತ್ಸವ ಮಂಟಪದ ೫ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೨೩ನೇ ಕಂಬ | ೧ |
| ಒಟ್ಟು | | | ೩ |



ವೀಣಾಧರ ದಕ್ಷಿಣಾಮೂರ್ತಿ, ವಿರೂಪಾಕ್ಷ ದೇವಾಲಯ, ಹಂಪಿ



ವೀಣಾಧರ ದಕ್ಷಿಣಾಮೂರ್ತಿ, ಪ್ರಸನ್ನ ವಿರೂಪಾಕ್ಷ ದೇವಾಲಯ, ಹಂಪಿ



ವೀಣಾಧರ ದಕ್ಷಿಣಾಮೂರ್ತಿ, ಜಂಬುನಾಥ ದೇವಾಲಯ, ಹೊಸಪೇಟೆ

**ಕಂಕಾಳ ಮೂರ್ತಿ**

ಶಿವನಿಗೆ ಬ್ರಹ್ಮಹತ್ಯಾ ದೋಷ ತಗುಲಿ ಭಿಕ್ಷುಕನಾಗಿ ಸಂಚರಿಸಿದಾಗಿನ ರೂಪವೇ ಕಂಕಾಳ ಅಥವಾ ಭಿಕ್ಷಾಟನಾಮೂರ್ತಿ ಎಂದು ಹೇಳಲಾಗಿದೆ. ಕಂಕಾಳಮೂರ್ತಿಯ ಬಗೆಗೆ ಕುರಿತು ಹಲವು ಪಠ್ಯಗಳು ವಿಭಿನ್ನ ರೀತಿಯಲ್ಲಿ ವಿವರಿಸುತ್ತವೆ. ಆದರೆ ಸಾಮಾನ್ಯವಾಗಿ ಕಂಡುಬರುವ ವಿವರಣೆಯೆಂದರೆ ಕೆಳಗಿನದು.

ಹಿಂದೆ ಒಮ್ಮೆ ಋಷಿಗಳೆಲ್ಲರೂ ಸೇರಿ ಈ ವಿಶ್ವದ ಸೃಷ್ಟಿಕರ್ತನು ಯಾರು? ಎಂಬುದನ್ನು ತಿಳಿಯಲು ಮೇರುಪರ್ವತಕ್ಕೆ ಹೋಗಿ ಬ್ರಹ್ಮನನ್ನು ಕೇಳಿದರು. ಅಹಂಕಾರದಿಂದ ಬ್ರಹ್ಮನು ತಾನೇ ಎಂದು ಹೇಳಿಕೊಂಡಾಗ ಶಿವನು ಅವನ ಅಹಂಕಾರವನ್ನು ಮುರಿಯಲು ಬೆಳಕಿನ ದೊಡ್ಡ ಸ್ಕಂಭ ರೂಪದಲ್ಲಿ ಅವತರಿಸಿದನು. ಆಗ ಅದರ ಆದಿ ಅಂತ್ಯಗಳನ್ನು ತಿಳಿಯಲು ಯಾರಿಂದಲೂ ಸಾಧ್ಯವಾಗಲಿಲ್ಲ. ಆದರೂ ಬ್ರಹ್ಮನು ಅದರ ಕೊನೆಯನ್ನು ತಾನು ನೋಡಿದ್ದೆನೆಂದು ಸುಳ್ಳು ಹೇಳಿದನು. ಇದರಿಂದ ಕೋಪಗೊಂಡ ಶಿವ ಭೈರವನ ರೂಪದಲ್ಲಿ ಬ್ರಹ್ಮನ ಐದು ತಲೆಗಳಲ್ಲಿ ಒಂದು ತಲೆಯನ್ನು ಕತ್ತರಿಸಿದನು. ಆಗ ಶಿವನಿಗೆ ಬ್ರಹ್ಮಹತ್ಯಾ ಪಾತಕವು ಅಂಟಿಕೊಂಡಿತು. ಈ ದೋಷದ ಪರಿಹಾರಕ್ಕಾಗಿ ಕತ್ತರಿಸಿದ ತಲೆಯ ಬರುಡೆಯನ್ನು ಕೈಯಲ್ಲಿ ಹಿಡಿದು ವಿಷ್ಣುವನ್ನು ಕಾಣುವ ತನಕ ಭಿಕ್ಷೆ ಬೇಡಬೇಕೆಂದು ಬ್ರಹ್ಮನೇ ಸೂಚಿಸಿದ. ಅದುವರೆವಿಗೂ ಬ್ರಹ್ಮಹತ್ಯೆಯೂ ಸ್ತ್ರೀರೂಪದಲ್ಲಿ ಹಿಂದೆಯೇ ಇರುತ್ತದೆಂದು ಹೇಳಿದ. ಭೈರವನು ಭೂತಗಣಗಳೊಂದಿಗೆ ಭಿಕ್ಷೆ ನಡೆಸುತ್ತ ಹೋದ ಮನೆಗಳಲ್ಲಿ ಹೆಂಗಸರೆಲ್ಲಾ ಇವನನ್ನು ಕಂಡು ಮೋಹಿತರಾಗಿ ಹಾಡುತ್ತ ಕುಣಿಯುತ್ತ ಅವನ ಗುಂಪಿನಲ್ಲಿ ಸೇರಿಕೊಂಡರು. ಕೊನೆಗೆ ವೈಕುಂಠವನ್ನು ತಲುಪಿದರು. ಆದರೆ ಅಲ್ಲಿ ಬಾಗಿಲಲ್ಲಿದ್ದ ವಿಷ್ವಕ್ಸೇನನು ಭೈರವನನ್ನು ಒಳಕ್ಕೆ ಬಿಡಲಿಲ್ಲ. ಆಗ ಭೈರವನು ಅವನನ್ನು ಕೊಂದದರಿಂದ ಬ್ರಹ್ಮಹತ್ಯಾ ಪಾತಕ ದ್ವಿಗುಣಗೊಂಡಿತು. ವಿಷ್ವಕ್ಸೇನನ ಶಿರವನ್ನು ತನ್ನ ಶೂಲಕ್ಕೆ ತೂಗು ಹಾಕಿಕೊಂಡು ವಿಷ್ಣುವಿನ ಮುಂದೆ ನಿಂತು ಪರಿಹಾರ ಕೇಳಿದನು. ವಿಷ್ಣುವು ವಾರಣಾಸಿ ಹೋದರೆ ಪಾಪವು ಪರಿಹಾರವಾಗುತ್ತದೆಂದು ಹೇಳಿದನು. ಹೀಗೆ ಭೈರವನು ಕಾಶಿಯನ್ನು ತಲುಪಿದಾಗ ಅಲ್ಲಿ ಕಂಕಾಲ-ಕಪಾಲಗಳೆರಡೂ ವಿಮೋಚನೆ ಪಡೆದವು. ಭೈರವನು ಕೈಲಾಸಕ್ಕೆ ಹಿಂತಿರುಗಿದ. ವಿಷ್ವಕ್ಸೇನನು ವಿಷ್ಣುವನ್ನು ಸೇರಿದನು.[೧೧೬]

ಕಂಕಾಲ ಮೂರ್ತಿಯ ಕುರಿತಂತೆ ಶ್ರೀ ಕಾಶ್ಯಪಶಿಲ್ಪ ಶಾಸ್ತ್ರ[೧೧೭] ಕಾಮಿಕಾಗಮ,[೧೧೮] ರೌರವಾಗಮ,[೧೧೯] ಕಾರಣಾಗಮ,[೧೨೦] ಶಿಲ್ಪರತ್ನ[೧೨೧] ಹಾಗೂ ಶ್ರೀ ತತ್ವನಿಧಿಗಳಲ್ಲಿ[೧೨೨] ಪ್ರತಿಮಾ ಲಕ್ಷಣಗಳನ್ನು ನೀಡಲಾಗಿದೆ. ಅವುಗಳ ಒಟ್ಟಾರೆ ವಿವರಣೆ ಜ್ಞಾನಾನಂದ ಜಿ. ಮತ್ತು ಗೋಪಿನಾಥರಾವ್ ಟಿ.ಎ.[೧೨೩] ಅವರ ಗ್ರಂಥದಲ್ಲಿ ನೀಡಲಾಗಿದೆ. ಅದು ಈ ಕೆಳಗಿನಂತಿದೆ.

ಕಂಕಾಲಮೂರ್ತಿಯು ಸ್ಥಾನಿಕ ಭಂಗಿಯಲ್ಲಿದ್ದು, ಎಡಪಾದವು ಸುಸ್ಥಿತದಲ್ಲಿ, ಬಲಪಾದವು ಕುಂಚಿತವಾಗಿಯೂ ಇರಿಸಿ, ಮುನ್ನಡೆಯುತ್ತಿರುವಂತೆ ಭಾಸವಾಗುವಂತಿರಬೇಕು. ಶ್ವೇತವರ್ಣಿತನಾಗಿ ಮೇಲುಡುಗೆಯನ್ನಾಗಿ ಕೆಂಪು ವಸ್ತ್ರವನ್ನು ಧರಿಸಿದ್ದು, ಹುಲಿಚರ್ಮದುಡುಗೆಯನ್ನು ಕೆಳವಸ್ತ್ರವನ್ನಾಗಿ ಧರಿಸಿರಬೇಕು. ಶಿರವು ಜಟಾಮುಕುಟದಿಂದ ಹಾಗೂ ಅದರ ಎಡಭಾಗದಲ್ಲಿ ಧಾತುರ ಪುಷ್ಪ, ನಾಗ ಮತ್ತು ಬಲಭಾಗದಲ್ಲಿ ಚಂದ್ರನಿಂದ ಅಲಂಕೃತನಾಗಿರಬೇಕು. ಶಿವನು ಸುಂದರ ನಗುಮೊಗವನ್ನು ಹೊಂದಿರಬೇಕು. ಕರ್ಣಗಳಲ್ಲಿ ಸಾಮಾನ್ಯ ಕುಂಡಲಗಳನ್ನು ಅಥವಾ ಬಲಕಿವಿಯಲ್ಲಿ ಮಕರಕುಂಡಲ, ಎಡಕಿವಿಯಲ್ಲಿ ಶಂಖಪತ್ರವನ್ನು ಧರಿಸಿರಬೇಕು. ಎದೆಯ ಭಾಗದಲ್ಲಿ ಯಜ್ಞೋಪವೀತ ಇರಬೇಕು. ಚತುರ್ಭುಜನಾಗಿದ್ದು, ಮುಂದಿನ ಬಲಗೈಯಲ್ಲಿ ಬಾಣ (ಬಾಣವೆಂದರೆ ಢಕ್ಕೆಯನ್ನು ಬಾರಿಸಲು

ಒಂದು ಚಿಕ್ಕ ಕೋಲು, ಆಗಮಗಳಲ್ಲಿ ಪ್ರಹಾರ ಎಂದು ಬಳಸಲಾಗಿದೆ) ಮುಂದಿನ ಎಡಕೈಯಲ್ಲಿ ಢಕ್ಕೆಯನ್ನು ಹಿಡಿದಿರಬೇಕು. ಹಿಂದಿನ ಬಲಗೈ ಹಸ್ತವು ಕಟಕ ಮುದ್ರೆಯಲ್ಲಿ ಶಿವನ ನೆಚ್ಚಿನ ಪ್ರಾಣಿಯಾದ ಜಿಂಕೆಯ ಬಾಯಿಯ ಬಳಿ ಇರಬೇಕು. ಹಿಂದಿನ ಎಡಹಸ್ತದಲ್ಲಿ ಕಂಕಾಲ–ದಂಡವನ್ನು ಹಿಡಿದಿರಬೇಕು. ಇದಕ್ಕೆ ಹತನಾದವನ ಕೈ–ಕಾಲು ದೇಹವನ್ನು ದಂಡಕ್ಕೆ ಕಟ್ಟಿರುವಂತಿರಬೇಕು. ಹಾಗೂ ಇದರೊಂದಿಗೆ ನವಿಲುಗರಿಗಳನ್ನು ಹಿಡಿದಿರಬೇಕು. ಕಂಕಾಲವು ಒಣಗಿ ಕಪ್ಪಾಗಿರಬೇಕು. ಆದರೆ ಅವುಗಳ ಮೇಲೆ ಮತ್ತು ದಂಡಕ್ಕೆ ಕಟ್ಟಿರುವ ಗೆಜ್ಜೆಗಳ ಮೇಲೆ ರಕ್ತದ ಕಲೆಗಳು ಇರಬೇಕು. ಈ ಕಂಕಾಲ ದಂಡವನ್ನು ಭುಜದ ಮೇಲೆ ಅಡ್ಡಲಾಗಿ ಇರಿಸಿಕೊಂಡಿರಬೇಕು. ಅದರ ಒಂದು ಕೊನೆಯನ್ನು ಹಿಂದಿನ ಎಡಹಸ್ತ ಹಿಡಿದಿರಬೇಕು. ಸೊಂಟದಲ್ಲಿ ಬೆಳ್ಳಿಯ ಹಿಡಿ ಇರುವ ಚಿನ್ನದ ಕಠಾರಿ ಸಿಲುಕಿಸಿಕೊಂಡಿರಬೇಕು. ಮರದ ಪಾದುಕೆಗಳನ್ನು ಧರಿಸಿರಬೇಕು.

ಶಿವನು ನಾಗಾಭರಣಗಳನ್ನು ಧರಿಸಿರಬೇಕು. ಕಂಕಾಳ ಮೂರ್ತಿಯು ಹೆಂಗಸರಿಂದ ಭೂತಗಣ ಗಳಿಂದ ಸುತ್ತುವರಿದಿರಬೇಕು. ಅವರು ನೃತ್ಯ ಮಾಡುತ್ತಾ ಹಾಡುತ್ತಾ ಇರುವಂತೆ ಚಿತ್ರಿಸಲ್ಪಟ್ಟಿರಬೇಕು. ಶಿವನ ಎಡಗಡೆಗೆ ಒಂದು ಭೂತವು ತಲೆಯ ಮೇಲೆ ಒಂದು ಪಾತ್ರೆಯನ್ನು ಹೊತ್ತು ನಿಂತಿರಬೇಕು. ಶಿವನಿಗೆ ದೊರೆತ ಭಿಕ್ಷೆಯನ್ನು ಇದರಲ್ಲಿ ಇರಿಸಿಕೊಳ್ಳುತ್ತಿರಬೇಕು. ಸುತ್ತುವರೆದಿರುವ ಹೆಂಗಸರು ಶಿವನ ಬಗ್ಗೆ ಬಹುವಾಗಿ ಆಕರ್ಷಿತರಾಗಿ ಅವನನ್ನು ಆಲಂಗಿಸುವಂತೆ ಸೌಟುಗಳಿಂದ ಆಹಾರವನ್ನು ತೆಗೆದುಕೊಡುತ್ತಿರುವಂತೆ ರೂಪಿಸಬೇಕು. ಶಿವನ ಬಗ್ಗೆ ಅವರಿಗಿರುವ ಅತೀವ ಕಾಮದ ಫಲವಾಗಿ ಅವರ ವಸ್ತ್ರಗಳು ಸೊಂಟದಿಂದ ಜಾರುತ್ತಿರುವಂತೆ ತೋರಬೇಕು. ಶಿವನ ಸುತ್ತಲೂ ಋಷಿಗಳು, ದೇವತೆಗಳು, ಗಂಧರ್ವರು, ಸಿದ್ಧರು, ವಿದ್ಯಾಧರರು ಅಂಜಲಿಬದ್ಧರಾಗಿರಬೇಕು. ವಾಯುದೇವರು ಶಿವನು ಹೋಗಲಿರುವ ಬೀದಿಯನ್ನೆಲ್ಲಾ ಗುಡಿಸಬೇಕು. ವರುಣದೇವನು ಅಲ್ಲಿ ನೀರು ಚಿಮುಕಿಸಬೇಕು. ಇತರ ದೇವತೆಗಳು ಶಿವನು ನಡೆವ ಹಾದಿಯಲ್ಲಿ ಹೂಗಳನ್ನು ಚೆಲ್ಲಬೇಕು. ಋಷಿಗಳು ವೇದ ಘೋಷವನ್ನು ಮಾಡುತ್ತಾ ಮುಂದೆ ಇರಬೇಕು. ಸೂರ್ಯ, ಚಂದ್ರರು, ಶಿವನಿಗೆ ಛತ್ರ–ಚಾಮರಗಳನ್ನು ಹಿಡಿದಿರಬೇಕು. ನಾರದ ತಂಬುರರು ಸಂಗೀತವನ್ನು ಹಾಡುತ್ತಾ ಇರಬೇಕು. ಶಿವನೊಂದಿಗೆ ಇರುವ ಹೆಂಗಸರ ಎತ್ತರವು ಶಿವನ ಗದ್ದ ಅಥವಾ ಸ್ತನಸೂತ್ರ ಅಥವಾ ನಾಭಿಸೂತದ್ರ ಎತ್ತರಕ್ಕೆ ಇರಬಹುದು. ಭೂತಗಳ ಎತ್ತರವು ಶಿವನ ಮುಖದ ಮೂರರಷ್ಟು ಅಥವಾ ಮೂರುವರೆಯಷ್ಟು ಎತ್ತರ ಇರಬೇಕು. ಭೂತಗಳನ್ನು ಪಂಚತಾಲಮಾನ ಕ್ರಮದಲ್ಲಿ ರೂಪಿಸಬೇಕು.

ಹಂಪಿ ಪರಿಸರದಲ್ಲಿ ಒಟ್ಟು ೫ ಕಂಕಾಲ ಮೂರ್ತಿಶಿಲ್ಪಗಳು ದೊರೆತಿದ್ದು, ಅವುಗಳು ಹಂಪಿಯ ವಿರೂಪಾಕ್ಷ ದೇವಾಲಯ, ಹರಿಹರ ದೇವಾಲಯ, ವಿಠಲದೇವಾಲಯ ಹಾಗೂ ತಿಮ್ಮಲಾಪುರದ ತ್ರಿಕೂಟ ದೇವಾಲಯಗಳಲ್ಲಿ ಕಂಡುಬರುತ್ತವೆ. ಅವುಗಳ ವಿವರಣೆ ಕೆಳಗಿನಂತಿದೆ.

ಹಂಪಿಯ ವಿರೂಪಾಕ್ಷ ದೇವಾಲಯದ ಮಹಾರಂಗಮಂಟಪದ ೩ನೇ ಕಂಬದಲ್ಲಿ ಕಂಕಾಲ ಮೂರ್ತಿಯ ಶಿಲ್ಪವಿದೆ. ಈ ಶಿಲ್ಪದಲ್ಲಿ ಪಾದುಕೆಗಳನ್ನು ಧರಿಸಿದ ಶಿವನ ಎಡಪಾದ ಸುಸ್ಥಿತದಲ್ಲಿ

ಹಾಗೂ ಬಲಪಾದವು ಕುಂಚಿತದಲ್ಲಿದೆ. ಜಟಾಮುಕುಟ, ಕರ್ಣಕುಂಡಲಗಳು, ಕೊರಳಹಾರಗಳು, ಕೆಯೂರ, ಕಂಕಣಗಳು, ಕಾಲ್ಕಡಗಗಳನ್ನು ಹಾಗೂ ತೊಡೆಯ ಭಾಗದವರೆಗಿನ ವಸ್ತ್ರವನ್ನು ಧರಿಸಿರುವನು. ಜಟಾಮುಕುಟವನ್ನು ಕಿರೀಟಮುಕುಟದಂತೆ ಅಲಂಕರಣೆ ಮಾಡಿರುವರು. ಮುಕುಟದ ಬಲಭಾಗಕ್ಕೆ ಪುಷ್ಪವೂ ಕೆತ್ತಲ್ಪಟ್ಟಿದೆ. ತೆರೆದ ಕಣ್ಣುಗಳು, ಮುಖದಲ್ಲಿ ಸೌಮ್ಯಭಾವ ಕಾಣುತ್ತದೆ. ಚತುರ್ಭುಜಗಳನ್ನು ಹೊಂದಿದ್ದು, ಬಲಭಾಗದ ಮುಂದಿನ ಹಸ್ತವು ಎಡಭಾಗದ ಮುಂದಿನ ಹಸ್ತದಲ್ಲಿರುವ ಢಕ್ಕೆಯನ್ನು ಬಾರಿಸುವಂತೆ ಕಂಡರಿಸಲಾಗಿದೆ. ಢಕ್ಕೆಯನ್ನು ಹಿಡಿದಿರುವ ಹಸ್ತವನ್ನು ಎದೆಯಭಾಗದವರೆಗೆ ಚಾಚಿ ಹಿಡಿದಿರುವನು. ಬಲಹಿಂದಿನ ಹಸ್ತವು ಕಟಕ ಮುದ್ರೆಯಲ್ಲಿದ್ದು, ಬಲಪಾದದ ಪಕ್ಕದಲ್ಲಿರುವ ಜಿಂಕೆಯ ಬಾಯಿವರೆಗೂ ಚಾಚಿರುವನು. ಎಡಭಾಗದ ಹಿಂದಿನ ಹಸ್ತವು ಕಂಕಾಲದಂಡವನ್ನು ಅಥವಾ ಕಂಕಾಲವನ್ನು ಸಿಕ್ಕಿಸಿರುವ ತ್ರಿಶೂಲವನ್ನು ಎರಡೂ ಭುಜಗಳ ಮೇಲೆ ಅಡ್ಡಲಾಗಿ ಹಿಡಿದುಕೊಂಡಿರುವನು. ಶಿವನ ಎಡಕ್ಕೆ ತಲೆಯ ಮೇಲೆ ಪಾತ್ರೆಯನ್ನು ಹೊತ್ತಿರುವ ಕುಬ್ಜ ಗಣನನ್ನು ತೋರಿಸಲಾಗಿದೆ. ಕಟಿಯಲ್ಲಿ ಒಂದು ಕಠಾರಿಯನ್ನು ಸಿಕ್ಕಿಸಿಕೊಂಡಂತೆ ಕಂಡರಿಸಲಾಗಿದೆ.

ಇನ್ನೊಂದು ಶಿಲ್ಪವು ಕಡಲೆಕಾಳು ಗಣೇಶ ದೇವಾಲಯದ ಹಿಂಭಾಗದಲ್ಲಿರುವ ಹರಿಹರ ದೇವಾಲಯದ ಒಂದನೇ ಕಂಬದಲ್ಲಿದೆ. ಇಲ್ಲಿ ಶಿವನು ತ್ರಿಭಂಗಿಯಲ್ಲಿ ಸ್ಥಾನಿಕನಾಗಿರುವನು. ಜಟಾಮುಕುಟ, ಕಂಕಣ, ಕೆಯೂರಗಳನ್ನು ಧರಿಸಿರುವನು. ಚತುರ್ಭುಜಗಳನ್ನು ಹೊಂದಿದ್ದು, ಮುಂದಿನ ಬಲಹಸ್ತವು ಎಡಮುಂದಿನ ಹಸ್ತದಲ್ಲಿರುವ ಢಕ್ಕೆಯ ಹತ್ತಿರ ಚಾಚಿರುವುದು. ಹಿಂದಿನ ಎರಡೂ ಹಸ್ತಗಳಿಂದ ಭುಜಕ್ಕೆ ಅಡ್ಡಲಾಗಿ ಕಂಕಾಲದಂಡವನ್ನು ಹಿಡಿದಿರುವನು. ಹಾಗೂ ಉದ್ದನೆಯ ವನಮಾಲೆಯನ್ನು ಧರಿಸಿರುವನು. ಈ ಶಿಲ್ಪಕ್ಕೆ ಸುಣ್ಣವನ್ನು ಬಳಿಯಲಾಗಿದ್ದು, ಹೆಚ್ಚಿನ ವಿವರಗಳು ಕಂಡುಬರುವುದಿಲ್ಲ.

ಹಾಗೆಯೇ ಕಡಲೆಕಾಳು ಗಣೇಶ ದೇವಾಲಯದ ೨೪ನೇ ಕಂಬದಲ್ಲಿ ಕಂಕಾಲಮೂರ್ತಿ ಶಿಲ್ಪವು ಕಂಡುಬರುತ್ತದೆ. ಇದೊಂದು ನಿರುಪಣಾತ್ಮಕ ಶಿಲ್ಪವಾಗಿದೆ. ಶಿಲ್ಪಶಾಸ್ತ್ರಗಳು ಹಾಗೂ ಆಗಮಗಳು ತಿಳಿಸುವಂತೆ ಶಿವನ ಶಿಲ್ಪದ ಪಕ್ಕದಲ್ಲಿ ಅವನ ಮೋಹಕ್ಕೆ ಒಳಗಾದ ಸ್ತ್ರೀಯ ಶಿಲ್ಪವನ್ನು ಕಂಡರಿಸಲಾಗಿದೆ. ಅಂದರೆ ಒಂದೇ ಕಂಬದ ಎರಡು ಪಾರ್ಶ್ವಗಳನ್ನು ಬಳಸಿ ಒಂದೇ ಮೂರ್ತಿ ಶಿಲ್ಪಕ್ಕೆ ಸಂಬಂಧಿಸಿದ ಎರಡು ಶಿಲ್ಪಗಳನ್ನು ಕೆತ್ತಲಾಗಿದೆ. ಆದ್ದರಿಂದ ಇದನ್ನು ನಿರೂಪಣಾತ್ಮಕ ಶಿಲ್ಪ ಎನ್ನಬಹುದು. ಶಿವನ ಶಿಲ್ಪವನ್ನು ಕಂಬದ ಪಶ್ಚಿಮ ದಿಕ್ಕಿನ ಪಾರ್ಶ್ವದ ಕೆಳಭಾಗದಲ್ಲಿ ಕಂಡರಿಸಲಾಗಿದೆ. ಇಲ್ಲಿ ಶಿವನ ಎಡ ಪಾದವು ಸ್ಥಿರವಾಗಿದ್ದು, ಬಲಪಾದವು ಕುಂಚಿತವಾಗಿದೆ. ಚತುರ್ಬಾಹುಗಳನ್ನು ಹೊಂದಿದ್ದು ಮುಂದಿನ ಎಡ ಹಸ್ತದಲ್ಲಿ ಢಕ್ಕೆಯನ್ನು ಹಿಡಿದು ಮುಂದಿನ ಬಲ ಹಸ್ತದಿಂದ ಅದನ್ನು ಬಾರಿಸುತ್ತಿರುವಂತೆ ಕೆತ್ತಲಾಗಿದೆ. ಹಾಗೂ ಹಿಂದಿನ ಎರಡು ಹಸ್ತಗಳಲ್ಲಿ ಭುಜಗಳಿಗೆ ಅಡ್ಡಲಾಗಿ ತ್ರಿಶೂಲವನ್ನು ಹಿಡಿದಿರುವನು. ಕಿರೀಟ ಮುಕುಟ, ಎಡಕರ್ಣದಲ್ಲಿ ವೃತ್ತಕುಂಡಲ, ಬಲಕರ್ಣದಲ್ಲಿ ಮಕರಕುಂಡಲ, ಕೊರಳಹಾರಗಳು,

ಬಾಹುವಳಯ, ಕಂಕಣಗಳು ಹಾಗೂ ಉದ್ದನೆಯ ವನಮಾಲೆಯನ್ನು ಧರಿಸಿರುವನು. ಹಾಗೆಯೇ ಶಿಲ್ಪದ ಪಕ್ಕದಲ್ಲಿಯೇ ಬರುವಂತೆ ಅಂದರೆ ಕಂಬದ ಉತ್ತರ ದಕ್ಕಿನ ಪಾರ್ಶ್ವದ ಕೆಳಭಾಗದಲ್ಲಿ ಒಬ್ಬ ಸ್ತ್ರೀಯ ಶಿಲ್ಪವನ್ನು ಕಂಡರಿಸಲಾಗಿದೆ. ಇಲ್ಲಿ ಸ್ತ್ರೀಯು ತ್ರಿಭಂಗದಲ್ಲಿ ಸ್ಥಾನಿಕಳಾಗಿದ್ದು ಅವಳು ಧರಿಸಿದ ವಸ್ತ್ರವು ಮೇಲಿನಿಂದ ಜಾರಿತ್ತಿರುವಂತೆ ತೋರಿಸಲಾಗಿದೆ. ಒಟ್ಟಾರೆ ಇದೊಂದು ವಿಶಿಷ್ಟ ಶಿಲ್ಪವೆಂದೇ ಹೇಳಬಹುದು. ಏಕೆಂದರೆ ಶಿವನಿಗೆ ಚತುರ್ಬಾಹುಗಳನ್ನು ತೋರಿಸಿದ್ದರೂ ಅವುಗಳಲ್ಲಿ ತ್ರಿಶೂಲ ಮತ್ತು ಢಕ್ಕೆಯನ್ನು ಮಾತ್ರ ಹಿಡಿದಿರುವನು.

ಇನ್ನೊಂದು ಕಂಕಾಲ ಮೂರ್ತಿಶಿಲ್ಪವು ವಿಠಲ ದೇವಾಲಯದ ನೂರು ಕಂಬಗಳ ಮಂಟಪದಲ್ಲಿ ೧೩ನೆಯ ಕಂಬದಲ್ಲಿದೆ. ಈ ಶಿಲ್ಪವನ್ನು ಕಂಬದ ಎರಡು ಪಾರ್ಶ್ವಗಳಲ್ಲಿ ಅಂದರೆ ಕಂಬದ ಪಶ್ಚಿಮ ಹಾಗೂ ದಕ್ಷಿಣ ಪಾರ್ಶ್ವದಲ್ಲಿ ಕಂಡರಿಸಲಾಗಿದೆ. ಆದ್ದರಿಂದ ಮೇಲಿನ ಶಿಲ್ಪದಂತೆಯೇ ಇದೂ ಸಹ ಒಂದು. ಹಾಗೆಯೇ ಮೇಲಿನ ಶಿಲ್ಪಕ್ಕಿಂತಲೂ ಬಹು ಸುಂದರ ಕೆತ್ತನೆಯಿಂದ ಕೂಡಿದೆ. ಕಂಬದ ಪಶ್ಚಿಮ ಪಾರ್ಶ್ವದಲ್ಲಿರುವ ಶಿವನ ಕಂಕಾಲ ಮೂರ್ತಿಶಿಲ್ಪವು ಜಟಾಮುಕುಟ, ತ್ರೀನೇತ್ರ, ಯಜ್ಞೋಪವೀತ ಹಾಗೂ ಮೊಣಕಾಲ ಮೇಲಿನ ಅಲಂಕೃತ ವಸ್ತ್ರ ಧರಿಸಿದವನಾಗಿದ್ದು, ಸರ್ವಾಭರಣ ಭೂಷಿತನಾಗಿರುವನು. ಮುಖದಲ್ಲಿ ಪ್ರಸನ್ನ ಭಾವವಿದೆ. ಶಿವನ ಎಡಪಾದವು ಸ್ಥಿರವಾಗಿದ್ದು, ಬಲಗಾಲು ಮುನ್ನಡೆಯುತ್ತಿರುವ ಭಂಗಿಯಲ್ಲಿದೆ. ಚತುರ್ಭುಜಗಳನ್ನು ಹೊಂದಿದ್ದು, ಬಲಗೈಗಳಲ್ಲಿ ಮುಂದಿನದು ಸಣ್ಣ ಗಾತ್ರದ ದಂಡವನ್ನು ಹಿಡಿದಿದೆ. ಹಿಂದಿನ ಹಸ್ತವು ಕಟಕ ಮುದ್ರೆಯಲ್ಲಿದ್ದು, ಕೆಳಗಿರುವ ಜಿಂಕೆಯ ಬಾಯಿಯವರೆಗೂ ಚಾಚಿಕೊಂಡಿದೆ. ಎಡಗೈಗಳಲ್ಲಿ ಮುಂದಿನದು ಢಕ್ಕೆಯನ್ನು ಹಿಡಿದಿದೆ. ಮುಂದಿನ ಬಲಗೈಯಲ್ಲಿ ಹಿಡಿದಿರುವ ದಂಡದಿಂದ ಇದನ್ನು ಬಾರಿಸುತ್ತಿರುವಂತೆ ರಚಿಸಲಾಗಿದೆ. ಮುಂದಿನ ಬಲಗೈಯಲ್ಲಿ ಹಿಡಿದಿರುವ ದಂಡದಿಂದ ಇದನ್ನು ಬಾರಿಸುತ್ತಿರುವಂತೆ ಕೆತ್ತಲಾಗಿದೆ. ಹಿಂದಿನ ಕೈಯಲ್ಲಿ ತ್ರಿಶೂಲವನ್ನು ಎರಡೂ ಭುಜಗಳಿಗೆ ಅಡ್ಡಲಾಗಿ ಹಿಡಿದಿರುವನು. ಈ ತ್ರಿಶೂಲಕ್ಕೆ ಚೀಲವೊಂದನ್ನು ಸಿಕ್ಕಿಸಿರುವಂತೆ ಕೆತ್ತಲಾಗಿದೆ. ಇದೇ ಕಂಕಾಲವೆಂದು ಹೇಳಬಹುದು. ಈ ಶಿಲ್ಪದ ಇನ್ನೊಂದು ಭಾಗವನ್ನು ಇದೇ ಕಂಬದ ದಕ್ಷಿಣ ಪಾರ್ಶ್ವದ ಕೆಳಭಾಗದಲ್ಲಿ ಅಂದರೆ ಇದೇ ಶಿಲ್ಪದ ಪಕ್ಕದಲ್ಲಿಯೇ ಕೆತ್ತಲ್ಪಟ್ಟಿದೆ. ಒಬ್ಬ ಕುಬ್ಜನು ಅಥವಾ ಭೂತವೂ ಪಾತ್ರೆಯೊಂದನ್ನು ತಲೆಯ ಮೇಲೆ ಹೊತ್ತು ನಿಂತಿದ್ದು ಆ ಪಾತ್ರೆಯಲ್ಲಿ ಮಹಿಳೆಯೊಬ್ಬಳು ಆಹಾರವನ್ನು ನೀಡುತ್ತಿರುವಂತೆ ಕೆತ್ತಲಾಗಿದೆ. ಹಾಗೂ ಇಲ್ಲಿ ಮಹಿಳೆಯು ಸಕಲ ವಸ್ತ್ರಾಭರಣ ಧರಿಸಿದವಳಾಗಿದ್ದು, ಶಿವನ ರೂಪಕ್ಕೆ ಮೋಹಿತಳಾಗಿ ಆಕೆಯ ವಸ್ತ್ರವು ಕೆಳಕ್ಕೆ ಜಾರುತ್ತಿರುವಂತೆ ಕೆತ್ತಲಾಗಿದೆ.

ಮತ್ತೊಂದು ಶಿಲ್ಪವು ತಿಮ್ಮಲಾಪುರದ ತ್ರಿಕೂಟ ದೇವಾಲಯದ ನವರಂಗದ ೫ನೇ ಕಂಬದಲ್ಲಿದೆ. ಇಲ್ಲಿಯೂ ಶಿವನ ಪಾದವು ಸ್ಥಿರವಾಗಿದ್ದು, ಬಲಪಾದವು ಕುಂಚಿತದಲ್ಲಿಯೇ ಇದೆ. ಕಿರೀಟಮುಕುಟ, ಚನ್ನವೀರ, ಯಜ್ಞೋಪವೀತ, ಕೆಯೂರ ಕಂಕಣಗಳನ್ನು ಧರಿಸಿರುವನು. ಉದ್ದನೆಯ ವಸ್ತ್ರವನ್ನು

ಧರಿಸಿದ್ದು, ಅದು ಅಕ್ಕಪಕ್ಕದಲ್ಲಿ ಹರಡಿರುವಂತೆ ಕೆತ್ತಲಾಗಿದೆ. ಚತುರ್ಭುಜಗಳನ್ನು ಹೊಂದಿರುವ ಶಿವನ ಎಡ ಮುಂದಿನ ಹಸ್ತದಲ್ಲಿ ಢಕ್ಕೆಯನ್ನು ಹಿಡಿದಿದ್ದು, ಬಲ ಮುಂದಿನ ಹಸ್ತದಲ್ಲಿ ದಂಡವನ್ನು ಹಿಡಿದಿದ್ದು, ಢಕ್ಕೆಯನ್ನು ಬಾರಿಸುತ್ತಿರುವಂತೆ ಕೆತ್ತಲಾಗಿದೆ. ಬಲಹಿಂದಿನ ಹಸ್ತದಲ್ಲಿ ತ್ರಿಶೂಲವನ್ನು ಎರಡೂ ಭುಜಗಳಿಗೆ ಅಡ್ಡಲಾಗಿ ಹಿಡಿದಿದ್ದು, ಎಡ ಹಿಂದಿನ ಹಸ್ತದಲ್ಲಿ ಡಮರುವನ್ನು ಹಿಡಿದಿರುವನು.

ಈ ಮೇಲಿನ ನಾಲ್ಕು ಶಿಲ್ಪಗಳಲ್ಲಿ ವಿರೂಪಾಕ್ಷ ದೇವಾಲಯ ಮತ್ತು ವಿಠಲ ದೇವಾಲಯದಲ್ಲಿ ದೊರೆತಿರುವ ಶಿಲ್ಪಗಳು ಮೇಲೆ ತಿಳಿಸಿದ ಆಗಮಗಳು ಮತ್ತು ಶಿಲ್ಪಶಾಸ್ತ್ರಗ್ರಂಥಗಳಲ್ಲಿರುವ ಕಂಕಾಲ ಮೂರ್ತಿಯ ಲಕ್ಷಣಾ ವಿವರಗಳನ್ನು ಹೊಂದಿರುವುದರಿಂದ ಇವುಗಳು ಆಗಮ ಮತ್ತು ಶಿಲ್ಪ ಶಾಸ್ತ್ರಗ್ರಂಥಗಳ ಅನ್ವಯ ರಚಿತಗೊಂಡ ಶಿಲ್ಪಗಳಾಗಿವೆ ಎಂದು ಹೇಳಬಹುದು. ವಿರೂಪಾಕ್ಷ ದೇವಾಲಯದಲ್ಲಿ ದೊರೆತ ಶಿಲ್ಪವು ಆಗಮಗಳು ಮತ್ತು ಶಿಲ್ಪಶಾಸ್ತ್ರ ಗ್ರಂಥಗಳು ಹೇಳುವ ಸಂಪೂರ್ಣ ಲಕ್ಷಣಗಳನ್ನು ಹೊಂದಿರದಿದ್ದರೂ, ಅವುಗಳಲ್ಲಿ ವಿವರಿಸಿದ ಕೇವಲ, ಶಿವನ ಸಂಪೂರ್ಣ ಲಕ್ಷಣಗಳನ್ನು ಒಳಗೊಂಡಿದೆ. ಆದರೆ ವಿಠಲ ದೇವಾಲಯದಲ್ಲಿ ದೊರೆತಿರುವ ಶಿಲ್ಪವು ಸಂಪೂರ್ಣ ಲಕ್ಷಣಾ ವಿವರಗಳನ್ನು ಹೊಂದಿರುವುದು. ಮೇಲೆ ವಿವರಿಸಿರುವ ಹರಿಹರ ದೇವಾಲಯ, ಕಡಲೆಕಾಳು ಗಣೇಶ ದೇವಾಲಯ ಹಾಗೂ ತಿಮ್ಮಲಾಪುರದಲ್ಲಿರುವ ಶಿಲ್ಪಗಳು ಆಗಮ ಮತ್ತು ಶಿಲ್ಪಶಾಸ್ತ್ರಗ್ರಂಥಗಳ ಅನ್ವಯ ರಚಿತವಾಗಿರದೆ ಶಿಲ್ಪಿಯ ಅಭಿರುಚಿಯ ಪ್ರಭಾವದಿಂದ ಕೆತ್ತಲ್ಪಟ್ಟಿದೆ ಎಂದು ಹೇಳಬಹುದು.

### ಕಂಕಾಲ ಮೂರ್ತಿಶಿಲ್ಪಗಳು

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ಮಹಾರಂಗಮಂಟಪದ ೩ನೇ ಕಂಬ | ೧ |
| ಹಂಪಿ | ಹರಿಹರ | ಮಂಟಪದ ೧ನೇ ಕಂಬ | ೧ |
| ಹಂಪಿ | ಕಡಲೆಕಾಳು ಗಣೇಶ | ಮಂಟಪದ ೨೪ನೇ ಕಂಬ | ೧ |
| ಹಂಪಿ | ವಿಠಲ | ನೂರುಕಂಬಗಳ ಮಂಟಪದ ೧೩ನೇ ಕಂಬ | ೧ |
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ನವರಂಗದ ೫ನೇ ಕಂಬ | ೧ |
| ಒಟ್ಟು | | | ೩ |



ಕಂಕಾಲಮೂರ್ತಿ, ವಿರೂಪಾಕ್ಷ ದೇವಾಲಯ, ಹಂಪಿ





ಕಂಕಾಲಮೂರ್ತಿ ಮತ್ತು ಅದರ ಎದುರಿರುವ ಸ್ತ್ರೀಶಿಲ್ಪ, ವಿಠಲ ದೇವಾಲಯ, ಹಂಪಿ



ಕಂಕಾಲಮೂರ್ತಿ, ತ್ರಿಕೂಟದೇವಾಲಯ, ತಿಮ್ಮಲಾಪುರ



ಕಂಕಾಲಮೂರ್ತಿ, ಹರಿಹರ ದೇವಾಲಯ, ಹಂಪಿ

**ಭಿಕ್ಷಾಟನಾ ಮೂರ್ತಿ**

ಶಿವನು ಭಿಕ್ಷಾಟನಾಮೂರ್ತಿಯಾದುದಕ್ಕೆ ಲಿಂಗಪುರಾಣದಲ್ಲಿ ವಿವರಣೆಯೊಂದು ದೊರೆಯುತ್ತದೆ.

ದಾರುವನದಲ್ಲಿ ಹೆಂಗಸರು ಮಕ್ಕಳು ಕೂಡ ಸೇರಿದಂತೆ ಎಲ್ಲರೂ ತಪಸ್ಸಿನಲ್ಲಿ ತೊಡಗಿ ಲೌಕಿಕ ಮಾರ್ಗವನ್ನು ಮರೆತರು. ಅಲ್ಲಿಯ ಋಷಿಗಳು ತಮ್ಮ ಮತ್ತು ತಾವು ಕರ್ಮಗಳಲ್ಲಿ ಶ್ರೇಷ್ಠರೆಂದು ಪರಮೇಶ್ವರನನ್ನೇ ಉಪೇಕ್ಷಿಸಿದರು. ಅವರ ಅಹಂಕಾರವನ್ನು ಮುರಿದು ಅವರಿಗೆ ಲೌಖಿಕ ಮಾರ್ಗದ ಅವಶ್ಯಕತೆಯನ್ನು ಮನವರಿಕೆ ಮಾಡಿಕೊಡಲು ಶಿವನು ದಾರುವನದಲ್ಲಿ ಭಿಕ್ಷೆ ಕೇಳಲು ಪ್ರಾರಂಭಿಸಿದ. ನಗ್ನನಾಗಿದ್ದ ಬಹು ಸುಂದರ ತರುಣನಾಗಿ ಬಂದ ಶಿವನು ಋಷಿ ಪತ್ನಿಯರನ್ನು ಬಹುವಾಗಿ ಆಕರ್ಷಿಸಿದ. ಅವರೆಲ್ಲರೂ ಲೌಕಿಕ ಮಾರ್ಗಕ್ಕೆ ಇಳಿದರು. ಈ ಬದಲಾವಣೆಯನ್ನು ಗಮನಿಸಿದ ಋಷಿಗಳು ಕೃದ್ಧಗೊಂಡರು. ಹೊಸದಾಗಿ ಬಂದ ಭಿಕ್ಷುಕನೇ ಇದರ ಮೂಲ ಕಾರಣನೆಂದು ತಿಳಿದು ಅವನನ್ನು ಶಪಿಸಿದರು. ಈ ಶಾಪಕ್ಕೆ ಗುರಿಯಾಗದೆ ಶಿವನು ಅದೃಶ್ಯನಾದ. ಆಗ ಋಷಿಗಳಿಗೆ ಭಿಕ್ಷೆಗೆ ಬಂದವನು ಪರಶಿವ ಎಂಬುದು ಗೊತ್ತಾಗಿ ಬಹುವಾಗಿ ನೊಂದುಕೊಂಡರು. ಶಿವನನ್ನು ಪ್ರತ್ಯಕ್ಷವಾಗಿ ಕಾಣಬಯಸಿದರು. ಬ್ರಹ್ಮನು ಶಿವನನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂದರೆ ಶಿವಲಿಂಗವನ್ನು ಆರಾಧಿಸಬೇಕೆಂದು ಉಪದೇಶಿಸಿದ. ಅದರಂತೆ ಪೂಜಿಸಿದ ನಂತರ ಶಿವನು ಕಾಣಿಸಿಕೊಂಡು ಅವರೆಲ್ಲರನ್ನೂ ಆಶೀರ್ವದಿಸಿದನು.[೧೨೪]

ಭಿಕ್ಷಾಟನಾ ಮೂರ್ತಿ ಕಂಕಾಳಮೂರ್ತಿಯ ಒಂದು ಪ್ರಕಾರವಾಗಿದ್ದು ಆಗಮ ಮತ್ತು ಇತರ ಶಿಲ್ಪಶಾಸ್ತ್ರಗಳಲ್ಲಿ ಇದರ ಪ್ರತಿಮಾ ಲಕ್ಷಣಗಳನ್ನು ಪ್ರತ್ಯೇಕವಾಗಿಯೇ ವಿವರಿಸಿರುವರು. ಅದು ಈ ಕೆಳಗಿನಂತಿದೆ.

ಭಿಕ್ಷಾಟನಾ ಮೂರ್ತಿಯ ವಿಗ್ರಹವು ಕಂಕಾಳಮೂರ್ತಿಯನ್ನು ಹೋಲುತ್ತದೆ. ಎಡಗಾಲು ಸ್ಥಿರವಾಗಿದ್ದು, ಬಲಗಾಲು ಚಲಿಸುವಂತೆ ಇರುತ್ತದೆ. ಮುಂದಿನ ಬಲಹಸ್ತ ಮತ್ತು ಹಿಂದಿನ ಎಡಹಸ್ತಗಳು ಕಂಕಾಲ ಮೂರ್ತಿಯಲ್ಲಿರುವಂತೆಯೇ ಇರುತ್ತವೆ. ಆದರೆ ಮುಂದಿನ ಎಡಹಸ್ತ ಕಪಾಲವನ್ನು ಹಿಡಿದಿರಬೇಕು. ಹಿಂದಿನ ಬಲಹಸ್ತ ಡಮರುಗವನ್ನು ಹಿಡಿದಿರಬೇಕು. ಜಡೆಗಳು ಕೆದರಿ ಜಟಾಭಾರದಂತಿರಬೇಕು ಅಥವಾ ಜಟಾಮಂಡಲವಾಗಿರಬಹುದು. ಅದರಲ್ಲಿ ಬಾಲಚಂದ್ರನಿರ ಬೇಕು. ಹಣೆಗೆ ಪಟ್ಟ ಎಂಬ ಆಭರಣವು ಅಲಂಕರಿಸಿರಬೇಕು. ಆದರೆ ಶಿವನ ಮೈಮೇಲೆ ಯಾವ ರೀತಿಯ ವಸ್ತ್ರಗಳು ಇರಬಾರದು. ಶಿವನು ನಗ್ನನಾಗಿರಬೇಕು. ನಡುವಿನ ಸುತ್ತಲೂ ನಡುಪಟ್ಟಿಗೆ ಬದಲಾಗಿ ನಾಗರಹಾವನ್ನು ಸುತ್ತಿಕೊಂಡಿರುತ್ತಾನೆ. ಇದರೊಂದಿಗೆ ಸೂಕ್ತವಾದ ಕಡೆಗಳಲ್ಲಿ ನಾಗರ ಅಲಂಕಾರಗಳು ಇರಬೇಕು. ಯಜ್ಞೋಪವೀತ ಇರಬೇಕು. ಶಿವನ ಕೊರಳು ನೀಲವರ್ಣವಾಗಿರಬೇಕು. ಹಣೆಯಲ್ಲಿ ತ್ರಿಪುಂಡ್ರವಿರಬೇಕು. ಈ ರೂಪದಲ್ಲಿ ಶಿವನು ಕಂಕಾಲವನ್ನು ಹೊತ್ತಿರುವುದಿಲ್ಲ. ಆದರೆ ಈ ಸ್ಥಳದಲ್ಲಿ ಅಲಂಕೃತವಾದ ಶೂಲವಿರುತ್ತದೆ. ನವಿಲುಗರಿಗಳಿಂದ ಅದನ್ನು ಅಲಂಕರಿಸಬೇಕು. ಪಾದಗಳಲ್ಲಿ ಮರದ ಪಾದುಕೆಗಳು ಇರಬೇಕು. ಕೆಲವು ಬಾರಿ ಪಾದುಕೆಗಳು ಇಲ್ಲದೆಯೂ ಮೂರ್ತಿಯನ್ನು ರೂಪಿಸುತ್ತಾರೆ. ಕಪಾಲವನ್ನು ಹಿಡಿದಿರುವ ಕೈ ನಾಭಿಸೂತ್ರದ ತನಕ ಎತ್ತಿರುತ್ತದೆ. ಡಮರುಗ ಹಿಡಿದಿರುವ ಕೈ ಕಿವಿಯ ಎತ್ತರಕ್ಕೆ ಇರುತ್ತದೆ. ಈ ಹಸ್ತದ ಮಣಿಕಟ್ಟು ಕಿವಿಯಿಂದ ಆರು ಅಂಗುಳ ದೂರದಲ್ಲಿರಬೇಕು. ಕಂಕಾಲಮೂರ್ತಿ ಹಾಗೂ ಭಿಕ್ಷಾಟನಾ ಮೂರ್ತಿ ರೂಪದಲ್ಲಿ ಶಿವನು ಮೂರು ಕಣ್ಣುಗಳನ್ನು ಪಡೆದಿರುತ್ತಾನೆ. ಭಿಕ್ಷಾಟನಾ ಮೂರ್ತಿಯು ಎಲ್ಲಾ ವಿಧಗಳಲ್ಲೂ ಕಂಕಾಲ ಮೂರ್ತಿಯನ್ನು ಹೋಲುತ್ತಾನೆ. ಈ ಬಗ್ಗೆ ಹೇಳುತ್ತಾ ಕಾಶ್ಯಪ ಶಿಲ್ಪ ಶಾಸ್ತ್ರವು 'ಶೇಷಂ ಕಂಕಾಲ ಮೂರ್ತಿವತ್' ಎಂದೇ ನಿರ್ದೇಶಿಸಿದೆ.[೧೨೫] ಈ ಲಕ್ಷಣಾ ವಿವರಗಳು ಶಿಲ್ಪರತ್ನ,[೧೨೬] ಉತ್ತರ ಕಾರಣಾಗಮ,[೧೨೭] ಉತ್ತರ ಕಾಮಿಕಾಗಮ,[೧೨೮] ಅಜಿತಾಗಮ[೧೨೯] ರೌರವಾಗಮ[೧೩೦]ಗಳಲ್ಲಿಯೂ ಕಂಡುಬರುತ್ತದೆ. ರೌರವಾಗಮವು ಉಳಿದ ಆಗಮಗಳಲ್ಲಿ ಇರುವುದಕ್ಕೆ ಭಿನ್ನವಾಗಿ ಎಡಭಾಗದ ಮುಂದಿನ ಕೈಯಲ್ಲಿ ಕೃಷ್ಣಮೃಗವೂ, ವೇಶಮುದ್ರೆಯೂ, ಕಪಾಲವನ್ನು ಹಿಡಿದಿರಬೇಕು. ಕೂದಲಗಳು ಮೇಲಕ್ಕೆ ಹರಡಿದಂತಿರಬೇಕು. ಬಲಗೈಯಲ್ಲಿ ಡಮರು ಎಡಗೈಯಲ್ಲಿ ನವಿಲುಗರಿಗಳ ಗೊಂಚಲು, ಬಿಳುಪಾದ ಮೇಲ್ವಸ್ತ್ರ, ಆನೆಯ ಅಥವಾ ಜಿಂಕೆಯ ಚರ್ಮ, ಕೆಳವಸ್ತ್ರವಾಗಿ ಧರಿಸಿರಬೇಕು. ದ್ವಿಭುಜ ಇರುವಂತೆ ನಿರ್ಮಿಸಬೇಕು. ನವಿಲುಗರಿಗಳ ಗೊಂಚಲ ಇಲ್ಲದಂತೆಯೂ ಡಮರುಗವು ಇಲ್ಲದಂತೆಯೂ ರಚಿಸಬಹುದು. ಆ ಕೈಯಲ್ಲಿ ಶೂಲ ಹಿಡಿದಿರುವಂತೆ ರಚಿಸಬೇಕು. ಶೂಲದ ತುದಿಯಲ್ಲಿ ದೈತ್ಯನನ್ನೋ ಅಥವಾ ದೈತ್ಯನ ಶಿರವನ್ನೇ ಚುಚ್ಚಿದಂತೆ ಇರಬೇಕು ಎಂದು ಭಿನ್ನವಾದ ಲಕ್ಷಣಗಳನ್ನು ಹೇಳುತ್ತದೆ.

ಹಂಪಿ ಪರಿಸರದಲ್ಲಿ ಒಟ್ಟು ೨೨ ಭಿಕ್ಷಾಟನಾ ಮೂರ್ತಿಶಿಲ್ಪಗಳು ದೊರೆತಿವೆ. ಅವುಗಳಲ್ಲಿ ಹಂಪಿಯ ವಿರೂಪಾಕ್ಷ ದೇವಾಲಯ ಮತ್ತು ಸುತ್ತಮುತ್ತ (೮), ಹರಿಹರ ದೇವಾಲಯ (೧), ಉಮಾ

ಮಹೇಶ್ವರ ದೇವಾಲಯ (೧), ವಿಠಲ ದೇವಾಲಯ(೧), ಕಮಲಾಪುರದ ಪಟ್ಟಾಭಿರಾಮ ದೇವಾಲಯ (೧), ಮಲಪನಗುಡಿಯ ಮಲ್ಲಿಕಾರ್ಜುನ ದೇವಾಲಯ (೧), ಬುಕ್ಕಸಾಗರದ ವೀರಭದ್ರಸ್ವಾಮಿ ದೇವಾಲಯ (೧), ತಿಮ್ಮಲಾಪುರದ ತ್ರಿಕೂಟ ದೇವಾಲಯ (೧), ಹೊಸಪೇಟೆಯ ಜಂಬುನಾಥ ದೇವಾಲಯ (೬), ಹೀಗೆ ಇವುಗಳಲ್ಲಿ ಪ್ರಮುಖವೆನಿಸಿದವುಗಳನ್ನು ಮಾತ್ರ ವಿವರಿಸಲಾಗಿದೆ.

ವಿರೂಪಾಕ್ಷ ದೇವಾಲಯದಲ್ಲಿ ಹಾಗೂ ಅದರ ಸುತ್ತಮುತ್ತ ಒಟ್ಟು ೮ ಭಿಕ್ಷಾಟನಾ ಶಿಲ್ಪಗಳು ದೊರತಿವೆ. ಅವುಗಳಲ್ಲಿ ಪ್ರತಿಮಾ ಲಕ್ಷಣಾ ವಿವರಗಳಿಂದ ಪ್ರಮುಖವಾದವುಗಳೆಂದರೆ, ವಿರೂಪಾಕ್ಷ ದೇವಾಲಯದ ನವರಂಗದ ಹೊರಭಿತ್ತಿಯ ಉತ್ತರಾಭಿಮುಖವಾಗಿರುವ ಭಿತ್ತಿಯ ಭಾಗದಲ್ಲಿರುವ ಭಿಕ್ಷಾಟನಾ ಶಿಲ್ಪ. ಇಲ್ಲಿ ಶಿವನ ಎಡಪಾದವು ಸುಸ್ಥಿತಿಯಲ್ಲಿದ್ದು ಬಲ ಪಾದವು ಕುಂಚಿತವಾಗಿದೆ ಅಥವಾ ಮುನ್ನಡೆಯುತ್ತಿರುವಂತಿದೆ. ಜಟಾಮುಕುಟ, ಕರ್ಣಕುಂಡಲಗಳು, ಕೊರಳಹಾರಗಳು, ವಕ್ಷಬಂಧ, ಯಜ್ಞೋಪವೀತ, ಕೆಯೂರ ಪಾದಗಳಲ್ಲಿ ಕಡಗಳನ್ನು, ಪಾದುಕೆಗಳನ್ನು ಹಾಗೂ ಮೊಣಕಾಲ ಮೇಲಿನ ವಸ್ತ್ರವನ್ನು ಧರಿಸಿರುವನು. ಚತುರ್ಭುಜಗಳನ್ನು ಹೊಂದಿದ್ದು, ಬಲಭಾಗದ ಮುಂದಿನ ಹಸ್ತವು ಕಟಕ ಮುದ್ರೆಯಲ್ಲಿದ್ದು, ತನ್ನ ಬಲಪಾದದ ಪಕ್ಕಕ್ಕೆ ಇರುವ ಜಿಂಕೆಯ ಬಾಯಿಯವರೆಗೆ ಚಾಚಿದೆ. ಹಿಂದಿನ ಹಸ್ತವು ಡಮರುವನ್ನು ಹಿಡಿದಿರುವುದು ಎಡಭಾಗದ ಮುಂದಿನ ಹಸ್ತದಲ್ಲಿ ಕಪಾಲವನ್ನು ಹಿಡಿದಿರುವನು. ಶಿವನ್ನ ಎಡಪಾದ ಪಕ್ಕದಲ್ಲಿ ಪಾತ್ರೆಯೊಂದನ್ನು ಶಿರದ ಮೇಲೆ ಹೊತ್ತು ನಿಂತಿರುವ ಗಣನ ಶಿಲ್ಪವಿದ್ದು, ಶಿವನು ಕಪಾಲ ಹಿಡಿದಿರುವ ಹಸ್ತವು ಈ ಪಾತ್ರೆಯವರೆಗೆ ಚಾಚಿಕೊಂಡಿರುವುದು. ಅಂದರೆ ಕಪಾಲದಲ್ಲಿರುವ ಆಹಾರವನ್ನು ಈ ಪಾತ್ರೆಯೊಳಕ್ಕೆ ಹಾಕುತ್ತಿರುವಂತೆ ಕೆತ್ತಲಾಗಿದೆ. ಹಿಂದಿನ ಹಸ್ತವು ಉದ್ದನೆಯ ತ್ರಿಶೂಲವನ್ನು ಎರಡೂ ಭುಜಗಳಿಗೆ ಅಡ್ಡಲಾಗಿ ಹಿಡಿದುಕೊಂಡಿರುವನು. ಬಲಪಕ್ಕಕ್ಕೆ ಜಿಂಕೆಯ ಬಳಿಗೆ ಶಂಖವನ್ನು ಊದುತ್ತಿರುವ ಗಣನೊಬ್ಬನನ್ನು ಕಂಡರಿಸಲಾಗಿದೆ.

ಇದೇ ಲಕ್ಷಣಗಳನ್ನು ಒಳಗೊಂಡಿರುವ ಶಿಲ್ಪವೊಂದು ಇದೇ ದೇವಾಲಯದ ಮಹಾ ಮಂಟಪದ ೪೦ನೇ ಕಂಬದಲ್ಲಿದೆ. ಇದು ಸಹ ಹಿಂದೆ ವಿವರಿಸಿದ ಪ್ರತಿಮಾ ಲಕ್ಷಣಗಳನ್ನು ಹೊಂದಿದೆ. ಆದರೆ ಇಲ್ಲಿ ಶಿವನಿಗೆ ಉದ್ದನೆಯ ವನಮಾಲೆಯನ್ನು ತೋರಿಸಲಾಗಿದೆ. ಹಾಗೂ ಶಂಖ ಊದುತ್ತಿರುವ ವ್ಯಕ್ತಿಯನ್ನು ತೋರಿಸಲಾಗಿಲ್ಲ. ಈ ರೀತಿಯ ಲಕ್ಷಣಗಳನ್ನು ಹೊಂದಿರುವ ಭಿಕ್ಷಾಟನದ ಇನ್ನೂ ಹಲವು ಶಿಲ್ಪಗಳು ಇದೇ ದೇವಾಲಯದ ವಿವಿಧ ಸ್ಥಳಗಳಲ್ಲಿ ದೊರೆಯುತ್ತವೆ.

ಪ್ರಸನ್ನ ವಿರೂಪಾಕ್ಷ ಅಥವಾ ನೆಲಮನೆ ಶಿವದೇವಾಲಯದ ಮಹಾಮಂಟಪದ ಕಂಬದಲ್ಲಿ ಭಿಕ್ಷಾಟನಾ ಮೂರ್ತಿಶಿಲ್ಪವನ್ನು ಕಂಡರಿಸಲಾಗಿದೆ. ಇದು ಈ ಹಿಂದೆ ವಿವರಿಸಲಾದ ನಿರೂಪಣಾತ್ಮಕ ಕಂಕಾಲಮೂರ್ತಿಯಂತೆಯೇ ಒಂದೇ ಕಂಬದ ಎರಡು ಪಾರ್ಶ್ವಗಳಲ್ಲಿ ಕೆತ್ತಿರುವರು. ಕಂಬದ ಪಶ್ಚಿಮ ದಿಕ್ಕಿನ ಪಾರ್ಶ್ವದಲ್ಲಿ ಶಿವನ ಶಿಲ್ಪವನ್ನು ಹಾಗೂ ದಕ್ಷಿಣ ದಿಕ್ಕಿನ ಪಾರ್ಶ್ವದಲ್ಲಿ ಸ್ತ್ರೀಯ ಶಿಲ್ಪವನ್ನು ಕೆತ್ತಲಾಗಿದೆ. ಶಿವನ ಶಿಲ್ಪದಲ್ಲಿ ಅವನ ಎಡಪಾದವು ಸ್ಥಿರವಾಗಿದ್ದು, ಬಲಪಾದವು ಕುಂಚಿತದಲ್ಲಿದೆ.

ಆತನ ಚತುರ್ಭುಜಗಳಲ್ಲಿ ಮುಂದಿನ ಎರಡೂ ಹಸ್ತಗಳು ಕೆಳಕ್ಕೆ ಚಾಚಿದ್ದು ಕೆಳಭಾಗದಲ್ಲಿನ ಲಕ್ಷಣಗಳು ಅಸ್ಪಷ್ಟವಾಗಿವೆ. ಏಕೆಂದರೆ ಶಿಲ್ಪಕ್ಕೆ ಸಂಪೂರ್ಣ ಸುಣ್ಣ ಬಳಿಯಲಾಗಿದೆ. ಆದರೆ ಮೇಲಿನ ಎರಡು ಹಸ್ತಗಳು ಸ್ಪಷ್ಟವಾಗಿ ಕಾಣುತಿದ್ದು ಬಲ ಹಿಂದಿನ ಹಸ್ತದಲ್ಲಿ ಡಮರು ಹಾಗೂ ಎಡ ಹಿಂದಿನ ಹಸ್ತದಲ್ಲಿ ತ್ರಿಶೂಲವನ್ನು ಭುಜಕ್ಕೆ ಅಡ್ಡಲಾಗಿ ಹಿಡಿದಿರುವನು. ಕಿರೀಟ ಮುಕುಟ, ಬಾಹುವಳಯಗಳು, ಕಂಕಣಗಳು, ಯಜ್ಞೋಪವೀತವನ್ನು ಧರಿಸಿರುವನು. ಹಾಗೆಯೇ ಶಿವನ ಶಿಲ್ಪದ ಪಕ್ಕದಲ್ಲಿಯೇ ಅಂದರೆ ಅದೇ ಕಂಬದ ದಕ್ಷಿಣ ದಿಕ್ಕಿನ ಪಾರ್ಶ್ವದ ಕೆಳಭಾಗದಲ್ಲಿ ಒಬ್ಬ ಸ್ತ್ರೀಯ ಶಿಲ್ಪವನ್ನು ಕಂಡರಿಸಲಾಗಿದೆ. ಇಲ್ಲಿ ಸರ್ವ ಅಲಂಕೃತ ಸ್ತ್ರೀಯು ದ್ವಿಭಂಗದಲ್ಲಿ ಸ್ಥಾನಿಕಳಾಗಿದ್ದು ಬಲಗೈಯಲ್ಲಿ ವಸ್ತುವೊಂದನ್ನು ಹಿಡಿದು ಶಿವನ ಶಿಲ್ಪದೆಡೆ ಚಾಚಿರುವಳು. ಹಾಗೂ ಅವಳ ಕೆಳಭಾಗದ ವಸ್ತ್ರವು ಕಳಚುತ್ತಿರುವಂತೆ ತೋರಿಸಲಾಗಿದೆ. ಮತ್ತು ಸ್ತ್ರೀಯ ಈ ಶಿಲ್ಪದ ಹಿಂಭಾಗದಲ್ಲಿ ದೇವಾಲಯದ ಗೋಪುರದ ಚಿತ್ರಣವನ್ನು ತೋರಸಲಾಗಿದೆ. ಈ ಎಲ್ಲ ಲಕ್ಷಣಗಳಿಂದ ಇದು ಭಿಕ್ಷಾಟನಮೂರ್ತಿಶಿಲ್ಪವೆಂದು ಗುರುತಿಸಲಾಗಿದೆ. ಹಾಗೂ ಇದು ಏಕೈಕ ನಿರುಪಣಾತ್ಮಕ ಭಿಕ್ಷಾಟನಾಮೂರ್ತಿಶಿಲ್ಪ ಎಂದು ಹೇಳಬಹುದು.

ತಿಮ್ಮಲಾಪುರದ ತ್ರಿಕೂಟ ದೇವಾಲಯದ ನವರಂಗದ ೪ನೇ ಕಂಬದಲ್ಲಿ ಶಿವನ ಭಿಕ್ಷಾಟನಾ ಮೂರ್ತಿಯೊಂದು ದೊರೆಯುತ್ತದೆ. ಇದರ ಸ್ಪಷ್ಟ ಲಕ್ಷಣಗಳಿಂದ ಇದು ಸಹ ಒಂದು ಪ್ರಮುಖ ಶಿಲ್ಪವೆಂದೇ ಹೇಳಬಹುದು. ಈ ಶಿಲ್ಪದಲ್ಲಿಯೂ ಶಿವನು ಎಡಪಾದವನ್ನು ಸುಸ್ಥಿತವಾಗಿಯೂ ಬಲಪಾದವನ್ನು ಕುಂಚಿತವಾಗಿಯೂ ಇರಿಸಿರುವನು. ಪಾದುಕೆಗಳನ್ನು ಧರಿಸಿದ್ದು, ಮೊಣಕಾಲ ಮೇಲಿನ ವಸ್ತ್ರವನ್ನು ಮತ್ತು ಉದ್ದನೆಯ ವನಮಾಲೆಯನ್ನು ಧರಿಸಿರುವನು. ಕೊರಳಹಾರ, ವಕ್ಷಬಂಧ, ಯಜ್ಞೋಪವೀತ, ಕೆಯೂರ, ಕಂಕಣಗಳನ್ನು, ಕರ್ಣ ಕುಂಡಲಗಳನ್ನು ಹಾಗೂ ಜಟಾಮುಕುಟವನ್ನು ಧರಿಸಿ ಶೋಭಿತನಾಗಿರುವನು. ಚತುರ್ಭುಜಗಳನ್ನುಳ್ಳವನಾದ ಈತನ ಬಲಭಾಗದ ಮುಂದಿನ ಹಸ್ತವು ಕಟಕ ಮುದ್ರೆಯಲ್ಲಿದ್ದು, ಕೆಳಗಿರುವ ಜಿಂಕೆಯ ಬಾಯಿಯ ಬಳಿ ಇರಿಸಿರುವನು. ಜಿಂಕೆಯನ್ನು ಅತಿ ಚಿಕ್ಕದಾಗಿ ಕೆತ್ತಿರುವರು. ಹಿಂದಿನ ಹಸ್ತದಲ್ಲಿ ತ್ರಿಶೂಲವನ್ನು ಎರಡೂ ಭುಜಗಳಿಗೆ ಅಡ್ಡಲಾಗಿ ಹಿಡಿದಿರುವನು. ಎಡಭಾಗದ ಹಸ್ತಗಳಲ್ಲಿ ಮುಂದಿನದು ತನ್ನ ಎಡ ಪಕ್ಕದಲ್ಲಿ ಗಣಶಿಲ್ಪವೊಂದು ತನ್ನ ಶಿರದ ಮೇಲೆ ಹೊತ್ತಿರುವ ಪಾತ್ರೆಯವರೆಗೂ ಚಾಚಿದೆ. ಹಿಂದಿನ ಹಸ್ತದಲ್ಲಿ ಡಮರುವನ್ನು ಹಿಡಿದಿರುವನು. ಶಿವನ ಮುಖವು ಸ್ವಲ್ಪ ಎಡಭಾಗಕ್ಕೆ ವಾಲಿರುವಂತಿದೆ. ಮುಖದಲ್ಲಿ ಸೌಮ್ಯಭಾವ ಇದ್ದು ಹಣೆಯಲ್ಲಿ ತ್ರಿನೇತ್ರವು ಇರುವುದು. ಶಿವನ ಬಲಪಕ್ಕದಲ್ಲಿ ಮತ್ತೊಂದು ಗಣ ಶಿಲ್ಪವೂ ಛತ್ರಿಯನ್ನು ಹಿಡಿದುನಿಂತಿರುವುದು ಹಾಗೂ ಈ ಶಿಲ್ಪದ ಪಕ್ಕದ ಪಾರ್ಶ್ವದಲ್ಲಿ ಇಬ್ಬರು ಅಲಂಕೃತ ಸ್ತ್ರೀಯರ ಶಿಲ್ಪಗಳಿವೆ ಇವರು ಶಿವನೆಡೆಗೆ ಮುಖ ಮಾಡಿದ್ದು, ಆಹಾರವನ್ನು ನೀಡುತ್ತಿರುವಂತೆ ಮತ್ತು ಒಬ್ಬ ಸ್ತ್ರೀಯ ವಸ್ತ್ರವು ಕೆಳಜಾರುತ್ತಿರುವಂತೆ ಕೆತ್ತಲಾಗಿದೆ. ಇದರಿಂದ ಇವರು ಶಿವನು ಮೋಹಕ್ಕೆ ಆಕರ್ಷಿತರಾದ ಸ್ತ್ರೀಯರ ಶಿಲ್ಪಗಳೆಂದು ಗುರುತಿಸಬಹುದು.

ಪಟ್ಟಾಭಿರಾಮ ದೇವಾಲಯದ ಮಹಾಮಂಟಪ ೪೯ನೇ ಕಂಬದಲ್ಲಿ ಶಿವನ ಸುಂದರ ಭಿಕ್ಷಾಟನಾ ಮೂರ್ತಿಶಿಲ್ಪವಿದೆ. ಈ ಶಿಲ್ಪದಲ್ಲಿ ಶಿವನ ಎಡಪಾದವು ಸ್ಥಿರವಾಗಿದ್ದು ಬಲಪಾದವು ಕುಂಚಿತದಲ್ಲಿದೆ. ಪಾದಗಳಲ್ಲಿ ಪಾದುಕೆಗಳನ್ನು ಧರಿಸಿರುವನು. ನಗ್ನನಾದ ಶಿವನು ಕೊರಳಹಾರ ಯಜ್ಞೋಪವೀತ, ವಕ್ಷಬಂಧ, ಉದರಬಂಧ, ಕೆಯೂರ ಕಂಕಣಗಳನ್ನು ಧರಿಸಿರುವನು. ಹಾಗೂ ಬಲಕರ್ಣದಲ್ಲಿ ವೃತ್ತಕುಂಡಲ, ಎಡಕರ್ಣದಲ್ಲಿ ಮಕರಕುಂಡಲ, ಹಣೆಯಲ್ಲಿ ತ್ರಿನೇತ್ರವು ಇರುವುದು. ಶಿರದಲ್ಲಿ ಜಟಾ ಮಂಡಲವಿದೆ. ಚತುರ್ಭುಜನಾದ ಶಿವನು ಬಲಭಾಗದ ಮುಂದಿನ ಹಸ್ತವು ಕಟಕ ಮುದ್ರೆಯಲ್ಲಿದೆ. ಹಿಂದಿನ ಹಸ್ತದಲ್ಲಿ ಡಮರುವನ್ನು ಹಿಡಿದಿರುವುದು. ಎಡಭಾಗದ ಮುಂದಿನ ಹಸ್ತವು ಕಪಾಲವನ್ನು ಹಾಗೂ ಹಿಂದಿನದು ತ್ರಿಶೂಲವನ್ನು ಎರಡೂ ಭುಜಗಳಿಗೆ ಅಡ್ಡಲಾಗಿ ಹಿಡಿದಿರುವನು. ಈ ಶಿಲ್ಪದಲ್ಲಿ ಜಿಂಕೆಯನ್ನಾಗಲಿ ಮತ್ತು ಎಡಪಕ್ಕಕ್ಕೆ ಪಾತ್ರೆಯೊಂದನ್ನು ಹಿಡಿದು ನಿಂತಿರುವ ಗಣದ ಶಿಲ್ಪವಾಗಲಿ ಇಲ್ಲ.

ಇನ್ನೊಂದು ಮುಖ್ಯ ಶಿಲ್ಪವು ಹಂಪಿಯ ವಿಠಲ ದೇವಾಲಯದ ನೂರು ಕಂಬಗಳ ಮಂಟಪದ ೬೯ನೇ ಕಂಬದಲ್ಲಿ ದೊರೆಯುತ್ತದೆ. ವಿಠಲ ದೇವಾಲಯದಲ್ಲಿ ಕಂಡುಬರುವ ಕೆಲವೇ ಕೆಲವು ಶಿವನ ಶಿಲ್ಪಗಳಲ್ಲಿ ಇದು ಒಂದು. ಕೆತ್ತನೆಯ ದೃಷ್ಟಿಯಿಂದ ಅತ್ಯಂತ ಸುಂದರ ಶಿಲ್ಪ ಎನ್ನಬಹುದು. ಇದರಲ್ಲಿ ಶಿವನ ಎಡಪಾದವು ಸುಸ್ಥಿತಿಯಲ್ಲಿದ್ದು ಬಲಪಾದವು ಕುಂಚಿತದಲ್ಲಿದೆ. ಪಾದಗಳಲ್ಲಿ ಪಾದುಕೆಗಳನ್ನು ಧರಿಸಿರುವನು. ನಗ್ನನಾದ ಶಿವನ ಕಾಲುಗಳಿಗೆ ನಾಗಬಂಧ ಇರುವುದು. ಕೊರಳಲ್ಲಿ ಕೊರಳಹಾರ, ರುದ್ರಾಕ್ಷಿಮಾಲೆ, ಯಜ್ಞೋಪವೀತ, ವಕ್ಷಬಂಧ ಹಾಗೂ ಎರಡೂ ಕರ್ಣಗಳಲ್ಲಿ ವೃತ್ತಕುಂಡಲಗಳನ್ನು ಧರಿಸಿರುವನು. ಶಿರೋಭಾಗದಲ್ಲಿ ಜಟಾಬಂಧದ ಅಲಂಕರಣೆ ಇರುವುದು. ಮುಖದಲ್ಲಿ ಉಗ್ರ ಸ್ವರೂಪವಿದ್ದು, ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸಿರುವುದು. ಚತುರ್ಬಾಹುಗಳನ್ನು ಹೊಂದಿದ್ದು, ಅವುಗಳಲ್ಲಿ ಕಂಕಣಗಳು ಕೆತ್ತಲ್ಪಟ್ಟಿವೆ. ಬಲಭಾಗದ ಮುಂದಿನ ಹಸ್ತವು ಕಟಕ ಮುದ್ರೆಯಲ್ಲಿದ್ದು, ಕೆಳಗೆ ಇರುವ ಜಿಂಕೆಯ ಬಾಯಿಯ ಬಳಿಗೆ ಚಾಚಿರುವುದು ಮತ್ತು ಹಿಂದಿನ ಹಸ್ತವು ಡಮರುವನ್ನು ಹಿಡಿದಿರುವುದು. ಎಡಭಾಗದ ಹಸ್ತಗಳಲ್ಲಿ ಮುಂದಿನದು ಕಪಾಲವನ್ನು ಹಿಡಿದಿದ್ದು ಅದು ಕೆಳಗೆ ನಿಂತಿರುವ ಒಬ್ಬ ಗಣನ ಶಿರದ ಮೇಲೆ ಇರಿಸಿದಂತಾಗಿದೆ. ಹಿಂದಿನ ಕೈಯಲ್ಲಿ ತ್ರಿಶೂಲವನ್ನು ಎರಡೂ ಭುಜಗಳಿಗೆ ಅಡ್ಡಲಾಗಿ ಹಿಡಿದಿರುವನು. ಉಳಿದ ಶಿಲ್ಪಗಳಿಗಿಂತ ಈ ಶಿಲ್ಪವು ಧರಿಸಿದ ರುದ್ರಾಕ್ಷಿ ಮಾಲೆ ತ್ರಿಪುಂಡ್ರಗಳಿಂದ ಅಲಂಕೃತ ಗೊಂಡಿರುವುದು ವಿಶೇಷವೆನ್ನಬಹುದು. ಉಳಿದ ಭಿಕ್ಷಾಟನಾ ಶಿಲ್ಪಗಳಲ್ಲಿ ಇದು ಕಂಡುಬರುವುದಿಲ್ಲ.

ಇಂತಹುದೇ ಶಿಲ್ಪವೊಂದು ಹೊಸಪೇಟೆಯ ಜಂಬುನಾಥ ದೇವಾಲಯದ ಮಹಾಮಂಟಪದ ೧೭೭ನೇ ಕಂಬದಲ್ಲಿದೆ. ಇದು, ಇದೇ ದೇವಾಲಯದಲ್ಲಿ ಒಂದೇ ಮಂಟಪದಲ್ಲಿ ದೊರೆಯುವ ಆರು

ಭಿಕ್ಷಾಟನಾ ಮೂರ್ತಿಶಿಲ್ಪಗಳಲ್ಲಿ ಒಂದು. ಇಲ್ಲಿ ಶಿವನು ಎಡಪಾದವನ್ನು ಸ್ಥಿರವಾಗಿಟ್ಟು ಬಲಪಾದವನ್ನು ಕುಂಚಿತದಲ್ಲಿರಿಸಿರುವನು. ಮೊಣಕಾಲವರೆಗಿನ ವಸ್ತ್ರವನ್ನು ಧರಿಸಿದ್ದು ಉದ್ದನೆಯ ವನಮಾಲೆಯಿಂದ ಅಲಂಕೃತಗೊಂಡಿರುವನು. ಕೊರಳಲ್ಲಿ ಆಭರಣಗಳು, ಬಾಹುಗಳಿಗೆ ಕೆಯೂರಗಳು, ಕಂಕಣಗಳು, ಕರ್ಣಗಳಲ್ಲಿ ಕುಂಡಲಗಳು, ಶಿರದಲ್ಲಿ ಜಟಾಮುಕುಟ, ಹಣೆಯಲ್ಲಿ ತ್ರಿನೇತ್ರ ಧರಿಸಿರುವನು. ಚತುರ್ಭುಜನಾಗಿದ್ದು ಬಲಭಾಗದ ಮುಂದಿನ ಹಸ್ತವು ಕೆಳಗಿರುವ ಜಿಂಕೆಯ ಬಾಯಿಯ ಬಳಿಗೆ ಚಾಚಿರುವುದು. ಹಿಂದಿನ ಹಸ್ತದಲ್ಲಿ ಡಮರು ಮತ್ತು ಎಡ ಮುಂದಿನ ಹಸ್ತವು ಪಕ್ಕದಲ್ಲಿರುವ ಒಬ್ಬ ಗಣನು ಹಿಡಿದುಕೊಂಡಿರುವ ತಟ್ಟೆಯಾಕಾರದ ಪಾತ್ರೆಯೊಂದರಲ್ಲಿರಿಸಿದ್ದು ಅದೇ ಕೈಗಳಲ್ಲಿ ಕಪಾಲವನ್ನೂ ಹಿಡಿದಿರುವನು. ಹಿಂದಿನ ಹಸ್ತದಲ್ಲಿ ತ್ರಿಶೂಲವನ್ನು ತನ್ನ ಎರಡೂ ಭುಜಗಳಿಗೆ ಅಡ್ಡಲಾಗಿ ಹಿಡಿದಿರುವನು. ಹಾಗೆಯೇ, ಇದೇ ಮಂಟಪದಲ್ಲಿ ದೊರೆಯುವ ಉಳಿದ ಭಿಕ್ಷಾಟನಾಮೂರ್ತಿಶಿಲ್ಪಗಳೂ ಸಹ ಇದೇ ಲಕ್ಷಣಗಳನ್ನೇ ಹೊಂದಿವೆ.

ಮೇಲೆ ವಿವರಿಸಿದ ಎಲ್ಲ ಶಿಲ್ಪಗಳು ಭಾಗಶಃ ಒಂದೇ ಲಕ್ಷಣಗಳನ್ನೇ ಹೊಂದಿವೆ. ಹಾಗೂ ಇವು ಆಗಮಗಳು ಮತ್ತು ಶಿಲ್ಪಶಾಸ್ತ್ರಗಳಲ್ಲಿ ಉಲ್ಲೇಖಿಸಿರುವ ಭಿಕ್ಷಾಟನಾಮೂರ್ತಿ ಶಿಲ್ಪದ ಲಕ್ಷಣಗಳನ್ನೇ ಹೊಂದಿವೆ. ಆದ್ದರಿಂದ ಇವುಗಳು ಆಗಮಗಳನ್ವಯ ರಚಿತಗೊಂಡ ಶಿಲ್ಪಗಳಾಗಿವೆ. ಇವುಗಳಲ್ಲದೆ, ಇನ್ನೂ ಹಲವು ಭಿಕ್ಷಾಟನಾ ಮೂರ್ತಿಶಿಲ್ಪಗಳು ಇದ್ದು, ಇವು ಆಗಮಗಳನ್ನು ಅನ್ವಯಿಸಿ ನಿರ್ಮಿತವಾದವುಗಳಲ್ಲ ಎಂದು ತಿಳಿದುಬರುತ್ತದೆ. ಕೆಲವು ಶಿಲ್ಪಗಳಲ್ಲಿ ಜಿಂಕೆಯನ್ನು ಬಲಬದಿಗೆ ಕೆತ್ತುವ ಬದಲು ಎಡಬದಿಗೆ ಕೆತ್ತಲಾಗಿರುವುದು. ಇದು ಆಗಮಗಳು ತಿಳಿಸುವ ಲಕ್ಷಣವಲ್ಲ. ಆದ್ದರಿಂದ ಭಿಕ್ಷಾಟನಾ ಮೂರ್ತಿಗಳಲ್ಲಿ ಆಗಮ ಸಹಿತ ಮತ್ತು ಆಗಮರಹಿತ ಎರಡೂ ರೀತಿಯ ಶಿಲ್ಪಗಳು ಹಂಪಿ ಪರಿಸರದಲ್ಲಿ ಕಂಡುಬರುತ್ತವೆ. ಇದಕ್ಕೆ ಕಾರಣ ಶಿಲ್ಪಿಯು ತನ್ನ ಅಭಿರುಚಿಯಂತೆ ಅವುಗಳನ್ನು ಕೆತ್ತಲಾಗಿರುವುದೆನ್ನಬಹುದು.

**ಭಿಕ್ಷಾಟನಾ ಮೂರ್ತಿಶಿಲ್ಪಗಳು**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ದೇವಾಲಯದ ಉತ್ತರಾಭಿಮುಖದ ಭಿತ್ತಿ | ೧ |
| ಹಂಪಿ | ವಿರೂಪಾಕ್ಷ | ಮಹಾರಂಗಮಂಟಪದ ೪೦ನೇ ಕಂಬ | ೧ |
| ಹಂಪಿ | ವಿರೂಪಾಕ್ಷ | ಎಡಬದಿಯ ಪ್ರಾಕಾರ ಮಂಟಪದ ೯ನೇ ಕಂಬ | ೧ |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೪ನೇ ಕಂಬ | ೧ |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೪೪ನೇ ಕಂಬ | ೧ |

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೬೯ನೇ ಕಂಬ | ೧ |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ಎದುರಿರುವ ಆಂಜನೇಯ ದೇವಾಲಯದ ೨ನೇ ಕಂಬ | ೧ |
| ಹಂಪಿ | ವಿರೂಪಾಕ್ಷ | ಮುಖ್ಯ ದೇವಾಲಯದ ಎಡಕ್ಕಿರುವ ಶೈವ ದೇವಾಲಯದ ಮಂಟಪದ ೩ನೇ ಕಂಬ | ೧ |
| ಹಂಪಿ | ಹರಿಹರ | ಮಂಟಪದ ೧ನೇ ಕಂಬ | ೧ |
| ಹಂಪಿ | ವಿಠಲ | ನೂರು ಕಂಬಗಳ ಮಂಟಪದ ೬೯ನೇ ಕಂಬ | ೧ |
| ಹಂಪಿ | ಉಮಾಮಹೇಶ್ವರ | ಮಂಟಪದ ೨ನೇ ಕಂಬ | ೧ |
| ಕಮಲಾಪುರ | ಪ್ರಸನ್ನ ವಿರೂಪಾಕ್ಷ | ಮಹಾಮಂಟಪದ ೩೨ನೇ ಕಂಬ | ೧ |
| ಕಮಲಾಪುರ | ಪಟ್ಟಾಭಿರಾಮ | ಮಹಾಮಂಟಪದ ೪೯ನೇ ಕಂಬ | ೧ |
| ಬುಕ್ಕಸಾಗರ | ವೀರಭದ್ರಸ್ವಾಮಿ | ಮಂಟಪದ ೧೧ನೇ ಕಂಬ | ೧ |
| ಮಲಪನಗುಡಿ | ಮಲ್ಲಿಕಾರ್ಜುನ | ಮಹಾಮಂಟಪದ ೭ನೇ ಕಂಬ | ೧ |
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ನವರಂಗದ ೪ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೮ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೯ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೧೭ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೨೧ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೨೩ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೩೫ನೇ ಕಂಬ | ೧ |
| | | ಒಟ್ಟು | ೨೨ |



ಭಿಕ್ಷಾಟನಾಮೂರ್ತಿ, ವಿರೂಪಾಕ್ಷ
ದೇವಾಲಯ, ಹಂಪಿ



ಭಿಕ್ಷಾಟನಾಮೂರ್ತಿ, ವಿಠಲ
ದೇವಾಲಯ, ಹಂಪಿ



ಭಿಕ್ಷಾಟನಾಮೂರ್ತಿ, ತ್ರಿಕೂಟ
ದೇವಾಲಯ, ತಿಮ್ಮಾಲಾಪುರ



ಭಿಕ್ಷಾಟನಾಮೂರ್ತಿ, ಜಂಬೂನಾಥ
ದೇವಾಲಯ, ಹೊಸಪೇಟೆ

## ಗಂಗಾಧರ ಮತ್ತು ಗಂಗಾವಿಸರ್ಜನ ಮೂರ್ತಿಶಿಲ್ಪಗಳು

ಶಿವನು ಗಂಗೆಯನ್ನು ತನ್ನ ಜಟೆಯಲ್ಲಿರಿಸಿಕೊಂಡ ಹಾಗೂ ವಿಸರ್ಜಿಸಿದ ಮೂರ್ತಿಗಳನ್ನೇ ಗಂಗಾಧರ ಮತ್ತು ಗಂಗಾವಿಸರ್ಜನ ಮೂರ್ತಿ ಎನ್ನಲಾಗುವುದು. ಈ ಶಿಲ್ಪ ಸ್ವರೂಪದ ಹಿನ್ನೆಲೆಯನ್ನು ವಿಷ್ಣುಪುರಾಣ, ಭಾಗವತ ಪುರಾಣ, ರಾಮಾಯಣಗಳಲ್ಲಿ ಹೇಳಲಾಗಿದೆ. ಅದು ಈ ಕೆಳಗಿನಂತಿದೆ.

ಸಗರ ಚಕ್ರವರ್ತಿ ತನ್ನ ಮೊದಲ ಪತ್ನಿ ಕೆಶಿನಿಯಲ್ಲಿ ಅಸಮಂಜಸ ಎಂಬ ಮಗನನ್ನು ಹಾಗೂ ಎರಡನೇ ಪತ್ನಿ ಸುಮತಿಯಲ್ಲಿ ಅರವತ್ತು ಸಾವಿರ ಮಕ್ಕಳನ್ನು ಪಡೆದನು. ಬಾಲ್ಯದಿಂದಲೂ ಅಸಮಂಜಸನು ದುಷ್ಟ ಬುದ್ಧಿಯವನಾಗಿದ್ದ. ಇತರ ಎಲ್ಲಾ ಮಕ್ಕಳೂ ಈತನನ್ನು ಅನುಸರಿಸಿದ್ದರಿಂದ ಅವರು ಅವನಂತೆಯೇ ದುಷ್ಟರಾದರು. ಇವರ ದುಷ್ಟ ಕೃತ್ಯಗಳನ್ನು ದೇವತೆಗಳು ಸಹಿಸುವುದು ಅಸಾಧ್ಯವೆನಿಸಿತು. ಅವರೆಲ್ಲರೂ ಕಪಿಲ ಮಹಿರ್ಷಿಯನ್ನು ಆಶ್ರಯಿಸಿ ಇವರ ದುಷ್ಕೃತ್ಯಗಳ ಅಂತ್ಯ ಎಂದು? ಕೇಳಲು ಆ ಮಹರ್ಷಿಯು ಶೀಘ್ರದಲ್ಲಿ ಈ ಸಮಸ್ಯೆಯು ಪರಿಹಾರವಾಗುತ್ತದೆ ಎಂದು ಹೇಳಿದರು. ಸಗರ ಚಕ್ರವರ್ತಿಯು ಅಶ್ವಮೇಧ ಯಾಗವನ್ನು ಕೈಗೊಂಡನು. ಇದಕ್ಕಾಗಿ ಕುದುರೆಯೊಂದನ್ನು ಸ್ವತಂತ್ರವಾಗಿ ಬಿಟ್ಟನು. ಈ ಕುದುರೆಯನ್ನು ಇಂದ್ರನು ಕದ್ದು ಪಾತಾಳದಲ್ಲಿ ಅಡಗಿಸಿದನು. ಕುದುರೆಯ ಹೆಜ್ಜೆ ಗುರುತುಗಳನ್ನು ಅನುಸರಿಸುತ್ತಾ ಹೋಗಿ ಸಗರನ ಅರವತ್ತು ಸಾವಿರ ಮಕ್ಕಳು ಭೂಮಿಯನ್ನು ಅಗೆದು ಪಾತಾಳವನ್ನು ತಲುಪಿದರು. ಕುದುರೆಯು ಕಪಿಲ ಮಹರ್ಷಿಯ ಆಶ್ರಮದಲ್ಲಿತ್ತು. ಕುದುರೆಯನ್ನು ಕದ್ದಿರುವವನು ಮಹರ್ಷಿಯೇ ಎಂದು ಭಾವಿಸಿ ಮಹಿರ್ಷಿಯನ್ನು ಕೊಲ್ಲಲು ಮುಂದಾದರು. ತಪಸ್ಸಿನಿಂದ ಎಚ್ಚರಗೊಂಡ ಮಹಿರ್ಷಿಯು ತನ್ನ ತಪಸ್ಸಿನ ಶಕ್ತಿಯಿಂದ ಅರವತ್ತು ಸಾವಿರ ಸಗರನ ಮಕ್ಕಳನ್ನು ಸುಟ್ಟು ಬೂದಿ ಮಾಡಿದನು.

ಮಕ್ಕಳು ಹಿಂತಿರುಗಲಿಲ್ಲವೆಂದು ಸಗರನು ತನ್ನ ಮಗ ಅಸಮಂಜಸನ ಮಗನಾದ ಅಂಶುಮತ್‌ನ್ನು ಕರೆದು ಕುದುರೆಯನ್ನು ಹುಡುಕಲು ಕಳುಹಿಸಿಕೊಟ್ಟನು. ಅವನೂ ಸಹ ಕುದುರೆ ಹೆಜ್ಜೆಗಳನ್ನು ಅನುಸರಿಸಿ ಕಪಿಲ ಮಹರ್ಷಿಯ ಆಶ್ರಮವನ್ನು ತಲುಪಿದನು. ಅಲ್ಲಿ ಕುದುರೆಯನ್ನು ಕಂಡು ಕಪಿಲ

ಮಹರ್ಷಿಯನ್ನು ಸಮೀಪಿಸಿ ನಮಸ್ಕರಿಸಿ ಯಜ್ಞದ ಕುದುರೆಯನ್ನು ತೆಗೆದುಕೊಂಡು ಹೋಗಲು ಅಪ್ಪಣೆಯನ್ನು ಕೋರಿದ ಈತನ ಸದ್ವರ್ತನೆಗೆ ಸಂಪ್ರೀತನಾದ ಮಹರ್ಷಿಯು ಕುದುರೆಯನ್ನು ಕಳುಹಿಸಿಕೊಟ್ಟನು. ಅದರೊಂದಿಗೆ ಅವನ ತಂದೆ ಮತ್ತು ಚಿಕ್ಕಪ್ಪಂದಿರ ದುರ್ಗತಿಯನ್ನು ತಿಳಿಸಿದನು. ಅಲ್ಲದೆ ಅವನ ಮೊಮ್ಮಗನ ಕಾಲಕ್ಕೆ ಅವರೆಲ್ಲರಿಗೂ ಸದ್ಗತಿ ದೊರೆಯುತ್ತದೆಂದು ಹೇಳಿದನು. ಅಶ್ವಮೇಧಯಾಗವನ್ನು ಸಗರ ಚಕ್ರವರ್ತಿ ನಡೆಸಿದ ನಂತರ ಕಾಲಕ್ಕೆ, ಕಾಲಧರ್ಮವನ್ನು ಅನುಸರಿಸಿದನು. ಅಂಶುಮತ್‌ನ ಮಗ ದಿಲೀಪ ಚಕ್ರವರ್ತಿ. ದಿಲೀಪನ ಮಗ ಭಗೀರಥ. ಅಂಶುಮತ್‌ನಿಗೆ ಕಪಿಲ ಮಹರ್ಷಿಯು ಗಂಗಾ ನದಿಯ ನೀರನ್ನು ಅವನ ತಂದೆ ಹಾಗೂ ಚಿಕ್ಕಪ್ಪಂದಿರ ಬೂದಿಯ ಮೇಲೆ ಹರಿಸಿದರೆ ಅವರೆಲ್ಲರಿಗೂ ಸದ್ಗತಿ ಪ್ರಾಪ್ತವಾಗುವುದು ಎಂದು ಹೇಳಿದ್ದನು. ಇದನ್ನು ತಿಳಿದ ಭಗೀರಥನು ಬಹು ತೀವ್ರವಾಗಿ ಕಠೋರ ತಪಸ್ಸನ್ನು ಆಚರಿಸಿ ದೇವ ಗಂಗೆಯನ್ನು ಭೂಮಿಗೆ ತರಲು ಪ್ರಯತ್ನಿಸಿದನು. ಗಂಗೆಯು ಪ್ರಸನ್ನಳಾದಳು. ಆದರೆ ಸ್ವರ್ಗದಿಂದ ಭೂಮಿಯ ಮೇಲೆ ಧುಮುಕುವಾಗ ಯಾರು ತಾನೇ ತನ್ನ ತಾಡನವನ್ನು ಎದುರಿಸಿ ನಿಲ್ಲಿಸಬಲ್ಲರು? ಎಂದು ಕೇಳಿದಳು. ಒಂದು ವೇಳೆ ಯಾರೂ ತಡೆಯದೇ ಇದ್ದರೆ ಭೂಮಿಯು ಚೂರುಚೂರಾಗಿ ಬಿರಿಯುತ್ತದೆ ಎಂದು ಸೂಚಿಸಿದಳು. ಭಗೀರಥನು ಧೃತಿಗೆಡಲಿಲ್ಲ. ರುದ್ರನು ಗಂಗೆಯನ್ನು ತಡೆಯುವಂತಹ ಮಹಾಬಲ ಎಂದು ನಂಬಿ ಆತನನ್ನು ಕುರಿತು ತಪಸ್ಸು ಮಾಡತೊಡಗಿದ. ರುದ್ರನು ಈ ತಪಸ್ಸಿಗೆ ಸಂಪ್ರೀತನಾಗಿ ಭಗೀರಥನ ಪ್ರಾರ್ಥನೆಯಂತೆ ಗಂಗೆಯನ್ನು ತನ್ನ ನೆತ್ತಿಯ ಮೇಲೆ ಸ್ವೀಕರಿಸಲು ಹಿಮಾಲಯಗಳಿಗೆ ಹೊರಟ. ಮೊದಲಿಗೆ ಗಂಗೆ ಶಿವನು ತನ್ನ ವೇಗವನ್ನು ತಡೆಯಲಾರ ಎಂದು ಬಹುವೇಗದಿಂದ ಧುಮುಕಿದಳು. ಗಂಗೆಯ ಈ ಅಹಂಕಾರಕ್ಕೆ ಕೃದ್ಧನಾಗಿ ಗಂಗೆಗೆ ಬುದ್ಧಿ ಕಲಿಸಲೆಂದು ತನ್ನ ವ್ಯೋಮಕೇಶದಲ್ಲಿ ಗಂಗೆಯನ್ನು ಬಂಧಿಯನ್ನಾಗಿಸಿ ಶಿವನು ಗಂಗಾಧರನೆನಿಸಿದನು. ಹೀಗೆ ಗಂಗೆಯು ಸ್ವರ್ಗದಿಂದಿಳಿದು ಶಿವನ ಜಟೆಗಳಲ್ಲಿ ಸೆರೆಯಾದಳು. ಇದರಿಂದ ಭಗೀರಥನ ಗುರಿ ಸಾಧಿತವಾದಂತಾಗಲಿಲ್ಲ. ಮತ್ತೆ ಶಿವನನ್ನು ಕುರಿತು ತಪಸ್ಸು ಮಾಡತೊಡಗಿದ. ಇದರಿಂದ ಶಿವನು ತನ್ನ ಜಟೆಯನ್ನು ತೆಗೆದು ನಿಧಾನವಾಗಿ ಗಂಗೆಯು ಭೂಮಿಯ ಮೇಲೆ ಹರಿಯಲು ಬಿಟ್ಟುಕೊಟ್ಟು ಭಗೀರಥನನ್ನು ಅನುಸರಿಸಲು ಹೇಳಿದ. ಭಗೀರಥನು ತನ್ನ ಪಿತೃಗಳು ಬೂದಿಯಾದ ರಾಶಿಯ ಬಳಿಗೆ ಕರೆದೊಯ್ದು ಪವಿತ್ರ ಗಂಗಾಜಲದ ಸಂಪರ್ಕ ಪಡೆದು ಅವರೆಲ್ಲರೂ ಸದ್ಗತಿಯನ್ನು ಪಡೆದರು. ಶಿವನು ಗಂಗೆಯನ್ನು ಭೂಮಿಗೆ ವಿಸರ್ಜಿಸಿದ ಸಂದರ್ಭವನ್ನು ಗಂಗಾ ವಿಸರ್ಜನ ಮೂರ್ತಿ ಎನಿಸಿಕೊಂಡನು.[೧೩೧]

ಗಂಗಾಧರ ಮೂರ್ತಿಯ ಲಕ್ಷಣಗಳನ್ನು ಅಂಶುಮದ್ಭೇದಾಗಮ, ಕಾಮಿಕ ಮತ್ತು ಕಾರಣಾಗಮಗಳಲ್ಲಿ ಹೇಳಲಾಗಿದೆ. ಇವುಗಳ ಪ್ರಕಾರ ಶಿವನ ಬಲಗಾಲು ಬಲವಾಗಿ ಭೂಮಿಯ ಮೇಲೆ ಊರಿದ್ದು, ಎಡಗಾಲು ಕುಂಚಿತ ಪಾದದಲ್ಲಿರುತ್ತದೆ. ಚತುರ್ಭುಜಗಳಲ್ಲಿ ಬಲಭಾಗದ ಮುಂದಿನ ಹಸ್ತ ಉಮೆಯ ಗದ್ದದ ಬಳಿ ಇರುತ್ತದೆ. ಮುಂದಿನ ಎಡಗೈಯು ಉಮೆಯನ್ನು ಆಲಂಗಿಸಿರುತ್ತದೆ. ಬಲ ಹಿಂದಿನ ಹಸ್ತವು ತನ್ನ ಉಷ್ಣೀಷ (ಮುಕುಟ)ದವರೆಗೂ ಅಥವಾ ಮುಕುಟದವರೆಗೂ ಎತ್ತಿದ್ದು ಗಂಗೆಯೊಡಗೂಡಿದ ಜಟೆಯನ್ನು ಹಿಡಿದಿರುತ್ತದೆ. ಹಿಂದಿನ ಎಡ ಹಸ್ತವು ಮೃಗವನ್ನು ಹಿಡಿದಿರುತ್ತದೆ.

ಎಡಭಾಗದಲ್ಲಿ ಉಮೆಯು ಶಿವನು ಇನ್ನೊಬ್ಬ ಸ್ತ್ರೀಗೆ ಅವಕಾಶ ಕಲ್ಪಿಸುತ್ತಿರುವುದರಿಂದ ಸಹಜ ಅಸೂಯೆ ಭಾವವನ್ನು ಹೊಂದಿರುವಂತೆ ನಿಂತಿರಬೇಕು. ಉಮೆಯು ಬಲಪಾದವು ಕುಂಚಿತವಾಗಿದ್ದಿರಬಹುದು. ಎಡಪಾದವು ಸ್ಥಿರವಾಗಿರಬೇಕು. ಆಕೆಯ ಬಲಬಾಹುವು ಮುಕ್ತವಾಗಿ ಕೆಳಗೆ ಇಳಿಬಿಟ್ಟಿರಬೇಕು. ಎಡಹಸ್ತದಲ್ಲಿ ಪುಷ್ಪವನ್ನು ಹಿಡಿದಿರಬೇಕು ಅಥವಾ ಬಲಹಸ್ತವು ತಾನು ಧರಿಸಿದ ವಸ್ತ್ರದ ನೆರಿಗೆಗಳನ್ನು ಹಿಡಿದಿರಬೇಕು.

ಎಡಭಾಗದಲ್ಲಿ ಭಗೀರಥನು ಅನೇಕ ಋಷಿಗಳೊಂದಿಗೆ ಶಿವನನ್ನು ಪ್ರಾರ್ಥಿಸುವಂತಿರಬೇಕು. ಈ ಎಲ್ಲ ಮೂರ್ತಿಗಳ ಗುಂಪು ಸೇರಿದರೆ ಗಂಗಾಧರ ಮೂರ್ತಿ ಎನ್ನಿಸಿಕೊಳ್ಳುತ್ತದೆ.[೧೩೨]

ಶಿಲ್ಪರತ್ನ[೧೩೩]ದಲ್ಲಿರುವ ವಿವರಣೆ ಸಕಲ ಲೋಕಗಳಿಗೆ ಸುಖವನ್ನುಂಟು ಮಾಡುವ ಗಂಗಾಧರ ಮೂರ್ತಿಯಲ್ಲಿ ಶಿವನ ಬಲಗಾಲು ಸುಸ್ಥಿತವಾಗಿದ್ದು, ಎಡಗಾಲು ಕುಂಚಿತವಾಗಿರುತ್ತದೆ. ಶಿರವು ಜಟಾಬಂಧದಿಂದ ಕೂಡಿದ್ದು, ಮುಖವು ಸ್ವಲ್ಪ ಎಡಕ್ಕೆ ಬಾಗಿರುತ್ತದೆ. ಬಲಭಾಗದ ಮುಂದಿನ ಹಸ್ತವು ವರದಮುದ್ರೆ, ಎಡಭಾಗದ ಮುಂದಿನ ಹಸ್ತವು ದೇವಿಯ ಮುಖವನ್ನು ಸೋಕಿಸುವಂತಿದ್ದು, ಆಕೆಯನ್ನು ಆಲಂಗಿಸಿಕೊಂಡಿರುತ್ತದೆ. ಬಲ ಹಿಂದಿನ ಹಸ್ತವು ಉಷ್ಣೀಷದವರೆಗೆ ಮೇಲಕ್ಕೆತ್ತಿದ್ದು ಜಟೆಯಲ್ಲಿರುವ ಗಂಗೆಯನ್ನು ಸ್ಪರ್ಶಿಸುತ್ತಿರುವಂತಿರಬೇಕು. ಎಡ ಹಿಂದಿನ ಹಸ್ತದಲ್ಲಿ ಮೃಗವನ್ನು ಹಿಡಿದಿರಬೇಕು. ದೇವನ ಎಡಪಕ್ಕದಲ್ಲಿ ವಿರಹ ಭಾವದಿಂದ ಕೂಡಿದ ಮುಖವುಳ್ಳ ದೇವಿಯ ಎಡಗಾಲು ಸುಸ್ಥಿತದಲ್ಲಿ ಹಾಗೂ ಬಲಗಾಲು ಕುಂಚಿತವಾಗಿರುತ್ತದೆ. ಈಕೆಯ ಬಲಹಸ್ತವು ಕೆಳಮುಖವಾಗಿ ಚಾಚಿದ್ದು, ಎಡಹಸ್ತದಲ್ಲಿ ಪುಷ್ಪವನ್ನು ಹಿಡಿದಿರಬೇಕು ಹಾಗೂ ಸರ್ವಾಭರಣಗಳಿಂದ ಸರ್ವಾಲಂಕೃತಳಾಗಿರಬೇಕು. ಭಗೀರಥನನ್ನು ಶಿವನ ಬಲಭಾಗದಲ್ಲಿರುವಂತೆ ರಚಿಸಬೇಕು ಎಂದು ಹೇಳುತ್ತದೆ. ಪೂರ್ವಕಾರಣಾಗಮವು ಶಿವನ ಬಲಭಾಗದ ಮುಂದಿನ ಹಸ್ತವು ಅಭಯ ಮತ್ತು ಎಡಭಾಗದ ಮುಂದಿನ ಹಸ್ತವು ಕಟಕ ಮುದ್ರೆಯಲ್ಲಿರಬೇಕು. ಉಳಿದ ಎರಡು ಹಸ್ತಗಳು ಕೃಷ್ಣಮೃಗ ಮತ್ತು ಪರಶುವನ್ನು ಹಿಡಿದಿರಬೇಕು. ಹಿಂದಿನ ಬಲಹಸ್ತವು(ಪರಶುವನ್ನು ಹಿಡಿದ ಹಸ್ತ) ಮುಕುಟದವರೆಗೂ ಮೇಲೆತ್ತಿದ್ದು, ಜಟೆಯನ್ನು ಸ್ಪರ್ಶಿಸಿರುತ್ತದೆ ಎಂದು ಹೇಳುತ್ತದೆ.

ಉತ್ತರ ಕಾಮಿಕಾಗಮ[೧೩೪]ದಲ್ಲಿರುವ ವಿವರಣೆ: ಗಂಗಾಧರ ಮೂರ್ತಿಶಿಲ್ಪದಲ್ಲಿ ಶಿವನು ಚತುರ್ಭುಜಗಳನ್ನು ಹೊಂದಿದ್ದು, ತ್ರಿನೇತ್ರ ಮತ್ತು ಜಟಾಮುಕುಟಧಾರಿಯಾಗಿರುವನು. ಬಲಭಾಗದ ಹಸ್ತಗಳಲ್ಲಿ ಒಂದು ಅಭಯ ಮತ್ತೊಂದು ಕಟಕಮುದ್ರೆಯಲ್ಲಿರಬೇಕು ಮತ್ತು ಅದೇ ಕೈಯಿಂದ ಗಂಗೆಯನ್ನು ಒಡಗೂಡಿದ ಜಟೆಯನ್ನು ಹಿಡಿದಿರಬೇಕು. ಶಿವನು ದೃಢವಾಗಿ ನಿಂತಿದ್ದು, ಪ್ರಸನ್ನ ಮುಖದಿಂದ ಜಟೆಯನ್ನು ಹಿಡಿದಿರುವ ಹಸ್ತವನ್ನು ಕರ್ಣಗಳ ಎತ್ತರದವರೆಗೆ ಎತ್ತಿ ಹಿಡಿದಿರಬೇಕು. ಶಿವನ ಉಳಿದ ಭಾಗವು ಚಂದ್ರಶೇಖರನಂತೆ ರಚಿಸಬೇಕು. ದೇವನ ಎಡಭಾಗದಲ್ಲಿ ಸಕಲ ಲಕ್ಷಣ, ಸಂಪನ್ನೆಯಾದ ದೇವಿ ಇರಬೇಕು. ಭಗೀರಥನ ಶಿಲ್ಪವು ದ್ವಿನೇತ್ರ ಮತ್ತು ದ್ವಿಬಾಹುಗಳುಳ್ಳದ್ದಾಗಿದ್ದು, ಶಿವನ ನಾಭಿಯಿಂದ ಎದೆಯವರೆಗಿನಷ್ಟು ಎತ್ತರವನ್ನು ಹೊಂದಿರಬೇಕು. ಹಾಗೂ ಉದ್ದನೆಯ ಅಥವಾ ತೂಗಾಡುತ್ತಿರುವ ಜಟೆಗಳನ್ನು ಹೊಂದಿರಬೇಕು. ನಾರುಮಡಿಯನ್ನುಟ್ಟು ಅಂಜಲಿಮುದ್ರೆಯಲ್ಲಿ

ಹೃದಯಭಾಗ ಅಥವಾ ತಲೆಯ ಮೇಲ್ಭಾಗದಲ್ಲಿ ನಮಸ್ಕರಿಸುವಂತಿರಬೇಕು. ಹೀಗೆ ಈ ಮೂರ್ತಿಯನ್ನು ಗಂಗಾಧರಮೂರ್ತಿ ಎನ್ನಲಾಗುತ್ತದೆ ಎಂದು ಹೇಳಿರುವುದು.

ಗಂಗಾಧರಮೂರ್ತಿಶಿಲ್ಪವು ಒಂದು ಪಟ್ಟಿಕೆಯಲ್ಲಿ ಕೆತ್ತಲ್ಪಟ್ಟಿದ್ದರೆ, ಭಗೀರಥನೊಂದಿಗೆ ಇನ್ನೂ ಹಲವು ಮುನಿಗಳನ್ನು ತೋರಿಸಬೇಕು ಹಾಗೂ ಬ್ರಹ್ಮ ಮತ್ತು ವಿಷ್ಣು ದೇವತೆಗಳನ್ನು ತೋರಿಸಬೇಕು.

ಗಂಗಾವಿಸರ್ಜನ ಮೂರ್ತಿಯು ಗಂಗಾಧರ ಮೂರ್ತಿಯಲ್ಲಿಯೇ ಒಂದು ವಿಧ. ಇದರ ಕುರಿತು ಯಾವುದೇ ಶಿಲ್ಪಶಾಸ್ತ್ರಗ್ರಂಥಗಳಲ್ಲಿ ಪ್ರತ್ಯೇಕವಾಗಿ ವಿವರಣೆ ನೀಡಲಾಗಿಲ್ಲ. ಅಂಶುಮದ್ಭೇದಾಗಮ ಸಾಮಾನ್ಯವಾದ ಗಂಗಾಧರ ಮೂರ್ತಿಶಿಲ್ಪಕ್ಕಿಂತ ಭಿನ್ನವಾದ ಗಂಗಾವಿಸರ್ಜನಮೂರ್ತಿಯು ವಿಶಿಷ್ಟವಾಗಿರುತ್ತದೆಂದು ಅಂಗೀಕರಿಸುತ್ತದೆ. ಈ ಶಿಲ್ಪವು ಗಂಗಾಧರ ಮೂರ್ತಿಯ ಮುಂದುವರಿದ ಭಾಗವನ್ನು ಬಿಂಬಿಸುತ್ತದೆ. ಶಿವನು ಗಂಗೆಯನ್ನು ಧರಿಸಿದ ನಂತರ ಭಗೀರಥನು ಆಕೆಯನ್ನು ಭೂಮಿಗಿಳಿಸಲು ಮತ್ತೆ ತಪಸ್ಸನ್ನಾಚರಿಸಿದನು. ಅಲ್ಲದೆ ಗಂಗೆಯನ್ನು ಧರಿಸಿದ್ದರಿಂದ ಪಾರ್ವತಿಯು ಸಹ ಅಸೂಯೆ ಹಾಗೂ ಕೃದ್ಧ ಭಾವವನ್ನು ಹೊಂದುವಳು ಹಾಗೂ ಮತ್ತೊಬ್ಬ ಸ್ತ್ರೀಯನ್ನು ಸ್ವೀಕರಿಸದಂತಹ ಭಾವವನ್ನು ವ್ಯಕ್ತಪಡಿಸುವಳು. ಆಗ ಶಿವನು ತನ್ನ ಪ್ರೇಮವು ವಿಭಜಿತವಾದುದಲ್ಲ ಅದು ಅತ್ಯುನ್ನತವಾದುದೆಂದು ಪುನಃ ನಂಬಿಸಿ ಗಂಗೆಯನ್ನು ವಿಸರ್ಜಿಸುವನು. ಒಟ್ಟಾರೆ ಗಂಗೆಯು ಭಗೀರಥನ ಆಸೆಯಂತೆಯೂ ವಿಸರ್ಜಿಸಲ್ಪಟ್ಟಳು.

ಈ ಪ್ರಕಾರದ ಮೂರ್ತಿಶಿಲ್ಪದಲ್ಲಿ ಶಿವನು ತನ್ನ ಜಟೆಯಿಂದ ಗಂಗೆಯನ್ನು ವಿಸರ್ಜಿಸುತ್ತಿರುವಂತಿದ್ದು, ಹಾಗೂ ಪಾರ್ವತಿಯನ್ನು ನಂಬಿಸುತ್ತಿರುವಂತಿರಬೇಕು. ಅಂಶುಮದ್ಭೇದಾಗಮ(೬೬ನೇ ಪಟಲ) ದೇವಿಯು ಶಿವನ ಎಡಭಾಗದಲ್ಲಿ ಸ್ಥಾನಿಕಳಾಗಿರಬೇಕು. ಹಾಗೂ ವಿರಹ ಭಾವವನ್ನು ವ್ಯಕ್ತಪಡಿಸುತ್ತಿರಬೇಕು(ಕಾಶ್ಯಪಶಿಲ್ಪ ೧೦, ೭ ಮತ್ತು ಶಿಲ್ಪರತ್ನ ೨೨ನೇ ಪಟಲ) ಎಂದು ಹೇಳುತ್ತದೆ. ಮುಖದಲ್ಲಿ ಸಿಟ್ಟು ಹಾಗೂ ಅಸೂಯೆ ಭಾವವನ್ನು ವ್ಯಕ್ತಪಡಿಸುತ್ತಿರಬೇಕು. ಶಿವನು ಅವಳನ್ನು ಸಂತೈಸುವ ಹಾಗೂ ತನ್ನ ಮುಂದಿನ ಎಡಗೈಯಿಂದ ಆಲಂಗಿಸಿದಂತಿರಬೇಕು. ಶಿವನ ಹಿಂದಿನ ಹಸ್ತವು ಕರ್ತರಿಹಸ್ತದಲ್ಲಿದ್ದು, ಮುಕುಟದವರೆಗೂ ಚಾಚಿದ್ದು, ಜಟಾಮುಕುಟದಲ್ಲಿನ ಒಂದು ಜಟೆಯನ್ನು ಹೊರತೆಗೆಯುತ್ತಿರುವಂತಿರಬೇಕು. ಇದರ ಜೊತೆಗೆ ಗಂಗೆಯ ಶಿಲ್ಪವನ್ನು ತೋರಿಸಬೇಕು.[೧೩೫] ಇವಿಷ್ಟು ಗಂಗಾವಿಸರ್ಜನ ಮೂರ್ತಿಯ ಲಕ್ಷಣಗಳು.

ಹಂಪಿ ಪರಿಸರದಲ್ಲಿ ಒಟ್ಟು ನಾಲ್ಕು ಶಿಲ್ಪಗಳು ಗಂಗಾಧರ ಮತ್ತು ಗಂಗಾ ವಿಸರ್ಜನ ಮೂರ್ತಿಶಿಲ್ಪಗಳಿಗೆ ಸಂಬಂಧಿಸಿದಂತೆ ದೊರೆಯುತ್ತವೆ. ಅವುಗಳ ವಿವರಣೆ ಈ ಕೆಳಗಿನಂತಿದೆ.

೧. ವಿರೂಪಾಕ್ಷ ದೇವಾಲಯದ ಎಡಬದಿಯ ಪ್ರಾಕಾರ ಮಂಟಪದ ೧೯ನೇ ಕಂಬದಲ್ಲಿ ಗಂಗಾಧರಮೂರ್ತಿಶಿಲ್ಪವಿದೆ. ಇಲ್ಲಿ ಶಿವ ಮತ್ತು ಪಾರ್ವತಿಯನ್ನು ಮಾತ್ರ ತೋರಿಸಲಾಗಿದೆ. ಶಿವನ ಶಿಲ್ಪವು ದ್ವಿಭಂಗಿಯಲ್ಲಿ ಸ್ಥಾನಿಕವಾಗಿದ್ದು, ಚತುರ್ಭುಜಗಳನ್ನು ಹೊಂದಿರುವನು. ಬಲಭಾಗದ ಎರಡು ಕೈಗಳಲ್ಲಿ ಮುಂದಿನದು ಜಟಾಮುಕುಟದವರೆಗೆ ಎತ್ತಿದ್ದು, ಕಟಕಮುದ್ರೆಯಲ್ಲಿದೆ. ಅದೇ

ಭಾಗದಲ್ಲಿ ಗಂಗೆಯ ಶಿಲ್ಪವನ್ನು ಕೆತ್ತಿದ್ದು, ಅಸ್ಪಷ್ಟವಾಗಿದೆ. ಹಿಂದಿನ ಕೈಯಲ್ಲಿ ಅಂಕುಶವನ್ನು ಹಿಡಿದಿರುವವನು. ಎಡಭಾಗದ ಕೈಗಳಲ್ಲಿ ಮುಂದಿನದು ದೇವಿಯ ಭುಜದ ಮೇಲಿದ್ದು, ಆಕೆಯ ಬಲಭಾಗದ ಸ್ತನದವರೆಗೂ ಚಾಚಿಕೊಂಡಿದೆ. ಹಿಂದಿನ ಹಸ್ತವು ಕಟಕಮುದ್ರೆಯಲ್ಲಿ, ಮೃಗವನ್ನು ಹಿಡಿದಿರುವುದು. ಜಟಾಮುಕುಟ, ಕರ್ಣಕುಂಡಲ, ಕೊರಳಹಾರಗಳು, ಯಜ್ಞೋಪವೀತ, ವಕ್ಷಬಂಧ, ಕಟಿ ಆಭರಣಗಳು, ಕಟಿಯಿಂದ ಪಾದದವರೆಗಿನ ವಸ್ತ್ರವನ್ನು ಧರಿಸಿದ್ದು, ಕೈಗಳಲ್ಲಿ ಕೆಯೂರ ಕಂಕಣಗಳಿವೆ. ಒಟ್ಟಾರೆ ಸಕಲ ವಸ್ತ್ರಾಭರಣಗಳಿಂದ ಅಲಂಕೃತನಾಗಿರುವನು. ಪಕ್ಕದಲ್ಲಿರುವ ಉಮೆಯ ಶಿಲ್ಪವು ತ್ರಿಭಂಗಿಯಲ್ಲಿದ್ದು, ದ್ವಿಭುಜಳಾಗಿರುವಳು. ಎಡಗೈಯು ಡೋಲಹಸ್ತದಲ್ಲಿದ್ದು, ಬಲಗೈಯು ಸ್ಪಷ್ಟತೆಯಿಲ್ಲ. ದೇವಿಯು ಕರಂಡ ಮುಕುಟ ಧರಿಸಿದ್ದು, ಶಿವನಂತೆಯೇ ಸಕಲ ವಸ್ತ್ರಾಭರಣಗಳಿಂದ ಭೂಷಿತಳಾಗಿರುವಳು.

೨. ಮತ್ತೊಂದು ಶಿಲ್ಪವು ಹರಿಹರ ದೇವಾಲಯದ ಮಂಟಪದ ಮೊದಲನೇ ಕಂಬದಲ್ಲಿದೆ. ಇಲ್ಲಿ ಶಿವ-ಪಾರ್ವತಿಯರನ್ನು ತೋರಿಸಿದ್ದು, ಶಿವನು ಚತುರ್ಭುಜಗಳನ್ನು ಹೊಂದಿರುವನು. ಶಿಲ್ಪಕ್ಕೆ ಸುಣ್ಣ ಬಳಿದಿರುವುದರಿಂದ ಕೆಲವು ಲಕ್ಷಣಗಳು ಗೋಚರಿಸುವುದಿಲ್ಲ. ಆದರೂ ಗುರುತಿಸಬಹುದಾದ ಲಕ್ಷಣಗಳೆಂದರೆ ಶಿವನ ಬಲಭಾಗದ ಮುಂದಿನ ಹಸ್ತವು ಪಕ್ಕದಲ್ಲಿರುವ ದೇವಿಯ ಎದೆಯ ಭಾಗದವರೆಗೆ ಚಾಚಿಕೊಂಡಿದೆ. ಹಿಂದಿನ ಹಸ್ತದಲ್ಲಿ ಪರಶು (ಅಸ್ಪಷ್ಟ) ಹಾಗೂ ಎಡ ಮುಂದಿನ ಹಸ್ತವು ಅಸ್ಪಷ್ಟವಾಗಿದ್ದು ಹಿಂದಿನ ಕೈಯಲ್ಲಿ ಮೃಗವನ್ನು ಹಿಡಿದಿರುವನು. ದೇವಿಯು ದ್ವಿಭುಜಳಾಗಿದ್ದು, ಬಲಬಾಹುವು ಅಸ್ಪಷ್ಟವಾಗಿದೆ. ಎಡಬಾಹು ಡೋಲಹಸ್ತದಲ್ಲಿದೆ. ಎರಡೂ ಶಿಲ್ಪಗಳು ಮುಕುಟ ಹಾಗೂ ವಸ್ತ್ರಾಭರಣಗಳಿಂದ ಭೂಷಿತವಾಗಿವೆ.

೩. ಇನ್ನೊಂದು ಶಿಲ್ಪವು ಬುಕ್ಕಸಾಗರದ ವೀರಭದ್ರಸ್ವಾಮಿ ದೇವಾಲಯದ ರಂಗಮಂಟಪದಲ್ಲಿನ ೬ನೇ ಕಂಬದಲ್ಲಿದೆ. ಈ ಶಿಲ್ಪಕ್ಕೂ ಸಂಪೂರ್ಣ ಬಣ್ಣ ಬಳಿದಿರುವುದರಿಂದ ಆಭರಣಗಳಂತಹ ಲಕ್ಷಣಗಳು ಗೋಚರಿಸುವುದಿಲ್ಲ. ಇಲ್ಲಿಯೂ ಶಿವನು ಚತುರ್ಭುಜನಾಗಿದ್ದು, ಬಲಭಾಗದ ಎರಡು ಕೈಗಳಲ್ಲಿ ಮುಂದಿನದು ಪಕ್ಕದಲ್ಲಿರುವ ದೇವಿಯ ಗದ್ದವನ್ನು ಸ್ಪರ್ಶಿಸಿದೆ. ಹಿಂದಿನ ಹಸ್ತವು ಮೇಲೆತ್ತಿದ್ದು, ಜಟೆಯನ್ನು ಹಿಡಿದಿರುವುದು, ಇಲ್ಲಿ ಗಂಗೆಯ ಶಿಲ್ಪವನ್ನೂ ಚಿಕ್ಕದಾಗಿ ಕೆತ್ತಿದ್ದು, ಶಿವನು ಅವಳನ್ನು ಜಟೆಯೊಳಗಿಂದ ವಿಸರ್ಜಿಸಿ, ಅವಳು ಮೇಲಿಂದ ಕೆಳಕ್ಕೆ ಧುಮುಕುತ್ತಿರುವಂತೆ ಕೆತ್ತಲಾಗಿದೆ. ಎಡಭಾಗದ ಮುಂದಿನ ಹಸ್ತವು ಅಸ್ಪಷ್ಟವಾಗಿದ್ದು, ಹಿಂದಿನ ಕೈಯಲ್ಲಿ ಡಮರುವನ್ನು ಹಿಡಿದಿರುವನು. ದೇವಿಯು ದ್ವಿಭುಜಳಾಗಿದ್ದು, ಆಕೆಯ ಎಡಗೈಯು ಡೋಲಹಸ್ತದಲ್ಲಿದೆ. ಬಲಬಾಹುವು ಅಸ್ಪಷ್ಟವಾಗಿದೆ. ದೇವಿಯು ಕಿರೀಟಮುಕುಟ ಧರಿಸಿದ್ದು, ಶಿವ ಮತ್ತು ಪಾರ್ವತಿಯರ ಎರಡೂ ಶಿಲ್ಪಗಳೂ ವಸ್ತ್ರಾಭರಣ ಭೂಷಿತವಾಗಿರುವುದು.

೪. ಮತ್ತೊಂದು ಶಿಲ್ಪವು ತಿಮ್ಮಲಾಪುರದ ತ್ರಿಕೂಟ ದೇವಾಲಯದ ನವರಂಗದಲ್ಲಿನ ೪ನೇ ಕಂಬದಲ್ಲಿದೆ. ಈ ಶಿಲ್ಪದಲ್ಲಿ ಶಿವನು ಸಮಪಾದದಲ್ಲಿ ಸ್ಥಾನಿಕನಾಗಿದ್ದು, ಎಡಭಾಗಕ್ಕೆ ದೇವಿ ಇರುವೆಡೆಗೆ

ಮುಖ ಮಾಡಿರುವಂತೆ ಕೆತ್ತಲಾಗಿದೆ. ಇಲ್ಲಿ ಶಿವನು ಷಡ್ಭುಜಗಳನ್ನು ಹೊಂದಿರುವನು. ಬಲಭಾಗದ ಮೂರು ಬಾಹುಗಳಲ್ಲಿ ಮುಂದಿನದು ಪಕ್ಕದಲ್ಲಿರುವ ದೇವಿಯ ಗದ್ದವನ್ನು ಸ್ಪರ್ಶಿಸಿದೆ. ಮಧ್ಯದಲ್ಲಿರುವ ಹಸ್ತದಲ್ಲಿ ಪರಶುವನ್ನು ಹಾಗೂ ಹಿಂದಿನ ಹಸ್ತವು ಮುಕುಟದವರೆಗೂ ಚಾಚಿದ್ದು, ಕಟಕ ಮುದ್ರೆಯಲ್ಲಿರುವುದು. ಇದು ಜಟೆಯಿಂದ ಗಂಗೆಯನ್ನು ವಿಸರ್ಜಿಸಿರುವುದು ಹಾಗೂ ಶಿವನ ಬಲಕ್ಕೆ ಗಂಗೆಯು ನಿಧಾನವಾಗಿ ಭೂಮಿಗಿಳಿಯುತ್ತಿರುವುದನ್ನು ತೋರಿಸಲಾಗಿದೆ. ಎಡಭಾಗದ ಬಾಹುಗಳಲ್ಲಿ ಮುಂದಿನದು ದೇವಿಯನ್ನು ಆಲಂಗಿಸಿದ್ದು, ಅವಳ ಎಡ ಸ್ತನದವರೆಗೂ ಚಾಚಿಕೊಂಡಿದೆ. ಮಧ್ಯದಲ್ಲಿನ ಹಸ್ತವು ದೇವಿಯ ಕಟಿಭಾಗವನ್ನು ಬಳಸಿದೆ. ಹಿಂದಿನ ಹಸ್ತದಲ್ಲಿ ಕೃಷ್ಣಮೃಗವಿರುವುದು ಶಿವನು ಜಟಾಮುಕುಟಧಾರಿಯಾಗಿದ್ದು, ಕರ್ಣಕುಂಡಲಗಳು, ಕೊರಳಹಾರ, ಕಂಕಣಗಳು ಹಾಗೂ ಕಟಿಯಿಂದ ಪಾದದವರೆಗಿನ ವಸ್ತ್ರವನ್ನು ಧರಿಸಿರುವನು. ಶಿವನ ಎಡಕ್ಕೆ ದೇವಿಯು ತ್ರಿಭಂಗಿಯಲ್ಲಿ ಸ್ಥಾನಿಕಳಾಗಿದ್ದು, ದ್ವಿಭುಜಗಳನ್ನು ಹೊಂದಿರುವಳು. ಅವುಗಳಲ್ಲಿ ಬಲಹಸ್ತವು ಅಸ್ಪಷ್ಟವಾಗಿದ್ದು, ಎಡಹಸ್ತದಲ್ಲಿ ಪುಷ್ಪವನ್ನು ಹಿಡಿದಿರುವಳು. ದೇವಿಯು ಕರಂಡಮುಕುಟ ಹಾಗೂ ಕಟಿಯಿಂದ ಪಾದದವರೆಗಿನ ವಸ್ತ್ರವನ್ನು ಧರಿಸಿರುವಳು. ಈ ವಸ್ತ್ರದ ಒಂದು ಭಾಗವು ಅವಳ ಎಡಭಾಗಕ್ಕೆ ಹರಡಿಕೊಂಡಂತೆ ಕೆತ್ತಲಾಗಿದೆ. ಹಾಗೂ ಕಟಿಭಾಗದಲ್ಲಿ ವಿವಿಧ ಆಭರಣಗಳನ್ನು ಧರಿಸಿರುವಳು.

ಈ ಮೇಲಿನ ಎಲ್ಲ ಶಿಲ್ಪಗಳಲ್ಲಿ ಅಂದರೆ ವಿರೂಪಾಕ್ಷ ದೇವಾಲಯದಲ್ಲಿ ಹಾಗೂ ಹರಿಹರ ದೇವಾಲಯದಲ್ಲಿ ದೊರೆತ ಶಿಲ್ಪಗಳೆರಡೂ ಗಂಗಾಧರ ಮೂರ್ತಿಶಿಲ್ಪಗಳಾಗಿದ್ದು ಹಾಗೂ ಬುಕ್ಕಸಾಗರದಲ್ಲಿ ಮತ್ತು ತಿಮ್ಮಲಾಪುರದಲ್ಲಿ ದೊರೆತ ಶಿಲ್ಪಗಳು ಗಂಗಾವಿಸರ್ಜನ ಮೂರ್ತಿಗಳಾಗಿವೆ. ಈ ನಾಲ್ಕು ಶಿಲ್ಪಗಳಲ್ಲಿ ತಿಮ್ಮಲಾಪುರದ ಗಂಗಾ ವಿಸರ್ಜನಮೂರ್ತಿಯನ್ನು ಹೊರತುಪಡಿಸಿ ಉಳಿದ ಮೂರು ಶಿಲ್ಪಗಳೂ ಗಂಗಾಧರ ಹಾಗೂ ಗಂಗವಿಸರ್ಜನ ಮೂರ್ತಿಯ ಲಕ್ಷಣಗಳನ್ನು ಹೊಂದಿದ್ದರೂ ಅವು ಆಗಮಗಳು ಹಾಗೂ ಇತರ ಶಿಲ್ಪಶಾಸ್ತ್ರಗಳು ಉಲ್ಲೇಖಿಸುವ ಮೂರ್ತಿ ಲಕ್ಷಣಗಳ ಅನುಸಾರವಾಗಿ ಕೆತ್ತನೆಗೊಂಡಿಲ್ಲ. ಆದರೆ ತಿಮ್ಮಲಾಪುರದ ತ್ರಿಕೂಟ ದೇವಾಲಯದಲ್ಲಿರುವ ಗಂಗಾವಿಸರ್ಜನಮೂರ್ತಿ ಅಂಶುಮದ್ಭೇದಾಗಮ, ಪೂರ್ವ ಕಾರಣಾಗಮ ಹಾಗೂ ಶಿಲ್ಪರತ್ನ ಈ ಮೂರು ಶಿಲ್ಪಶಾಸ್ತ್ರಗಳು ಹೇಳುವ ಲಕ್ಷಣಗಳನ್ನು ಒಳಗೊಂಡು ಕೆತ್ತಲ್ಪಟ್ಟಿದೆ. ಅಂಶುಮದ್ಭೇದಾಗಮವು ಹೇಳುವಂತೆ ಬಲ ಮುಂದಿನ ಹಸ್ತವು ದೇವಿಯ ಗದ್ದವನ್ನು ಸ್ಪರ್ಶಿಸಿದ್ದು, ಎಡ ಮುಂದಿನ ಹಸ್ತವು ಆಕೆಯನ್ನು ಅಲಂಗಿಸಿದೆ. ಮಧ್ಯದಲ್ಲಿರುವ ಬಲಭಾಗದ ಹಸ್ತವು ಪರಶುವನ್ನು ಹಿಡಿದಿದೆ. ಈ ಲಕ್ಷಣವನ್ನು ಪೂರ್ವ ಕಾರಣಾಗಮವು ಹೇಳುತ್ತದೆ. ಆದರೆ ಇಲ್ಲಿ ಒಂದು ಬದಲಾವಣೆ ಇದೆ, ಅದೇಂದರೆ ಪೂರ್ವ ಕಾರಣಾಗಮವು ಈ ಹಸ್ತವು ಪರಶುವನ್ನು ಹಿಡಿದಿದ್ದು, ಇದೇ ಹಸ್ತವು ಉಷ್ಣೀಷ ಅಥವಾ ಮುಕುಟದವರೆಗೆ ಚಾಚಿದ್ದು, ಜಟೆಯನ್ನು ಹಿಡಿದಿರಬೇಕು ಎಂದು ಹೇಳುತ್ತದೆ. ಆದರೆ ಇಲ್ಲಿ ಪರಶುವನ್ನು ಪ್ರತ್ಯೇಕ ಹಸ್ತದಲ್ಲಿ ಹಾಗೂ ಜಟೆಯನ್ನು ಹಿಡಿದಿರುವ ಹಸ್ತವನ್ನು ಪ್ರತ್ಯೇಕವಾಗಿ ಕೆತ್ತಲಾಗಿದೆ. ಹಿಂದಿನ ಹಸ್ತವು

ಉಷ್ಣೀಷದವರೆಗೂ ಮೇಲೆತ್ತಿದ್ದು, ಜಟೆಯನ್ನು ಹಿಡಿದಿರಬೇಕೆಂದು ಅಂಶುಮದ್ಭೇದ, ಪೂರ್ವಕಾರಣ ಹಾಗೂ ಶಿಲ್ಪರತ್ನ ಈ ಮೂರು ಶಿಲ್ಪಶಾಸ್ತ್ರಗಳು ಹೇಳುತ್ತವೆ. ಇನ್ನು ಎಡಭಾಗದ ಹಸ್ತಗಳಲ್ಲಿ ಮುಂದಿನದು ದೇವಿಯನ್ನು ಆಲಂಗಿಸಿರುವುದು. ಈ ಲಕ್ಷಣವನ್ನು ಅಂಶುಮದ್ಭೇದ ಹಾಗೂ ಶಿಲ್ಪರತ್ನ ಎರಡೂ ಹೇಳುತ್ತವೆ. ಮಧ್ಯದಲ್ಲಿರುವ ಹಸ್ತವು ದೇವಿಯ ಕಟಿಭಾಗವನ್ನು ಬಳಸಿರುವುದು. ಈ ಹಸ್ತದ ಕುರಿತು ಈ ಮೂರೂ ಶಿಲ್ಪಶಾಸ್ತ್ರಗಳು ಏನನ್ನು ಹೇಳುವುದಿಲ್ಲ. ಕಾರಣ ಅವು ಚತುರ್ಭುಜಗಳ ವಿವರಣೆಯನ್ನು ನೀಡುತ್ತವೆಯೇ ಹೊರತು ಷಡ್ಭುಜದ ಲಕ್ಷಣಗಳನ್ನು ಹೇಳುವುದಿಲ್ಲ. ಇಲ್ಲಿ ಮೂರು ಶಿಲ್ಪಶಾಸ್ತ್ರಗಳ ಅನ್ವಯ ಶಿಲ್ಪವನ್ನು ಕೆತ್ತಿರುವುದರಿಂದ ಷಡ್ಭುಜಗಳನ್ನು ತೋರಿಸಲಾಗಿದೆ ಎಂದು ಹೇಳಬಹುದು. ಹಾಗೂ ಶಿಲ್ಪದಲ್ಲಿ ಹಿಂದಿನ ಎಡಹಸ್ತದಲ್ಲಿ ಮೇಲಿನ ಮೂರೂ ಶಿಲ್ಪಶಾಸ್ತ್ರಗಳು ಹೇಳುವ ಹಾಗೆ ಮೃಗವನ್ನು ಹಿಡಿದಿರುವುದು ಕಂಡುಬರುತ್ತದೆ. ಹಾಗೂ ಶಿಲ್ಪರತ್ನವು ವಿವರಿಸುವಂತೆ ದೇವಿಯ ಎಡಹಸ್ತದಲ್ಲಿ ಪುಷ್ಪವು ಇರುವುದು. ಇನ್ನೊಂದು ವಿಶೇಷವಾದ ಲಕ್ಷಣವೆಂದರೆ ಇಲ್ಲಿ ಶಿವನು ಗಂಗೆಯನ್ನು ತನ್ನ ಜಟೆಯೊಳಗಿಂದ ವಿಸರ್ಜಿಸಿರುವುದು ಹಾಗೂ ಗಂಗೆಯು ನಿಧಾನವಾಗಿ ಭೂಮಿಗೆ ಇಳಿಯುತ್ತಿರುವಂತೆ ತೋರಿಸಲಾಗಿದೆ. ಅಂಶುಮದ್ಭೇದಾಗಮವು ತಿಳಿಸುವಂತೆ ದೇವಿಯು ಅಸೂಯೆ ಹಾಗೂ ಕೃದ್ಧಭಾವವನ್ನು ವ್ಯಕ್ತಪಡಿಸುತ್ತಿದ್ದು, ಶಿವನು ಅವಳನ್ನು ಮುಂದಿನ ಎಡಹಸ್ತದಿಂದ ಆಲಂಗಿಸಿ, ಮುಂದಿನ ಬಲಹಸ್ತದಿಂದ ಸಂತೈಸುವಂತಹ ಅಥವಾ ನಂಬಿಸುವಂತಹ ಭಾವವನ್ನು ವ್ಯಕ್ತಪಡಿಸಿರುವನು ಎಂದು ಹೇಳಬಹುದು. ಶಿಲ್ಪದಲ್ಲಿ ಮತ್ತೊಂದು ವ್ಯತ್ಯಾಸವೆಂದರೆ ಅಂಶುಮದ್ಭೇದ ಹಾಗೂ ಶಿಲ್ಪರತ್ನ ಹೇಳುವಂತೆ ಶಿವನ ಎಡಪಾದವು ಕುಂಚಿತವಾಗಿರದೆ ಅದೂ ಸಹ ಬಲಗಾಲಿನಂತೆ ಸ್ಥಿರವಾಗಿದ್ದು, ಸಮಪಾದವಿರುವುದು. ಆದರೆ ಒಟ್ಟಾರೆಯಾಗಿ ಈ ಶಿಲ್ಪದ ಕುರಿತು ಹೇಳುವುದಾದರೆ ಇದು ಅಂಶುಮದ್ಭೇದ, ಪೂರ್ವಕಾರಣ ಹಾಗೂ ಶಿಲ್ಪರತ್ನ ಇವುಗಳು ಹೇಳುವ ಲಕ್ಷಣಗಳನ್ನು ಸಂಯುಕ್ತಗೊಳಿಸಿ ಈ ಶಿಲ್ಪವನ್ನು ಕೆತ್ತಲಾಗಿದೆ ಎನ್ನಬಹುದು. ಶಿಲ್ಪಿಯ ಚಾಣಾಕ್ಷತೆಯಿಂದ ನಿರ್ಮಿತಗೊಂಡ ಈ ಶಿಲ್ಪವು ಹಂಪಿ ಪರಿಸರದಲ್ಲಿ ದೊರೆಯುವ ಗಂಗಾ ವಿಸರ್ಜನ ಮೂರ್ತಿಗಳಲ್ಲಿ ವಿಶಿಷ್ಟವಾದುದು ಎಂದು ಹೇಳಬಹುದು.

ಮೇಲಿನ ನಾಲ್ಕು ಶಿಲ್ಪಗಳ ಕುರಿತು ಸುರೇಶ ಕೆ.ಎಂ.ರವರು ತಮ್ಮ ಗ್ರಂಥದಲ್ಲಿ[೧೩೬] ಉಲ್ಲೇಖಿಸಿರುವರು. ಆದರೆ ಈ ಲೇಖಕರು ಗಂಗಾಧರ ಹಾಗೂ ಗಂಗಾವಿಸರ್ಜನಮೂರ್ತಿಗಳ ವ್ಯತ್ಯಾಸವನ್ನು ಗುರುತಿಸಿಲ್ಲ. ಮೇಲಿನ ವಿಶಿಷ್ಟ ಗಂಗಾವಿಸರ್ಜನ ಮೂರ್ತಿಯೂ ಸೇರಿದಂತೆ ಉಳಿದ ಮೂರೂ ಶಿಲ್ಪಗಳನ್ನೂ ಸಹ ಗಂಗಾಧರ ಎಂದೇ ವಿವರಿಸಿರುವರು. ಹಾಗೂ ಈ ವಿಶಿಷ್ಟ ಗಂಗಾವಿಸರ್ಜನ ಮೂರ್ತಿಶಿಲ್ಪವು ಚತುರ್ಭುಜಗಳನ್ನು ಹೊಂದಿರುವುದು ಎಂದು ತಪ್ಪಾಗಿ ಗಮನಿಸಿರುವರು.



ಗಂಗಾಧರಮೂರ್ತಿ, ವಿರೂಪಾಕ್ಷದೇವಾಲಯ, ಹಂಪಿ



ಗಂಗಾಧರಮೂರ್ತಿ, ಹರಿಹರದೇವಾಲಯ, ಹಂಪಿ



ಗಂಗಾವಿಸರ್ಜನ ಮೂರ್ತಿ, ತ್ರಿಕೂಟ ದೇವಾಲಯ, ತಿಮ್ಮಾಲಾಪುರ



ಗಂಗಾವಿಸರ್ಜನ ಮೂರ್ತಿ, ವೀರಭದ್ರ ದೇವಾಲಯ, ಬುಕ್ಕಸಾಗರ

## ಗಂಗಾಧರಮೂರ್ತಿ

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ಎಡಬದಿಯ ಪ್ರಾಕಾರ ಮಂಟಪದ ೧೯ನೇ ಕಂಬ | ೧ |
| ಹಂಪಿ | ಹರಿಹರ | ಮಂಟಪದ ೧ನೇ ಕಂಬ | ೧ |
| ಬುಕ್ಕಸಾಗರ | ವೀರಭದ್ರೇಶ್ವರ | ರಂಗಮಂಟಪದ ೧ನೇ ಕಂಬ(ಗಂಗಾ ವಿಸರ್ಜನಮೂರ್ತಿ) | ೧ |
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ನವರಂಗದ ೪ನೇ ಕಂಬ(ಗಂಗಾ ವಿಸರ್ಜನ ಮೂರ್ತಿ) | ೧ |
| | | ಒಟ್ಟು | ೪ |

## ಅರ್ಧನಾರೀಶ್ವರ ಮೂರ್ತಿ

ಶಿವ-ಪಾರ್ವತಿಯರ ಸಮ್ಮಿಶ್ರ ರೂಪವೇ ಅರ್ಧನಾರೀಶ್ವರ ಶಿಲ್ಪ. ಈ ರೂಪವನ್ನು ಧರಿಸಿದ ಸಂದರ್ಭವನ್ನು ಶಿವಪುರಾಣವು ಹೀಗೆ ವಿವರಿಸುತ್ತದೆ. ಪರಮೇಶ್ವರನು ಬ್ರಹ್ಮನನ್ನು ಸೃಷ್ಟಿಸಿ ಆತನಿಗೆ ಸೃಷ್ಟಿಕಾರ್ಯವನ್ನು ವಹಿಸಿದ. ಬ್ರಹ್ಮ ಈ ಸೃಷ್ಟಿಕಾರ್ಯವನ್ನು ವ್ಯಾಪಕವಾಗಿ ನಡೆಸಲು ಪ್ರಜಾಪತಿಗಳನ್ನು ಸೃಷ್ಟಿಸಿದ. ಇವರೆಲ್ಲರೂ ಬ್ರಹ್ಮಮಾನಸ ಪುತ್ರರು ಎಂದೇ ಹೆಸರಾದರು. ಸಂಕಲ್ಪ ಮಾತ್ರದಿಂದಲೇ ಮೂಡಿಬಂದವರು. ಇವರಿಗೆ ಬಗೆ ಬಗೆಯ ಜೀವಗಳನ್ನು ಸೃಷ್ಟಿಸಲು ಬ್ರಹ್ಮ ಆಜ್ಞಾಪಿಸಿದ. ಪ್ರಾರಂಭದಲ್ಲಿ ಪ್ರಜೋತ್ಪತ್ತಿ ನಡೆಯಿತಾದರೂ ಅದು ಬ್ರಹ್ಮನು ಬಯಸಿದಷ್ಟು ಶೀಘ್ರಗತಿಯಲ್ಲಿ ಸಾಗುತ್ತಿರಲಿಲ್ಲ. ಇದರಿಂದ ಬ್ರಹ್ಮನಿಗೆ ಬಹುವಾದ ಅತೃಪ್ತಿಯುಂಟಾಯಿತು. ಪರಮೇಶ್ವರನನ್ನು ಕುರಿತು ತಪಸ್ಸು ಮಾಡಿದ. ಬ್ರಹ್ಮನ ಉದ್ದೇಶವು ತನ್ನ ಸಮಸ್ಯೆಗೆ ಪರಿಹಾರ ಕೇಳುವುದೇ ಆಗಿತ್ತು. ಬ್ರಹ್ಮನ ತಪಸ್ಸಿನ ಫಲವಾಗಿ ಪರಮೇಶ್ವರನು ಪ್ರತ್ಯಕ್ಷನಾದ ಬಲಭಾಗವು ಶಿವ (ಪುರುಷ) ರೂಪದಲ್ಲೂ ಎಡಭಾಗ ಪಾರ್ವತಿ (ಸ್ತ್ರೀ) ರೂಪದಲ್ಲೂ ಕಾಣಿಸಿಕೊಂಡು ನಿರಾಶನಾಗಬೇಕಾಗಿಲ್ಲ ಎಂದು ಬ್ರಹ್ಮನಿಗೆ ಅಭಯ ನೀಡಿದ. ಅದುವರೆವಿಗೂ ಬ್ರಹ್ಮನಿಗೆ ಹೆಣ್ಣಿನ ಕಲ್ಪನೆಯೇ ಬಂದಿರಲಿಲ್ಲ. ತನ್ನ ತಪ್ಪಿನ ಅರಿವಾಯಿತು. ಪಾರ್ವತೀ ದೇವಿಯನ್ನು ಒಂದು ಹೆಣ್ಣನ್ನು ಕೊಡಬೇಕೆಂದು ಪ್ರಾರ್ಥಿಸಿದ, ದೇವಿ ಕರುಣಿಸಿದಳು. ಸೃಷ್ಟಿಕಾರ್ಯವು ನಿರಂತರವಾಗಿ ನಡೆಯತೊಡಗಿತು. ಇದು ಪುರಾಣದಲ್ಲಿ ಬರುವ ಕಥೆ.

ಈ ಬಗ್ಗೆ ಇನ್ನೂ ಒಂದು ಕಥೆ ಇದೆ. ಶಿವನು ತನ್ನ ಪತ್ನಿ ಪಾರ್ವತಿಯೊಂದಿಗೆ ಕೈಲಾಸ ಪರ್ವತದಲ್ಲಿದ್ದನು. ಪರಮೇಶ್ವರನನ್ನು ದರ್ಶಿಸಿ ನಮಸ್ಕರಿಸಲು ದೇವತೆಗಳು ಮತ್ತು ಋಷಿಗಳು ಕೈಲಾಸಕ್ಕೆ ಬಂದರು. ಅವರೆಲ್ಲರೂ ದೇವ-ದೇವಿಯರನ್ನು ಪ್ರದಕ್ಷಿಣೆ ಮಾಡಿ ನಮಸ್ಕರಿಸಿದರು. ಆದರೆ ಭೃಂಗಿ ಮಾತ್ರ ಹಾಗೆ ಮಾಡಲಿಲ್ಲ. ಆತ ಕೇವಲ ಶಿವನೊಬ್ಬನನ್ನೇ ಪೂಜಿಸಿ ನಮಸ್ಕರಿಸುವುದಾಗಿ ಶಪಥ ಮಾಡಿದ್ದ. ಆದ್ದರಿಂದ ಪಾರ್ವತಿಗೆ ಪ್ರದಕ್ಷಿಣೆ ಮಾಡುವುದಾಗಲಿ, ನಮಸ್ಕರಿಸುವುದಾಗಲೀ ಮಾಡಲಿಲ್ಲ. ಪಾರ್ವತಿಗೆ ಕೋಪ ಬಂದು ಭೃಂಗಿಯ ಮೈಯಲ್ಲಿದ್ದ ರಕ್ತವು ಇಲ್ಲವಾಗಿ ಆಸರೆ ಇಲ್ಲದೆ ನಡೆಯುವುದೂ ಸಾಧ್ಯವಿಲ್ಲದಾಯಿತು. ಭೃಂಗಿಯ ಕರುಣಾಜನಕ ಸ್ಥಿತಿಗೆ ಶಿವನ ಮನ ಕರಗಿತು. ಅವನಿಗೆ ಮೂರನೆಯ ಕಾಲೊಂದನ್ನು ಕಲ್ಪಿಸಿಕೊಟ್ಟ, ಇದರಿಂದ ಭೃಂಗಿಗೆ ನಿಲ್ಲುವುದು ಸಾಧ್ಯವಾಯಿತು. ಶಿವನ ಕರುಣೆಯಿಂದ ಭೃಂಗಿ ಆನಂದಗೊಂಡ. ಶಕ್ತಿಯ ನೆರವಿಲ್ಲದೆಯೇ ತಾನು ನಿಂತು ಓಡಾಡುವುದು ಸಾಧ್ಯವಾಗಿದೆ ಎಂಬುದೇ ಆ ಆನಂದಕ್ಕೆ ಕಾರಣ. ಈ ಆನಂದದಿಂದ ಭೃಂಗಿಯು ನೃತ್ಯ ಮಾಡತೊಡಗಿದ. ಪಾರ್ವತಿಯು ಇದನ್ನು ಕಂಡು ಮತ್ತಷ್ಟು ಕೋಪಗೊಂಡಳು. ತಾನು ಭೃಂಗಿಯನ್ನು ಬಗ್ಗು ಬಡಿಯಲು ಪ್ರಯತ್ನಿಸಿದರೆ ಸಂತೋಷದಿಂದ ಕುಣಿಯುತ್ತಿದ್ದಾನಲ್ಲ ತನ್ನ ಪ್ರತಿಷ್ಠೆಯ ಪ್ರಶ್ನೆಯನ್ನಾಗಿ ಭಾವಿಸಿದ ಪಾರ್ವತಿ ತಪಸ್ಸನ್ನು ಪ್ರಾರಂಭಿಸಿದಳು. ಶಿವನಿಂದ ವರವನ್ನು ಪಡೆದುಕೊಂಡು ಶಿವನ ದೇಹದಲ್ಲಿಯೇ ಅರ್ಧಾಂಗಿಯಾಗಿ ಸೇರಿಕೊಂಡಳು. ಶಿವನು ಅರ್ಧನಾರೇಶ್ವರನಾದುದು ಹೀಗೆ. ಈ ಅವತಾರದಿಂದ ಭೃಂಗಿಯು ಶಿವನೊಬ್ಬನಿಗೇ ಪ್ರದಕ್ಷಿಣೆ ಮಾಡುವುದಾಗಲಿ ನಮಸ್ಕರಿಸುವುದಾಗಲಿ ಸಾಧ್ಯವಾಗದಂತೆ ತಡೆಯೊಡ್ಡಿದಳು. ಆದರೆ ಭೃಂಗಿಯು ಹುಳುವಾಗಿ ಕೇವಲ ಶಿವನ ಕಾಲಿನ ಸುತ್ತಲೂ ಪ್ರದಕ್ಷಿಣೆ

ನಡೆಸಿದ ಭೃಂಗಿಯ ಛಲಕ್ಕೆ ದೇವಿಯು ಪ್ರಸನ್ನಳಾದಳು. ಹಾಗೂ ಆತನಿಗೆ ಸಕಲ ಸನ್ಮಂಗಳಗಳನ್ನು ಕರುಣಿಸಿದಳು. ಹೀಗೆ ಅರ್ಧನಾರೀಶ್ವರ ಸ್ವರೂಪವು ಬಂದಿತೆಂದು ತಿಳಿದುಬರುತ್ತದೆ.[೧೩೭]

ಅಂಶುಮದ್ಭೇದಾಗಮ, ಕಾಮಿಕಾಗಮ, ಸುಪ್ರಭೇದಾಗಮ, ಶಿಲ್ಪರತ್ನ, ಕಾರಣಾಗಮ ಮತ್ತು ಇತರ ಶಿಲ್ಪಶಾಸ್ತ್ರಗಳು ಈ ಮೂರ್ತಿಯ ಲಕ್ಷಣಗಳನ್ನು ವಿವರಿಸುತ್ತವೆ. ಹೆಸರೇ ಹೇಳುವಂತೆ ಶಿಲ್ಪವು ಅರ್ಧಭಾಗ ಪುರುಷ ಹಾಗೂ ಅರ್ಧಭಾಗ ಸ್ತ್ರೀಯದ್ದಾಗಿರುತ್ತದೆ. ಬಲಭಾಗವು ಪುರುಷ ಅಂದರೆ ಶಿವನದು ಮತ್ತು ಎಡಭಾಗ ಸ್ತ್ರೀ, ಅಂದರೆ ಪಾರ್ವತಿಯದ್ದಾಗಿರುತ್ತದೆ. ಶಿವನು ಜಟಾಮುಕುಟಧಾರಿಯಾಗಿ ಸರ್ಪಕುಂಡಲ ಅಥವಾ ಸಾಮಾನ್ಯವಾದ ಕುಂಡಲಗಳನ್ನು ಧರಿಸಿರಬೇಕು. ಮತ್ತು ಹಣೆಯ ಬಲಭಾಗದಲ್ಲಿ ತ್ರಿನೇತ್ರದ ಅರ್ಧಭಾಗವನ್ನು ಕೆತ್ತಿರಬೇಕು. ಅರ್ಧನಾರೀಶ್ವರ ಶಿಲ್ಪವು ಎರಡು, ಮೂರು, ನಾಲ್ಕು ಬಾಹುಗಳನ್ನು ಹೊಂದಿರಬಹುದು. ನಾಲ್ಕು ಬಾಹುಗಳಿದ್ದಲ್ಲಿ ಬಲಪಾರ್ಶ್ವದ ಒಂದು ಹಸ್ತದಲ್ಲಿ ಅಭಯ ಮುದ್ರೆ ಮತ್ತೊಂದರಲ್ಲಿ ಪರಶು ಅಥವಾ ಒಂದು ಹಸ್ತದಲ್ಲಿ ವರದ ಮುದ್ರೆ ಮತ್ತು ಇನ್ನೊಂದರಲ್ಲಿ ಶೂಲವನ್ನು ಹಿಡಿದಿರಬೇಕು. ಅಥವಾ ಒಂದು ಹಸ್ತದಲ್ಲಿ ಟಂಕವನ್ನು ಹಿಡಿದಿದ್ದಲ್ಲಿ ಇನ್ನೊಂದು ಅಭಯ ಮುದ್ರೆ ಇರಬಹುದು. ಅಥವಾ ಯಾವುದಾದರೊಂದು ಹಸ್ತವು ಸ್ವಲ್ಪ ಬಗ್ಗಿದ್ದು ನಂದಿಯ ತಲೆಯ ಮೇಲೆ ಇರಿಸಿದ್ದು, ಇನ್ನೊಂದು ಹಸ್ತವು ಅಭಯ ಮುದ್ರೆಯಲ್ಲಿರಬಹುದು. ಅಥವಾ ಬಲಭಾಗದ ಎರಡು ಹಸ್ತಗಳಲ್ಲಿ ಶೂಲ ಮತ್ತು ಅಕ್ಷಮಾಲೆಯನ್ನೂ ಹಿಡಿದಿರಬಹುದು. ಒಂದು ವೇಳೆ ಎರಡೇ ಭುಜಗಳಿದ್ದಲ್ಲಿ ಬಲಭಾಗದ ಹಸ್ತವು ವರದ ಮುದ್ರೆಯಲ್ಲಿರಬಹುದು ಅಥವಾ ಅದರಲ್ಲಿ ಕಪಾಲವನ್ನು ಹಿಡಿದಿರಬಹುದು. ಬಲಪಾರ್ಶ್ವವೆಲ್ಲಾ ಶಿವನಿಗೆ ವಿಶಿಷ್ಟವಾದ ಆಭರಣಗಳಿಂದ ಅಲಂಕೃತಗೊಳಿಸಿರಬೇಕು. ಬಲ ವಕ್ಷವು ಪುರುಷ ವಕ್ಷದಂತೆ ರೂಪಿತವಾಗಿರಬೇಕು. ಕಟಿಯ ಕೆಳಭಾಗ ಮತ್ತು ಮೊಣಕಾಲಿನ ಮೇಲ್ಭಾಗ ಮಾತ್ರ ಹುಲಿಯ ಚರ್ಮ ಅಥವಾ ರೇಶಿಮೆಯ ವಸ್ತ್ರವನ್ನು ಧರಿಸಿರಬೇಕು. ಬಲಭಾಗದಲ್ಲಿ ನಾಗಯಜ್ಞೋಪವೀತವಿರಬೇಕು. ಅದೇ ಕಡೆ ಕಟಿಯ ಮೇಲೆ ಸರ್ಪ ಮೇಖಲ ಇರಬೇಕು. ಬಲಭಾಗವೆಲ್ಲ ವಿಭೂತಿಯಿಂದ ಲೇಪಿತವಾಗಿರಬೇಕು. ಬಲಕಾಲು ಸ್ವಲ್ಪ ಕುಂಚಿತವಾಗಿರಬಹುದು ಇಲ್ಲವೇ ನೇರವಾಗಿಯೇ ಇರಬಹುದು. ಇದು ಪದ್ಮಪೀಠದ ಮೇಲೆ ಸ್ಥಿತವಾಗಿರಬೇಕು. ಶಿಲ್ಪದ ಬಲಭಾಗವು ರೌದ್ರವಾಗಿರಬಹುದು. ಹಾಗೂ ಕೆಂಪು ವರ್ಣವನ್ನು ಹೊಂದಿರಬೇಕು. ಇವಿಷ್ಟು ಬಲಭಾಗದಲ್ಲಿರುವ ಶಿವನ ಲಕ್ಷಣಗಳ ವಿವರಗಳಾದರೆ, ಪಾರ್ವತಿಯ ಲಕ್ಷಣಗಳ ವಿವರಗಳು ಕೆಳಗಿನಂತಿವೆ.

ಎಡ ಪಾರ್ಶ್ವದಲ್ಲಿ ಪಾರ್ವತಿಯ ಮೂರ್ತಿಯು ಇರುತ್ತದೆ. ಇಲ್ಲಿ ಎಡಪಾರ್ಶ್ವದಲ್ಲಿ ಕರಂಡ ಮುಕುಟವಿರಬೇಕು ಅಥವಾ ಸುಂದರ ಕೇಶಬಂಧ ಇರಬಹುದು. ಶಿವನ ಮೂರನೇ ಕಣ್ಣಿನ ಅರ್ಧಮುಂದುವರಿದ ಭಾಗವಾಗಿ ತಿಲಕವಿರಬೇಕು. ಎಡಕಣ್ಣಿಗೆ ಕಾಡಿಗೆಯನ್ನು ಹಚ್ಚಿರಬೇಕು. ಎಡಕಿವಿಯಲ್ಲಿ ವಾಲಿಕಾ ಎಂಬ ಕರ್ಣಾಭರಣ ಇರಬೇಕು. ಅರ್ಧನಾರೀಶ್ವರ ಮೂರ್ತಿಗೆ ನಾಲ್ಕು ಬಾಹುಗಳಿದ್ದರೆ ಅವುಗಳಲ್ಲಿ ಎಡಭಾಗದ ಬಾಹುಗಳಲ್ಲಿ ಒಂದು, ವೃಷಭನ ತಲೆಯ ಮೇಲೆ ಇಟ್ಟಿರಬೇಕು. ಮತ್ತೊಂದು ಕಟಕ ಮುದ್ರೆಯಲ್ಲಿ ನೀಲೋತ್ಪಲವನ್ನು ಹಿಡಿದಿರಬೇಕು. ಒಂದು ವೇಳೆ ಮೂರು ಬಾಹುಗಳಿದ್ದಲ್ಲಿ ಎರಡು ಬಲ ಪಾರ್ಶ್ವದಲ್ಲಿದ್ದು, ಒಂದು ಮಾತ್ರವೇ ಎಡಪಾರ್ಶ್ವದಲ್ಲಿರಬೇಕು. ಈ ಹಸ್ತದಲ್ಲಿ ಪುಷ್ಪ ಅಥವಾ ದರ್ಪಣ ಅಥವಾ ಶುಕ(ಗಿಣಿ)ವಿರಬೇಕು. ಹಾಗೂ ಕೇಯೂರ, ಕಂಕಣ ಮುಂತಾದ ಆಭರಣಗಳಿಂದ ಅಲಂಕೃತವಾಗಿರಬೇಕು. ಎರಡೇ ಬಾಹುಗಳಿದ್ದಲ್ಲಿ ಎಡಭಾಗದ ಬಾಹು

ಕೆಳಕ್ಕೆ ಇಳಿಬಿಟ್ಟಿರಬಹುದು ಅಥವಾ ದರ್ಪಣ ಅಥವಾ ಶುಕವನ್ನು ಅಥವಾ ಪುಷ್ಪವನ್ನು ಹಿಡಿದಿರಬಹುದು ಅಥವಾ ಹಸ್ತವನ್ನು ಸ್ವಲ್ಪ ಬಗ್ಗಿಸಿದ್ದು, ವೃಷಭದ ತಲೆಯ ಮೇಲೆ ಇರಬಹುದು. ಶುಕವನ್ನು ತೋರಿಸಿದ್ದಲ್ಲಿ ಅದು ಪಾರ್ವತಿ ಹಸ್ತದ ಮಣಿಕಟ್ಟಿನ ಮೇಲಿದ್ದು ಹಾರಬಲ್ಲ ಸ್ಥಿತಿಯಲ್ಲಿರುತ್ತದೆ. ಎಡಗಡೆಗೆ ದೃಢವಾದ ವೃತ್ತಾಕಾರದ ಸ್ತನವಿರಬೇಕು. ವಕ್ಷಸ್ಥಳದಲ್ಲಿ ವಿವಿಧ ಬಗೆಯ ಹಾರಗಳಿಂದ ಅಲಂಕೃತಗೊಂಡಿರಬೇಕು. ಎಡಪಾರ್ಶ್ವವು ಶುದ್ಧ ಬಿಳಿಯ ಅಥವಾ ಬಣ್ಣಬಣ್ಣದ ರೇಶಿಮೆ ವಸ್ತ್ರಗಳಿಂದ ಹೆಣ್ಣಿಗೆ ಉಚಿತ ರೀತಿಯಲ್ಲಿರುವಂತೆ ಇರಬೇಕು. ಪಾದದ ಕೀಲಿನವರೆವಿಗೂ ದೇಹವು ಉಡುಗೆಯಿಂದ ಮುಚ್ಚಿರಬೇಕು. ಮತ್ತು ಈ ಉಡುಗೆಯು ಕಟಿಯಲ್ಲಿ ಮೂರು ಪಟ್ಟಿಗಳಿಂದ ಕೂಡಿರಬೇಕು. ಪಾದಗಳಲ್ಲಿ ಅಂದಿಗೆ, ನೂಪೂರ ಮತ್ತು ವಲಯಗಳು ಇರಬೇಕು. ಪದ್ಮಪೀಠದ ಮೇಲೆ ಎಡಗಾಲು ಸ್ಥಿರವಾಗಿ ಅಥವಾ ಕುಂಚಿತವಾಗಿ ಇರಬಹುದು. ಎಡಭಾಗದ ಬಣ್ಣವು ಗಿಣಿ ಹಸಿರು ಅಥವಾ ಕೃಷ್ಣವರ್ಣದ್ದಾಗಿರಬೇಕು ಮತ್ತು ಎಡಭಾಗವು ಪ್ರಶಾಂತಭಾವದಿಂದಿರಬೇಕು.[೧೩೮]

ವಿಷ್ಣುಧರ್ಮೋತ್ತರ ಪುರಾಣ, ಬೃಹತಾ-ಸಂಹಿತಾ, ಸಕಲಾಧಿಕಾರ[೧೩೯] ಹಾಗೂ ರೌರವಾಗಮ[೧೪೦] ಇವುಗಳು ಸಹ ಮೇಲೆ ತಿಳಿಸಿದ (ಎರಡು ಮತ್ತು ನಾಲ್ಕು ಬಾಹುಗಳಿದ್ದಲ್ಲಿ) ಲಕ್ಷಣಗಳನ್ನೆ ತಿಳಿಸುತ್ತವೆ. ಇವಿಷ್ಟು ಆಗಮಗಳು ಹಾಗೂ ಇತರ ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ದೊರೆಯುವ ಅರ್ಧನಾರೀಶ್ವರ ಶಿಲ್ಪದ ಲಕ್ಷಣಗಳು.

ಹಂಪಿ ಪರಿಸರದಲ್ಲಿ ಕೇವಲ ಒಂದು ಅರ್ಧನಾರೀಶ್ವರ ಮೂರ್ತಿಶಿಲ್ಪವು ದೊರೆಯುತ್ತದೆ. ಇದು ತಿಮ್ಮಲಾಪುರದ ತ್ರಿಕೂಟ ದೇವಾಲಯದ ನವರಂಗದ ೪ನೇ ಕಂಬದಲ್ಲಿ ದೊರೆಯುತ್ತದೆ. ಇಲ್ಲಿ ಶಿಲ್ಪದ ಬಲಭಾಗದಲ್ಲಿ ಶಿವನನ್ನು, ಎಡಬಾಗದಲ್ಲಿ ಪಾರ್ವತಿಯನ್ನು ತೋರಿಸಲಾಗಿದೆ. ಬಲಭಾಗದಲ್ಲಿ ಜಟಾಮುಕುಟವಿದ್ದು, ಬಲಗಿವಿಯಲ್ಲಿ ನಕ್ರಕುಂಡಲ, ಕೊರಳಹಾರ ಹಾಗೂ ಕಟಿಯಿಂದ ಪಾದದವರೆಗೆ ವಸ್ತ್ರವನ್ನು ಧರಿಸಿರುವನು. ಎಡಭಾಗದಲ್ಲಿ ದೇವಿಯು ಇದ್ದು ಅವಳು ಕಿರೀಟ ಮುಕುಟ, ಹಾರಗಳನ್ನು ಧರಿಸಿರುವಳು. ಎಡಗಿವಿಯಲ್ಲಿ ಮಕರಕುಂಡಲವನ್ನು ಧರಿಸಿರುವಳು. ಹಾಗೂ ಆಕರ್ಷಕ ಸ್ತನವನ್ನು ಹೊಂದಿರುವಳು. ಇವಳೂ ಸಹ ಕಟಿಯಿಂದ ಪಾದದವರೆಗಿನ ವಸ್ತ್ರವನ್ನು ಧರಿಸಿರುವಳು. ಶಿಲ್ಪವು ಚತುರ್ಭುಜಗಳನ್ನು ಹೊಂದಿದ್ದು, ಬಲಪಾರ್ಶ್ವದಲ್ಲಿ ಮುಂದಿನದು ಅಭಯ, ಹಿಂದಿನ ಹಸ್ತದಲ್ಲಿ ಕೃಷ್ಣಮೃಗ ಇರುವುದು. ಎಡಪಾರ್ಶ್ವದಲ್ಲಿ ಮುಂದಿನದು ವರದ ಮುದ್ರೆಯಲ್ಲಿದ್ದು, ಹಿಂದಿನದು ಪುಷ್ಪವನ್ನು ಹಿಡಿದಿರುವುದು. ಶಿಲ್ಪವು ಸಮಪಾದದಲ್ಲಿ ಸ್ಥಿರವಾಗಿರುವುದು. ಈ ಶಿಲ್ಪದ ಕುರಿತು ಸುರೇಶ ಕೆ.ಎಂ. ಅವರು ತಮ್ಮ Vijayanagara Sculptures at Hampi[೧೪೧] ಎಂಬ ಗ್ರಂಥದಲ್ಲಿ ಉಲ್ಲೇಖಿಸಿರುವರು. ಈ ಲೇಖಕರು ಈ ಶಿಲ್ಪದಲ್ಲಿ ದೇವಿಯು ಅಂದರೆ ಶಿಲ್ಪದ ಎಡಭಾಗವು ಕರಂಡ ಮುಕುಟಧಾರಿಯಾಗಿದ್ದು, ವಿವಿಧ ಆಭರಣಗಳನ್ನು ಧರಿಸಿರಿರುವಳು ಎಂದು ಹೇಳಿದ್ದಾರೆ. ಆದರೆ ಶಿಲ್ಪದಲ್ಲಿ ಮೇಲೆ ಹೇಳಿದಂತೆ ಕಿರೀಟ ಮುಕುಟ ಧರಿಸಿದ್ದು ಹೆಚ್ಚಿನ ಆಭರಣಗಳನ್ನು ಕೆತ್ತಲಾಗಿಲ್ಲವೆಂದು ಹೇಳಬಹುದು. ಒಟ್ಟಾರೆಯಾಗಿ ಹೇಳುವುದಾದರೆ ಈ ಶಿಲ್ಪವು ಆಗಮ ಹಾಗೂ ಇತರ ಶಿಲ್ಪಶಾಸ್ತ್ರಗಳು ತಿಳಿಸುವ ಲಕ್ಷಣಗಳನ್ನು ಇದು ಹೊಂದಿಲ್ಲವೆಂದು ಹೇಳಬಹುದು.



ಅರ್ಧನಾರೀಶ್ವರಮೂರ್ತಿ, ತ್ರಿಕೂಟ ದೇವಾಲಯ, ತಿಮ್ಮಾಲಾಪುರ

**ಅರ್ಧನಾರೀಶ್ವರಮೂರ್ತಿ**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ನವರಂಗದ ೪ನೇ ಕಂಬ | ೧ |

**ಹರಿಹರ ಮೂರ್ತಿ**

ಈಗಾಗಲೇ ಅರ್ಧನಾರೀಶ್ವರ ಮೂರ್ತಿಯ ಬಗ್ಗೆ ನಾವು ತಿಳಿದುಕೊಂಡಿರುವುದರಿಂದ ಹರಿಹರಾರ್ಧ ಮೂರ್ತಿಯ ಬಗ್ಗೆ ತಿಳಿಯುವುದು ಬಹು ಸುಲಭ. ಶಿವನ ಈ ಅವತಾರಕ್ಕೆ ವಾಮನ ಪುರಾಣದಲ್ಲಿ ಆಧಾರ ದೊರೆಯುತ್ತದೆ. ವಿಷ್ಣುವು ತಾನೇ ಶಿವನೆಂದು ಹೇಳುತ್ತಾನೆ. "ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣುವೆ" ಎಂದು ಹೇಳಿ ಅದೇ ರೀತಿಯಾಗಿ ಕಾಣಿಸಿಕೊಂಡಿದ್ದರ ಉಲ್ಲೇಖವಿದೆ. ಅರ್ಧನಾರೀಶ್ವರನಲ್ಲಿ ಎಡಭಾಗ ಪಾರ್ವತಿ ಇದ್ದರೆ, ಹರಿಹರಾರ್ಧ ಮೂರ್ತಿಯಲ್ಲಿ ಎಡಭಾಗದಲ್ಲಿ ವಿಷ್ಣುವು ಇರುತ್ತಾನೆ. ಹರಿಹರರಲ್ಲಿ ಭೇದ ಭಾವವನ್ನಾಗಲಿ ಅಥವಾ ಇನ್ನು ಬೇರೆಯ ಯಾವ ದೇವರ ಬಗ್ಗೆಯಾಗಲಿ ತರ-ತಮ ಭಾವಗಳನ್ನು ಇರಿಸಿಕೊಳ್ಳಬಾರದು ಎಂಬುದನ್ನು ಹೇಳಲು ಈ ಮೂರ್ತಿಯ ಕಲ್ಪನೆ ಪ್ರಾರಂಭವಾಗಿದೆ. ಶಿವನು ಹೆಚ್ಚೆಂದು ಶೈವರು, ವಿಷ್ಣು ಹೆಚ್ಚೆಂದು ವೈಷ್ಣವರು ಕಿತ್ತಾಡುವುದನ್ನು ನಿಲ್ಲಿಸಬೇಕೆಂದು ಈ ಅದ್ವೈತ ರೂಪವನ್ನು ಅರಿಯುವುದು ಸುಲಭವಾಗುತ್ತದೆ. ಇದಕ್ಕೆ ಪೂರಕವಾಗಿ ಮಹಾರಾಷ್ಟ್ರದ ಸಂತ ಕವಿ ನರಹರಿ ಸೋನಾರನ ಜೀವನ ಚರಿತ್ರೆಯನ್ನು ಗಮನಿಸಿದಾಗ, ಈತನು ಚಿನ್ನದ ಕೆಲಸ ಮಾಡುವ ಒಬ್ಬ ವಿಶ್ವಬ್ರಾಹ್ಮಣ ಶಿಲ್ಪಿ. ಆತನು ಜನ್ಮತಃ ಪರಮಶೈವ. ವೃತ್ತಿ ಧರ್ಮದಿಂದ ಪಾಂಡುರಂಗನಿಗೆ ಚಿನ್ನದ ಕವಚಗಳನ್ನು ಮಾಡಿಕೊಳ್ಳಲು ಒಪ್ಪಿಕೊಂಡನು. ಮೂರ್ತಿಯನ್ನೇ ನೋಡಲು ಇಷ್ಟವಿಲ್ಲದ ಸೋನಾರನು ಕಣ್ಣಿಗೆ ಬಟ್ಟೆ ಕಟ್ಟಿಕೊಂಡು

ಗರ್ಭಗುಡಿಯಲ್ಲಿಯ ಮೂರ್ತಿಯನ್ನು ತಡವಿ ಅಳತೆಗಳನ್ನು ತೆಗೆದುಕೊಳ್ಳಲು ತೀರ್ಮಾನಿಸಿದನು. ಹೀಗೆ ಪಾಂಡುರಂಗನನ್ನು ತಡವಿದಾಗ ಸರ್ಪಭೂಷಣ, ರುದ್ರಾಕ್ಷಿಮಾಲೆ, ತ್ರಿಶೂಲ ಮೊದಲಾದ ಶಿವನ ಚಿಹ್ನೆಗಳು ಆತನ ಸ್ಪರ್ಶಕ್ಕೆ ದೊರೆತವು. ತನ್ನ ಆರಾಧ್ಯ ಮೂರ್ತಿ ಶಿವನೇ ಎಂದು ಕಣ್ಣಿಗೆ ಕಟ್ಟಿದ ಬಟ್ಟೆಯನ್ನು ತೆಗೆದು ನೋಡಿದಾಗ ಮೂರ್ತಿ ಪಾಂಡುರಂಗನದೇ ಆಗಿತ್ತು. ಮತ್ತೆ ಜಿಗುಪ್ಸೆಯಿಂದ ತನ್ನ ಕೆಲಸವನ್ನು ಪ್ರಾರಂಭಿಸಿದಾಗ ಅದೇ ಶಿವನ ಲಕ್ಷಣಗಳು ಸ್ಪರ್ಶಕ್ಕೆ ದೊರೆಯುತ್ತವೆ. ಸ್ಪರ್ಶಕ್ಕೆ ಹರ–ನೋಟಕ್ಕೆ ಹರಿ ಎಂದು ಹರಿ–ಹರರಲ್ಲಿ ಭಿನ್ನತೆ ಇಲ್ಲವೆಂಬುದನ್ನು ಸಾಕ್ಷಾತ್ಕರಿಸಿಕೊಂಡನು.

ಕಾಶ್ಯಪ ಶಿಲ್ಪದಲ್ಲಿ ಈ ಮೂರ್ತಿಗೆ ಹರ್ಯರ್ಧಹರ ಮೂರ್ತಿ ಎಂಬ ಹೆಸರೂ ಇದೆ. ಇದು ಅರ್ಧನಾರೀಶ್ವರ ಎಂಬ ಪದದಂತೆಯೇ ಇದೆ. ಎಲ್ಲವನ್ನು ವಿವರಿಸಿ ಕೊನೆಗೆ "ಸರ್ವೇಷಾಂ ದೇವ ದೇವಿನಾಮೇವ ಮೇವ ಸಮಾಚರೇತ್" ಎಂದು ಹೇಳಿ ಇಲ್ಲೂ ದೇವಿಯ ಪ್ರಸ್ತಾಪವನ್ನು ಮಾಡಿರುವುದು ಅನ್ವಯಾರ್ಥಕ್ಕೆ ಮೇಲುನೋಟಕ್ಕೆ ಕಠಿಣವೆನಿಸುತ್ತದೆ. 'ಹರಿ' ಎಂದು ಹೇಳಿದ ನಂತರ ಈ 'ದೇವಿ' ಹೇಗೆ ಪ್ರಸ್ತಾಪಿತವಾಗಿದ್ದಾಳೆ ಎಂಬುದು ತಕ್ಷಣ ಅರ್ಥವಾಗುವುದಿಲ್ಲ. ಈ ಸಾಲು ಪ್ರಕ್ಷಿಪ್ತ ಎಂದೂ ಭಾವಿಸಬಹುದಾದ ಅವಕಾಶವಿದೆ. ಉಮಾ, ದುರ್ಗಾ ವಿಷ್ಣುವಿನ ಸ್ತ್ರೀ ಶಕ್ತಿಗಳೆಂದು ಪರಿಗಣಿತವಾಗಿದ್ದಾರೆ. ಶಿವನ ಅರ್ಧಾಂಗಿಯಾದ ದುರ್ಗೆಯು ಶಂಖ ಚಕ್ರಧಾರಿಣಿಯಾಗಿ ಅನೇಕ ಶಿಲ್ಪಗಳಲ್ಲಿ ರೂಪಿತವಾಗಿರುವುದನ್ನು ನಾವು ಕಂಡಿದ್ದೇವೆ. ಶಂಖ–ಚಕ್ರಗಳು ವಿಷ್ಣುವಿನ ಆಯುಧಗಳು ತಾನೆ? ಆಕೆಯನ್ನು ವಿಷ್ಣು ಸೋದರಿ ಎಂದೂ ಕರೆಯಲಾಗುತ್ತದೆ. ವಿಷ್ಣುವನ್ನು ಪ್ರಕೃತಿ ತತ್ವದ ಪ್ರತೀಕವಾಗಿಯೂ ಹೇಳಲಾಗುತ್ತದೆ. ಆದ್ದರಿಂದಲೇ ಅರ್ಧನಾರೀಶ್ವರನಲ್ಲಿ ನಾರಿ ಸ್ಥಾನದಲ್ಲಿ(ಎಂದರೆ ಎಡಭಾಗದಲ್ಲಿ) ವಿಷ್ಣುವನ್ನೂ ರೂಪಿಸಲಾಗುತ್ತದೆ. ಶಿವಲಿಂಗದ ಸ್ವರೂಪದಲ್ಲಿಯೂ ವಿಷ್ಣು ಭಾಗವೆಂದು ಹೆಸರಾಗಿರುವ ಅಸ್ಪಷ್ಟಭಾಗವನ್ನು ದೇವೀ ಭಾಗವೆಂದು ಹೆಸರಿಸಿ, ಪೀಠದಿಂದ ಆವೃತ್ತವಾಗಿರುವಂತೆ ರೂಪಿಸಿ, ದೇವಿಗೂ ವಿಷ್ಣುವಿಗೂ ಅಂತರವಿಲ್ಲ ಎಂಬುದನ್ನು ನಿರೂಪಿಸಲಾಗಿದೆ. ಆದ್ದರಿಂದ ಈ ಸಂಯುಕ್ತ ಮೂರ್ತಿಗಳ ಮೂಲ ತತ್ವವು ಪ್ರಕೃತಿ–ಪುರುಷರ ಸಂಯೋಗವೇ ವಿಶ್ವ ಎಂಬುದನ್ನು ಸೂಚಿಸುವುದಾಗಿದೆ. ಶಿವ–ವಿಷ್ಣು ಇಬ್ಬರಲ್ಲಿ ಭಿನ್ನತೆಗಿಂತಲೂ ಐಕ್ಯತೆಯೇ ಪ್ರಧಾನವಾಗಿದೆ ಎಂಬುದನ್ನು ಮನವರಿಕೆ ಮಾಡಿಸುವುದೇ ಆಗಿದೆ. ಶೈವ–ವೈಷ್ಣವರ ಭಿನ್ನತೆಗಳನ್ನು ದೂರಮಾಡಲು ಈ ಮೂರ್ತಿಯು ಪ್ರಾಚುರ್ಯಕ್ಕೆ ಬಂದಿದೆ. ಸೃಷ್ಟಿಗೆ ಪುರುಷ ಪ್ರಕೃತಿಯರಂತೆ ಶಿವ–ವಿಷ್ಣುಗಳು ಎಂದು ಹೇಳುವುದೇ ಇದರ ಉದ್ದೇಶ. ಇಲ್ಲಿ ಹೆಸರು ಬದಲಾಗಿದ್ದರೂ ಮೂಲ ಅರ್ಥ ಅರ್ಧನಾರೀಶ್ವರನದೇ. ಆದ್ದರಿದ ದೇವೀ ಉಲ್ಲೇಖ ತಪ್ಪಾಗಿಲ್ಲ ಎಂಬುದು ಸ್ಪಷ್ಟವಾಗಿದೆ. ವಿಷ್ಣು ಧರ್ಮೋತ್ತರ ಪುರಾಣದಲ್ಲಿ ಹರಿಹರ ಮೂರ್ತಿಯ ಎಡಪಾರ್ಶ್ವದಲ್ಲಿ ಗರುಡ, ಬಲ ಪಾರ್ಶ್ವದಲ್ಲಿ ನಂದಿ ಇರಬೇಕೆಂದು ಹೇಳಲಾಗಿದೆ. ಈ ಮೂರ್ತಿಯನ್ನು ಕೇಶವಾರ್ಧ ಮೂರ್ತಿ, ಹರ್ಯರ್ಧಮೂರ್ತಿ, ಈಶಾಚ್ಯುತ ಮೂರ್ತಿ, ಶಂಕರನಾರಾಯಣಮೂರ್ತಿ, ಹರಿಹರ ಮೂರ್ತಿ, ಹರ್ಯರ್ಧ ಹರಮೂರ್ತಿ ಮುಂತಾದ ಹೆಸರುಗಳಿಂದಲೂ ಕರೆಯಲಾಗುತ್ತದೆ.[೧೪೨]

ಹರಿಹರ ಅಥವಾ ಹರ್ಯರ್ಧಮೂರ್ತಿಯಲ್ಲಿ ಬಲಭಾಗದ ಅರ್ಧಭಾಗವು ಅಥವಾ ಶಿವನ ಭಾಗವು ಅರ್ಧನಾರೀಶ್ವರ ಮೂರ್ತಿಯ ಪ್ರತಿಮಾಲಕ್ಷಣಗಳನ್ನೇ ಹೊಂದಿರಬೇಕು. ಎಡಭಾಗ ಅಥವಾ ವಿಷ್ಣುವಿನ ಭಾಗವು ಸಂಸ್ಕೃತ ಪಠ್ಯಗಳು ಈ ಕೆಳಗಿನಂತೆ ಇರಬೇಕೆಂದು ವಿವರಿಸುತ್ತವೆ. ಹರಿಹರ ಮೂರ್ತಿಯ ಎಡಭಾಗದಲ್ಲಿ ಎರಡು ಬಾಹುಗಳಿರುತ್ತವೆ. ಅವುಗಳಲ್ಲಿ ಒಂದು ಚಕ್ರ ಅಥವಾ ಶಂಖ

ಅಥವಾ ಗದೆಯನ್ನು ಹಾಗೂ ಇನ್ನೊಂದು ಹಸ್ತವು ಕಟಕಮುದ್ರೆಯಲ್ಲಿದ್ದು, ತೊಡೆಯವರೆಗೂ ಚಾಚಿರುತ್ತದೆ. ವಿಷ್ಣುವಿನ ಶಿರದಲ್ಲಿ ಕಿರೀಟಮುಕುಟವಿದ್ದು ಅಮೂಲ್ಯವಾದ ಹರಳುಗಳಿಂದ ಅಲಂಕೃತವಾಗಿರಬೇಕು. ಕರ್ಣದಲ್ಲಿ ಮಕರ ಕುಂಡಲವಿರಬೇಕು. ಬಾಹುಗಳು ಕೇಯೂರ, ಕಂಕಣ ಮತ್ತಿತರ ಆಭರಣಗಳಿಂದ ಅಲಂಕೃತವಾಗಿರಬೇಕು. ಬಲಪಾದದ ಮುಂಗಾಲಿನಲ್ಲಿ ಸರ್ಪಾಕಾರದ ಕಾಲ್ಗಡಗವಿದ್ದಂತೆಯೇ ಎಡಪಾದವೂ ಅಮೂಲ್ಯವಾದ ಹರಳುಗಳಿಂದ ಅಲಂಕೃತಗೊಂಡಿರಬೇಕು. ವಿಷ್ಣುವು ಹಳದಿವರ್ಣದ ರೇಷ್ಮೆ ವಸ್ತ್ರವನ್ನು ಧರಿಸಿರಬೇಕು. ಶಿವನು ಬಿಳಿಯ ವರ್ಣದವನಾಗಿದ್ದರೆ ವಿಷ್ಣುವು ಹಸಿರು ಅಥವಾ ನೀಲಕಂದು ವರ್ಣದವನಾಗಿರಬೇಕು. ಹರಿಹರಮೂರ್ತಿಯ ಎರಡೂ ಪಾದಗಳು ಯಾವುದೇ ತಿರುವುಗಳಿಲ್ಲದೆ ಸಮಪಾದದಲ್ಲಿರಬೇಕು. ಬಲಭಾಗದಲ್ಲಿ ಉಗ್ರ ಭಾಗವು ಹಾಗೂ ಎಡಭಾಗದಲ್ಲಿ ಶಾಂತ ಭಾವವನ್ನು ಹೊಂದಿರಬೇಕು. ಶಿವನ ಹಣೆಯಲ್ಲಿ ಮೂರನೆಯ ಕಣ್ಣಿನ ಅರ್ಧಭಾಗವನ್ನು ತೋರಿಸಬೇಕು. ಹರಿಹರನ ತಲೆಯ ಹಿಂಭಾಗದಲ್ಲಿ ಶಿರಶ್ಚಕ್ರವನ್ನು ತೋರಿಸಬೇಕು. ವಿಷ್ಣುಧರ್ಮೋತ್ತರವು ಹರಿಹರ ಮೂರ್ತಿಯ ಬಲಪಕ್ಕದಲ್ಲಿ ನಂದಿಯನ್ನು ಎಡಪಕ್ಕದಲ್ಲಿ ಗರುಡನನ್ನು ತೋರಿಸಬೇಕು ಎಂದು ಹೇಳುತ್ತದೆ.[೧೪೩] ಕಾಶ್ಯಪ ಶಿಲ್ಪಶಾಸ್ತ್ರವೂ[೧೪೪] ಇದೇ ಲಕ್ಷಣಗಳನ್ನು ಹೇಳುತ್ತದೆಯಾದರೂ ಕೆಲವೊಂದು ಸಣ್ಣ ಭಿನ್ನತೆಗಳನ್ನು ಹಾಗೂ ಸೇರ್ಪಡೆಗಳನ್ನು ಒಳಗೊಂಡಿದೆ. ಇದರ ವಿವರಣೆ ಈ ಮುಂದಿನಂತಿದೆ. ಹರಿಹರ ಮೂರ್ತಿಯು ನೇರವಾಗಿ ಎರಡು ಪಾದಗಳನ್ನು ಜೋಡಿಸಿ ಸಮಪಾದದಲ್ಲಿ ನಿಂತಿರುವಂತೆ ರೂಪಿಸಬೇಕು. ಬಲಗಡೆಯ ಕೆಳ ಹಸ್ತ ಅಭಯ ಮುದ್ರೆ, ಎಡಹಸ್ತವು ಕಟಕ ಮುದ್ರೆಯನ್ನು ಧರಿಸಿರಬೇಕು. ಬಲಗಡೆಯ ಮೇಲಿನ ಹಸ್ತದಲ್ಲಿ ಪರಶು ಎಡಹಸ್ತದಲ್ಲಿ ಶಂಖವನ್ನು ಧರಿಸಿರಬೇಕು. ತಲೆಯ ಮೇಲೆ ಎಡಭಾಗಕ್ಕೆ ಕಿರೀಟ, ಮುಕುಟ ಮತ್ತು ಬಲಭಾಗಕ್ಕೆ ಜಟಾಮುಕುಟವನ್ನು ಅಲಂಕರಿಸಿರಬೇಕು. ಎಡಪಾರ್ಶ್ವದ ದೇಹಾರ್ಧವು ಶ್ಯಾಮಲವರ್ಣದ ಕಾಂತಿ ಯಿಂದಲೂ, ಬಲಭಾಗದ ದೇಹಾರ್ಧವು ಹವಳದ ಬಣ್ಣದ ಕಾಂತಿಯಿಂದಲೂ ಶೋಭಾಯಮಾನ ವಾಗಿರಬೇಕು. ಎರಡೂ ಕಡೆಗಳಿಗೆ ಸೂಕ್ತವಾದ ಆಭರಣಗಳಿಂದ ಅಲಂಕರಿಸಬೇಕು. ಶಿವ ಭಾಗ ಬಲಭಾಗವಾಗಿಯೂ ವಿಷ್ಣುಭಾಗ ಎಡಭಾಗವಾಗಿಯೂ ಸ್ಪಷ್ಟವಾಗಿ ಗೊತ್ತಾಗುವಂತೆ ಅಲಂಕರಣ ಇರಬೇಕು. ಬಲಭಾಗದಲ್ಲಿ ಉಗ್ರವಾದ ದೃಷ್ಟಿಯು ಎಡಭಾಗದಲ್ಲಿ ಶೀತಲವಾದ ಸಾಮ್ಯದೃಷ್ಟಿಯು ಇರಬೇಕು. ಎಡಭಾಗದಲ್ಲಿ ಕಿರುನಗೆಯಿಂದ ಕೂಡಿದ ಮುಖವು, ಬಲಗಡೆಗೆ ತೇಜೋಮಯವಾದ ಮುಖವು ಇರಬೇಕು. ವಿಷ್ಣುಭಾಗವು ಸಕಲಾಭರಣಗಳಿಂದ ಅಲಂಕೃತವಾಗಿಯೂ, ರುದ್ರಭಾಗವು ದಿಗಂಬರವಾಗಿಯೂ (ವಸ್ತ್ರಗಳಿಲ್ಲದೆ) ಇರಬಹುದು. ಅಥವಾ ವಿಷ್ಣುಭಾಗವನ್ನು ಪೀತಾಂಬರಗಳಿಂದಲೂ, ಆಭರಣಗಳಿಂದಲೂ ಅಲಂಕರಿಸಿ ರುದ್ರಭಾಗವನ್ನು ಚರ್ಮಾಂಬರದಿಂದಲೂ ನಾಗಾಭರಣಾದಿ ಗಳಿಂದಲೂ ಅಲಂಕರಿಸಬಹುದು. ಬಲಭಾಗದ ಜಟಾಮುಕುಟದಲ್ಲಿ ಚಂದ್ರನನ್ನು ಅಲಂಕರಿಸಬೇಕು. ಕಟಿಭಾಗದಲ್ಲಿ ರುದ್ರಭಾಗವಾದ ಬಲಭಾಗಕ್ಕಿಂತಲೂ ವಿಷ್ಣು ಭಾಗವಾದ ಎಡಭಾಗವು ಒಂದು ಅಂಗುಳ ಹೆಚ್ಚಾಗಿದ್ದು ವಿಸ್ತಾರವಾಗಿರಬೇಕು. ಶಿರಸ್ಸಿನ ಹಿಂಭಾಗದ ಪ್ರಕಾಶವು ಚಕ್ರದಂತೆ ವೃತ್ತಾಕಾರವಾಗಿಯೋ ಅಥವಾ ತಾವರೆಯ ಹೂವಿನಂತೆಯೋ ಇರಬೇಕು. ಸ್ವಾಮಿಯ ಹಣೆಯಲ್ಲಿ ಹಾಗೂ ದೇಹದ ದ್ವಾದಶ ಸ್ಥಾನಗಳಲ್ಲಿ ತ್ರಿಪುಂಡ್ರಗಳು ಇರಬೇಕು. ಎಡ ಪಾರ್ಶ್ವದಲ್ಲಿ ಊರ್ಧ್ವಪುಂಡ್ರಗಳು ಮತ್ತು

ಬಲಪಾರ್ಶ್ವದಲ್ಲಿ ತಿರ್ಯಕ್ ಪುಂಡ್ರಗಳಿರಬೇಕು. ಶಿಲ್ಪರತ್ನವೂ[೧೪೫] ಇದೇ ಲಕ್ಷಣಗಳನ್ನು ಹೇಳುತ್ತದೆ.

ಹಂಪಿ ಪರಿಸರದಲ್ಲಿ ಒಟ್ಟು ೫ ಹರಿಹರ ಶಿಲ್ಪಗಳು ದೊರೆತಿದ್ದು ಅದರಲ್ಲಿ ಒಂದು ಹರಿಹರ ಶಿಲ್ಪದ ಶಿರಭಾಗವು ದೊರೆಯುತ್ತದೆ. ಅವುಗಳು ಅಚ್ಯುತರಾಯ ದೇವಾಲಯ, ರಾಜ ಪ್ರಮುಖರ ವಸತಿ ನೆಲೆಗಳ ಬಳಿಯಿರುವ ಒಂದು ಬಂಡೆಯ ಮೇಲೆ, ತಿಮ್ಮಲಾಪುರದ ತ್ರಿಕೂಟ ದೇವಾಲಯ ಹಾಗೂ ಹೊಸಪೇಟೆಯ ಜಂಬುನಾಥ ದೇವಾಲಯದಲ್ಲಿ ಹಾಗೂ ರಾಜ್ಯ ಪ್ರಾಚ್ಯ ವಸ್ತು ಸಂಗ್ರಹಾಲಯಗಳ ಮತ್ತು ಉಪನಿರ್ದೇಶಕರ ಕಚೇರಿ ಆವರಣದಲ್ಲಿ ಕಂಡುಬರುತ್ತವೆ.

ಮೊದಲನೆಯದು ಹಂಪಿಯಲ್ಲಿರುವ ಅಚ್ಯುತರಾಯ ಅಥವಾ ತಿರುವೆಂಗಳನಾಥ ದೇವಾಲಯದ ನೂರು ಕಂಬಗಳ ಮಂಟಪದಲ್ಲಿನ ಕಂಬವೊಂದರಲ್ಲಿ ಕಂಡುಬರುತ್ತದೆ. ಶಿಲ್ಪವು ಸಮಭಂಗದಲ್ಲಿ ನಿಂತಿದ್ದು, ದೇಹರ್ಧಭಾಗ(ಬಲ) ಶಿವನನ್ನು ಇನ್ನರ್ಧ ಭಾಗ(ಎಡ) ಭಾಗದಲ್ಲಿ ವಿಷ್ಣುವನ್ನು ತೋರಿಸಲಾಗಿದೆ. ಬಲಭಾಗದಲ್ಲಿ ತೋರಿಸಿರುವ ಶಿವನ ಎರಡು ಹಸ್ತಗಳಲ್ಲಿ ಮುಂದಿನದು ಅಭಯ ಮುದ್ರೆಯನ್ನು, ಹಿಂದಿನದು ಮೃಗವನ್ನು ಹಿಡಿದಿರುವುದು. ವಿಷ್ಣುಮಾರ್ಧ ಭಾಗವು ಎರಡು ಬಾಹುಗಳಲ್ಲಿ ಮುಂದಿನದು ವರದ, ಹಿಂದಿನದು ಚಕ್ರವನ್ನು ಹಿಡಿದಿರುವುದು. ಶಿರದಲ್ಲಿ ಮುಕುಟದ ಅರ್ಧಭಾಗ(ಬಲ) ಜಟಾಮುಕುಟವನ್ನು ಉಳಿದ ಅರ್ಧಭಾಗದಲ್ಲಿ(ಎಡ) ಕಿರೀಟ ಮುಕುಟವನ್ನು ತೋರಿಸಿರುವರು. ಬಲಭಾಗದ ಕರ್ಣದಲ್ಲಿ ಸರ್ಪಕುಂಡಲ(?) ಎಡಕರ್ಣದಲ್ಲಿ ಮಕರ ಕುಂಡಲವನ್ನು ತೋರಿಸಿರುವರು. ಕಟಿಯ ಅರ್ಧಭಾಗದಲ್ಲಿ(ಬಲ) ಮೊಣಕಾಲದವರೆಗಿನ ವಸ್ತ್ರವನ್ನು ಹಾಗೂ ಎಡಭಾಗದಲ್ಲಿ ಕಟಿಯಿಂದ ಪಾದದವರೆಗಿನ ವಸ್ತ್ರವನ್ನು ಧರಿಸಿರುವನು. ಹಾಗೂ ಇಬ್ಬರಿಗೂ ಅನ್ವಯಿಸುವಂತೆ ಉದ್ದನೆಯ ವನಮಾಲೆಯನ್ನು ಧರಿಸಿರುವನು. ಹಣೆಯಲ್ಲಿ ಶಿವನಿಗೆ ತ್ರಿನೇತ್ರದ ಅರ್ಧಭಾಗವನ್ನು ತೋರಿಸಿರುವುದು. ಕೈಗಳಲ್ಲಿ ಕಂಕಣಗಳು ಪಾದಗಳಲ್ಲಿ ಕಾಲ್ಗಡಗಳನ್ನು ತೋರಿಸಲಾಗಿದೆ. ಒಟ್ಟಾರೆ ಇದು ಹರಿಹರ ಶಿಲ್ಪವೆಂದು ಇದರ ಕೆತ್ತನೆಯಿಂದ ಸುಲಭವಾಗಿ ಕಂಡುಹಿಡಿಯಬಹುದು. ಈ ಶಿಲ್ಪದ ಲಕ್ಷಣಗಳನ್ನೇ ಹೊಂದಿದ ಇನ್ನೊಂದು ಹರಿಹರ ಶಿಲ್ಪವು ಹೊಸಪೇಟೆಯ ಜುಂಬುನಾಥ ದೇವಾಲಯದ ಮಹಾರಂಗ ಮಂಟಪದ ೨೭ನೇ ಕಂಬದಲ್ಲಿ ದೊರೆಯುತ್ತದೆ. ಇದು ಸಹ ಮೇಲಿನ ಶಿಲ್ಪದ ಲಕ್ಷಣಗಳನ್ನೇ ಹೊಂದಿದೆ. ಇನ್ನೊಂದು ಶಿಲ್ಪವು ಹಂಪಿಯಲ್ಲಿ ರಾಜ ಪ್ರಮುಖರ ವಸತಿ ನೆಲೆಗಳು ಎಂದು ಗುರುತಿಸಲಾಗಿರುವ ಸ್ಥಳದ ಹತ್ತಿರದಲ್ಲಿಯೇ ಒಂದು ಬಂಡೆಯಲ್ಲಿ ಹರಿಹರ ಶಿಲ್ಪವನ್ನು ಕಾಣಬಹುದು. ಈ ಶಿಲ್ಪದಲ್ಲಿ ಹರಿಹರ ಮೂರ್ತಿಯು ಸಮಭಂಗದಲ್ಲಿ ಸ್ಥಾನಿಕವಾಗಿರುವುದು. ಬಲಭಾಗದ ಎರಡು ಹಸ್ತಗಳಲ್ಲಿ ಮುಂದಿನದು ಅಭಯ, ಹಿಂದಿನದು ತ್ರಿಶೂಲವನ್ನು ಹಿಡಿದಿರುವುದು. ಎಡಭಾಗದ ಹಸ್ತಗಳಲ್ಲಿ ಮುಂದಿನದು ಶಂಖ, ಹಿಂದಿನದು ಚಕ್ರವನ್ನು ಹಿಡಿದಿರುವುದು. ಶಿರದಲ್ಲಿ ಕಿರೀಟ ಮುಕುಟ, ಕರ್ಣಕುಂಡಲಗಳನ್ನು ಧರಿಸಿರುವನು. ಕಟಿಯಿಂದ ಪಾದದವರೆಗಿನ ವಸ್ತ್ರವನ್ನು ಧರಿಸಿರುವನು. ಇಂತಹದೇ ಲಕ್ಷಣಗಳುಳ್ಳ ಶಿಲ್ಪವು ತಿಮ್ಮಲಾಪುರದ ತ್ರಿಕೂಟ ದೇವಾಲಯದ ನವರಂಗದ ೧೦ನೇ ಕಂಬದಲ್ಲಿದೆ. ಈ ಶಿಲ್ಪವು ಸಹ ಹಿಂದೆ ವಿವರಿಸಿದ ಶಿಲ್ಪವು ಹೊಂದಿದ ಲಕ್ಷಣಗಳನ್ನೆ ಹೊಂದಿದೆ. ಆದರೆ ಬಲಗೈಗಳಲ್ಲಿ ಮುಂದಿನದು ಸ್ಪಷ್ಟತೆಯಿಲ್ಲ. ಹಾಗೂ ಈ ಶಿಲ್ಪವು ಉದ್ದನೆಯ ವನಮಾಲೆಯನ್ನು ಧರಿಸಿರುವುದು.

ಹೀಗೆ ಮೇಲಿನ ವಿವರಣೆಯಲ್ಲಿ ಮೊದಲಿನ ಎರಡು ಶಿಲ್ಪಗಳು ಒಂದೇ ರೀತಿಯ ಲಕ್ಷಣಗಳನ್ನು ಹಾಗೂ ನಂತರದಲ್ಲಿ ವಿವರಿಸಿದ ಎರಡು ಶಿಲ್ಪಗಳು ಒಂದೇ ರೀತಿಯ ಲಕ್ಷಣಗಳನ್ನು ಹೊಂದಿವೆ ಎನ್ನಬಹುದು.

ಇನ್ನೊಂದು ಶಿಲ್ಪದ ಶಿರಭಾಗವು ಹಂಪಿಯ ರಾಜ್ಯ ಪ್ರಾಚ್ಯ ವಸ್ತುಸಂಗ್ರಹಾಲಯಗಳ ಮತ್ತು ಉಪನಿರ್ದೇಶಕರ ಕಚೇರಿ ಆವರಣದಲ್ಲಿ ಇಡಲಾಗಿದೆ. ಆದರೆ ಇದು ಪೂರ್ಣವಾದ ಶಿಲ್ಪವು ದೊರೆಯದೇ ಕೇವಲ ಶಿರಭಾಗವು ಮಾತ್ರವೇ ದೊರತಿದೆ. ಶಿರದ ಎಲ್ಲ ಲಕ್ಷಣಗಳನ್ನು ಗಮನಿಸಿದರೆ ಇದು ಹರ್ಯರ್ಧ ಶಿಲ್ಪದ ಲಕ್ಷಣಗಳನ್ನು ಹೊಂದಿದೆ. ಶಿರದ ಅರ್ಧಭಾಗ(ಬಲ) ಜಟಾಮುಕುಟ, ಎಡಭಾಗವು ಕಿರೀಟ ಮುಕುಟವನ್ನು ಧರಿಸಿರುವುದು. ಹಾಗೂ ಹಣೆಯಲ್ಲಿ ಶಿವನ ತ್ರಿನೇತ್ರದ ಅರ್ಧ ಭಾಗವನ್ನು ಕಾಣಬಹುದು. ಪೂರ್ಣಶಿಲ್ಪವು ದೊರೆಯದೆ ಇದುದರಿಂದ ದೇಹದ ಲಕ್ಷಣಗಳು ಕಂಡುಬರುವುದಿಲ್ಲ.

ಮೇಲಿನ ನಾಲ್ಕು ಶಿಲ್ಪಗಳೂ ಹರಿಹರ ಶಿಲ್ಪಗಳೆಂದು ಹಿಡಿದಿರುವ ಆಯುಧಗಳ ಮೂಲಕ ಗುರುತಿಸಬಹುದಾದರೂ ಇವುಗಳಾವುವು ಆಗಮಗಳು ಹೇಳುವ ಲಕ್ಷಣಗಳನ್ನು ಅನ್ವಯಿಸಿಲ್ಲ. ಈ ನಾಲ್ಕು ಶಿಲ್ಪಗಳನ್ನು ಸುರೇಶ ಕೆ.ಎಂ.ರವರು ತಮ್ಮ Vijayanagara Sculptures at Hampi[೧೪೭] ಎಂಬ ಗ್ರಂಥದಲ್ಲಿ ಉಲ್ಲೇಖಿಸಿರುವರು. ಆದರೂ ಹರಿಹರ ಶಿಲ್ಪಗಳ ಕುರಿತಂತೆ ಹಲವು ವಿಷಯಗಳನ್ನು ಚರ್ಚಿಸಬಹುದು. ಒಟ್ಟಾರೆ ಈ ಶಿಲ್ಪಗಳು ಧಾರ್ಮಿಕ ಕಲಹಗಳು ಅಥವಾ ಸಂಘರ್ಷಗಳನ್ನು ತಡೆಯುವ ಕಾರಣಕ್ಕಾಗಿಯೇ ರಚಿತಗೊಂಡಿವೆ ಎನ್ನಬಹುದು. ಕಡಲೆಕಾಳು ಗಣೇಶ ದೇವಾಲಯದ ಹಿಂಭಾಗದಲ್ಲಿ ಹರಿಹರನಿಗಾಗಿಯೇ ನಿರ್ಮಿಸಿದ ದೇವಾಲಯವಿದೆ.[೧೪೮] ಇಲ್ಲಿ ಮಂಟಪದ ಬಲಭಾಗದಲ್ಲಿನ ಕಂಬಗಳಲ್ಲಿ ಶೈವ ಸಂಬಂಧಿತ ಶಿಲ್ಪಗಳನ್ನು ಕೆತ್ತಿರುವರು. ಹಾಗೂ ಗರ್ಭಗೃಹದ ಬಾಗಿಲುವಾಡದಲ್ಲಿ ಕೆತ್ತಲಾಗಿರುವ ದ್ವಾರಪಾಲ ಶಿಲ್ಪಗಳು, ಬಲಕ್ಕೆ ಶೈವದ್ವಾರಪಾಲ ಹಾಗೂ ಎಡಕ್ಕೆ ವೈಷ್ಣವ ದ್ವಾರ ಪಾಲನನ್ನು ಕೆತ್ತಿರುವರು. ಹಾಗೆಯೇ ಪ್ರಸ್ತುತದಲ್ಲಿ ದೇವಾಲಯದ ಗರ್ಭಗೃಹದಲ್ಲಿ ಶಿವಲಿಂಗವಿದ್ದರೂ ಪ್ರಾಚೀನ ಪೀಠವೂ ದೇವಾಲಯದ ಹೊರಭಾಗದಲ್ಲಿ ಇಡಲಾಗಿದೆ. ಈ ಪೀಠದಲ್ಲಿ ಬಲಕ್ಕೆ ನಂದಿಯನ್ನು ಎಡಕ್ಕೆ ಗರುಡನನ್ನು ಕೆತ್ತಲಾಗಿದೆ. ಪೀಠದಲ್ಲಿ ಹರಿಹರ ಮೂರ್ತಿ ಇದ್ದಿರಬೇಕು. ಆದರೆ ಪ್ರಸ್ತುತದಲ್ಲಿಲ್ಲ. ಹೀಗೆ ಈ ಎಲ್ಲ ಲಕ್ಷಣಗಳಿಂದ ಇದು ಹರಿಹರ ದೇವಾಲಯ ಎಂಬುದು ಸ್ಪಷ್ಟವಾಗುತ್ತದೆ. ಹಾಗೆಯೇ ವಿರೂಪಾಕ್ಷ ದೇವಾಲಯದ ಭುವನೇಶ್ವರಿ ದೇವಾಲಯದ ಸಮೂಹದಲ್ಲಿ ಬರುವ ಗಂಧಮಾಧವ ದೇವಾಲಯ ಎಂದು ಕರೆಯಲ್ಪಡುವ ದೇವಾಲಯದಲ್ಲಿ ಒಂದೇ ಗರ್ಭಗೃಹದಲ್ಲಿ ಶಿವ ಮತ್ತು ವಿಷ್ಣುವನ್ನು ಪ್ರತ್ಯೇಕವಾಗಿಯೂ ಪ್ರತಿಷ್ಠಾಪಿಸಿರುವರು. ಶಿವನನ್ನು ಲಿಂಗ ರೂಪದಲ್ಲೂ ಮುಂದೆಯೇ ಹಾಗೂ ವಿಷ್ಣುವನ್ನು ಮೂರ್ತರೂಪದಲ್ಲಿ ಹಿಂದೆ ತೋರಿಸಲಾಗಿದೆ. ಒಂದೇ ಗರ್ಭಗೃಹದಲ್ಲಿರುವುದರಿಂದ ಇವರನ್ನು ಹರಿಹರರ ಕಲ್ಪನೆಯಂತೆಯೇ ತಿಳಿಯಬಹುದು. ಒಟ್ಟಾರೆ ವಿಜಯನಗರ ಸಾಮ್ರಾಜ್ಯದಲ್ಲಿ ಶೈವ ಮತ್ತು ವೈಷ್ಣವ ಧರ್ಮಗಳು ಅತ್ಯಂತ ಪ್ರಭಾವಿ ಹಾಗೂ ಪ್ರಬಲ ಧರ್ಮಗಳಾಗಿದ್ದವು. ಇವುಗಳ ಮಧ್ಯೆ ಆಗಾಗ ಸಂಘರ್ಷಗಳು ನಡೆದುದನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ. ಆದ್ದರಿಂದ ಇಂತಹ ಸಂಘರ್ಷಗಳಿಗೆ ಕಡಿವಾಣ ಹಾಕಲು ಹರಿಹರ ಮೂರ್ತಿಯ ಆರಾಧನೆಯು ಪ್ರಾರಂಭವಾಗಿರಬೇಕು ಎನ್ನಬಹುದು.



ಹರಿಹರಮೂರ್ತಿ, ಅಚ್ಯುತರಾಯ ದೇವಾಲಯ,
ಹಂಪಿ



ಹರಿಹರಮೂರ್ತಿಯ ಶಿರಭಾಗ,
ವಸ್ತುಸಂಗ್ರಹಾಲಯ, ರಾಜ್ಯಪುರಾತತ್ವ ಇಲಾಖೆ,
ಹಂಪಿ



ಹರಿಹರಮೂರ್ತಿ ನೈಸರ್ಗಿಕ ಬಂಡೆಯ ಮೇಲೆ,
ರಾಜಪ್ರಮುಖರ ವಸತಿನಿಲಯದ ಹತ್ತಿರ, ಹಂಪಿ


ಹರಿಹರಮೂರ್ತಿ ತ್ರಿಕೂಟ ದೇವಾಲಯ,
ತಿಮ್ಮಾಲಾಪುರ


ಹರಿಹರಮೂರ್ತಿ ಜಂಬುನಾಥ ದೇವಾಲಯ,
ಹೊಸಪೇಟೆ

**ಹರಿಹರಮೂರ್ತಿ**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ಅಚ್ಯುತರಾಯ | ನೂರುಕಂಬಗಳಿರುವ ಮಂಟಪದ ೮೦ನೇ ಕಂಬ | ೧ |
| ಹಂಪಿ | ರಾಜಪ್ರಮುಖರ ವಸತಿ ನೆಲೆಯ ಹತ್ತಿರ | ನೈಸರ್ಗಿಕ ಬಂಡೆಯ ಮೇಲೆ | ೧ |
| ಹಂಪಿ | ರಾಜ್ಯ ಪ್ರಾಚ್ಯ ವಸ್ತು ಸಂಗ್ರಹಾಲಯಗಳ ಮತ್ತು ಉಪನಿರ್ದೇಶಕರ ಕಚೇರಿ | ವಸ್ತು ಸಂಗ್ರಹಾಲಯದ ಹೊರ ಆವರಣ(ಶಿರಭಾಗ) | ೧ |
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ನವರಂಗದ ೧೦ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೨೭ನೇ ಕಂಬ | ೧ |
| ಒಟ್ಟು | | | ೫ |

## ಕಲ್ಯಾಣ ಸುಂದರಮೂರ್ತಿ ಅಥವಾ ವೈವಾಹಿಕಮೂರ್ತಿ

ಶಿವನು ಪಾರ್ವತಿಯನ್ನು ವರಿಸಿದ ಸಂದರ್ಭವನ್ನು ಕಲ್ಯಾಣ ಸುಂದರ ಮೂರ್ತಿ ಅಥವಾ ವೈವಾಹಿಕ ಮೂರ್ತಿ ಎಂದು ಕರೆಯಲಾಗಿದೆ.

ಪುರಾಣಗಳಲ್ಲಿ, ರಾಮಾಯಣ ಮತ್ತು ಕಾಳಿದಾಸನ ಕುಮಾರ ಸಂಬವದಲ್ಲಿ ಶಿವನು ಪಾರ್ವತಿಯನ್ನು ವರಿಸಿದ ಸಂದರ್ಭದ ವಿವರಣೆಯಿದೆ. ದಕ್ಷಬ್ರಹ್ಮನ ಮಗಳಾದ ದಾಕ್ಷಾಯಣಿಯು,

ದಕ್ಷಬ್ರಹ್ಮನು ಮಾಡಿದ ಅಪಮಾನದಿಂದ ಅವನು ಮಾಡಿದ ಯಜ್ಞದಲ್ಲೇ ಆಹುತಿಯಾದಳು. ನಂತರದಲ್ಲಿ ಈಕೆ ಹಿಮವಂತ ಹಾಗೂ ಮೀನಾಳ ಮಗಳಾಗಿ ಪಾರ್ವತಿ ಎಂಬ ಹೆಸರಿನಿಂದ ಜನ್ಮ ತಳೆದಳು. ಯುವತಿಯಾದ ಪಾರ್ವತಿಯು ಶಿವನನ್ನು ವರಿಸಲು ಹಿಮಾಲಯದ ಶಿವನ ಆಶ್ರಮದ ಪ್ರದೇಶದಲ್ಲಿ ತಪಸ್ಸನ್ನಾಚರಿಸಲು ಆರಂಭಿಸಿದಳು. ಶಿವನು ದಾಕ್ಷಾಯಣಿಯ ಮರಣದ ವಿರಹದಿಂದಾಗಿ ತಪಸ್ವಿಯಾಗಿದ್ದನು. ಇದೇ ಸಂದರ್ಭದಲ್ಲಿ ಬ್ರಹ್ಮನಿಂದ, ಶಿವನ ಮಗನಿಂದ ಮಾತ್ರವೇ ತನ್ನ ವಧೆ ಸಾಧ್ಯ ಎಂದು ವರವನ್ನು ಪಡೆದ ತಾರಾಕಾಸುರನು ಮೂರು ಲೋಕಗಳಿಗೆ ಕಂಟಕನಾಗಿದ್ದನು. ಅದರಿಂದ ದೇವತೆಗಳು ಸಹ ಶಿವನು ತಪಸ್ಸಿನಿಂದ ಎದ್ದು ಅವನ ಕಲ್ಯಾಣವಾಗಿ, ಆತನ ಸಂತಾನದಿಂದ ತಾರಾಕಾಸುರನ ವಧೆಗಾಗಿ ಕಾಯುತ್ತಿದ್ದರು. ಹೀಗಾಗಿ ಈ ಕಾರ್ಯಕ್ಕೆ ಕಾಮನನ್ನು ನೇಮಿಸಿದರು. ಕಾಮದೇವನು ತನ್ನ ಕುಸುಮ ಬಾಣವನ್ನು ಪ್ರಯೋಗಿಸಿದನು. ತಪಸ್ಸಿನಿಂದ ಎಚ್ಚೆತ್ತ ಶಿವನು ತನ್ನ ತಪಸ್ಸನ್ನು ಭಂಗಮಾಡಿದ ಕಾಮನನ್ನು ತನ್ನ ಮೂರನೇ ಕಣ್ಣಿನಿಂದ ಭಸ್ಮಮಾಡಿದನು. ಆದರೆ ಕಾಮನ ಪ್ರಯತ್ನವು ಸಫಲಗೊಂಡಿತ್ತು. ತಪಸ್ಸಿನಿಂದ ಎಚ್ಚೆತ್ತ ಶಿವ ಎದುರಿದ್ದ ಪಾರ್ವತಿಯನ್ನು ನೋಡಿ ಅವಳ ತಪಸ್ಸಿಗೆ ಮೆಚ್ಚಿ ಆಕೆಯನ್ನು ವರಿಸಲು ಒಪ್ಪಿಕೊಂಡನು. ಆಗ ಇವರ ಕಲ್ಯಾಣವು ಬ್ರಹ್ಮ, ವಿಷ್ಣು ಮುಂತಾದ ಎಲ್ಲ ದೇವಾನುದೇವತೆಗಳ ಸಮ್ಮುಖದಲ್ಲಿ ನಡೆಯಿತು.[೧೪೮]

ವರಾಹಪುರಾಣವು ಶಿವನು ಪಾರ್ವತಿಯ ಪ್ರೇಮ ಮತ್ತು ಸ್ಥಿರತೆಯನ್ನು ಪರೀಕ್ಷಿಸಿದ್ದನ್ನು ಹೀಗೆ ವಿವರಿಸುತ್ತದೆ. ವೃದ್ಧ ಬ್ರಾಹ್ಮಣ ವೇಷವನ್ನು ಧರಿಸಿ ಪೂಜೆಯಲ್ಲಿ ಮಗ್ನಳಾಗಿದ್ದ ಪಾರ್ವತಿಯ ಬಳಿಗೆ ಶಿವನು ಹೋದನು. ವೃದ್ಧನ ವೇಷದಲ್ಲಿದ್ದ ಶಿವನು ಹಸಿವಾಗುತ್ತಿದೆ ಎಂದು ಹೇಳಿದನು. ಪಾರ್ವತಿಯು ಆ ವೃದ್ಧನನ್ನು ಸ್ನಾನ ಸಂಧ್ಯಾದಿಗಳನ್ನು ಮುಗಿಸಿ ಊಟಕ್ಕೆ ಸಿದ್ಧವಾಗಿ ಬರಲು ಹೇಳಿದಳು. ಹತ್ತಿರವಿದ್ದ ನದಿಗೆ ವೃದ್ಧ ಸ್ನಾನಕ್ಕಾಗಿ ಹೋದನು. ಇದ್ದಕ್ಕಿದ್ದಂತೆಯೇ ಮೊಸಳೆಯ ಬಾಯಿಗೆ ಸಿಕ್ಕಿಕೊಂಡಿರುವುದಾಗಿ ವೃದ್ಧ ಕೂಗತೊಡಗಿದ. ಪಾರ್ವತಿಯು ಶಿವನ ಹೊರತುಪಡಿಸಿ ಬೇರೆಯವರನ್ನು ಸ್ಪರ್ಶಿಸುವುದಿಲ್ಲವೆಂದು ಆಕೆ ಶಪಥ ಮಾಡಿದ್ದಳು. ಆದರೆ ಬ್ರಾಹ್ಮಣ ಅಭ್ಯಾಗತದಲ್ಲಿ ಕ್ಷಣಕ್ಷಣಕ್ಕೂ ಮೊಸಳೆಯಿಂದ ತೀವ್ರವಾದ ಪ್ರಾಣಭಯ ದ್ವಿಗುಣಗೊಳ್ಳುತ್ತಿತ್ತು. ಕೊನೆಗೂ ಬ್ರಾಹ್ಮಣನನ್ನು ಕೈ ಹಿಡಿದು ಹೊರಗೆ ಎಳೆದಳು. ಪಾರ್ವತಿಯ ಅನುಕಂಪ ಕರುಣೆಗಳನ್ನು ಮೆಚ್ಚಿದ ಶಿವನು ತನ್ನ ನಿಜರೂಪವನ್ನು ತೋರಿಸಿದ. ನಂತರ ಇವರಿಬ್ಬರ ಕಲ್ಯಾಣೋತ್ಸವ ನಡೆಯಿತು. ಈ ಮದುವೆಯ ವಿವರಗಳು ಅದರಲ್ಲಿ ಭಾಗವಹಿಸಿದ್ದವರ ಹೆಸರುಗಳು ಆಗಮಗಳಲ್ಲಿ, ಪುರಾಣಗಳಲ್ಲಿ ದೊರೆಯುತ್ತದೆ.[೧೪೯]

ವಿಷ್ಣು ಮತ್ತು ಲಕ್ಷ್ಮೀ ಕನ್ಯಾದಾನ ಮಾಡುವವರಾಗಿ ನಿಂತಿರಬೇಕು. ಕೆಲವೊಂದು ಪಠ್ಯಗಳು ಪಾರ್ವತಿಯ ತಂದೆ ತಾಯಿಯರಾದ ಹಿಮವಾನ್ ಮತ್ತು ಮೇನಕೆಯನ್ನು ಕನ್ಯಾದಾನ ಮಾಡುವವರಾಗಿ ತೋರಿಸಬೇಕು ಎಂದು ಹೇಳುತ್ತವೆ. ಶಿವ ಮತ್ತು ಪಾರ್ವತಿಯು ಪ್ರಧಾನರಾಗಿರುತ್ತಾರೆ. ಈ ಶಿಲ್ಪವನ್ನು ನಿರೂಪಣಾತ್ಮಕ ರೂಪದಲ್ಲಿ ಕಂಡರಿಸಿದ್ದಲ್ಲಿ ಈ ಉತ್ಸವದಲ್ಲಿ ಅನೇಕ ಜನರು ಇರುವಂತೆ ತೋರಿಸಬೇಕು. ಕಲ್ಯಾಣ ಸುಂದರ ಮೂರ್ತಿಯು ದಿಕ್ಪಾಲಕರಿಂದ, ದೇವತೆಗಳಿಂದ, ಶಕ್ತಿಗಳಿಂದ, ಉಪದೇವತೆಗಳಾದ ಸಿದ್ಧರು, ಯಕ್ಷರು ನಾಗ ಮತ್ತು ಕಿನ್ನರರು, ನಾರದರು, ಸಪ್ತಮಾತೃಕೆಗಳಿಂದ ಸುತ್ತುವರಿದಿರಬೇಕು. ಇವರೆಲ್ಲರ ಮುಖದಲ್ಲಿ ಸಂತೋಷ ಹಾಗೂ ಅಂಜಲಿ ಮುದ್ರೆಯಲ್ಲಿ ನಿಂತಿರಬೇಕೆಂದಿದೆ.

ಅಲ್ಲದೆ ಈ ಶಿಲ್ಪಗಳು ಶಿಲಾ ಕಂಬಗಳಲ್ಲೂ, ಕಿರಿದಾದ ಪಟ್ಟಿಕೆಗಳಲ್ಲಿ, ಕಂಚಿನ ಶಿಲ್ಪಗಳಲ್ಲಿ ನಿರ್ಮಿಸಬಹುದು. ಶಿವ-ಪಾರ್ವತಿಯ ಸನಿಹದಲ್ಲಿ ವಿಷ್ಣುವು ಲಕ್ಷ್ಮೀ ಮತ್ತು ಭೂದೇವಿಯರನ್ನು ತೋರಿಸಬೇಕು. ಬ್ರಹ್ಮನು ಪುರೋಹಿತನಾಗಿ ಕಂಡುಬರುವನು. ಕೆಲವೊಮ್ಮೆ ಮೂರು ಶಿಲ್ಪಗಳನ್ನು ಗುಂಪಿನಲ್ಲಿ ತೋರಿಸಿದ್ದಲ್ಲಿ ಪಾರ್ವತಿಯನ್ನು ಮಧ್ಯಭಾಗದಲ್ಲಿ, ಇವಳ ಬಲಪಕ್ಕದಲ್ಲಿ ವಿಷ್ಣುವನ್ನು ಎಡಪಕ್ಕದಲ್ಲಿ ಶಿವನನ್ನು ತೋರಿಸಲಾಗುತ್ತದೆ.

ಈ ಶಿಲ್ಪದ ಕುರಿತಂತೆ ಸಕಲಾಧಿಕಾರ (೧೨ನೇ ಅಧ್ಯಾಯ), ಉತ್ತರಕಾಮಿಕಾಗಮ (ಅಧ್ಯಾಯ ೫೮), ಪೂರ್ವ-ಕಾರಣ (ಅಧ್ಯಾಯ ೧೧) ಮತ್ತು ಶಿಲ್ಪರತ್ನದಲ್ಲಿ ವಿವರಿಸಲಾಗಿದೆ. ಇವುಗಳು ಹೇಳುವಂತೆ ಶಿವನ ಶಿಲ್ಪವು ಸುಂದರವಾಗಿರಬೇಕು. ಪ್ರಥಮ ಯವ್ವನ ತುಂಬಿದ ಶೃಂಗಾರ ವದನವುಳ್ಳವನಾಗಿರಬೇಕು. ಸಕಲ ಆಭರಣಗಳಿಂದ ಮಂಗಳಕರನಾಗಿರಬೇಕು. ಈತನ ದೇಹವು ಹವಳದ ಕಾಂತಿಯಿಂದ ಕೂಡಿರಬೇಕು. ಈತನ ಎಡಗಾಲು ಸುಸ್ತಿತವಾಗಿದ್ದು, ಬಲಗಾಲು ಕುಂಚಿತವಾಗಿರಬೇಕು. ಒಂದು ಪಠ್ಯವೂ (ಸಕಲಾಧಿಕಾರಾ) ತ್ರಿಭಂಗದಲ್ಲಿರಬೇಕೆಂದು ಹೇಳುತ್ತದೆ. ಚತುರ್ಭುಜಗಳನ್ನು ಹೊಂದಿದ್ದು ಬಲ ಹಿಂದಿನ ಕೈಯಲ್ಲಿ ಪರಶು, ಎಡ ಹಿಂದಿನ ಕೈಯಲ್ಲಿ ಕೃಷ್ಣಮೃಗವನ್ನು ಹಿಡಿದಿರಬೇಕು. ಮುಂದಿನ ಬಲಗೈಯು ಪಾರ್ವತಿಯ ಬಲಗೈಯನ್ನು ಹಿಡಿದಿರಬೇಕು. ಎಡಗೈಯು ವರದ ಮುದ್ರೆಯಲ್ಲಿರಬೇಕು. ಶಿರದಲ್ಲಿ ಬಾಲಚಂದ್ರ ಹೊಂದಿರುವ ಜಟಾಮುಕುಟವನ್ನು ಹೊಂದಿರಬೇಕು. ತ್ರಿನೇತ್ರಗಳು, ಹಾರ, ಕೇಯೂರ, ಕಟಕಗಳನ್ನು ಧರಿಸಿರಬೇಕು. ಪೂರ್ವಕಾರಣಾಗಮವು ಮೂರು ಸರ್ಪಗಳು ವಾಸುಕಿ, ತಕ್ಷಕ, ಪುಷ್ಕರಗಳನ್ನು ಮೂರು ಆಭರಣಗಳನ್ನಾಗಿ ಹೊಂದಿರಬೇಕೆಂದು ಹೇಳುತ್ತವೆ. ಕುಂಡಲಗಳು, ವಕ್ಷಬಂಧ, ಕೊರಳ ಹಾರಗಳನ್ನು ಧರಿಸಿರಬೇಕು. ಈತನ ದೇಹದ ಕೆಳಭಾಗವು ರೇಷ್ಮೆ ವಸ್ತ್ರಗಳಿಂದ ಕೂಡಿರಬೇಕು.

ವಧುವಿನ ರೂಪದಲ್ಲಿರುವ ಪಾರ್ವತಿಯು ಶ್ಯಾಮಲ ವರ್ಣದವಳಾಗಿರಬೇಕು. ಸರ್ವಾಭರಣ ಭೂಷಿತಳಾಗಿರಬೇಕು. ಅಲಂಕೃತವಾದ ರೇಷ್ಮೆ ವಸ್ತ್ರವನ್ನು ಧರಿಸಿರಬೇಕು. ದ್ವಿಭುಜಳಾಗಿದ್ದು, ಬಲಗೈಯು ಶಿವನ ಬಲ ಕೈಯಲ್ಲಿರುತ್ತದೆ. ಎಡಗೈಯು ಉತ್ಫಲವನ್ನು ಹಿಡಿದಿರಬೇಕು. ಸಂಕೋಚ ಭಾವದಿಂದ ಶಿರವೂ ಸ್ವಲ್ಪ ಬಾಗಿರಬೇಕು. ಪಾರ್ವತಿಯು ಲಕ್ಷ್ಮೀ ಮತ್ತು ಭೂದೇವಿಯರೊಡಗೂಡಿರಬೇಕು. ಇಬ್ಬರೂ ಸರ್ವಾಭರಣಗಳಿಂದ ಅಲಂಕೃತರಾಗಿ ಅವರ ಕೈಗಳು ಪಾರ್ವತಿಯ ಕಟಿಯನ್ನು ಸ್ಪರ್ಶಿಸಿರುವಂತಿರಬೇಕು. ವಿಶೇಷವಾಗಿ ಲಕ್ಷ್ಮೀಯು ಈ ಸಮಾರಂಭದಲ್ಲಿ ಮಂಗಳಕರ ಉಡುಪನ್ನು ಧರಿಸಿರಬೇಕು. ಅವಳ ಬಾಹುಗಳು ಆನೆಯ ಸೊಂಡಿಲಿನಂತೆ ಆಕರ್ಷಕವಾಗಿರಬೇಕು. ಮತ್ತು ಕಟಕ, ಕೇಯೂರಗಳಿಂದ ಅಲಂಕೃತವಾಗಿರಬೇಕು. ವಿಷ್ಣುವು ಈ ಕಲ್ಯಾಣೋತ್ಸವದಲ್ಲಿ ಕನ್ಯಾದಾತನಾಗಿ ಕಾಣಬೇಕು. ಕಿರೀಟಮುಕುಟ, ಮಕರಕುಂಡಲಗಳು ಎದೆಯಲ್ಲಿ ಶ್ರೀವತ್ಸ ಮತ್ತು ಹಿಂದಿನ ಎರಡು ಕೈಗಳಲ್ಲಿ ಶಂಖ, ಚಕ್ರಗಳನ್ನು ಹಿಡಿದಿರಬೇಕು. ಮುಂದಿನ ಎರಡು ಕೈಗಳಲ್ಲಿ ಸುವರ್ಣ ಕಲಶವನ್ನು

ಹಿಡಿದು ಪಾಣಿಗ್ರಹಣಕ್ಕಾಗಿ ನಿಂತಂತಿರಬೇಕು. ಕಪ್ಪು ಕಾಂತೀಯವನಾಗಿ ಪಾರ್ವತಿಯ ಪಕ್ಕದಲ್ಲಿ ಮತ್ತು ಹೋಮಕುಂಡದ ಉತ್ತರ ದಿಕ್ಕಿನಲ್ಲಿ ನಿಂತು ದಕ್ಷಿಣಕ್ಕೆ ಮುಖ ಮಾಡಿರಬೇಕು. ಅಂಶುಮದ್ಭೇದಾಗಮವು ವಿಷ್ಣುವು ಸಮಭಂಗದಲ್ಲಿ ಸ್ಥಾನಿಕನಾಗಿರಬೇಕು ಎಂದು ಹೇಳಿದರೆ ಸಕಲಾಧಿಕಾರವು ತ್ರಿಭಂಗದಲ್ಲಿ ಸ್ಥಾನಿಕನಾಗಿರಬೇಕು ಎಂದು ಹೇಳುತ್ತದೆ.

ಬ್ರಹ್ಮನು ಹೋಮಕುಂಡದ ಬಳಿ ಕುಳಿತಿರುವನು. ಚತುರ್ಭುಜನಾದ ಬ್ರಹ್ಮನು ಮೇಲಿನ ಎರಡು ಕೈಗಳಲ್ಲಿ ಕಮಂಡಲು ಮತ್ತು ಅಕ್ಷಮಾಲೆಯನ್ನು ಹಿಡಿದಿರಬೇಕು. ಮುಂದಿನ ಎರಡು ಕೈಗಳಲ್ಲಿ ಸೃಕ್, ಸೃವಗಳನ್ನು ಹಿಡಿದಿರಬೇಕು. ಅಥವಾ ಕೆಲವು ಪಠ್ಯಗಳು ತಿಳಿಸುವಂತೆ ಬಲಹಸ್ತವು ಸೃಕ್‌ನ್ನು ಹಿಡಿದಿದ್ದು ಎಡಹಸ್ತವು ಪತಾಕ ಹಸ್ತದಲ್ಲಿರಬಹುದು (ಪೂರ್ವ ಕಾಮಿಕ), ಅಥವಾ ಎರಡು ಹಸ್ತಗಳು ವರದಾಭಯ ಮುದ್ರೆಯಲ್ಲಿರಬಹುದು (ಉತ್ತರ ಕಾಮಿಕ), ಈತನ ದೇಹವು ಕೆಂಪುವರ್ಣ ವಾಗಿರಬೇಕು. ಹಾಗೂ ಉಪವೀತ, ಹುಲ್ಲಿನಿಂದ ಮಾಡಿದ ಉದರ ಬಂದವನ್ನು ಮತ್ತು ಉತ್ತರಿಯವನ್ನು ಧರಿಸಿದ್ದು, ಜಟಾಮುಕುಟದಿಂದ ಶೋಭಿತನಾಗಿರಬೇಕು. ಅಲ್ಲದೆ ಹೋಮಕುಂಡದ ಮುಂದೆ ಉತ್ತರಾಭಿಮುಖವಾಗಿ, ಪದ್ಮಪೀಠದಲ್ಲಿ ಆಸೀನನಾಗಿರಬೇಕು. ಹೋಮ ಕುಂಡವು ಮೂರು ಮೇಖಲಗಳಿಂದ ಹಾಗೂ ಐದು ಜಾಲ್ವೆಗಳಿಂದ ಕೂಡಿರಬೇಕು.

ಶಿಲ್ಪಗಳ ಅಳತೆಗಳನ್ನು ಹೇಳಲಾಗಿದೆ. ಶಿವನ ಕಣ್ಣು, ಗಲ್ಲ, ಎದೆ ಒಂದೇ ಅಳತೆಯಲ್ಲಿರಬೇಕು. ಪಾರ್ವತಿಯ ಎತ್ತರವು ಶಿವನ ಕಣ್ಣು, ಗಲ್ಲ ಎದೆಯ ಎತ್ತರದಷ್ಟು ಇರಬೇಕು. ಇದೇ ರೀತಿಯಾಗಿ ವಿಷ್ಣುವಿನ ಎತ್ತರವು ಶಿವನ ೩/೪ ಅಥವಾ ೨/೩ ಎತ್ತರದಷ್ಟು ಇರಬೇಕು. ವಿಷ್ಣುವಿನ ಎತ್ತರವು ಶಿವನ ನಾಸದವರೆಗೆ ತಲುಪಿದರೆ ಉತ್ತಮ ಎಂತಲೂ ಎದೆಯವರೆಗೆ ತಲುಪಿದರೆ ಅಧಮ ಎಂತಲೂ ಅಥವಾ ಭುಜದವರೆಗೆ ತಲುಪಿದರೆ ಮಧ್ಯಮ ಎಂತಲೂ ಹೇಳಲಾಗುತ್ತದೆ. ಬ್ರಹ್ಮನ ಎತ್ತರವು ವಿಷ್ಣುವಿಗಿಂತಲೂ ಕಡಿಮೆ ಇರುತ್ತದೆ. ವಿಷ್ಣುವಿನ ಎತ್ತರಕ್ಕಿಂತಲೂ ೧/೬ ಅಥವಾ ೧/೭ ಅಥವಾ ೧/೮ ರಷ್ಟು ಕಡಿಮೆ ಇರುತ್ತದೆ. ಒಂದೇ ವೇಳೆ ಬ್ರಹ್ಮನು ಸ್ಥಾನಿಕನಾಗಿದ್ದರೆ. ಶಿವನ ಎದೆಯವರೆಗಿನ ಎತ್ತರವನ್ನು ಹೊಂದಿರಬೇಕು. ಲಕ್ಷ್ಮೀಯ ಎತ್ತರವು ವಿಷ್ಣುವಿನ ಗಲ್ಲದವರೆಗಿನ ಅಥವಾ ಭುಜದವರೆಗಿನ ಎತ್ತರವನ್ನು ಹೊಂದಿರಬೇಕು. ಹೋಮಕುಂಡದಲ್ಲಿ ಜ್ವಾಲೆಯ ಎತ್ತರವು ಬ್ರಹ್ಮನ ಎತ್ತರದ ೧/೪ ರಷ್ಟು ಇರಬೇಕು. ಸಕಲಾಧಿಕಾರವು ಈ ಮೂರ್ತಿ ಸ್ವರೂಪವನ್ನು ಸರ್ವ ಶಾಂತಿಕರ ಎಂದು ಕರೆದರೆ, ಶಿಲ್ಪರತ್ನವೂ ಸರ್ವಮಂಗಳಕರ ಎಂದು ಕರೆದಿದೆ.[೧೫೦]

ಹಂಪಿ ಪರಿಸರದಲ್ಲಿ ಉಬ್ಬುಶಿಲ್ಪಗಳಲ್ಲಿ ಕೇವಲ ಒಂದು ಕಲ್ಯಾಣ ಸುಂದರ ಮೂರ್ತಿ ಶಿಲ್ಪವು ಕಂಡುಬರುತ್ತದೆ. ಅದು ವಿರೂಪಾಕ್ಷ ದೇವಾಲಯದ ಮಹಾರಂಗಮಂಟಪದ ಪ್ರಸ್ತರ ಭಾಗದಲ್ಲಿರುವ ಗಾರೆಯ ದೇವಕೋಷ್ಠದಲ್ಲಿ ಕಂಡುಬರುತ್ತದೆ. ಈ ಶಿಲ್ಪದಲ್ಲಿ ಶಿವ ಮತ್ತು ಪಾರ್ವತಿಯರನ್ನು ಮಾತ್ರ ಕೆತ್ತಲಾಗಿದೆ. ಶಿವನು ತ್ರಿಭಂಗದಲ್ಲಿ ಸ್ಥಾನಿಕನಾಗಿದು, ಚತುರ್ಭುಜಗಳನ್ನು ಹೊಂದಿರುವನು. ಮುಂದಿನ ಬಲಹಸ್ತವು ಮುಂದೆ ಚಾಚಿದ್ದು, ಪಾರ್ವತಿಯ ಬಲಹಸ್ತವನ್ನು ಹಿಡಿದಿರುವನು ಎಂಬಂತೆ ತೋರುತ್ತದೆ. ಪ್ರಸ್ತುತ ಈ ಹಸ್ತವು ಅಲ್ಪಮಟ್ಟಿಗೆ ಭಗ್ನಗೊಂಡಿರುವುದರಿಂದ ಮುಂದೆ ಚಾಚಿರುವುದು ಮಾತ್ರ

ಕಂಡುಬರುತ್ತದೆ. ಮುಂದಿನ ಎಡಹಸ್ತವು ಕಟ್ಯವಲಂಬಿತ ಹಸ್ತದಲ್ಲಿದೆ. ಹಿಂದಿನ ಬಲಗೈಯಲ್ಲಿ ಡಮರು, ಹಿಂದಿನ ಎಡಹಸ್ತದಲ್ಲಿರುವ ವಸ್ತುವು ಭಗ್ನಗೊಂಡಿದೆ. ಜಡೆಗಳನ್ನು ಕಿರೀಟ ಮುಕುಟದಂತೆ ಅಲಂಕರಿಸಿರುವುದು. ಕರ್ಣಕುಂಡಲಗಳು ಕೊರಳಹಾರಗಳು, ಯಜ್ಞೋಪವೀತ, ವಕ್ಷಬಂಧ, ಕೆಯೂರ, ಕಂಕಣಗಳು ಹಾಗೂ ಮೊಣಕಾಲ ಕೆಳಗಿನವರೆಗಿನ ವಸ್ತ್ರವನ್ನು ಧರಿಸಿರುವನು. ಒಟ್ಟಾರೆ ಸಕಲ ಆಭರಣಗಳಿಂದ ಶೋಭಿತನಾಗಿರುವನು. ಶಿವನ ತಲೆಯ ಹಿಂಭಾಗದಲ್ಲಿ ಶಿರಚಕ್ರವನ್ನು ಕಾಣಬಹುದು.

ಶಿವನ ಬಲಪಕ್ಕದಲ್ಲಿ ಪಾರ್ವತಿ ಶಿಲ್ಪವಿದೆ. ಪಾರ್ವತಿಯ ಬಲಗಾಲು ಸ್ಥಿರವಾಗಿದ್ದು, ಎಡಪಾದವು ಕುಂಚಿತವಾಗಿದ್ದಂತೆ ತೋರುತ್ತದೆ. ಕಟಿಯಿಂದ ಪಾದದವರೆಗಿನ ವಸ್ತ್ರವನ್ನು ಧರಿಸಿರುವಳು. ಹಾಗೂ ದ್ವಿಭುಜಳಾಗಿದ್ದು, ಬಲಗೈಯು ಶಿವನ ಬಲಗೈಯೆಡೆಗೆ ಚಾಚಿದ್ದು ಭಗ್ನಗೊಂಡಿದೆ. ಎಡಹಸ್ತವು ಭಗ್ನಗೊಂಡಿರುವುದು. ಕರಂಡ ಮುಕುಟ, ಕರ್ಣಕುಂಡಲಗಳು, ಕೊರಳಹಾರ, ಕುಚಬಂಧವನ್ನು ಧರಿಸಿರುವಳು. ಕೀರ್ತಿಮುಖದ ಅಲಂಕರಣೆಯಿಂದ ಕೂಡಿದ ಕೋಷ್ಠದ ಎಡ-ಬಲಗಳಲ್ಲಿ ಎರಡು ದೇವಶಿಲ್ಪಗಳಿದ್ದಂತೆ ಕಂಡುಬರುತ್ತದೆ. ಭಾಗಶ ಭಗ್ನಗೊಂಡಿರುವುದರಿಂದ ಗುರುತಿಸುವುದು ಕಷ್ಟ. ಬಹುಶಃ ಇವರು ಬ್ರಹ್ಮ ಮತ್ತು ವಿಷ್ಣು ಶಿಲ್ಪಗಳಾಗಿರಬಹುದೆಂದು ಊಹಿಸಬಹುದು. ಒಟ್ಟಾರೆ ಹಂಪಿ ಪರಿಸರದಲ್ಲಿ ಉಬ್ಬು ಶಿಲ್ಪಗಳಲ್ಲಿ ದೊರೆತ ಏಕ ಮಾತ್ರ ಕಲ್ಯಾಣ ಸುಂದರಮೂರ್ತಿ ಇದಾಗಿದೆ. ಇದರ ಲಕ್ಷಣಗಳಿಂದ ಇದು ಯಾವುದೇ ಆಗಮಗಳ ಅನ್ವಯ ರಚಿತಗೊಂಡಿರದೆ ಶಿಲ್ಪಿಯ ಸ್ವಂತಿಕೆಯನ್ನು ಶಿಲ್ಪದಲ್ಲಿ ಕಾಣಬಹುದು.



ಕಲ್ಯಾಣಸುಂದರಮೂರ್ತಿ, ವಿರೂಪಾಕ್ಷ ದೇವಾಲಯ, ಹಂಪಿ

**ಕಲ್ಯಾಣ ಸುಂದರಮೂರ್ತಿ**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ಮಹಾರಂಗಮಂಟಪದ ಪ್ರಸ್ತಾರ ಭಾಗದಲ್ಲಿರುವ ಗಾರೆಯ ದೇವಕೋಷ್ಠ | ೧ |
| | | ಒಟ್ಟು | ೧ |

## ವೃಷವಾಹನ ಅಥವಾ ವೃಷಭಾರೂಢ ಮೂರ್ತಿ

ಶಿವನು ವೃಷಭದ ಮೇಲೆ ಕುಳಿತಿರುವ ಅಥವಾ ವೃಷಭದೊಂದಿಗೆ ಸ್ಥಾನಿಕನಾಗಿರುವ ರೂಪವನ್ನು ಶಿವನ ವೃಷವಾಹನ ಅಥವಾ ವೃಷಭಾರೂಢ ಮೂರ್ತಿ ಎನ್ನುವರು. ಶೈವರಿಗೆ ಈ ಮೂರ್ತಿಯು ಹೆಚ್ಚು ಪ್ರಿಯವಾದುದು. ಶಿವಾಲಯಗಳಲ್ಲಿ ಹತ್ತು ದಿನಗಳ ಕಾಲ ನಡೆಯುವ ವಿಶಿಷ್ಟ ಪೂಜೆ, ಉತ್ಸವಗಳಲ್ಲಿ ಕಡ್ಡಾಯವಾಗಿ ವೃಷಭ ವಾಹನೋತ್ಸವವು ಇದ್ದೇ ಇರುತ್ತದೆ. ಶಿವನ ಈ ವಿಗ್ರಹವನ್ನು ಉತ್ಸವದ ಸಂದರ್ಭದಲ್ಲಿ ಊರಿನ ಎಲ್ಲಾ ಬೀದಿಗಳಲ್ಲೂ ಮೆರವಣಿಗೆಯಲ್ಲಿ ಕೊಂಡೊಯ್ಯುತ್ತಾರೆ.

ಈ ಮೂರ್ತಿಯನ್ನು ಎಲ್ಲ ಆಗಮಗಳಲ್ಲೂ, ಶಿಲ್ಪಶಾಸ್ತ್ರಗಳಲ್ಲೂ ವಿವರವಾಗಿ ವಿವರಿಸಲಾಗಿದೆ. ವೃಷಭವಾಹನಮೂರ್ತಿಯ ಬಲಪಾದವು ಸ್ಥಿರವಾಗಿದ್ದು ಎಡಪಾದವು ಕುಂಚಿತವಾಗಿರುತ್ತದೆ. ಬಲಭಾಗದ ಬಾಹುವು ಸ್ವಲ್ಪವಾಗಿ ಬಗ್ಗಿದ್ದು, ಮೊಣಕೈ ವೃಷಭನ ಶಿರದ ಮೇಲೆ ಇರುತ್ತದೆ. ಈ ಹಸ್ತವು ಪೂರ್ಣವಾಗಿ ತೆರೆದುಕೊಂಡಿದ್ದು ಜೋತಾಡುತ್ತಿರುವಂತೆ ಕಾಣಬೇಕು. ಈ ಹಸ್ತದ ಮಧ್ಯದ ಬೆರಳು ದೇವನ ನಾಭಿಯ ಸಮಕ್ಕೆ ಇರಬೇಕು. ಎಡಹಸ್ತದಲ್ಲಿ ವಕ್ರದಂಡಾಯುಧ ಇರಬೇಕು. ಈ ದಂಡಾಯುಧವು ದೇವನ ಕಿರುಬೆರಳಿನಷ್ಟು ದಪ್ಪ ಇರಬೇಕು. ಈ ದಂಡದ ಮೇಲಿನ ಕೊನೆಯಲ್ಲಿ ಮೂರು ವಕ್ರಗಳಿರಬೇಕು. ಈ ದಂಡದ ಉದ್ದವು ದೇವನ ಹಿಕ್ಕಸೂತ್ರದಿಂದ ಜಾನುವಿನ (ಮೊಣಕಾಲಿನ) ತನಕ ಇರುವ ಎತ್ತರದಷ್ಟು ಇರಬೇಕು. ಮೇಲಿನ ಬಲಹಸ್ತದಲ್ಲಿ ಟಂಕ ಅಥವಾ ಪರಶು, ಎಡಹಸ್ತದಲ್ಲಿ ಮೃಗ ಇರಬೇಕು. ತಲೆಯನ್ನು ಜಟಾ ಮುಕುಟದಿಂದಲೋ, ತೂಗಾಡುವ ಜಟಾ ಭಾರದಿಂದಲೋ ಅಥವಾ ಜಟಾಬಂಧದಿಂದಲೋ ಅಲಂಕರಿಸಬೇಕು. ಶಿವನನ್ನು ಎಲ್ಲಾ ಆಭರಣಗಳಿಂದಲೂ ಅಲಂಕರಿಸಬೇಕು. ಶಿವನ ಹಾಗೂ ಅವನ ವಸ್ತ್ರವು ಕೆಂಪು ವರ್ಣದ್ದಾಗಿರುತ್ತದೆ.

ದೇವನ ಎಡಪಾರ್ಶ್ವದಲ್ಲಿ ದೇವಿಯು ನಿಂತಿರಬೇಕು. ದೇವಿಯ ಬಲಗಾಲು ಭದ್ರವಾಗಿ ಸ್ಥಿರವಾಗಿದ್ದು, ಎಡಗಾಲು ಕುಂಚಿತವಾಗಿರಬೇಕು. ಬಲಹಸ್ತದಲ್ಲಿ ಉತ್ಪಲವನ್ನು ಹಿಡಿದು ಎಡಹಸ್ತವನ್ನು ನೀಳವಾಗಿ ಚಾಚಿರಬೇಕು. ದೇವಿಯು ಶಿವನ ಬಲಕ್ಕೆ ಕೂಡ ಇರಬಹುದು. ಆಗ ಪೂರ್ವೋಕ್ತ ಅಂಗಾಂಗಗಳ ತಿರುವುಗಳು, ವಕ್ರತೆಗಳು ಸೂಕ್ತವಾಗಿ ಹೊಂದಿಸಬೇಕಾಗಿರುತ್ತದೆ. ದೇವಿಯನ್ನು ಮಧ್ಯಮ ದಶತಾಲ ಸ್ತ್ರೀಮಾನದ ಪ್ರಕಾರವೇ ನಿರ್ಮಿಸಿರಬೇಕು. ವೃಷಭವು ಶಿವನ ಹಿಂದೆ ನಿಂತಿರಬೇಕು. ಅದರ ಎತ್ತರವು ಶಿವನ ವಕ್ಷಗಳಷ್ಟು ಇರಬಹುದು. ಅಥವಾ ಮೇಢ್ರ ಮೂಲದಷ್ಟು ಇರಬಹುದು. ವೃಷಭವು ಮಲಗಿದ್ದರೆ ಮುಂಗಾಲಿನಷ್ಟು ಅಥವಾ ತೊಡೆಯಷ್ಟು ಎತ್ತರ ಇರಬಹುದು.[೧೫೧]

ಶಿಲ್ಪರತ್ನ,[೧೫೨] ಉತ್ತರಕಾಮಿಕ,[೧೫೩] ಶ್ರೀಕಾಶ್ಯಪ[೧೫೪] ಶಿಲ್ಪಶಾಸ್ತ್ರಗಳೂ ಮೇಲಿನ ಲಕ್ಷಣಗಳನ್ನೇ ಹೇಳುತ್ತವೆ. ಕಾಶ್ಯಪಶಿಲ್ಪ ಶಾಸ್ತ್ರವು ದೇವಿ ಶಿಲ್ಪದ ವಿವರಣೆಯ ಸಂದರ್ಭದಲ್ಲಿ ದೇವಿಯ ಬಲಪಾದವು ಸ್ವಸ್ತಿಕವಾಗಿಯೂ ಇರಬೇಕು ಎಂದು ಹೇಳುತ್ತದೆ. ಈ ವ್ಯತ್ಯಾಸವನ್ನು ಹೊರತುಪಡಿಸಿ ಇದು ಸಹ ಮೇಲಿನ ಲಕ್ಷಣಗಳನ್ನು ಹೇಳುತ್ತದೆ. ಕಾರಣಾಗಮ[೧೫೫] ಇದೇ ಲಕ್ಷಣಗಳನ್ನು ಹೇಳುತ್ತಿದ್ದು, ಶಿವ

ಮತ್ತು ಉಮೆಯರೊಡನೆ ಸ್ಕಂದನು ಇರಬೇಕು ಎಂದು ಹೇಳುತ್ತದೆ. ಉತ್ತರ ಕಾರಣಾಗಮವು[೧೫೬] ಮೇಲಿನ ವಿವರಣೆಗಿಂತ ಸ್ವಲ್ಪ ಭಿನ್ನವಾದ ವಿವರಣೆಯನ್ನು ನೀಡುತ್ತದೆ. ಮಹಾಸೇನ (ಸ್ಕಂದ) ನೊಡನೆ ನಂದಿಯ ಮೇಲೇರಿದ ವೃಷಾರೂಢ ಮೂರ್ತಿಯು ಜೀವಿಗಳಿಗೆ ಈಶ್ವರನ ಇಚ್ಛೆಯಿಂದ ಮುಕ್ತಿಯನ್ನು ಕರುಣಿಸುವುದು, ಇಲ್ಲಿ ಶಿವನು ಚತುರ್ಭುಜಗಳನ್ನು ಹೊಂದಿದ್ದು, ಟಂಕ, ಕೃಷ್ಣಮೃಗಗಳನ್ನು ಹಿಡಿದಿರುವನು. ಹಾಗೂ ಜಟಾಮುಕುಟದಿಂದ ಶೋಭಿತನಾಗಿರಬೇಕು. ಪದ್ಮಪೀಠದಲ್ಲಿ ಬಲಪಾದವನ್ನು ಇರಿಸಿದ್ದು, ಎಡಪಾದವನ್ನು ಸ್ವಲ್ಪ ಭಾಗಿಸಿರಬೇಕು. ಪಾದದ ಬೆರಳುಗಳು ಭೂಮಿ ಮೇಲೆ ಸ್ವಸ್ತಿಕ ಆಕೃತಿಯಲ್ಲಿ ಹರಡಿರುವಂತಿರಬೇಕು. ಹಿಂಭಾಗದಲ್ಲಿ ಬೆನ್ನಿಗೆ ತಗಲುವಂತೆಯೇ ನಂದಿ ಇದ್ದು, ಎಡ ತೊಡೆ, ಕೈಗಳು ಅದರ ಮೇಲೆ ಅಥವಾ ಅದಕ್ಕೆ ತಗಲುವಂತೆ ಇರಬೇಕು. ಬಿಳಿವರ್ಣ ಮತ್ತು ಸರ್ವ ಅವಯವಗಳಿಂದ ಸುಂದರನಾದ, ಶಾಂತಮೂರ್ತಿಯಾದ ಶಿವನು ನಂದಿಯ ಶಿರದ ಮೇಲೆ ಕೈ ಇರಿಸಿರಬೇಕು. ಗೌರಿಯನ್ನು ಶಿವನು ನಿಂತ ಆಸನದಲ್ಲಿ ಇರುವಂತೆ ಅಥವಾ ಪ್ರತ್ಯೇಕ ಆಸನದಲ್ಲಿರುವಂತೆ ತೋರಿಸಬೇಕು. ಸಕಲ ಅವಯವಗಳಿಂದ ಮತ್ತು ಕಟಕ ಹಾಗೂ ಲಂಬಹಸ್ತಗಳಿಂದ ಶೋಭಿತಳಾಗಿರುವಂತೆ ತೋರಿಸಬೇಕು. ರತ್ನಕಿರೀಟ ಮುಕುಟದಿಂದ ಅಲಂಕೃತನಾದ ಶಿವನು ಎಡಕ್ಕೆ ಗೌರಿಯೊಡಗೂಡಿರಬೇಕು. ದ್ವಿಭುಜಗಳನ್ನು ಹೊಂದಿದ್ದು, ಶಾಂತಮೂರ್ತಿಯಾದ ಶಿವನು ನಂದಿಯ ಮಸ್ತಕದ ಮೇಲೆ ಕೈಯನ್ನು ಇರಿಸಿರಬೇಕು. ಅಥವಾ ನಂದಿಯ ಮೇಲೆ ಊರಿ ಪದ್ಮಪೀಠದ ಮೇಲೆ ಎಡಗಾಲನ್ನು ಮಡಚಿ, ಬಲಗಾಲನ್ನು ನೀಳವಾಗಿ ಇಳಿಬಿಟ್ಟು ಸುಖಾಸನದಲ್ಲಿ ಕುಳಿತಿರಬೇಕು. ಟಂಕ, ಕೃಷ್ಣಮೃಗ, ಅಭಯ ಮತ್ತು ವರದ ಹಸ್ತಗಳಿಂದ ಸಕಲ ಆಭರಣಗಳಿಂದ ಅಲಂಕೃತನಾಗಿರಬೇಕು. ಹಾಗೂ ಪಕ್ಕದಲ್ಲಿರುವ ಕಪ್ಪು ಕಾಂತಿಯ ಮತ್ತು ದ್ವಿಭುಜಗಳುಳ್ಳ ದೇವಿಯ ಒಂದು ಹಸ್ತವು ಉತ್ಪಲವನ್ನು ಮತ್ತೊಂದು ಹಸ್ತವು ವರದ ಮುದ್ರೆಯನ್ನು ಹೊಂದಿರಬೇಕು. ಹಾಗೂ ಒಂದು ಪಾದವನ್ನು ಮಡಚಿ ಆಸನದಲ್ಲಿರಿಸಿ ಮತ್ತೊಂದನ್ನು ಇಳಿಬಿಟ್ಟಿದ್ದು, ಸಕಲ ಆಭರಣಗಳಿಂದ ಅಲಂಕೃತಳಾಗಿರಬೇಕು ಎಂದು ಹೇಳುತ್ತದೆ.

ಹಾಗೆಯೇ ಅಜಿತಾಗಮವು[೧೫೭] ವೃಷಭಾರೂಢ ಮೂರ್ತಿಯಲ್ಲಿ ಶಿವನು ಚತುರ್ಭುಜ, ತ್ರಿನೇತ್ರ, ಜಟಾಮುಕುಟ, ಕೃಷ್ಣಮೃಗ, ಪರಶು ಮತ್ತು ಅಭಯ ಹಾಗೂ ವರದ ಹಸ್ತಗಳನ್ನು ಹೊಂದಿದ್ದು, ಉಮೆಯೊಂದಿಗೆ ನಂದಿಯ ಮೇಲಿರಬೇಕು. ಅಥವಾ ದ್ವಿಭುಜಗಳನ್ನು ಹೊಂದಿದ್ದು ಜಟಾಮುಕುಟ ಧರಿಸಿರಬೇಕು. ಹಾಗೂ ಶಿವನ ಬಲಗೈನ ಮೊಳಕೈ ನಂದಿಯ ಮಸ್ತಕದ ಮೇಲಿರಬೇಕು. ಹಾಗೂ ಇನ್ನೊಂದು ಹಸ್ತವು ಸೊಂಟದ ಮೇಲಿರಬೇಕು. ಬಲಗಾಲು ಎಡಗಾಲಿನ ಎದುರಿಗಿರಿಸಿದ್ದು, ಸ್ವಲ್ಪ ಬಾಗಿರಬೇಕು ಎಂದು ಹೇಳುತ್ತದೆ.

ಹಂಪಿ ಪರಿಸರದಲ್ಲಿ ವೃಷವಾಹನ ಅಥವಾ ವೃಷಭಾರೂಢ ಶಿಲ್ಪಗಳು ಒಟ್ಟು ೧೨ ದೊರೆತಿವೆ. ಅವುಗಳು ವಿರೂಪಾಕ್ಷ ದೇವಾಲಯದಲ್ಲಿ (೪), ಕೋಟಿಲಿಂಗದ ಬಳಿಯಿರುವ ಪಾಳುಬಿದ್ದ ದೇವಾಲಯ (೧), ಕಮಲಾಪುರದ ಆಂಜನೇಯ ದೇವಾಲಯ (೧), ಆನೆಲಾಯದ ಬಳಿಯಿರುವ ಕುದುರೆಲಾಯದಲ್ಲಿ

(೨), ಬಾಲಕೃಷ್ಣದೇವಾಲಯದಿಂದ ಕಡಲೆಕಾಳು-ಗಣೇಶ ದೇವಾಲಯಕ್ಕೆ ಹೋಗಲು ಇರುವ ಪುರಾತನ ರಸ್ತೆಯಲ್ಲಿ ದೊರೆಯುವ ಮಂಟಪದ ಬಳಿ (೧), ಹೊಸಪೇಟೆಯ ಜಂಬುನಾಥ ದೇವಾಲಯದಲ್ಲಿ(೨), ಹಾಗೂ ತಿಮ್ಮಲಾಪುರದ ತ್ರಿಕೂಟ ದೇವಾಲಯದಲ್ಲಿ (೧) ಈ ರೀತಿಯಾಗಿ ಒಟ್ಟು ೧೨ ಶಿಲ್ಪಗಳು ಕಂಡುಬಂದಿವೆ. ಇದರಲ್ಲಿ ಕೆಲವು ಭಗ್ನಗೊಂಡಿವೆ. ಕೆಲವು ಶಿಲ್ಪಗಳಿಗೆ ಸುಣ್ಣ ಬಳಿದಿರುವುದರಿಂದ ಸ್ಪಷ್ಟವಾಗಿ ಕಾಣಿಸುವುದಿಲ್ಲ. ಇನ್ನೂ ಕೆಲ ಶಿಲ್ಪಗಳ ಕೆತ್ತನೆ ಅಪೂರ್ಣವಾಗಿವೆ. ಆದ್ದರಿಂದ ಪ್ರಮುಖವೆನಿಸಿದ ಶಿಲ್ಪಗಳನ್ನು, ಕೆಲವು ಮಾತ್ರವೇ ಇಲ್ಲಿ ಪ್ರತಿಮಾ ಲಕ್ಷಣಗಳೊಂದಿಗೆ ವಿವರಿಸಲಾಗಿದೆ.

ವಿರೂಪಾಕ್ಷ ದೇವಾಲಯದಲ್ಲಿ ಒಟ್ಟು ೪ ಶಿಲ್ಪಗಳು ದೊರೆತಿದ್ದು, ನೂರು ಕಂಬಗಳ ಮಂಟಪ ಅಥವಾ ಕಲ್ಯಾಣ ಮಂಟಪದಲ್ಲಿ ಒಂದು ಶಿಲ್ಪ ಹಾಗೂ ಉಳಿದ ಮೂರು ಶಿಲ್ಪಗಳು ಗಾರೆ ಶಿಲ್ಪಗಳಾಗಿದ್ದು, ಮಹಾ ರಂಗಮಂಟಪ ಹಾಗೂ ಎರಡೂ ಬದಿಯ ಪ್ರಾಕಾರ ಮಂಟಪದ ಮೇಲೆ ಗಾರೆಯಿಂದ ನಿರ್ಮಿತ ದೇವಕೋಷ್ಠದಲ್ಲಿ ಕಂಡುಬರುತ್ತವೆ. ನೂರು ಕಂಬಗಳ ಮಂಟಪದ ೪೨ನೇ ಕಂಬದಲ್ಲಿ ವೃಷವಾಹನ ಶಿಲ್ಪವು ಇರುವುದು. ಇಲ್ಲಿ ಶಿವನು ಚತುರ್ಭುಜನಾಗಿದ್ದು, ಬಲಭಾಗದ ಮುಂದಿನ ಹಸ್ತವು ಅಭಯ ಮುದ್ರೆ, ಹಿಂದಿನ ಹಸ್ತವು ಪರಶುವನ್ನು ಹಿಡಿದಿದೆ. ಎಡಭಾಗದಲ್ಲಿ ಮುಂದಿನ ಹಸ್ತವು ಶಿವನ ಹಿಂದೆ ನಿಂತಿರುವ ವೃಷಭನ ಶಿರದ ಮೇಲೆ ಇರಿಸಿರುವನು. ಹಿಂದಿನ ಹಸ್ತದಲ್ಲಿ ಇರುವ ವಸ್ತುವು ಅಸ್ಪಷ್ಟವಾಗಿದೆ. ಬಹುಶಃ ಮೃಗವೇ ಇರಬೇಕು. ಶಿವನ ಬಲಪಾದವು ಸ್ಥಿರವಾಗಿದ್ದು, ಎಡಪಾದವು ಕುಂಚಿತದಲ್ಲಿದೆ. ಈತನ ಪೃಷ್ಠಭಾಗವು ವೃಷಭನ ಬೆನ್ನಿನ ಭಾಗಕ್ಕೆ ತಗುಲಿದೆ. ಶಿವನು ಜಟಾಮುಕುಟ ಹಾಗೂ ಹರಡಿರುವ ಜಟೆಗಳು, ಕರ್ಣಕುಂಡಲಗಳು, ವಸ್ತ್ರಾಭರಣಗಳನ್ನು ಧರಿಸಿರುವನು. ವೃಷಭವು ಶಿವನ ಪೃಷ್ಠಭಾಗದವರೆಗಿನ ಎತ್ತರವನ್ನು ಹೊಂದಿದೆ ಹಾಗೂ ಶಿವನ ಎಡಭಾಗದಲ್ಲಿ ಮುಖವಿದ್ದು, ಮುಂದೆ ನೋಡುತ್ತಿರುವುದು. ಈ ಶಿಲ್ಪಕ್ಕೆ ಸುಣ್ಣ ಬಳಿಯಲಾಗಿದ್ದು, ಸೂಕ್ಷ್ಮವಾದ ಆಭರಣಗಳನ್ನು ಗುರುತಿಸುವುದು ಕಷ್ಟ. ಇನ್ನೊಂದು ಶಿಲ್ಪವು ಮಹಾರಂಗಮಂಟಪದ ಮೇಲಿರುವ ಗಾರೆಯ ದೇವಕೋಷ್ಠದಲ್ಲಿದೆ. ಇಲ್ಲಿ ವೃಷಭವು ಶಿವನ ಬಲಕ್ಕೆ ಮುಖಮಾಡಿದೆ. ಅದರ ಮುಂದೆ ಸ್ಥಾನಿಕನಾಗಿರುವ ಶಿವನು ಸಮಭಂಗದಲ್ಲಿ ನಿಂತಿರುವನು. ವೃಷಭದ ಎತ್ತರವು ಶಿವನ ನಾಭಿಯವರೆಗೂ ಇರುವುದು. ದ್ವಿಭುಜಗಳನ್ನು ಹೊಂದಿರುವ ಶಿವನ ಹಸ್ತಗಳು ಭಗ್ನಗೊಂಡಿವೆ. ಶಿವನ ಪೃಷ್ಠಭಾಗವು ವೃಷಭಕ್ಕೆ ತಗುಲಿದೆ. ಶಿವನು ಜಟಾಮುಕುಟ, ಕರ್ಣಕುಂಡಲಗಳು ಹಾಗೂ ಸಕಲ ವಸ್ತ್ರಾಭರಣಗಳನ್ನು ಧರಿಸಿರುವನು. ಇಂತದ್ದೆ ಇನ್ನೊಂದು ಶಿಲ್ಪವು ಎಡಬದಿಯ ಪ್ರಾಕಾರದ ಮೇಲೆ ದೇವಕೋಷ್ಠದಲ್ಲಿದೆ. ಇಲ್ಲಿ ಶಿವನ ಎರಡೂ ಪಾದಗಳು ಸ್ಥಿರವಾಗಿದ್ದು, ದ್ವಿಭಂಗದಲ್ಲಿ ನಿಂತಿರುವನು. ಹಿಂದೆ ವೃಷಭವು ಶಿವನ ಭುಜದಷ್ಟು ಎತ್ತರವಿದ್ದು ಶಿವನ ಬಲಭಾಗಕ್ಕೆ ಮುಖಮಾಡಿರುವುದು. ದ್ವಿಭುಜಗಳನ್ನು ಹೊಂದಿರುವ ಈತನ ಬಲಗೈ ವೃಷಭದ ಶಿರದ ಮೇಲೆ ಇರುವುದು. ಎಡಹಸ್ತವು ವರದ ಮುದ್ರೆಯಲ್ಲಿರುವುದು. ಜಟಾಮುಕುಟ, ಕೊರಳಾಭರಣಗಳು, ವಕ್ಷಬಂಧ, ಯಜ್ಞೋಪವೀತ ಕಟಿಯಿಂದ ಪಾದದವರೆಗಿನ ವಸ್ತ್ರವನ್ನು ಧರಿಸಿರುವನು. ವೃಷಭವು ಸಹ ಆಭರಣಗಳಿಂದ ಅಲಂಕೃತಗೊಂಡಿದೆ. ಇನ್ನೊಂದು

ವೃಷಭಾರೂಢ ಶಿಲ್ಪವು ಬಲಬದಿಯ ಪ್ರಾಕಾರದ ಮೇಲಿರುವ ಗಾರೆಯ ದೇವಕೋಷ್ಠದಲ್ಲಿದೆ. ಈ ಶಿಲ್ಪದಲ್ಲಿ ಶಿವನೊಂದಿಗೆ ಉಮೆಯನ್ನು ತೋರಿಸಲಾಗಿದೆ. ಇಲ್ಲಿ ಶಿವ ಹಾಗೂ ಉಮಾ ಇಬ್ಬರೂ ವೃಷಭನ ಮೇಲೆ ಆರೂಢರಾಗಿರುವರು. ಸಕಲ ಆಭರಣಗಳಿಂದ ಅಲಂಕೃತಗೊಂಡ ವೃಷಭದ ಮುಂದಿನ ಎಡಪಾದವನ್ನು ಹೊರತುಪಡಿಸಿ ಉಳಿದಲ್ಲೆವುಗಳು ಭಗ್ನಗೊಂಡಿವೆ. ಬಲಭಾಗಕ್ಕೆ ನಂದಿಯು ಮುಖವನ್ನು ತಿರುಗಿಸಿರುವುದು. ಇಲ್ಲಿ ಶಿವ–ಪಾರ್ವತಿಯರು ಕುದುರೆ ಸವಾರಿ ಮಾಡುವ ರೀತಿಯಲ್ಲಿ ವೃಷಭನ ಮೇಲೆ ಕುಳಿತಿರುವರು. ಇಬ್ಬರು ದ್ವಿಭುಜಗಳನ್ನು ಹೊಂದಿದ್ದು, ಶಿವನು ಎಡಬಾಹುವನ್ನು ತನ್ನ ಎಡತೊಡೆ ಮೇಲೆ ಇರಿಸಿರುವನು. ಬಲಹಸ್ತವು ವೃಷಭದ ಶಿರದ ಹಿಂದೆ ಕಾಣಬಹುದಾಗಿದೆ. ದೇವಿಯು ತನ್ನ ಬಲಗೈಯನ್ನು ತನ್ನದೇ ಎಡತೊಡೆಯ ಮೇಲೆ ಇಟ್ಟಿರುವಳು. ಎಡಗೈಯು ಭಗ್ನಗೊಂಡಿದೆ. ಶಿವನು ಜಟಾಮುಕುಟ ಹಾಗೂ ಸಕಲ ವಸ್ತ್ರಾಭರಣಗಳನ್ನು ಧರಿಸಿರುವನು. ಉಮೆಯು ಕಿರೀಟಮುಕುಟ, ಕರ್ಣಕುಂಡಲಗಳು, ಕೊರಳ ಹಾರಗಳು ಹಾಗೂ ಸೀರೆಯನ್ನು ಧರಿಸಿರುವಳು. ಈ ಶಿಲ್ಪದ ಅಕ್ಕ–ಪಕ್ಕದಲ್ಲಿ ಯತಿಗಳು ನಮಸ್ಕರಿಸಿ ನಿಂತಿರುವರು.

ಆನೆಲಾಯದ ಬಳಿಯಿರುವ ಕುದುರೆಲಾಯ ಎಂದು ಕರೆಯಲಾಗುವ ಕಟ್ಟಡದ ಒಳಗೆ ಇಟ್ಟಿರುವ ಒಂದು ಪಟ್ಟಿಕೆಯಲ್ಲಿ ವೃಷಭಾರೂಢ ಶಿಲ್ಪವಿದೆ. ಇಲ್ಲಿ ಶಿವ–ಪಾರ್ವತಿಯರು ವೃಷಭದ ಮೇಲೇರಿ ಕುಳಿತಿರುವರು. ಅಲಂಕೃತ ವೃಷಭವು, ಮುಂದೆ ಸಾಗುತ್ತಿರುವಂತೆ ತೋರಿಸಲಾಗಿದೆ. ಅದರ ಬೆನ್ನ ಮೇಲೆ ಶಿವ–ಪಾರ್ವತಿಯರು ಕುಳಿತಿರುವರು. ಶಿವನು ಚತುರ್ಭುಜನಾಗಿದ್ದು, ಬಲಹಸ್ತಗಳಲ್ಲಿ ಮುಂದಿನದು ಅಭಯ, ಹಿಂದಿನದು ಪರಶುವನ್ನು ಹಿಡಿದಿದೆ. ಎಡಹಸ್ತಗಳಲ್ಲಿ ಮುಂದಿನದು ದೇವಿಯ ಕಟಿಭಾಗವನ್ನು ಸ್ಪರ್ಶಿಸಿದ್ದು, ಹಿಂದಿನದು ಮೃಗವನ್ನು ಹಿಡಿದಿರುವುದು. ದ್ವಿಭುಜಳಾದ ದೇವಿಯ ಬಲಗೈ ಆಲಿಂಗನ ಭಂಗಿಯಲ್ಲಿರುವುದರಿಂದ ಕಾಣುವುದಿಲ್ಲ. ಎಡಗೈಯಲ್ಲಿ ಬಹುಶಃ ಪುಷ್ಪವನ್ನು ಹಿಡಿದಿದ್ದಿರಬೇಕು. ಅದು ಭಗ್ನಗೊಂಡಿದೆ. ಶಿವನು ಕಿರೀಟ ಮುಕುಟ, ದೇವಿಯು ಕರಂಡ ಮುಕುಟ ಧರಿಸಿ ಸಕಲ ವಸ್ತ್ರಾಭರಣಗಳನ್ನು ಧರಿಸಿರುವರು. ಈ ಶಿಲ್ಪದ ಹಿಂಭಾಗದಲ್ಲಿ ಸೇವಕನೊಬ್ಬನನ್ನು ತೋರಿಸಿರುವರು.

ಹೊಸಪೇಟೆಯ ಜಂಬುನಾಥ ದೇವಾಲಯದ ಮಹಾರಂಗಮಂಟಪದಲ್ಲಿನ ೫ನೇ ಹಾಗೂ ೨೭ನೇ ಕಂಬಗಳಲ್ಲಿ ಈ ಶಿಲ್ಪವು ಇರುವುದು ಕಂಡುಬರುತ್ತದೆ. ೫ನೇ ಕಂಬದಲ್ಲಿರುವ ಶಿಲ್ಪದಲ್ಲಿ ಶಿವನು ಸಮಭಂಗದಲ್ಲಿ ಸ್ಥಾನಿಕನಾಗಿರುವನು. ಬಲಹಸ್ತಗಳಲ್ಲಿ ಮುಂದಿನದು ಕಟ್ಯವಲಂಭಿತ ಹಸ್ತದಲ್ಲಿ ಹಾಗೂ ಹಿಂದಿನದು ಡಮರುವನ್ನು ಹಿಡಿದಿರುವುದು. ಎಡಭಾಗದ ಹಸ್ತಗಳಲ್ಲಿ ಮುಂದಿನದು ಬೆನ್ನ ಹಿಂದೆ ನಿಂತಿರುವ ವೃಷಭದ ಕುತ್ತಿಗೆಯ ಭಾಗವನ್ನು ಹಿಡಿದಿರುವನು. ಹಿಂದಿನ ಹಸ್ತದಲ್ಲಿ ಮೃಗವನ್ನು ಹಿಡಿದಿರುವನು. ಶಿವನ ಹಿಂದೆ ನಿಂತಿರುವ ವೃಷಭವು ಅವನ ಹೃದಯ ಭಾಗದವರೆಗಿನ ಎತ್ತರವನ್ನು ಹೊಂದಿರುವುದು. ಶಿವನ ಪೃಷ್ಠಭಾಗವು ವೃಷಭಕ್ಕೆ ತಗುಲಿದಂತೆ ತೋರುವುದು, ಶಿವನು ಜಟಾಮುಕುಟ, ಕರ್ಣಕುಂಡಲಗಳು, ಕೊರಳಾಭರಣಗಳು, ಯಜ್ಞೋಪವೀತ, ಕಟಿಯಿಂದ ಪಾದದವರೆಗಿನ ವಸ್ತ್ರವನ್ನು

ಹಾಗೂ ಉದ್ದನೆಯ ವನಮಾಲೆಯನ್ನು ಧರಿಸಿರುವನು. ಇದೇ ಮಂಟಪದಲ್ಲಿ ೨೭ನೇ ಕಂಬದಲ್ಲಿ ಒಂದು ವೃಷಭಾರೂಢ ಶಿಲ್ಪವು ಕಂಡುಬರುತ್ತದೆ. ಇದು ಮೇಲೆ ತಿಳಿಸಿದ ಕುದುರೆಲಾಯದಲ್ಲಿ ದೊರೆತ ಪಟ್ಟಿಕೆಯೊಂದರಲ್ಲಿ ದೊರೆತ ಶಿಲ್ಪದ ಲಕ್ಷಣಗಳನ್ನೇ ಹೊಂದಿದೆ ಎನ್ನಬಹುದು. ಬಲಹಸ್ತದಲ್ಲಿ ಹಿಂದಿನದು ಡಮರು ಹಿಡಿದಿರುವುದನ್ನು ಹೊರತುಪಡಿಸಿ ಉಳಿದೆಲ್ಲ ಲಕ್ಷಣಗಳು ಅದರಂತೆಯೇ ಇವೆ. ಇನ್ನೊಂದು ಸುಂದರ ಶಿಲ್ಪವು ತಿಮ್ಮಲಾಪುರದ ತ್ರಿಕೂಟ ದೇವಾಲಯದ ಮುಖಮಂಟಪದ ೧೦ನೇ ಕಂಬದಲ್ಲಿ ಇರುವುದು. ಇದೊಂದು ನಿರೂಪಣಾತ್ಮಕ ಶಿಲ್ಪವೆನ್ನಬಹುದು. ಏಕೆಂದರೆ ಕಂಬದ ದಕ್ಷಿಣ ಪಾರ್ಶ್ವದಲ್ಲಿ ವೃಷಭಾರೂಢ ಶಿಲ್ಪವನ್ನು ಹಾಗೂ ನಂತರ ಬರುವ ಪಶ್ಚಿಮ ದಿಕ್ಕಿನ ಪಾರ್ಶ್ವದಲ್ಲಿ ಅಂಜಲಿ ಮುದ್ರೆಯಲ್ಲಿರುವ ಇಬ್ಬರು ಯತಿಗಳನ್ನು ಕೆತ್ತಲಾಗಿದೆ. ಕಂಬದ ದಕ್ಷಿಣ ದಿಕ್ಕಿನ ಪಾರ್ಶ್ವದಲ್ಲಿರುವ ವೃಷಭಾರೂಢ ಶಿಲ್ಪದಲ್ಲಿ ವಸ್ತ್ರಾಭರಣಗಳಿಂದ ಅಲಂಕೃತ ವೃಷಭವು ಓಡುತ್ತಿರುವ ಭಂಗಿಯಲ್ಲಿರುವುದು. ಅದರ ಮೇಲೆ ಶಿವ-ಪಾರ್ವತಿಯರಿಬ್ಬರು ಕುಳಿತಿರುವರು. ಶಿವನು ಚತುರ್ಭುಜನಾಗಿದ್ದು, ಬಲಭಾಗದ ಹಸ್ತಗಳಲ್ಲಿ ಮುಂದಿನದು, ಚಾಚಿಕೊಂಡಿದ್ದು ಸೂಚಿ ಮುದ್ರೆಯಲ್ಲಿರುವಂತೆ ತೋರುತ್ತದೆ. ಹಿಂದಿನದು ಪರಶುವನ್ನು ಹಿಡಿದಿರುವುದು. ಎಡಭಾಗದ ಹಸ್ತಗಳಲ್ಲಿ ಮುಂದಿನದು ದೇವಿಯನ್ನು ಆಲಂಗಿಸಿದಂತೆ ಅವಳ ಪೃಷ್ಠ ಭಾಗವನ್ನು ಸ್ಪರ್ಶಿಸಿರುವುದು. ಹಿಂದಿನ ಹಸ್ತದಲ್ಲಿ ಮೃಗವನ್ನು ಹಿಡಿದಿರುವನು. ಶಿವನ ಹಿಂದೆ ಕುಳಿತ ದೇವಿಯು ದ್ವಿಭುಜಳಾಗಿದ್ದು, ಬಲಹಸ್ತವು ಆಲಿಂಗನ ಭಂಗಿಯಲ್ಲಿದ್ದುದರಿಂದ ಕಾಣಿಸುವುದಿಲ್ಲ. ಎಡಹಸ್ತದಲ್ಲಿ ಪುಷ್ಪವನ್ನು ಹಿಡಿದಿರುವಳು. ಶಿವನು ಕಿರೀಟ ಮುಕುಟ ಧರಿಸಿದ್ದು, ಜಟೆಗಳು ಹರಡಿರುವಂತೆ ಕೆತ್ತಲಾಗಿದೆ. ಕರ್ಣಕುಂಡಲಗಳು, ಕೊರಳಾಭರಣಗಳು, ಬಾಹುವಳಯ, ಕಂಕಣ, ಪಾದದವರೆಗಿನ ವಸ್ತ್ರವನ್ನು ಧರಿಸಿರುವನು. ದೇವಿಯು ಕರಂಡ ಮುಕುಟ, ಕೊರಳಾಭರಣಗಳು ಹಾಗೂ ಪಾದದವರೆಗಿನ ವಸ್ತ್ರವನ್ನು ಧರಿಸಿರುವಳಂತೆ ಕೆತ್ತಲಾಗಿದೆ. ವೃಷಭದ ಹಿಂದೆ ನಿಂತ ಒಬ್ಬ ಗಣ ಶಿವ-ಪಾರ್ವತಿಯರಿಗೆ ಉದ್ದನೆಯ ಛತ್ರಿಯನ್ನು ಹಿಡಿದಂತೆ ಕಂಡರಿಸಲಾಗಿದೆ. ಈ ಶಿಲ್ಪದ ಮುಂಬರುವ ಪಟ್ಟಿಕೆಯಲ್ಲಿ ಇಬ್ಬರು ಯತಿಗಳಿದ್ದು ಒಬ್ಬನು ತನ್ನೆರಡು ಕೈಗಳನ್ನು ಶಿರದ ಮೇಲ್ಭಾಗದಲ್ಲಿ ಜೋಡಿಸಿ ಅಂಜಲಿಮುದ್ರೆಯಲ್ಲಿರುವನು. ಅವನ ಹಿಂದೆ ನಿಂತ ಇನ್ನೊಬ್ಬ ಯತಿಯು ಸಾಮಾನ್ಯ ಅಂಜಲಿ ಮುದ್ರೆಯಲ್ಲಿರುವನು.

ಮೇಲಿನ ಈ ಎಲ್ಲ ಶಿಲ್ಪಗಳಲ್ಲಿ ವಿರೂಪಾಕ್ಷ ದೇವಾಲಯದ ನೂರು ಕಂಬಗಳ ಮಂಟಪ ಅಥವಾ ಕಲ್ಯಾಣ ಮಂಟಪದ ೪೨ನೇ ಕಂಬದಲ್ಲಿ ದೊರೆತಿರುವ ವೃಷವಾಹ ಶಿಲ್ಪವು ಮೇಲೆ ತಿಳಿಸಿದಂತೆ ಉತ್ತರ ಕಾರಣಾಗಮ ಹೇಳುವ ಲಕ್ಷಣಗಳನ್ನು ಹೊಂದಿರುವುದು. ಆದರೆ ಆಗಮದಲ್ಲಿ ಉಲ್ಲೇಖವಿರುವಂತೆ ಶಿವನೊಂದಿಗೆ ದೇವಿಯ ಶಿಲ್ಪವನ್ನು ತೋರಿಸಲಾಗಿಲ್ಲ. ಈ ವ್ಯತ್ಯಾಸವನ್ನು ಹೊರತುಪಡಿಸಿದಂತೆ ಶಿವನ ಶಿಲ್ಪವು ಕಾರಣಾಗಮದ ಅನ್ವಯವಾಗಿ ಕೆತ್ತಲಾಗಿದೆ. ಈ ಶಿಲ್ಪವನ್ನು ಹೊರತುಪಡಿಸಿದಂತೆ ಉಳಿದ ಎಲ್ಲ ಶಿಲ್ಪಗಳು ಆಗಮ ರಹಿತವಾಗಿ ಮತ್ತು ಶಿಲ್ಪಿಯ ಸ್ವಂತಿಕೆಯನ್ನು ಬಿಂಬಿಸುವಂತೆ ರಚಿತವಾಗಿವೆ.



ವೃಷಭವಾಹನಮೂರ್ತಿ, ವಿರೂಪಾಕ್ಷ ದೇವಾಲಯ, ಹಂಪಿ



ವೃಷಭವಾಹನಮೂರ್ತಿ, ವಿರೂಪಾಕ್ಷ ದೇವಾಲಯ, ಹಂಪಿ



ವೃಷಭವಾಹನಮೂರ್ತಿ, ಜಂಬುನಾಥ ದೇವಾಲಯ,
ಹೊಸಪೇಟೆ

ವೃಷಭಾರೂಢಮೂರ್ತಿ,
ವಿರೂಪಾಕ್ಷ ದೇವಾಲಯ, ಹಂಪಿ





ವೃಷಭಾರೂಢಮೂರ್ತಿ, ತ್ರಿಕೂಟದೇವಾಲಯ.
ತಿಮ್ಮಾಲಾಪುರ

**ವೃಷಭ ವಾಹನಮೂರ್ತಿ**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ಮಹಾರಂಗ ಮಂಟಪದ ಮೇಲಿರುವ ಗಾರೆಯ ದೇವಕೋಷ್ಠ | ೧ |
| ಹಂಪಿ | ವಿರೂಪಾಕ್ಷ | ಪ್ರಾಕಾರ ಮಂಟಪದಗಳ ಮೇಲಿರುವ ಗಾರೆಯ ದೇವಕೋಷ್ಠ | ೧ |
| ಹಂಪಿ | ವಿರೂಪಾಕ್ಷ | ಪ್ರಾಕಾರ ಮಂಟಪದ ಮೇಲಿರುವ ಗಾರೆಯ ದೇವಕೋಷ್ಠ | ೧ |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೪೨ನೇ ಕಂಬ | ೧ |
| ಹಂಪಿ | ಕೋಟಿಲಿಂಗ | ಕೋಟಿಲಿಂಗದ ಬಳಿಯಿರುವ ಪಾಳುಬಿದ್ದ ದೇವಾಲಯದ ಕಂಬ | ೧ |
| ಹಂಪಿ | ಕೃಷ್ಣಾ ದೇವಾಲಯದ ಬಳಿಯಿರುವ ಪ್ರಾಚೀನ ರಸ್ತೆ | ಕೃಷ್ಣಾ ದೇವಾಲಯದಿಂದ ಕಡಲೆಕಾಳು ಗಣೇಶ ದೇವಾಲಯಕ್ಕೆ ಹೋಗುವ ಪ್ರಾಚೀನ ರಸ್ತೆಯಲ್ಲಿರುವ ಮಂಟಪದ ಬಳಿ ನೈಸರ್ಗಿಕ ಬಂಡೆಯ ಮೇಲೆ | ೧ |
| ಹಂಪಿ | ಕುದುರೆಲಾಯ | ಕುದುರೆಯ ವಸ್ತುಸಂಗ್ರಹಾಲಯದ ಒಳ ಆವರಣ | ೨ |
| ಕಮಲಾಪುರ | ಆಂಜನೇಯ | ದೇವಾಲಯದ ಮಂಟಪದ ೬ನೇ ಕಂಬ | ೧ |
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ದೇವಾಲಯದ ಮಹಾಮಂಟಪದ ೧೦ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ದೇವಾಲಯದ ಮಹಾಮಂಟಪದ ೫ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ದೇವಾಲಯದ ಮಹಾಮಂಟಪದ ೨೬ನೇ ಕಂಬ | ೧ |
| | | ಒಟ್ಟು | ೧೨ |

**ಸ್ವಾಭಿಷೇಕ ಮೂರ್ತಿ**

ಶಿವನ ಈ ರೂಪವು ಅತ್ಯಂತ ವಿರಳವಾಗಿ ಶಿಲ್ಪಗಳಲ್ಲಿ ಕಂಡುಬರುತ್ತದೆ. ಈ ಮೂರ್ತಿ ಶಿಲ್ಪದ ಕುರಿತು ಪೂರ್ವಕಾರಣಾಗಮದಲ್ಲಿ ವಿವರಣೆ ದೊರೆಯುತ್ತದೆ.[೧೫೮] ಶಿವನು ತನ್ನ ತಪಸ್ಸು ಕೊನೆಗೊಂಡಾಗ ಪವಿತ್ರ ಜಲವನ್ನು ತನ್ನ ಮೇಲೆಯೇ ಸುರಿದುಕೊಳ್ಳುವನು. ಹೀಗೆ ದೇವತೆಯು ಮಜ್ಜನ ಕ್ರಿಯೆಯಲ್ಲಿ ತೊಡಗಿದ ರೂಪವನ್ನು ಸ್ವಾಭಿಷೇಕಮೂರ್ತಿ ಎಂದು ಕರೆಯಲಾಗಿದೆ.[೧೫೯]

ಇಂತಹ ಶಿಲ್ಪ ಹಂಪಿ ಪರಿಸರದಲ್ಲಿ ತಿಮ್ಮಲಾಪುರದ ತ್ರಿಕೂಟ ದೇವಾಲಯ ಹಾಗೂ ಮಲಪನಗುಡಿಯ ಮಲ್ಲಿಕಾರ್ಜುನ ದೇವಾಲಯದಲ್ಲಿ ಕಂಡುಬರುತ್ತವೆ. ಮೊದಲನೆಯದು ತಿಮ್ಮಲಾಪುರದ ತ್ರಿಕೂಟ ದೇವಾಲಯದ ನವರಂಗದ ೪ನೇ ಕಂಬದಲ್ಲಿ ಕಂಡುಬರುತ್ತದೆ. ಇಲ್ಲಿ ಚತುರ್ಭುಜಗಳನ್ನು ಹೊಂದಿರುವ ಶಿವನು ಪದ್ಮಾಸನದಲ್ಲಿ ಕುಳಿತಿದ್ದು, ತನ್ನ ಮುಂದಿನ ಎರಡೂ ಕೈಗಳಿಂದ ಪವಿತ್ರ ಜಲ ತುಂಬಿರುವ ಕುಂಭವನ್ನು ಹಿಡಿದಿರುವನು. ಮಧ್ಯದಲ್ಲಿನ ಎರಡೂ ಕೈಗಳಲ್ಲೂ ಒಂದೊಂದು ಪವಿತ್ರ ಜಲದ ಕುಂಭವನ್ನು ಹಿಡಿದಿರುವನು. ಹಾಗೂ ಹಿಂದಿನ ಎರಡೂ ಕೈಗಳಲ್ಲಿರುವ ಕುಂಭದಿಂದ ಪವಿತ್ರಜಲವನ್ನು ಸುರಿದುಕೊಳ್ಳುತ್ತಿರುವನು. ಇಲ್ಲಿ ಶಿವನು ಪೀಠದ ಮೇಲೆ ಪದ್ಮಾಸನದಲ್ಲಿ

ಕುಳಿತಿದ್ದು, ಕಿರೀಟ ಮುಕುಟ, ಮಕರಕುಂಡಲ, ಚಕ್ರಕುಂಡಲ, ಹಾರ, ರುದ್ರಾಕ್ಷಿಮಾಲಾ, ಬಾಹುವಳಯ, ಕಂಕಣಗಳು, ಕಾಲ್ಕಡಗಗಳು ಹಾಗೂ ಉದ್ದನೆಯ ವನಮಾಲೆಯನ್ನು ಧರಿಸಿರುವನು. ಈ ವನಮಾಲೆಯಲ್ಲಿರುವ ಪುಷ್ಪಗಳು ಪೀಠಕ್ಕೆ ತಾಗಿರುವವು. ಈ ಶಿಲ್ಪವನ್ನು ಶಿವರುದ್ರಸ್ವಾಮಿ ಎಸ್.ಎನ್.[೧೬೦] ಅವರು ಗುರುತಿಸಿರುವರು.

ಇವೇ ಲಕ್ಷಣಗಳುಳ್ಳ ಅಷ್ಟಭುಜ ಸ್ವಾಭಿಷೇಕ ಮೂರ್ತಿಯು ಮಲಪನಗುಡಿಯ ಮಲ್ಲಿಕಾರ್ಜುನ ದೇವಾಲಯದ ಪ್ರಾಕಾರ ಗೋಡೆಯ ಮೇಲಿರುವ ಗಾರೆಯಿಂದ ನಿರ್ಮಿತ ದೇವಕೋಷ್ಠದಲ್ಲಿ ಕಂಡುಬರುತ್ತದೆ. ಇಲ್ಲಿ ಶಿವನು ಅಷ್ಟಭುಜಗಳನ್ನು ಹೊಂದಿರುವನು. ಆದರೆ ಎಲ್ಲ ಕೈಗಳಲ್ಲೂ ಪವಿತ್ರ ಜಲದ ಕುಂಭಗಳನ್ನು ತೋರಿಸದೆ ಮೊದಲನೆಯ ಹಾಗೂ ಸುರಿದುಕೊಳ್ಳುವ ಕೊನೆಯ ಎರಡು ಕೈಗಳಲ್ಲಿ ಮಾತ್ರ ಕುಂಭಗಳಿವೆ. ಮಧ್ಯದಲ್ಲಿರುವ ಕೈಗಳು ಮೇಲಕ್ಕೆತ್ತಿದ್ದು, ಒಂದು ಕೈಯಿಂದ ಇನ್ನೊಂದು ಕೈಗೆ ಹಸ್ತಾಂತರಿಸಿದ ಭಂಗಿಯಲ್ಲಿವೆ. ಶಿವನು ಜಟಾಮುಕುಟವನ್ನು ಹೊಂದಿದ್ದು, ಮೇಲಿನ ಶಿಲ್ಪದಂತೆಯೇ ಸಕಲ ಆಭರಣಗಳನ್ನು ಧರಿಸಿರುವನು. ಈ ಶಿಲ್ಪದಲ್ಲಿ ಉದ್ದನೆಯ ವನಮಾಲೆಯನ್ನು ತೋರಿಸಲಾಗಿಲ್ಲ. ಆದರೆ ಮೇಲಿನ ಶಿಲ್ಪದಂತೆಯೇ ಒಂದು ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿರುವನು.

**ಸ್ವಾಭಿಷೇಕಮೂರ್ತಿ**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಮಲಪನಗುಡಿ | ಮಲ್ಲಿಕಾರ್ಜುನ | ದೇವಾಲಯದ ಪ್ರಾಕಾರ ಗೋಡೆಯ ಮೇಲಿರುವ ಗಾರೆಯ ದೇವಕೋಷ್ಠ | ೧ |
| ತಿಮ್ಮಲಾಪುರ | ತ್ರಿಕೂಟ ದೇವಾಲಯ | ನವರಂಗದ ೪ನೇ ಕಂಬ | ೧ |
| | | ಒಟ್ಟು | ೨ |



ಸ್ವಾಭಿಷೇಕಮೂರ್ತಿ, ಮಲ್ಲಿಕಾರ್ಜುನ ದೇವಾಲಯ, ಮಲಪನಗುಡಿ



ಸ್ವಾಭಿಷೇಕಮೂರ್ತಿ, ತ್ರಿಕೂಟದೇವಾಲಯ, ತಿಮ್ಮಾಲಾಪುರ

### ಶಿವನ ವೃಷಭಾವತಾರ ಶಿಲ್ಪ

ವೃಷಭವು ಮನುಷ್ಯನ ಶಿರಭಾಗದ ಮೇಲೆ ತನ್ನ ಕಾಲನ್ನಿರಿಸಿದ ಶಿಲ್ಪವನ್ನೇ ಶಿವನ ವೃಷಭಾವತಾರ ಶಿಲ್ಪ ಎಂದು ಗುರುತಿಸಲಾಗಿದೆ. ಈ ಶಿಲ್ಪವನ್ನು ಕುರಿತು ಯಾವುದೇ ಆಗಮಗಳಲ್ಲಾಗಲೀ ಅಥವಾ ಇನ್ನಿತರ ಶಿಲ್ಪಶಾಸ್ತ್ರಗಳಲ್ಲಿಯಾಗಲಿ ಉಲ್ಲೇಖವಿಲ್ಲ. ಆದರೆ ಶ್ರೀ ಶಿವಮಹಾಪುರಾಣದಲ್ಲಿ[೧೬೧] ಶತರುದ್ರ ಸಂಹಿತೆಯಲ್ಲಿ, ೨೨ ಹಾಗೂ ೨೩ನೇ ಅಧ್ಯಾಯದಲ್ಲಿ ಶಿವನು ವೃಷಭಾವತಾರ ತಾಳಿದುದರ ಕುರಿತು ವಿವರಣೆ ದೊರೆಯುತ್ತದೆ. ಇಲ್ಲಿಯ ವಿವರಣೆಯಂತೆ ದೇವ-ದಾನವರು ಅಮೃತಕ್ಕಾಗಿ ಮಂದರ ಪರ್ವತವನ್ನು ಕಡೆಯುತ್ತಿದ್ದ ಸಂದರ್ಭದಲ್ಲಿ ಲಕ್ಷ್ಮೀ, ಧನ್ವಂತರಿ, ಚಂದ್ರ, ಪಾರಿಜಾತ, ಐರಾವತ, ಶಂಖ, ಕೌಸ್ತುಭಮಣಿ ಹಾಗೂ ಮಹಾಕಾಲಕೂಟ ವಿಷವೂ ಹುಟ್ಟಿತು. ನಂತರದಲ್ಲಿ ಅಮೃತವೂ ಹುಟ್ಟುವಾಗ ಅತ್ತಿತ್ತ ಚೆಲ್ಲಿದ ಅಮೃತದ ಹನಿಗಳಿಂದ ಸುಂದರ ಅಪ್ಸರೆ ಸ್ತ್ರೀಯರು ಉದಿಸಿದರು. ಹಾಗೆಯೇ ದೇವತೆಗಳು ವಿಷ್ಣುವಿನ ಸಹಾಯದಿಂದ ಅಮೃತವನ್ನು ಪಡೆಯುವ ಯುದ್ಧದಲ್ಲಿ ಜಯಶಾಲಿಯಾದರು. ನಂತರದ ಸಂದರ್ಭದಲ್ಲಿ ವಿಷ್ಣುವು ಈ ಅಪ್ಸರೆಯರ ಮೋಹಕ್ಕೊಳಗಾಗಿ ಅನೇಕ ಪುತ್ರರು ಜನಿಸಿದರು. ಇವರು ಲೋಕಕ್ಕೆಲ್ಲ ಉಪದ್ರವ ನೀಡಲು ಆರಂಭಿಸಿದಸರು. ಆಗ ದೇವಮುನಿಗಳೆಲ್ಲ ಶಿವನ ಮೊರೆ ಹೋದಾಗ ಶಿವನು ವೃಷಭಾವತಾರ ತಾಳಿ ಅವರನ್ನು ಸಂಹರಿಸಿದನು. ತನ್ನ ಮಕ್ಕಳೆಲ್ಲ ಹೀಗೆ ಮಡಿದುದನ್ನು ಕಂಡ ವಿಷ್ಣು ಈ ವೃಷಭವನ್ನು ಎದುರಿಸಲು ತನ್ನ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದನು. ಆದರೆ ವೃಷಭವು ಇವುಗಳನ್ನೆಲ್ಲ ನಾಶಪಡಿಸಿ ಭಯಂಕರವಾಗಿ ಗುಟುರು ಹಾಕುತ್ತ

ವಿಷ್ಣುವಿನ ಮೇಲೆರಗಿ ತನ್ನ ಗೊರಸು ಮತ್ತು ಕೊಂಬುಗಳ ಇರಿತದಿಂದ ಆತನನ್ನು ಘಾಸಿಗೊಳಿಸಿತು. ಆಗ ವಿಷ್ಣು ಶಿವನೇ ವೃಷಭಾವತಾರ ತಾಳಿದುದನ್ನು ಅರಿತು ಕ್ಷಮೆಯಾಚಿಸಿದನು.

ಹೀಗೆ ಈ ಕಥೆಯನ್ನು ಬಿಂಬಿಸುವ ೨ ಶಿಲ್ಪಗಳು ಹಂಪಿ ಪರಿಸರದಲ್ಲಿ ದೊರೆತಿವೆ. ಕೃಷ್ಣಾಪುರದ ಬಸವಣ್ಣ ದೇವಾಲಯ ಹಾಗೂ ಹೊಸಪೇಟೆಯ ಜಂಬುನಾಥದೇವಾಲಯದ ಮಹಾಮಂಟಪದ ೧೯ನೇ ಕಂಬದಲ್ಲಿ ಇಂತಹ ಶಿಲ್ಪಗಳು ದೊರೆಯುತ್ತವೆ. ಈ ಎಲ್ಲ ಶಿಲ್ಪಗಳಲ್ಲಿ ವೃಷಭವು ಬಲಿಷ್ಠ ಅವಯವಗಳಿಂದ ಸುಂದರವಾಗಿ ಕೆತ್ತಲ್ಪಟ್ಟಿದೆ. ಹಾಗೂ ಕೊರಳಲ್ಲಿ ಘಂಟೆಗಳ ಮಾಲೆ ಮತ್ತು ವಸ್ತ್ರಾಲಂಕಾರದಿಂದ ಶೋಭಿತವಾಗಿದ್ದು ತನ್ನ ಮುಂದಿನ ಒಂದು ಕಾಲನ್ನು (ಒಂದು ಶಿಲ್ಪ ಎಡಗಾಲು, ಇನ್ನೊಂದರಲ್ಲಿ ಬಲಗಾಲು) ಮಾನವನ ಶಿರದ ಭಾಗದ ಮೇಲೆ ಇರಿಸಿದೆ. ಈ ಶಿರಭಾಗದಲ್ಲಿ ಕಣ್ಣು, ಮೂಗು, ಬಾಯಿ, ತಲೆಯ ಭಾಗವನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಒಟ್ಟಾರೆ ಇಲ್ಲಿ ವೃಷಭವು ಶಿಲ್ಪದ ಮೇಲೆ ಕಾಲಿರಿಸಿದಂತೆ ಕಂಡರಿಸಲಾಗಿದೆ. ಇದರಿಂದ ಇದು ಶಿವನ ಸಂಹಾರಭಾವವನ್ನು ಸೂಚಿಸುತ್ತದೆಂದು ಹೇಳಬಹುದು. ಹಾಗೆಯೇ ಈ ರೀತಿಯ ತನ್ನ ಮುಂದಿನ ಎಡ ಅಥವಾ ಬಲಗಾಲನ್ನು ಮೇಲೆತ್ತಿ ನಿಂತಿರುವ ಇನ್ನು ಹಲವು ಶಿಲ್ಪಗಳು ಈ ಪರಿಸರದಲ್ಲಿ ದೊರೆಯುತ್ತವೆ. ಆದರೆ ಈ ಶಿಲ್ಪಗಳಲ್ಲಿ ಮನುಷ್ಯನ ಶಿರ ಭಾಗವನ್ನು ಕಂಡರಿಸಲಾಗಿಲ್ಲ. ಆದರೂ ಈ ಶಿಲ್ಪಗಳೂ ಸಹ ಇದೇ ಕಥೆಯನ್ನು ಬಿಂಬಿಸುತ್ತವೆಂದು ಊಹಿಸಬಹುದು. ಹೀಗೆ ವಿಜಯನಗರದ ಕಾಲದಲ್ಲಿ ಶಿವನ ಲೀಲಾಮೂರ್ತಿಗಳೊಂದಿಗೆ ಶಿವಪುರಾಣದಲ್ಲಿ ದೊರೆಯುವ ಶಿವನ ಇನ್ನು ಕೆಲವು ಅವತಾರಗಳನ್ನು ಶಿಲ್ಪಗಳಲ್ಲಿ ತೋರಿಸಿರುವುದು ಶಿವಪುರಾಣದ ಮಹತ್ವವನ್ನು ಅರಿಯಬಹುದು.

ಮೇಲೆ ವಿವರಿಸಿದ ಮನುಷ್ಯನ ಶಿರಭಾಗದ ಮೇಲೆ ತನ್ನ ಕಾಲನ್ನಿರಿಸಿದ ವೃಷಭದ ಶಿಲ್ಪವನ್ನು ವಿಜಯನಗರ ಕಾಲದ ಲೇಪಾಕ್ಷಿಯ ವೀರಭದ್ರಸ್ವಾಮಿ ದೇವಾಲಯದ ಕಲ್ಯಾಣ ಮಂಟಪದಲ್ಲಿಯೂ ಕಾಣಬಹುದೆಂದು ಕಿರಣಕ್ರಾಂತ ಚೌಧರಿ[೧೨] ಅವರು ಉಲ್ಲೇಖಿಸಿರುತ್ತಾರೆ. ಹೀಗೆ ಇಂತಹ ಶಿಲ್ಪಗಳು ಮುಖ್ಯವಾಗಿ ವಿಜಯನಗರ ಕಾಲದಲ್ಲಿ ಜನಪ್ರಿಯಗೊಂಡಿದ್ದಿರಬಹುದೆಂದು ಊಹಿಸಬಹುದು.

**ವೃಷಭಾವತಾರ ಶಿಲ್ಪ**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಕ್ರಿಷ್ಣಾಪುರ | ಬಸವಣ್ಣ | ಗರ್ಭಗೃಹದಲ್ಲಿರುವ ನೈಸರ್ಗಿಕ ಬಂಡೆ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೧೯ನೇ ಕಂಬ | ೧ |
| | | ಒಟ್ಟು | ೨ |



ವೃಷಭಾವತಾರಮೂರ್ತಿ, ಬಸವಣ್ಣ ದೇವಾಲಯ,
ಕ್ರಿಷ್ಣಾಪುರ



ವೃಷಭಾವತಾರಮೂರ್ತಿ, ಜಂಬುನಾಥ ದೇವಾಲಯ, ಹೊಸಪೇಟೆ

## ಶಿವಲಿಂಗದೊಂದಿಗಿರುವ ಪುರುಷಮೃಗಶಿಲ್ಪ

ಹಂಪಿ ಪರಿಸರದಲ್ಲಿ ಶಿವಲಿಂಗವನ್ನು ಪೂಜಿಸುತ್ತಿರುವ ಅರ್ಧದೇಹ ಮನುಷ್ಯ ಹಾಗೂ ಅರ್ಧದೇಹ ಪ್ರಾಣಿ(ವ್ಯಾಘ್ರ) ರೂಪವನ್ನು ಹೊಂದಿರುವ ಶಿಲ್ಪವನ್ನು ಪುರುಷಮೃಗ ಎಂದು ಗುರುತಿಸಲಾಗಿದೆ. ಈ ಪುರುಷಮೃಗವು ಶಿವನ ಅತಿಭಕ್ತನಾಗಿದ್ದು, ಯಾವಾಗಲೂ ಲಿಂಗಪೂಜೆಯಲ್ಲಿ ತೊಡಗಿರುತ್ತದೆ. ಶಿಲ್ಪವೂ ಸಹ ಮೇಲಿನ ಶಿಲ್ಪಗಳಂತೆಯೇ ಯಾವುದೇ ಆಗಮ ಮತ್ತು ಇತರ ಶಿಲ್ಪಶಾಸ್ತ್ರಗಳಲ್ಲಿ ಉಲ್ಲೇಖಿಸಿಲ್ಲ. ಆದರೆ ಇದೊಂದು ಪೌರಾಣಿಕ ಜೀವಿಯಾಗಿದ್ದು, ಸಂಪ್ರದಾಯ,

ಕಲೆ, ಆಚರಣೆ ಹಾಗೂ ದಂತಕಥೆಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಆದರೆ ಹೆಚ್ಚು ಪ್ರಸಿದ್ಧಿ ಪಡೆದುದು ಭಾರತದ ಪ್ರಾಚೀನ ಮಹಾಕಾವ್ಯವಾದ ಮಹಾಭಾರತದ ಹಿನ್ನಲೆಯಲ್ಲಿ. ಮಹಾಭಾರತದ[೧೬೩] ಸಭಾಪರ್ವದ ೭ನೇ ಸಂಧಿಯಲ್ಲಿ ಇದರ ಉಲ್ಲೇಖ ಬರುತ್ತದೆ. ಅದರಲ್ಲಿರುವಂತೆ ಈ ಪಾಂಡುರಾಜನ ತನಯರಾದ ಪಂಚಪಾಂಡವರಲ್ಲಿ ಹಿರಿಯನಾದ ಯುಧಿಷ್ಠಿರನು ಅಥವಾ ಧರ್ಮರಾಯನು ನಾರದೋಪದೇಶದಿಂದ ರಾಜಸೂಯ ಯಾಗವನ್ನು ಕೈಗೊಳ್ಳುತ್ತಾನೆ. ಈ ಯುದ್ಧವನ್ನು ಕೈಗೊಂಡ ಸಂದರ್ಭದಲ್ಲಿ ಎಂಜಲಿನ ಶುದ್ಧತೆಗೆ ಚಿಂತಿಸಿದ ಧರ್ಮರಾಯನು ಶ್ರೀಕೃಷ್ಣನ ಸಲಹೆಯಂತೆ ಪುರುಷಮೃಗವನ್ನು ಕರೆತರಲು ಭೀಮನನ್ನು ಕಳುಹಿಸುತ್ತಾನೆ. ಹೇಮಾಚಲದ ದಕ್ಷಿಣಕ್ಕೆ ಮಾನಸ ಸರೋವರದ ತೀರದಲ್ಲಿನ ಅರಣ್ಯದಲ್ಲಿ ಶಿವಪೂಜೆಯಲ್ಲಿ ತೊಡಗಿರುವ ಪುರುಷಮೃಗವನ್ನು ಕರೆತರಲು ಭೀಮ ಹೊರಡುತ್ತಾನೆ. ದಾರಿ ಮಧ್ಯದಲ್ಲಿ ಆಂಜನೇಯನ ದರ್ಶನವಾಗುತ್ತದೆ. ಆಂಜನೇಯನು ಭೀಮನು ಪುರುಷಮೃಗವನ್ನು ಕರೆದೊಯ್ಯಲು ಬಂದಿರುವ ಉದ್ದೇಶವನ್ನು ತಿಳಿದು ಅದು ಮನೋವೇಗದಲ್ಲಿ ಚಲಿಸುವ ಪ್ರಾಣಿ ಎಂದು ತಿಳಿಸಿ, ಅದನ್ನು ಕರೆತರುವ ವಿಷಯವನ್ನು ಭೀಮನಿಗೆ ಹೇಳಿದನು. ಹಾಗೂ ತನ್ನ ಬಾಲದಿಂದ ಒಂದಿಷ್ಟು ರೋಮಗಳನ್ನು ಕಿತ್ತು ಆತನ ಸಹಾಯಕ್ಕಾಗಿ ನೀಡುವನು. ಅದನ್ನು ಪಡೆದ ಭೀಮನು ಮುಂದೆ ಸಾಗಿ ಪುರುಷ ಮೃಗವನ್ನು ಭೇಟಿ ಮಾಡಿ ತಾನು ತನ್ನ ಅಣ್ಣನ ಆದೇಶದ ಮೇರೆಗೆ ತಮ್ಮನ್ನು ಕರೆದೊಯ್ಯಲು ಬಂದಿರುವೆನು ಎಂದು ತಿಳಿಸಿದನು. ಆಗ ಪುರುಷಮೃಗವು ಒಂದು ಷರತ್ತಿನ ಮೇರೆಗೆ ಆತನೊಂದಿಗೆ ಹೋಗಲು ಒಪ್ಪುತ್ತದೆ. ಅದರ ಪ್ರಕಾರ ಭೀಮನು ಮುಂದೆ ಮುಂದೆ ಓಡುವುದು, ಹಿಂದೆ ಪುರುಷಮೃಗವು ಆತನನ್ನು ಬೆನ್ನಟ್ಟುವುದು ಹಾಗೂ ಭೀಮನು ಕೈಗೆ ಸಿಕ್ಕಿದಲ್ಲಿ ಆತನನ್ನು ಹಿಡಿಯುವುದು ಎಂಬ ಷರತ್ತು ನಿರ್ಧರಿತವಾಯಿತು. ಇದಕ್ಕೊಪ್ಪಿದ ಭೀಮನು ಆಂಜನೇಯ ನೀಡಿದ ಒಂದು ರೋಮವನ್ನು ಭೂಮಿಗೆ ಹಾಕಲು ಅಲ್ಲಿ ಶಿವಲಿಂಗವು ಉದ್ಭವಿಸುತ್ತದೆ. ಅದನ್ನು ನೋಡಿದ ಶಿವಭಕ್ತನಾದ ಪುರುಷಮೃಗವು ಶಿವಪೂಜೆಯಲ್ಲಿ ತೊಡಗುವನು. ಈ ಸಮಯವನ್ನು ಉಪಯೋಗಿಸಿಕೊಂಡು ಭೀಮನು ಮುಂದೆ ಓಡಲು ಆರಂಭಿಸಿದನು. ಲಿಂಗ ಪೂಜೆ ಮುಗಿಸಿದ ಪುರುಷಮೃಗವು ಭೀಮನನ್ನು ಬೆನ್ನಟ್ಟಲು ಭೀಮನು ಮತ್ತೆ ರೋಮವನ್ನೆಸೆಯಲು ಶಿವಲಿಂಗ ಉದ್ಭವಿಸುತ್ತದೆ. ಪುರುಷಮೃಗವು ಮತ್ತೆ ಲಿಂಗಪೂಜೆಯಲ್ಲಿ ತೊಡಗುತ್ತದೆ. ಹೀಗೆ ಮುಂದುವರಿದ ಪುರುಷಮೃಗವು ಮತ್ತು ಭೀಮರ ಓಟವು ಯಾಗ ಸ್ಥಳದವರೆಗೂ ಮುಂದುವರೆಯಿತು. ಆಗ ಭೀಮನ ಒಂದು ಕಾಲು ದ್ವಾರದ ಒಳಗೆ ಹಾಗೂ ಇನ್ನೊಂದು ಕಾಲು ಹೊರಗೆ ಇದ್ದುದರಿಂದ ಇಬ್ಬರಲ್ಲೂ ವಾದವು ಆರಂಭವಾಯಿತು. ಅಲ್ಲಿಗೆ ಬಂದ ಧರ್ಮರಾಯ ನ್ಯಾಯವನ್ನು ನೀಡಲು, ಅದಕ್ಕೆ ಮೆಚ್ಚಿದ ಪುರುಷಮೃಗವು ಭೀಮನನ್ನು ಮನ್ನಿಸಿ ಅವರ ಕಾರ್ಯಗಳನ್ನು ಮುಂದುವರಿಸಲು ಒಪ್ಪಿತು. ಅದರಂತೆ ಪುರುಷಮೃಗವನ್ನು ಯಜ್ಞದ ಭೋಜನ ಶಾಲೆಯಲ್ಲಿ ಸ್ವರ್ಣಕಂಬದಲ್ಲಿ ಬಂಧಿಸಿಡಲಾಯಿತು. ಈ ವಿವರಣೆಯು ಕುಮಾರವ್ಯಾಸನ ಮಹಾಭಾರತದಲ್ಲಿ ಕಂಡುಬರುತ್ತದೆ.

ಪುರುಷಮೃಗ ಶಿಲ್ಪಕ್ಕೆ ಮಹಾಭಾರತದ ಕಥೆಯಲ್ಲದೆ, ಇನ್ನೂ ಹಲವು ಬಗೆಯ ಹಿನ್ನಲೆಗಳನ್ನು ಹೇಳಲಾಗುತ್ತದೆ. ಅಂತಹವುಗಳಲ್ಲಿ ಈ ಮುಂದಿನ ಕಥೆಯೂ ಒಂದು. ಇಲ್ಲಿ ಮೇಲೆ ತಿಳಿಸಿದ

ಮಹಾಭಾರತದ ಈ ಕಥೆಯೇ ಸ್ವಲ್ಪ ಭಿನ್ನ ಸ್ವರೂಪವನ್ನು ಹೊಂದಿದ್ದು, ತಮಿಳುನಾಡಿನ ಕನ್ಯಾಕುಮಾರಿ ಜಿಲ್ಲೆಯಲ್ಲಿರುವ ೧೨ ಶಿವಾಲಯಗಳಿಗೆ ಸಂಬಂಧಿಸಿದಂತೆ ಪ್ರಸ್ತುತ ದಿನಗಳಲ್ಲಿಯೂ ಆಚರಣೆಯ ರೂಪದಲ್ಲಿ ಅಸ್ತಿತ್ವದಲ್ಲಿರುವುದು ವಿಶೇಷ. ಇಲ್ಲಿ ಭೀಮನು ರೋಮದ ಬದಲಾಗಿ ಶಿವಲಿಂಗಗಳನ್ನೇ ಭೂಮಿಗೆ ಹಾಕುವನೆಂದು, ಈ ೧೨ ಶಿವಲಿಂಗಗಳೇ ಶಿವಾಲಯಗಳಾಗಿ ನಿರ್ಮಾಣವಾಗುತ್ತವೆ ಎಂದು ಹೇಳಲಾಗಿದೆ. ಈಗಲೂ ಶಿವರಾತ್ರಿಯಂದು ಅಲ್ಲಿನ ಜನ ಬರಿಗಾಲಿನಲ್ಲಿ ೭೫ ಕಿ.ಮೀ. ಗಳಷ್ಟು ಓಡಿ ಈ ಹನ್ನೆರಡು ಶಿವಾಲಯಗಳ ದರ್ಶನ ಪಡೆಯುತ್ತಾರೆ.[೧೬೪]

ಈ ಮೇಲಿನ ದೀರ್ಘ ವಿವರಣೆಯನ್ನು ಉಲ್ಲೇಖಿಸಲಾದ ಮಹಾಭಾರತದ ಕಥೆಯಲ್ಲಿ ಬಿಂಬಿತವಾದ ಪುರುಷಮೃಗದ ನಿರೂಪಣಾತ್ಮಕ ಶಿಲ್ಪಗಳು ಹಂಪಿ ಪರಿಸರದಲ್ಲಿ ಹಲವು ದೊರೆಯುತ್ತವೆ. ಹಂಪಿಯ ವಿರೂಪಾಕ್ಷ ದೇವಾಲಯ (೪), ಉಮಾಮಹೇಶ್ವರ ದೇವಾಲಯ (೧), ಪ್ರಸನ್ನ ವಿರೂಪಾಕ್ಷ ದೇವಾಲಯ (೧) ಇವುಗಳನ್ನು ಹೊರತುಪಡಿಸಿ ಶಿವಲಿಂಗವನ್ನು ಪೂಜಿಸುತ್ತಿರುವ ಪುರುಷಮೃಗ, ಕೇವಲ ಪುರುಷಮೃಗ, ಗಣೇಶನನ್ನು ಪೂಜಿಸುತ್ತಿರುವ, ವಿಠಲನನ್ನು ಪೂಜಿಸುತ್ತಿರುವ ಪುರುಷಮೃಗ ಹೀಗೆ ಹಲವು ಪುರುಷಮೃಗ ಶಿಲ್ಪಗಳು ದೊರೆಯುತ್ತವೆ. ಆದರೆ ಇಲ್ಲಿ ಮಹಾಭಾರತ ಕಥೆಯನ್ನು ಬಿಂಬಿಸುವ ನಿರೂಪಣಾತ್ಮಕ ಶಿಲ್ಪಗಳಲ್ಲಿ ಪ್ರಮುಖವಾದವನ್ನು ಮಾತ್ರ ವಿವರಿಸಲಾಗಿದೆ.

ವಿರೂಪಾಕ್ಷ ದೇವಾಲಯದ ಪೂರ್ವ ದಿಕ್ಕಿಗಿರುವ ಪ್ರವೇಶ ದ್ವಾರದ ಬಲಕ್ಕೆ ಹಾಗೂ ನವರಂಗದ ಹೊರಭಿತ್ತಿಯಲ್ಲಿ ಈ ಶಿಲ್ಪವನ್ನು ಕೆತ್ತಲಾಗಿದೆ. ಮುಂದೆ ಭೀಮನನ್ನು, ಮಧ್ಯದಲ್ಲಿ ಲಿಂಗವನ್ನು ಅದರ ಹಿಂದೆ ಪುರುಷ ಮೃಗವನ್ನು ಕೆತ್ತಿದ್ದು, ಭೀಮನೆಂದು ಗುರುತಿಸಲು ಆತನ ಬಲಗೈಯಲ್ಲಿ ಗದೆಯನ್ನು ತೋರಿಸಲಾಗಿದೆ. ಹಾಗೂ ಎಡಗೈಯು ಆಂಜನೇಯ ನೀಡಿದ ರೋಮವನ್ನು ಎಸೆಯುತ್ತಿರುವನು ಎನ್ನುವಂತೆ ಕೆತ್ತಲಾಗಿದೆ. ಮತ್ತು ಆತನ ಮುಖವು ಹಿಂದಿರುವ ಪುರುಷ ಮೃಗವನ್ನು ನೋಡುತ್ತಿರುವಂತಿದೆ. ಈತನ ಹಿಂದೆ ಪೀಠ ಸಹಿತ ಲಿಂಗವಿದ್ದು ಅದಕ್ಕೆ ಪುರುಷ ಮೃಗವು ಪೂಜೆ ಸಲ್ಲಿಸುತ್ತಿರುವಂತೆ ತೋರಿಸಲಾಗಿದೆ. ಈ ಪುರುಷಮೃಗವು ಅರ್ಧದೇಹ ಪುರುಷ, ಇನ್ನರ್ಧ ದೇಹ ವ್ಯಾಘ್ರ ದೇಹವನ್ನು ಹೊಂದಿದೆ. ವ್ಯಾಘ್ರಪಾದಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಮತ್ತು ಇದರ ಎಡಗೈಯಲ್ಲಿ ಗಂಟೆ, ಬಲಗೈಯಲ್ಲಿ ಪುಷ್ಪವನ್ನಿಡಿದು ಲಿಂಗಕ್ಕೆ ಅರ್ಪಿಸುತ್ತಿರುವಂತೆ ಕೆತ್ತಲಾಗಿದೆ. ಭೀಮನ ಮುಂದೆ ಮತ್ತೊಬ್ಬ ವ್ಯಕ್ತಿಯನ್ನು ಅಂಜಲಿ ಮುದ್ರೆಯಲ್ಲಿ ನಿಂತಿರುವಂತೆ ಕೆತ್ತಲಾಗಿದೆ. ಈತನನ್ನು ಯುಧಿಷ್ಠಿರನೆಂದು ಹೇಳಬಹುದು. ಏಕೆಂದರೆ ಈತನು ಸಹ ಭೀಮನ ಶಿಲ್ಪದಂತೆ ಕಿರೀಟಮುಕುಟ ಧರಿಸಿದ್ದು ರಾಜಪ್ರಮುಖರ ವಸ್ತ್ರಾಭರಣಗಳನ್ನು ಧರಿಸಿರುವರು. ಈ ರೀತಿಯ ಶಿಲ್ಪ ಇದೇ ದೇವಾಲಯದ ಉತ್ತರ ಮತ್ತು ದಕ್ಷಿಣ ದಿಕ್ಕಿನ ಗೋಡೆಗಳಲ್ಲಿ ಕೆತ್ತಿರುವರು. ಆದರೆ ಈ ಶಿಲ್ಪಗಳಲ್ಲಿ ಯುಧಿಷ್ಠಿರನನ್ನು ತೋರಿಸಲಾಗಿಲ್ಲ. ಮೇಲೆ ತಿಳಿಸಿದಂತೆ ಇಂತಹ ಶಿಲ್ಪಗಳು ಇನ್ನು ಹಲವು ಕಡೆ ಲಭ್ಯವಾಗಿವೆ. ಈ ಎಲ್ಲ ಶಿಲ್ಪಗಳಲ್ಲಿ ಪುರುಷ ಮೃಗವು ಶಿವನ ಅತಿಭಕ್ತನೆಂದು ಹಾಗೂ ಪವಿತ್ರದ ಸಂಕೇತವಾಗಿ ಕೆತ್ತಲ್ಪಟ್ಟಿರುವನೆಂದು ತಿಳಿದುಬರುತ್ತದೆ.





ಶಿವಲಿಂಗದೊಂದಿಗೆ ಪುರುಷಮೃಗ ಮತ್ತು ಭೀಮ, ವಿರೂಪಾಕ್ಷ ದೇವಾಲಯ, ಹಂಪಿ





ಶಿವಲಿಂಗದೊಂದಿಗೆ ಪುರುಷಮೃಗ ಮತ್ತು ಭೀಮ. ಪ್ರಸನ್ನ ವಿರೂಪಾಕ್ಷ ದೇವಾಲಯ. ಹಂಪಿ

**ಪುರುಷಮೃಗ ಶಿಲ್ಪ(ಮಹಾಭಾರತದ ಕಥೆಯಾದರಿತ ಶಿಲ್ಪಗಳು)**

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ದೇವಾಲಯದ ಪೂರ್ವಾಭಿಮುಖದ ಭಿತ್ತಿ | ೧ |
| ಹಂಪಿ | ವಿರೂಪಾಕ್ಷ | ದೇವಾಲಯದ ದಕ್ಷಿಣಾಭಿಮುಖದ ಭಿತ್ತಿ | ೧ |
| ಹಂಪಿ | ವಿರೂಪಾಕ್ಷ | ದೇವಾಯಲದ ಉತ್ತರಾಭಿಮುಖದ ಭಿತ್ತಿ | ೧ |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೭೦ನೇ ಕಂಬ | ೧ |
| ಹಂಪಿ | ಉಮಾಮಹೇಶ್ವರ | ಮಂಟಪದ ೬ನೇ ಕಂಬ | ೧ |
| ಕಮಲಾಪುರ | ಪ್ರಸನ್ನ ವಿರೂಪಾಕ್ಷ | ಉತ್ಸವ ಮಂಟಪದ ೬ನೇ ಕಂಬ | ೧ |
| ಒಟ್ಟು | | | ೬ |

**ಸೂಚನೆ:** ಕೇವಲ ಶಿವಲಿಂಗವನ್ನು ಪೂಜಿಸುತ್ತಿರುವ ಪುರುಷಮೃಗ ಹಾಗೂ ಶಿವಲಿಂಗವಿಲ್ಲದೆ ಪುರುಷಮೃಗನನ್ನು ಮಾತ್ರವೇ ಕೆತ್ತಿರುವ ಶಿಲ್ಪಗಳು ಹಂಪಿ ಪರಿಸರದಲ್ಲಿ ಅಧಿಕ ಸಂಖ್ಯೆಯಲ್ಲಿ ದೊರೆತಿವೆ. ಆದ್ದರಿಂದ ಪ್ರಸ್ತುತ ಪಟ್ಟಿಯಲ್ಲಿ ಅವುಗಳನ್ನು ಸೇರಿಸದೇ ಮಹಾಭಾರತದ ಕಥೆಯಾಧಾರಿತ ಶಿಲ್ಪಗಳನ್ನು ಮಾತ್ರವೇ ಪಟ್ಟಿಯಲ್ಲಿ ನೀಡಲಾಗಿದೆ.

## ಶಿವಲಿಂಗವನ್ನು ಆಲಂಗಿಸಿಕೊಂಡಿರುವ ಪಾರ್ವತಿ ಶಿಲ್ಪಗಳು

ಶಿವಲಿಂಗವನ್ನು ಆಲಂಗಿಸಿಕೊಂಡಿರುವ ಹಲವು ಪಾರ್ವತಿಯ ಶಿಲ್ಪಗಳು ಹಂಪಿ ಪರಿಸರದಲ್ಲಿ ದೊರೆತಿವೆ. ಇವುಗಳು ಸಹ ಯಾವುದೇ ಆಗಮಗಳಲ್ಲಾಗಲಿ, ಇನ್ನಿತರ ಶಿಲ್ಪಶಾಸ್ತ್ರಗಳಲ್ಲಾಗಲಿ ವಿವರಿಸಲ್ಪಟ್ಟಿಲ್ಲ. ಈ ಪಾರ್ವತಿ ಶಿಲ್ಪವು ಒಂದು ಸ್ಥಳೀಯ ಮಹಾತ್ಮೆಯ ಕಥೆಯನ್ನಾಧರಿಸಿದ್ದು ಅಥವಾ ಸ್ಥಳೀಯ ದಂತಕಥೆಯನ್ನಾಧರಿಸಿದುದಾಗಿದೆ ಎಂದು ಗುರುತಿಸಲಾಗಿದೆ.[೧೬೫]

ಈ ದಂತಕಥೆಯು ತಮಿಳುನಾಡಿನ ಏಕಾಂಬರೇಶ್ವರ ದೇವಾಲಯಕ್ಕೆ ಸಂಬಂಧಿಸಿದುದಾಗಿದೆ. ಆ ದಂತಕಥೆಯ ವಿವರಣೆಯೆಂದರೆ, ಒಮ್ಮೆ ಶಿವನ ಮಡದಿ ಪಾರ್ವತಿಯು ವೇಗಾವತಿ ನದಿಯ ದಡದಲ್ಲಿರುವ ಏಕಾಂಬರೇಶ್ವರ ದೇವಾಲಯದ ಪುರಾತನ ಮಾವಿನ ವೃಕ್ಷದ ಕೆಳಗೆ ತಪವನ್ನು ಕೈಗೊಂಡಿದ್ದಳು. ಇವಳನ್ನು ಪರೀಕ್ಷಿಸಲು ಶಿವನು ಅಗ್ನಿಯನ್ನು ಕಳುಹಿಸಿದನು. ಪಾರ್ವತಿಯು ಸಹಾಯಕ್ಕಾಗಿ ಸೋದರನಾದ ವಿಷ್ಣುವನ್ನು ಪ್ರಾರ್ಥಿಸಿದಳು. ಆಗ ವಿಷ್ಣುವು ಶಿವನ ಮುಕುಟದಲ್ಲಿರುವ ಚಂದ್ರನನ್ನು ಪಾರ್ವತಿಯ ಸಹಾಯಕ್ಕೆ ನಿಲ್ಲಿಸಿದನು. ಇದರಿಂದ ಪಾರ್ವತಿಯ ಜೊತೆಗೆ ವೃಕ್ಷಕ್ಕೂ ತಂಪೊದಗಿತು. ಮತ್ತೆ ಶಿವನು ಪಾರ್ವತಿಯ ತಪವನ್ನು ಭಂಗಗೊಳಿಸಲು ಗಂಗೆಯನ್ನು ಕಳುಹಿಸಿದನು. ಆಗ ಪಾರ್ವತಿಯು ಗಂಗೆಯನ್ನು ಪ್ರಾರ್ಥಿಸಿ ಸೋದರಿಯಾದ ನೀನು ತಪಕ್ಕೆ ಹಾನಿಯುಂಟು ಮಾಡಬೇಡ ಎಂದು ಕೇಳಿದಳು. ಗಂಗೆಯೂ ಸಹ ಪಾರ್ವತಿಯ ತಪವನ್ನು ಭಂಗಗೊಳಿಸದೆ ವಾಪಸ್ಸಾದಳು. ಹೀಗೆ ಬಂದೊದಗಿದ ಸಮಸ್ಯೆಗಳನ್ನೆಲ್ಲ ನಿವಾರಿಸಿಕೊಂಡ ಪಾರ್ವತಿಯು ಮರಳಿನಿಂದ ಮಾಡಿದ ಲಿಂಗದೊಂದಿಗೆ ಸಂಯುಕ್ತಗೊಂಡಳು. ಇದೇ ದಂತಕಥೆಯು ಕಾಂಚಿಮಹಾತ್ಮ್ಯಂ[೧೬೬] ದಲ್ಲಿಯೂ ನಿರೂಪಣೆಗೊಂಡಿದೆ. ಹಾಗೆಯೇ ಗೋಪಿನಾಥರಾವ್ ಟಿ.ಎ.[೧೬೭] ಅವರು ಉಲ್ಲೇಖಿಸುತ್ತಾರೆ.

ಈ ದಂತಕಥೆಯ ಒಟ್ಟು ೧೫ ಪಾರ್ವತಿ ಶಿಲ್ಪಗಳು ಹಂಪಿ ಪರಿಸರದಲ್ಲಿ ದೊರೆಯುತ್ತವೆ. ಇವುಗಳು ಹಂಪೆಯ ವಿರೂಪಾಕ್ಷ ದೇವಾಲಯ (೬), ಕಡಲೆಕಾಳು ಗಣೇಶ ದೇವಾಲಯ (೧), ಪ್ರಸನ್ನ ವಿರೂಪಾಕ್ಷ ದೇವಾಲಯ (೧), ಚಂದ್ರಶೇಖರ ದೇವಾಲಯ (೧), ವಿಠಲ ದೇವಾಲಯ (೧) ಹಾಗೂ ವರಾಹ ದೇವಾಲಯದ ಬಳಿ ಇರುವ ಇನ್ನೊಂದು ದೇವಾಲಯ (೧), ಹೊಸಪೇಟೆಯ ಜಂಬುನಾಥ ದೇವಾಲಯ (೩) ಮತ್ತು ನಿಂಬಾಪುರದ ಸೌಮ್ಯ ಸೋಮೇಶ್ವರ ದೇವಾಲಯ (೧) ಇವುಗಳಲ್ಲಿ ಕಂಡುಬರುತ್ತವೆ. ಈ ಎಲ್ಲ ಶಿಲ್ಪಗಳಲ್ಲಿನ ಕೆಲವು ಪ್ರಮುಖ ಶಿಲ್ಪಗಳ ವಿವರಣೆಯನ್ನು ಈ ಕೆಳಗೆ ನೀಡಲಾಗಿದೆ.

ಈ ದಂತಕಥೆಯನ್ನು ಬಿಂಬಿಸುವ ಪ್ರಮುಖ ಶಿಲ್ಪವು ವಿರೂಪಾಕ್ಷ ದೇವಾಲಯದ ಎಡ ಪ್ರಾಕಾರ ಮಂಟಪದ ೧೯ನೇ ಕಂಬದಲ್ಲಿ ದೊರೆಯುತ್ತದೆ. ಈ ಶಿಲ್ಪದಲ್ಲಿ ದೇವಿಯು ಅರ್ಧ ಆಸೀನ ಭಂಗಿಯಲ್ಲಿರುವಳು. ಅಂದರೆ ಪಾರ್ವತಿಯ ಎಡಗಾಲಿನ ಮೊಣಕಾಲ ಭಾಗವು ಭೂ ಸ್ಪರ್ಶಿಸಿದ್ದು, ಪಾದಭಾಗವು ಮೇಲೆತ್ತಿರುತ್ತದೆ. ಹಾಗೆಯೇ ಬಲಗಾಲ ಪಾದವು ಭೂ ಸ್ಪರ್ಶಿಸಿದ್ದು, ಮೊಣಕಾಲಭಾಗವು ಅಥವಾ ತೊಡೆಯ ಭಾಗವು ಶಿವಲಿಂಗವನ್ನು ಸ್ಪರ್ಶಿಸಿರುತ್ತದೆ. ದೇವಿಯು ಕಿರೀಟ ಮುಕುಟ, ಕರ್ಣಾಭರಣಗಳು, ಭುಜವಳಯ, ಬಾಹುವಳಯ, ಕಂಕಣ, ಕೊರಳಹಾರಗಳು, ಕರ್ಣ ಆಭರಣಗಳು ಹೀಗೆ ಸಕಲ ವಸ್ತ್ರಾಭರಣಭೂಷಿತಳಾಗಿ ಅತ್ಯಂತ ಸುಂದರವಾಗಿ ಕೆತ್ತಲ್ಪಟ್ಟಿರುವಳು. ಮತ್ತು ಎರಡೂ ಬಾಹುಗಳಿಂದ ಶಿವಲಿಂಗವನ್ನು ತನ್ನ ಹೃದಯ ಭಾಗಕ್ಕೆ ಅಪ್ಪಿಕೊಂಡಿರುವಳು. ಉದ್ದನೆಯ ಲಿಂಗದಲ್ಲಿ ಬ್ರಹ್ಮಸೂತ್ರರೇಖೆಯು ಸ್ಪಷ್ಟವಾಗಿ ಗೋಚರಿಸುತ್ತದೆ. ಹಾಗೂ ಲಿಂಗದ ಮೇಲೆ ಪುಷ್ಪಮಾಲೆಯನ್ನು ಕೆತ್ತಲಾಗಿದೆ. ದೇವಿ ಮತ್ತು ಲಿಂಗದ ಸುತ್ತಲು ನದಿಯನ್ನು ತೋರಿಸಲಾಗಿದ್ದು, ಅದರಲ್ಲಿ ನಾಲ್ಕು ಮತ್ಸಗಳನ್ನು ಕೆತ್ತಲಾಗಿದೆ. ಈ ಮತ್ಸಗಳು ಪಾರ್ವತಿ ಹಾಗೂ ಲಿಂಗದ ಕಡೆಯೇ ಮುಖ ಮಾಡಿವೆ. ಇವುಗಳನ್ನು ನೋಡುತ್ತಿರುವ ಪಾರ್ವತಿಯ ಮುಖದಲ್ಲಿ ಭಯಗ್ರಸ್ತ ಭಾವವಿರುವುದನ್ನು ಕಾಣಬಹುದು.

ಇನ್ನೊಂದು ಶಿಲ್ಪವು ಇದೇ ದೇವಾಲಯದ ಮಹಾರಂಗ ಮಂಟಪದ ೧ನೇ ಕಂಬದಲ್ಲಿದೆ. ಇಲ್ಲಿಯೂ ಪಾರ್ವತಿಯೂ ಒಂದು ಪೀಠಸ್ಥ ಲಿಂಗವನ್ನು ಆಲಂಗಿಸಿರುವಂತೆ ಕಂಡರಿಸಲಾಗಿದೆ. ದೇವಿಯ ಎಡಪಾದವು ಭೂಸ್ಪರ್ಶಿಸಿದ್ದು ಬಲಗಾಲ ಮೊಣಕಾಲು ಅಥವಾ ತೊಡೆಭಾಗವನ್ನು ಪೀಠದ ಮೇಲಿರಿಸಿ ರುದ್ರಭಾಗಕ್ಕೆ ಸ್ಪರ್ಶಿಸಿದೆ. ತನ್ನ ಬಾಹುಗಳಿಂದ ರುದ್ರಭಾಗವನ್ನು ಆಲಂಗಿಸಿ ಕೊಂಡಿರುವಳು. ಹಾಗೂ ಕಿರೀಟ ಮುಕುಟ, ಕೊರಳಾಭರಣಗಳು, ಕರ್ಣಕುಂಡಲಗಳು, ಕಂಕಣಗಳು, ಕುಚಬಂಧ ಆಭರಣಗಳು, ಕಟಿಯಿಂದ ಪಾದದವರೆಗಿನ ನೆರಿಗೆಯುಳ್ಳ ವಸ್ತ್ರವನ್ನು ಧರಿಸಿರುವಳು. ಇದೇ ರೀತಿಯ ಶಿಲ್ಪಗಳು ಹಂಪಿ ಪರಿಸರದಲ್ಲಿ ಇನ್ನೂ ಹಲವು ಇವೆ.



ಶಿವಲಿಂಗವನ್ನು ಆಲಂಗಿಸಿರುವ ಪಾರ್ವತಿಯ ಶಿಲ್ಪ,
ವಿರೂಪಾಕ್ಷ ದೇವಾಲಯ, ಹಂಪಿ

ಶಿವಲಿಂಗವನ್ನು ಆಲಂಗಿಸಿರುವ ಪಾರ್ವತಿಯ
ಶಿಲ್ಪ, ವಿರೂಪಾಕ್ಷ ದೇವಾಲಯ, ಹಂಪಿ





ಶಿವಲಿಂಗವನ್ನು ಆಲಂಗಿಸಿರುವ ಪಾರ್ವತಿಯ
ಶಿಲ್ಪ, ಜಂಬುನಾಥ ದೇವಾಲಯ,
ಹೊಸಪೇಟೆ



ಶಿವಲಿಂಗವನ್ನು ಆಲಂಗಿಸಿರುವ ಪಾರ್ವತಿಯ ಶಿಲ್ಪ, ಪ್ರಸನ್ನ
ವಿರೂಪಾಕ್ಷ ದೇವಾಲಯ, ಹಂಪಿ

## ಶಿವಲಿಂಗವನ್ನು ಆಲಂಗಿಸಿರುವ ಪಾರ್ವತಿ ಶಿಲ್ಪಗಳು

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ಮಹಾರಂಗಮಂಟಪದ ೧ನೇ ಕಂಬ | ೧ |
| ಹಂಪಿ | ವಿರೂಪಾಕ್ಷ | ಮಹಾರಂಗಮಂಟಪದ ೩೨ನೇ ಕಂಬ | ೧ |
| ಹಂಪಿ | ವಿರೂಪಾಕ್ಷ | ಎಡಬದಿಯ ಪ್ರಾಕಾರ ಮಂಟಪದ ೨ನೇ ಕಂಬ | ೧ |
| ಹಂಪಿ | ವಿರೂಪಾಕ್ಷ | ಎಡಬದಿಯ ಪ್ರಾಕಾರ ಮಂಟಪದ ೧೯ನೇ ಕಂಬ | ೧ |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೨೦ನೇ ಕಂಬ | ೧ |
| ಹಂಪಿ | ವಿರೂಪಾಕ್ಷ | ನೂರು ಕಂಬಗಳ ಮಂಟಪದ ೧೧೩ನೇ ಕಂಬ | ೧ |
| ಹಂಪಿ | ಕಡಲೆಕಾಳು ಗಣೇಶ | ಮಂಟಪದ ೧೪ನೇ ಕಂಬ | ೧ |
| ಹಂಪಿ | ವಿಠಲ | ನೂರು ಕಂಬಗಳ ಮಂಟಪದ ೭೩ನೇ ಕಂಬ | ೧ |
| ಹಂಪಿ | ವರಹಾ ದೇವಾಲಯದ ಬಳಿಯಿರುವ ಪಾಳುಬಿದ್ದ ದೇವಾಲಯ | ಪ್ರಾಕಾರ ಮಂಟಪದ ೧೦ನೇ ಕಂಬ | ೧ |
| ಕಮಲಾಪುರ | ಪ್ರಸನ್ನ ವಿರೂಪಾಕ್ಷ | ಉತ್ಸವ ಮಂಟಪದ ೧೦ನೇ ಕಂಬ | ೧ |
| ಕಮಲಾಪುರ | ಚಂದ್ರಶೇಖರ | ನವರಂಗದ ೪ನೇ ಕಂಬ | ೧ |
| ನಿಂಬಾಪುರ | ಸೌಮ್ಯ ಸೋಮೇಶ್ವರ | ನವರಂಗದ ೧ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೮ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೨೩ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೨೯ನೇ ಕಂಬ | ೧ |
| | | ಒಟ್ಟು | ೧೫ |

### ಲಿಂಗವನ್ನು ಆಲಗಿಸಿರುವ ಆಂಜನೇಯ ಶಿಲ್ಪ

ಹಂಪಿ ಪರಿಸರದಲ್ಲಿ ಶಿವಲಿಂಗವನ್ನು ಆಲಂಗಿಸಿರುವ ಹಾಗೂ ಎರಡು ಕೈಗಳಲ್ಲಿ ಶಿವಲಿಂಗಗಳನ್ನು ಹಿಡಿದು ಯಾನಿಕ ಭಂಗಿಯಲ್ಲಿರುವ ಆಂಜನೇಯನ ಶಿಲ್ಪಗಳು ದೊರೆಯುತ್ತವೆ. ಇಂತಹ ಶಿಲ್ಪಗಳು ಯಾವುದೇ ಶಿಲ್ಪಶಾಸ್ತ್ರಗಳಲ್ಲಾಗಲಿ ಆಗಮಗಳಲ್ಲಾಗಲಿ ದೊರೆಯುವುದಿಲ್ಲಾ. ಆದರೆ ಸ್ಥಳೀಯ ಮಹಾತ್ಮ್ಯೆಯಲ್ಲಿ ಇದರ ಸಂಬಂಧಿತ ಕಥೆಗಳು ಲಭ್ಯವಾಗುತ್ತದೆ. ಪ್ರಸ್ತುತ ಈ ಆಂಜನೇಯನ ಶಿಲ್ಪವು ಸ್ಥಳೀಯ ಪಂಪಾ ಮಹಾತ್ಮೆಯ[೧೬೮] ಕಥೆಯನ್ನು ಆಧರಿಸಿದುದಾಗಿದೆ. ಈ ಪಂಪಾ ಮಹಾತ್ಮೆಯ ಉತ್ತರ ಭಾಗದ ೧೭, ೧೮, ೧೯ನೇ ಅಧ್ಯಾಯಗಳಲ್ಲಿ ಆಂಜನೇಯನು ಪರಮ ಶಿವಭಕ್ತನೆಂದು ವರ್ಣಿತವಾಗಿದೆ. ಈ ಅಧ್ಯಾಯಗಳಿಂದ, ಶಿವನ ಭಕ್ತನಾದ ಆಂಜನೇಯನು ಶಿವನ ಆಜ್ಞೆಯಂತೆ ರಾಮನಿಗೆ ಸೀತಾನ್ವೇಷಣೆಯಲ್ಲಿ ಸಹಾಯ ಮಾಡಿದುದು ಹಾಗೂ ರಾಮನಿಂದ, ಮೊಕ್ಷವನ್ನು ಪಡೆಯಲು ಸಮರ್ಥನಾದ ಸದ್ಗುರುವನ್ನು ಆಶ್ರಯಿಸಿ ಅವನ ಅನುಗ್ರಹದಿಂದ ಉಪದೇಶ ಹಾಗೂ ದೀಕ್ಷೆಯನ್ನು

ಪಡೆ ಎಂಬ ಸಲಹೆಯನ್ನು ಪಡೆದುದು, ಆಂಜನೇಯನು ನಾರದ ಮಹರ್ಷಿಯ ಸಲಹೆಯಂತೆ ವೀರಭದ್ರನನ್ನು ತನ್ನ ಗುರುವಾಗಿ ಸ್ವೀಕರಿಸಿದುದು ಹಾಗೂ ವೀರಭದ್ರನು ಹನುಮಂತನಿಗೆ ಶೈವ ದೀಕ್ಷೆಯನ್ನಿತ್ತು, ಇಷ್ಟಲಿಂಗವನ್ನು ಅನುಗ್ರಹಿಸಿದುದು ತಿಳಿದುಬರುತ್ತದೆ. ಹಾಗೆಯೇ ೧೯ನೇ ಅಧ್ಯಾಯದಲ್ಲಿ ಶಿವನು ಹನುಮಂತನ ಲಿಂಗವನ್ನು ಮಾಯ ಮಾಡಿ ಆತನನ್ನು ಪರಿಕ್ಷಿಸಿದುದು, ಹಾಗೂ ಲಿಂಗ ಕಾಣದ ಆಂಜನೇಯನು ಪ್ರಾಣ ತ್ಯಾಗ ಮಾಡಲು ನಿರ್ಧರಿಸಿದುದು ಅಷ್ಟರಲ್ಲಿ ಗುರು ವೀರಭದ್ರನು ಶಿಷ್ಯನ ಲಿಂಗವನ್ನು ಅನ್ವೇಷಿಸಿದುದು, ಕೊನೆಗೆ ಆಂಜನೇಯನ ಭಕ್ತಿಗೆ ಮೆಚ್ಚಿ ಶಿವನಿಂದ ಲಿಂಗವನ್ನು ಮರಳಿ ನೀಡಿದುದಲ್ಲದೆ ಆಂಜನೇಯನ ರೋಮ–ರೋಮಗಳಿಗೂ ಲಿಂಗವಾಗುವಂತೆ ಅನುಗ್ರಹವಿತ್ತು, ಗಣ ಪದವಿಯನ್ನು ನೀಡಿದ ವರ್ಣನೆಯು ದೊರೆಯುತ್ತದೆ. ಹೀಗೆ ಪಂಪಾ ಮಹಾತ್ಮೆಯಿಂದ ಆಂಜನೇಯನು ಶಿವಲಿಂಗ ಭಕ್ತನೆಂಬುದು ತಿಳಿದು ಬರುತ್ತದೆ.

ಮೇಲಿನ ಕಥೆಯಯನ್ನು ಬಿಂಬಿಸುವಂತೆ ಹಂಪಿ ಪರಿಸರದಲ್ಲಿ ಶಿವಲಿಂಗವನ್ನು ಆಲಂಗಿಸಿರುವ ಹಾಗೂ ಲಿಂಗಗಳನ್ನು ಹಿಡಿದು ಯಾನಿಕ ಭಂಗಿಯಲ್ಲಿರುವ ಶಿಲ್ಪಗಳು ಲಭ್ಯವಾಗುತ್ತವೆ. ಹಾಗೂ ಉದ್ದಾನ ವೀರಭದ್ರ ದೇವಾಲಯದ ಆವರಣದಲ್ಲಿ ಲಿಂಗಧಾರಿ ಆಂಜನೇಯನ ಶಿಲ್ಪವು ಇರುವುದನ್ನು ಗುರುತಿಸಲಾಗಿದೆ.[೧೯] ಸಾಮಾನ್ಯ ಆಂಜನೇಯನ ಶಿಲ್ಪಗಳಲ್ಲಿರುವಂತೆಯೇ ಈ ಶಿಲ್ಪದಲ್ಲಿಯೂ ಆಂಜನೇಯನು ಸರ್ವ ಆಭರಣಗಳಿಂದ ಭೂಷಿತನಾಗಿದ್ದು, ಕೊರಳಲ್ಲಿ ಹಾರಗಳನ್ನು ಧರಿಸಿದ್ದು ಅದರಲ್ಲಿ ಕರಡಿಗೆಯನ್ನು ತೋರಿಸಲಾಗಿದೆ. ಆದರೆ ಲಿಂಗವು ಕಂಡುಬರುವುದಿಲ್ಲ ಕರಡಿಗೆಯನ್ನು ಕಾಣಬಹುದಾದರೂ ಹೆಚ್ಚು ಸ್ಪಷ್ಟತೆಯಿಲ್ಲ. ಆದರೆ ಪಂಪಾ ಮಹಾತ್ಮೆಯಲ್ಲಿ ತೋರಿಸಿದ ಶಿಲ್ಪ ಇದೆ ಆದ್ದರಿಂದ ಅದನ್ನು ಲಿಂಗದಾರಿ ಆಂಜನೇಯ ಎಂದು ಗುರುತಿಸಬಹುದು. ಈ ಲಿಂಗಧಾರಿ ಆಂಜನೇಯನ ಶಿಲ್ಪವಲ್ಲದೆ, ಪಾರ್ಶ್ವನಾಥ ಜಿನಾಲಯದ ಎದುರಿರುವ ವೈಷ್ಣವ ದೇವಾಲಯದಲ್ಲಿ, ಪ್ರಸನ್ನ ವಿರೂಪಾಕ್ಷ ದೇವಾಲಯ ೨ನೇ ಕಂಬದಲ್ಲಿ, ವಿಠಲ ದೇವಾಲಯದ ನೂರು ಕಂಬಗಳ ಮಂಟಪದ ೨೨ನೇ ಕಂಬದಲ್ಲಿ, ಹಾಗೂ ನಾಗೇನಹಳ್ಳಿಯ ರಂಗನಾಥ ದೇವಾಲಯದ ನವರಂಗದ ೪ನೇ ಕಂಬಗಳಲ್ಲಿ ಆಂಜನೇಯನು ತನ್ನ ಎರಡು ಕೈಗಳಲ್ಲಿ, ಲಿಂಗವನ್ನು ಹಿಡಿದು ಯಾನಿಕ ಭಂಗಿಯಲ್ಲಿ ರುವಂತೆ ಕಂಡರಿಸಲಾಗಿದೆ. ಜಂಬುನಾಥ ದೇವಾಲಯದ ಮಹಾಮಂಟಪದಲ್ಲಿ ೨೬ ಮತ್ತು ೩೦ನೇ ಕಂಬಗಳಲ್ಲಿ ಪೀಠಸ್ಥ ಲಿಂಗವಿದ್ದು ಲಿಂಗದ ರುದ್ರಭಾಗವನ್ನು ಆಂಜನೇಯನು ತನ್ನ ಬಾಹುಗಳಿಂದ ಆಲಂಗಿಸಿರುವನು. ಹೀಗೆ ಈ ಶಿಲ್ಪಗಳಿಂದ ಆಂಜನೇಯನು ಶಿವಭಕ್ತನೆಂಬುದು ತಳಿಯುತ್ತದೆ.



ಲಿಂಗಧಾರಿ ಆಂಜನೇಯ ಶಿಲ್ಪ, ಉದ್ದಾನ ವೀರಭದ್ರದೇವಾಲಯದ ಆವರಣ, ಹಂಪಿ



ಶಿವಲಿಂಗವನ್ನು ಹಿಡಿದಿರುವ ಆಂಜನೇಯ, ವಿಠಲ ದೇವಾಲಯ, ಹಂಪಿ



ಶಿವಲಿಂಗವನ್ನು ಹಿಡಿದಿರುವ ಆಂಜನೇಯ. ರಂಗನಾಥ ದೇವಾಲಯ. ನಾಗೇನಹಳ್ಳಿ



ಶಿವಲಿಂಗವನ್ನು ಆಲಂಗಿಸಿರುವ ಆಂಜನೇಯ ಜಂಬುನಾಥ ದೇವಾಲಯ. ಹೊಸಪೇಟೆ

### ಶಿವಲಿಂಗದೊಂದಿಗಿರುವ ಆಂಜನೇಯ ಶಿಲ್ಪಗಳು

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ಉದ್ಧಾನ ವೀರಭದ್ರ | ದೇವಾಲಯದ ಹೊರ ಆವರಣದಲ್ಲಿರುವ ಆಂಜನೇಯ ದೇವಾಲಯ ಬಳಿಯ ದೀಪಸ್ತಂಭಕ್ಕೆ ತಾಗಿದಂತೆ ಇರಿಸಿರುವರು | ೧ |
| ಹಂಪಿ | ವಿಠಲ | ನೂರು ಕಂಬಗಳ ಮಂಟಪದ ೨೨ನೇ ಕಂಬ | ೧ |
| ಹಂಪಿ | ಪಾರ್ಶ್ವನಾಥ ಜಿನಾಲಯದ ಎದುರಿರುವ ವೈಷ್ಣವ ದೇವಾಲಯ | ಮಂಟಪದ ೧೦ನೇ ಕಂಬ | ೧ |
| ಕಮಲಾಪುರ | ಪ್ರಸನ್ನ ವಿರೂಪಾಕ್ಷ | ಉತ್ಸವ ಮಂಟಪದ ೨ನೇ ಕಂಬ | ೧ |
| ನಾಗೇನಹಳ್ಳಿ | ರಂಗನಾಥ | ನವರಂಗದ ೪ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೨೬ನೇ ಕಂಬ | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೩೦ನೇ ಕಂಬ | ೧ |
| | | ಒಟ್ಟು | ೭ |

### ಇತರೆ ಶಿಲ್ಪಗಳು

ಮೇಲಿನ ಶಿಲ್ಪಗಳಲ್ಲದೆ ಹಂಪಿ ಪರಿಸರದಲ್ಲಿ ಇನ್ನೂ ಕೆಲವು ಶಿವನ ವಿಶಿಷ್ಟ ಶಿಲ್ಪಗಳು ದೊರೆಯುತ್ತವೆ. ಇವುಗಳು ಆಗಮಗಳು ಮತ್ತು ಪುರಾಣಗಳು ಉಲ್ಲೇಖಿಸುವ ಶಿವನ ಯಾವ ರೂಪಕ್ಕೂ ಅಥವಾ ಅವತಾರಕ್ಕೂ ಹೊಂದಿಕೆಯಾಗದೆ ವಿಶಿಷ್ಟ ಪ್ರತಿಮಾ ಲಕ್ಷಣಗಳನ್ನು ಹೊಂದಿರುವವು ಆದ್ದರಿಂದ ಇವು ಶಿವನ ಯಾವ ರೂಪವೆಂದು ಗುರುತಿಸಲಾಗದೆ ಇತರೆ ಶಿಲ್ಪಗಳೆಂದು ವಿವರಿಸಲಾಗಿದೆ.

### ಆಸೀನ ಶಿಲ್ಪಗಳು

ಕುದುರೆಲಾಯದ ಒಳ ಆವರಣದಲ್ಲಿ ಶಿವನ ಒಂದು ಆಸೀನ ಶಿಲ್ಪವನ್ನು ಪ್ರದರ್ಶಿಸಲಾಗಿದೆ. ಈ ಶಿಲ್ಪವು ಒಂದು ಪೀಠದ ಮೇಲೆ ಸುಖಾಸನದಲ್ಲಿ ಆಸೀನವಾಗಿದ್ದು ಚತುರ್ಭುಜಗಳನ್ನು ಹೊಂದಿದೆ. ಬಲಭಾಗದ ಹಸ್ತಗಳಲ್ಲಿ ಮುಂದಿನದು ಅಭಯ ಮುದ್ರೆಯಲ್ಲಿದ್ದು ಅಕ್ಷಮಾಲೆಯನ್ನು ಹೊಂದಿರುವುದು ಹಾಗೂ ಹಿಂದಿನ ಹಸ್ತದಲ್ಲಿ ತ್ರಿಶೂಲವನ್ನು ಹಿಡಿದಿರುವುದು. ಹಾಗೆಯೇ ಎಡಭಾಗದ ಹಸ್ತಗಳಲ್ಲಿ ಮುಂದಿನದು ಪರಶುವನ್ನು ಹಾಗೂ ಹಿಂದಿನದು ಅಂಕುಶವನ್ನು (ಸ್ಪಷ್ಟತೆಯಿಲ್ಲ) ಹಿಡಿದಿರುವುದು. ಹಣೆಯಲ್ಲಿ ತ್ರಿನೇತ್ರವಿದ್ದು. ಜಟಾಮುಕುಟ ಅಥವಾ ಕಿರೀಟ ಮುಕುಟವಿರದೆ ಪೇಟದ ರೀತಿಯಲ್ಲಿರುವ ಉಡುಗೆಯನ್ನು ಧರಿಸಿರುವನು. ಕರ್ಣಕುಂಡಲಗಳು, ಕೊರಳಾಭರಣಗಳು, ಭುಜವಳಯ, ಕಾಲ್ಕಡಗಗಳು, ಪಾದದವರೆಗಿನ ವಸ್ತ್ರವನ್ನು ಧರಿಸಿರುವನು. ಈ ಶಿಲ್ಪದಲ್ಲಿರುವ ಪ್ರತಿಮಾ ಲಕ್ಷಣಗಳು ಆಗಮೋಲ್ಲೇಖಿತ ಯಾವ ಶಿಲ್ಪಗಳಿಗೂ(ರೂಪ) ಹೊಂದಿಕೆಯಾಗುವುದಿಲ್ಲ ಆದ್ದರಿಂದ ಇದು ಶಿವನ ಒಂದು ವಿಶಿಷ್ಟ ಶಿಲ್ಪವೆಂದು ಹೇಳಬಹುದು.

ಕಮಲಾಪುರದ ಭಾರತೀಯ ಪುರಾತತ್ವ ಸರ್ವೇಕ್ಷಣಾಲಯದ ಒಳ ಆವರಣದಲ್ಲಿ 'ಶಿವ ಆತ್ಮಲಿಂಗದೊಂದಿಗೆ' ಎಂಬ ನಾಮಫಲಕದೊಂದಿಗೆ ಒಂದು ಶಿಲ್ಪವನ್ನು ಪ್ರದರ್ಶಿಸಿರುವರು. ಈ ಶಿಲ್ಪವು ಪದ್ಮಾಸನದಲ್ಲಿ ಆಸೀನವಾಗಿದ್ದು ಚತುರ್ಭುಜಗಳನ್ನು ಹೊಂದಿರುವುದು. ಮುಂದಿನ ಎರಡು ಹಸ್ತಗಳು ವಕ್ಷದವರೆಗೂ ಚಾಚಿ ಬಲಗೈಯಲ್ಲಿ ಅಕ್ಷಮಾಲೆಯನ್ನು ಧರಿಸಿದ್ದು, ಎಡಗೈಯ ಕೆಳಗೆ ಇದೆ. ಎಡಗೈಯು ಬಲಗೈ ಮೇಲೆ ಇದ್ದು, ಅದರಲ್ಲಿ ಸಣ್ಣ ಪೀಠಸ್ತ ಲಿಂಗವನ್ನು ಹಿಡಿದಿರುವುದು. ಬಲಹಿಂದಿನ ಹಸ್ತದಲ್ಲಿ ಸರ್ಪವಿದ್ದು, ಈ ಸರ್ಪದ ಶಿರಭಾಗ (ಹೆಡೆಯು)ಪೀಠಭಾಗದಲ್ಲಿರುವುದು. ಎಡ ಹಿಂದಿನ ಹಸ್ತಗಳಲ್ಲಿ ಒಂದೇ ವೃತ್ತದಲ್ಲಿ ಸೂರ್ಯ ಚಂದ್ರ ಕಾಣುವಂತೆ ಕೆತ್ತಲಾಗಿದೆ. ಜಟಾಭಾರ, ಕರ್ಣಾಭರಣಗಳು, ಕೊರಳಾಭರಣಗಳು, ಬಾಹುವಳಯಗಳು ಹಾಗೂ ಕೆಳಭಾಗದ ವಸ್ತ್ರವನ್ನು ಧರಿಸಿರುವನು ಪೀಠಭಾಗದಲ್ಲಿ ಬಲಕ್ಕೆ ಚಿಕ್ಕಗಾತ್ರದಿಂದ ದೊಡ್ಡ ಗಾತ್ರದವರೆಗಿನ ಐದು ಗುಂಡುಗಳನ್ನು ಕಂಡರಿಸಿರುವರು ಹಾಗೆಯೇ ಮೇಲೆ ಉಲ್ಲೇಖಿಸಿದಂತೆ ಸರ್ಪದ ಹೆಡೆಯಿರುವುದು. ಎಡಕ್ಕೆ ಸೂರ್ಯನನ್ನು (ವೃತ್ತ ರೂಪದಲ್ಲಿ) ಕೆತ್ತಿರುವರು ಈ ಎಲ್ಲ ಲಕ್ಷಣಗಳಿಂದಾಗಿ ಇದು ಶಿವನ ಸೌಮ್ಯ ರೂಪವಾಗಿರದೆ ತಾಂತ್ರಿಕ ಆಚರಣೆಯ ಬಳಕೆಗಾಗಿ ರಚಿಸಿದ ಶಿಲ್ಪವಿರಬಹುದೆಂದು ಊಹಿಸಬಹುದು.

ಹಿಂದೆ ವಿವರಿಸಿದ ಶಿಲ್ಪವಿರುವ ವಸ್ತುಸಂಗ್ರಹಾಲಯದಲ್ಲಿಯೇ 'ವಿರೂಪಾಕ್ಷ' ಎಂಬ ನಾಮಫಲಕದೊಂದಿಗೆ ಒಂದು ತೃಟಿತಗೊಂಡ ಮೂರ್ತಿಯ ಶಿರಭಾಗವನ್ನು ಪ್ರದರ್ಶಿಸಲಾಗಿದೆ. ಇದು ಸರ್ಪವನ್ನು ತಲೆಯಲಂಕರಣೆಯ ಉಡುಗೆಯಾಗಿ ಸುತ್ತುರುವ ಕೆತ್ತನೆಯನ್ನು ಹೊಂದಿದೆ. ಉದ್ದನೆಯ ಕರ್ಣಗಳು, ಅದರಲ್ಲಿ ವೃತ್ತ ಕುಂಡಲಗಳು ಹಾಗೂ ಮೇಲ್ಭಾಗದಲ್ಲಿ ಬುಗುಡೆಯಂತಹ ಆಭರಣವನ್ನು ಧರಿಸಲಾಗಿದೆ. ಸ್ಪಷ್ಟವಾಗಿ ಕಾಣುವ ತ್ರಿನೇತ್ರ, ಈ ತ್ರಿನೇತ್ರದಲ್ಲಿಯೇ ಚಿಕ್ಕದಾಗಿ ತ್ರಿಪುಂಡ್ರದ ಕೆತ್ತನೆಯೂ ಇದೆ. ದಪ್ಪನೆಯ ಹುಬ್ಬುಗಳು, ಅಗಲವಾದ ನೇತ್ರಗಳು ಇದ್ದು ಅವುಗಳಲ್ಲಿ ಒಂದು ನೇತ್ರವು ಮತ್ತೊಂದು ನೇತ್ರಕ್ಕಿಂತ ಸ್ವಲ್ಪ ಚಿಕ್ಕದಾಗಿದ್ದು ವಿಭಿನ್ನವಾಗಿದೆ. ಬಹುಶಃ ಈ ಲಕ್ಷಣದಿಂದಲೇ ಇದಕ್ಕೆ ವಿರೂಪಾಕ್ಷ ಎಂದು ಕರೆಯಲಾಗಿದೆ. ಉದ್ದನೆಯ ನಾಸಿಕ, ದಪ್ಪನೆಯ ತುಟಿಗಳು ಹಾಗೂ ಚಿಕ್ಕದಾಗಿ ಕೋರೆಹಲ್ಲುಗಳನ್ನು ಮತ್ತು ಕಂಠಾಭರಣಗಳನ್ನು ಕೆತ್ತಲಾಗಿದೆ.

**ಆಸೀನ ವೀರಭದ್ರ?**

ಈ ಶಿಲ್ಪವು ಹೊಸಪೇಟೆಯ ಜಂಬುನಾಥ ದೇವಾಲಯದ ಮಹಾಮಂಟಪದ ೧೫ನೇ ಕಂಬದಲ್ಲಿದೆ. ಇದು ಒಂದು ಪೀಠದ ಮೇಲೆ ಸುಖಾಸನದಲ್ಲಿ ಆಸೀನವಾಗಿದ್ದು ಚತುರ್ಭುಜಗಳನ್ನು ಹೊಂದಿರುವುದು. ಬಲಭಾಗದ ಹಸ್ತಗಳಲ್ಲಿ ಮುಂದಿನದು ಖಡ್ಗ, ಹಿಂದಿನದು ಬಾಣವನ್ನು ಹಾಗೂ ಎಡಭಾಗದ ಹಸ್ತಗಳಲ್ಲಿ ಮುಂದಿನ ಹಸ್ತವು ಹಿಡಿದ ಆಯುಧವು ಸ್ಪಷ್ಟವಾಗಿಲ್ಲ. ಹಿಂದಿನ ಹಸ್ತವು ಬಿಲ್ಲನ್ನು ಹಿಡಿದಿರುವುದು. ಹಾಗೂ ಕಿರೀಟಮುಕುಟ, ಕರ್ಣಾಭರಣ, ಮತ್ತು ಕೊರಳಾಭರಣಗಳನ್ನು ಧರಿಸಿರುವನು. ಈ ಎಲ್ಲ ಪ್ರತಿಮಾ ಲಕ್ಷಣಗಳಿಂದಾಗಿ ಇದನ್ನು ವೀರಭದ್ರ ಶಿಲ್ಪವೆಂದು ಅನುಮಾನಿಸಬಹುದು. ಆದರೆ ಇಲ್ಲಿ ಎಡಭಾಗದ ಮುಂದಿನ ಹಸ್ತದಲ್ಲಿ ವೀರಭದ್ರನಿಗೆ ಇರಬೇಕಾದ ಖೇಟಾಯುಧದ

ಕೆತ್ತನೆ ಸ್ಪಷ್ಟತೆಯಿಲ್ಲದಿರುವುದು ಹಾಗೂ ಬಹುಮುಖ್ಯವಾಗಿ ದಕ್ಷಬ್ರಹ್ಮನನ್ನು ತೋರಿಸದೆ ಇರುವುದರಿಂದ ಇದನ್ನು ವೀರಭದ್ರ ಶಿಲ್ಪವೆಂದು ಅನುಮಾನಿಸಬಹುದೇ ಹೊರತು ಸ್ಪಷ್ಟವಾಗಿ ಹೇಳಲಾಗುವುದಿಲ್ಲ. ಒಂದು ವೇಳೆ ಇದು ವೀರಭದ್ರ ಶಿಲ್ಪವೆಂದು ಖಚಿತವಾದಲ್ಲಿ ಹಂಪಿ ಪರಿಸರದಲ್ಲಿ ದೊರೆತ ವಿವಿಧ ಪ್ರಕಾರದ ವೀರಭದ್ರ ಶಿಲ್ಪಗಳಲ್ಲಿ ಇದೂ ಒಂದು. ಇದುವರೆಗೆ ಹಂಪಿ ಪರಿಸರದಲ್ಲಿ ಆಸೀನ ವೀರಭದ್ರ ಶಿಲ್ಪಗಳು ದೊರೆತಿಲ್ಲ. ಆದ್ದರಿಂದ ಮೇಲೆ ವಿವರಿಸಿದ ಶಿಲ್ಪವು ಖಚಿತವಾದಲ್ಲಿ ಇದು ಆಸೀನ ಭಂಗಿಯಲ್ಲಿರುವ ವಿಶಿಷ್ಟ ವೀರಭದ್ರ ಶಿಲ್ಪವೆಂದು ಹೇಳಬಹುದು.

**ಲಕುಲೀಶ?**

ಈ ಶಿಲ್ಪವು ಜಂಬುನಾಥ ದೇವಾಲಯದ ಮಹಾಮಂಟಪದ ೨೦ನೇ ಕಂಬದಲ್ಲಿದೆ. ಈ ಶಿಲ್ಪವೂ ಸಹ ಆಸೀನ ಶಿಲ್ಪವಾಗಿದ್ದು ಸುಖಾಸನದಲ್ಲಿದೆ. ದ್ವಿಭುಜಳನ್ನು ಹೊಂದಿದ್ದು ಬಲಗೈಯಲ್ಲಿ ಭುಜಕ್ಕೆ ತಾಗಿರುವಂತೆ ದಂಡವೊಂದನ್ನು ಹಿಡಿದಿರುವುದು. ಎಡ ಹಸ್ತವು ಪೀಠದ ಮೇಲೆ ಮಡಚಿಟ್ಟಿರುವ ಎಡ ಮೊಣಕಾಲಿನ ಮೇಲೆ ಇಟ್ಟಿರುವುದು. ಜಟಾಮುಕುಟ, ಕರ್ಣಾಭರಣಗಳು, ಕಂಠಾಭರಣ, ಬಾಹುವಳಯಗಳು ಕಂಕಣಗಳನ್ನು ಧರಿಸಿರುವವನು ಹಾಗೂ ನಗ್ನನಾಗಿದ್ದು ಊರ್ಧ್ವಮೇಢ್ರನಾಗಿರುವಂತೆ ಗೋಚರಿಸುತ್ತದೆ. ಆದರೆ ಕೆತ್ತನೆಯಲ್ಲಿ ಸ್ಪಷ್ಟತೆಯಿಲ್ಲ. ಆದ್ದರಿಂದ ಈ ಶಿಲ್ಪವನ್ನು ಲಕುಲೀಶನೆಂದು ಊಹಿಸಬಹುದೇ ವಿನಃ ಖಚಿತವಾಗಿ ಹೇಳಲಾಗುತ್ತಿಲ್ಲ. ಒಂದು ವೇಳೆ ಈ ಊಹೆಯು ನಿಜವಾದಲ್ಲಿ ಈ ಶಿಲ್ಪವು ಹಂಪಿ ಪರಿಸರದಲ್ಲಿ ದೊರೆತ ಏಕೈಕ ಲಕುಲೀಶನ ಶಿಲ್ಪವಾಗಿದೆ. ಕಮಲಾಪುರದ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ವಸ್ತುಸಂಗ್ರಹಾಲಯದ ಒಳ ಆವರಣದಲ್ಲಿ ಲಕುಲೀಶ(ನಂ. ೭೦೮) ಎಂಬ ನಾಮಫಲಕದೊಂದಿಗೆ ಶಿಲ್ಪವೊಂದನ್ನು ಪ್ರದರ್ಶಿಸಲಾಗಿದೆ. ಆದರೆ ಅದರ ಪ್ರತಿಮಾ ಲಕ್ಷಣಗಳನ್ನು ಗಮನಿಸಿದರೆ ಅದು ಲಕುಲೀಶನ ಶಿಲ್ಪವಲ್ಲವೆಂದು ಹೇಳಬಹುದು. ಆದ್ದರಿಂದ ಮೇಲೆ ವಿವರಿಸಿದ ಶಿಲ್ಪದ ಬಗೆಗಿನ ಊಹೆಗಳು ನಿಜವಾದಲ್ಲಿ ಅದು ಹಂಪಿ ಪರಿಸರದಲ್ಲಿ ದೊರೆತ ಏಕೈಕ ಶಿಲ್ಪ. ಇದರ ಮೂಲಕ ವಿಜಯನಗರ ಕಾಲದಲ್ಲಿ ಲಕುಲೀಶನ ಆರಾಧನೆಯು ಇದ್ದಿರಬಹುದೆಂದು ಊಹಿಸಲವಕಾಶವಿದೆ.

**ಸ್ಥಾನಕ ಶಿಲ್ಪಗಳು**

ಹಂಪಿಯ ವಿರೂಪಾಕ್ಷ ದೇವಾಲಯದ ಮುಖ್ಯ ದ್ವಾರಗೋಪುರ ಅಥವಾ ಹಿರಿಯ ಗೋಪುರದ ಪೂರ್ವದಿಕ್ಕಿನ ಪಾರ್ಶ್ವದಲ್ಲಿ ಶಿವನ ಸ್ಥಾನಕ ಶಿಲ್ಪವಿದೆ. ಇಲ್ಲಿ ಶಿವ ಹಾಗೂ ಆತನ ಬಲಪಕ್ಕದಲ್ಲಿ ತಂಬೂರಿ, ಎಡಪಕ್ಕದಲ್ಲಿ ದೇವಿಯ ಶಿಲ್ಪಗಳಿವೆ. ಇವೆಲ್ಲವುಗಳು ಸಮಭಂಗದಲ್ಲಿ ಸ್ಥಾನಕವಾಗಿರುವ ಶಿಲ್ಪಗಳು. ಮಧ್ಯದಲ್ಲಿರುವ ಶಿವನ ಸಮಭಂಗದಲ್ಲಿ ಸ್ಥಾನಕನಾಗಿದ್ದು ಚತುರ್ಭುಜಗಳನ್ನು ಹೊಂದಿರುವನು. ಮುಂದಿನ ಎರಡು ಹಸ್ತಗಳಲ್ಲಿ ಬಲಹಸ್ತವು ಆತನ ತೊಡೆಗೆ ಸ್ಪರ್ಶಿಸಿ ವರದಮುದ್ರೆಯಲ್ಲಿರುವುದು ಹಾಗೂ ಎಡಹಸ್ತವು ಕಟ್ಯವಲಂಭಿತವಾಗಿದೆ. ಬಲ ಹಿಂದಿನ ಹಸ್ತದಲ್ಲಿ ತ್ರಿಶೂಲವನ್ನು ಹಾಗೂ ಎಡ ಹಿಂದಿನ ಹಸ್ತದಲ್ಲಿ ಡಮರುವನ್ನು ಹಿಡಿದಿರುವನು. ಕರಂಡಮುಕುಟ, ಭುಜವಳಯ, ಬಾಹುವಳಯ,

ಕಂಕಣಗಳು, ಕೊರಳಾಭರಣಗಳು, ಕಟಿವಸ್ತ್ರವನ್ನು ಧರಿಸಿದ್ದು ಅದು ಅಲಂಕೃತವಾಗಿದೆ. ಹಾಗೂ ವನಮಾಲೆಯನ್ನು ಧರಿಸಿರುವನು. ಈತನ ಎಡಪಕ್ಕದಲ್ಲಿ ದೇವಿಯು ಸಮಭಂಗದಲ್ಲಿ ಸ್ಥಾನಿಕಳಾಗಿದ್ದು ಕರಂಡಮುಕುಟ ಹಾಗೂ ಸರ್ವವಸ್ತ್ರಾಭರಣ ಅಲಂಕೃತವಾಗಿರುವಳು. ಹಾಗೂ ಆಕೆಯ ಎಡಹಸ್ತವು ಕಟ್ಯಾವಲಂಭಿತದಲ್ಲಿದ್ದು ಬಲಹಸ್ತವು ಪುಷ್ಪವನ್ನು ಹಿಡಿದಿರುವುದು ಹಾಗೂ ಶಿವನ ಶಿಲ್ಪದ ಬಲ ಪಕ್ಕದಲ್ಲಿ ತಂಬೂರಿಯ ಶಿಲ್ಪವಿದೆ. ಈತನೂ ಸಹ ಸಮಭಂಗದಲ್ಲಿ ನಿಂತಿದ್ದು, ತನ್ನ ದ್ವಿಭುಜಗಳಿಂದ ತಂಬೂರಿಯನ್ನು ಹಿಡಿದಿರುವನು ಹಾಗೂ ಕುದುರೆಗಿರುವ ಮುಖವನ್ನು ಹೊಂದಿದ್ದು, ಸಾಮಾನ್ಯ ಕಿರಿಟವನ್ನು ಧರಿಸಿರುವನು. ಒಟ್ಟಾರೆಯಾಗಿ ಇದು ಒಂದು ಶೈವ ಶಿಲ್ಪವೇ. ಶಿವನ ಇಂತಹದೇ ಶಿಲ್ಪವೊಂದು ರಂಗದೇವಾಲಯದ ಎದುರು ಅನತಿ ದೂರದಲ್ಲಿರುವ ಮಂಟಪದ ಎರಡನೇ ಕಂಬದಲ್ಲಿದೆ. ಆದರೆ ಇಲ್ಲಿ ದೇವಿ ಮತ್ತು ತಂಬೂರಿ ಶಿಲ್ಪಗಳಿಲ್ಲ. ಈ ಶಿಲ್ಪವನ್ನು ಹರಿಹರ ಎಂದು ಗುರುತಿಸಿ ಲೇಖನವನ್ನು[೧೭೦] ಪ್ರಕಟಿಸಲಾಗಿದೆ. ಈ ಶಿಲ್ಪದ ಮುಂಭಾಗ ವಿಷ್ಣುವಿನ ವೆಂಕಟೇಶನ ರೂಪ ಹಿಂಭಾಗ ಶಿವನ ರೂಪವೆಂದು, ಇದೊಂದು ವಿಶಿಷ್ಟ ಹರಿಹರ ಮೂರ್ತಿ ಎಂದು ಭಾವಿಸಿ ಲೇಖವನ್ನು ಪ್ರಕಟಿಸಲಾಗಿದೆ. ಆದರೆ ಮೇಲೆ ವಿವರಿಸಿರುವ ಶಿಲ್ಪವು ದೊರೆತ ಮೇಲೆ ಇದು ಹರಿಹರ ಶಿಲ್ಪವಲ್ಲ ಎಂದು ನಿರ್ಣಯಿಸಲಾಯಿತು. ಏಕೆಂದರೆ ಈ ಶಿಲ್ಪದಲ್ಲಿ ಪಾರ್ವತಿಯನ್ನು ತೋರಿಸಲಾಗಲಿಲ್ಲ. ಒಟ್ಟಾರೆ ಈ ಶಿಲ್ಪವು ಶಿವನ ಯಾವ ರೂಪವೆಂದು ಗುರುತಿಸಲಾಗದೆ ಇದನ್ನು ಇತರೆ ಶಿಲ್ಪಗಳಲ್ಲಿ ವಿವರಿಸಲಾಗಿದೆ.

ವಿರೂಪಾಕ್ಷ ದೇವಾಲಯದ ಎಡ ಪ್ರಾಕಾರ ಮಂಟಪದ ಮೇಲೆ ಗಾರೆಯಿಂದ ನಿರ್ಮಿತ ದೇವಕೋಷ್ಠಗಳಲ್ಲಿ ಶಿವನ ಹಲವು ಶಿಲ್ಪಗಳು ಕಾಣಸಿಗುತ್ತವೆ. ಅವುಗಳಲ್ಲಿ ಎರಡು ಶಿಲ್ಪಗಳು ವಿಭಿನ್ನ ಲಕ್ಷಣಗಳನ್ನು ಹೊಂದಿವೆ. ಮೊದಲನೆಯದು ಸಮಭಂಗಿಯಲ್ಲಿ ಸ್ಥಾನಿಕವಾಗಿದ್ದು, ಚತುರ್ಭುಜಗಳನ್ನು ಹೊಂದಿರುವುದು. ಮುಂದಿನ ಎರಡು ಹಸ್ತಗಳು ತ್ರುಟಿತಗೊಂಡಿದೆ. ಹಿಂದಿನ ಬಲ ಹಸ್ತದಲ್ಲಿ ತ್ರಿಶೂಲ, ಎಡಹಸ್ತದಲ್ಲಿ ಢಮರವನ್ನು ಹಿಡಿದಿರುವನು. ಶಿರದಲ್ಲಿ ವಿಶಿಷ್ಟ ಅಲಂಕರಣೆಯಿದ್ದು, ಉದ್ದನೆಯ ಹರಡಿಕೊಂಡಿರುವ ಜಟೆಗಳನ್ನು ಹೊಂದಿರುವನು. ಕರ್ಣಾಭರಣಗಳು, ಕೊರಳಾಭರಣಗಳು, ಉದ್ದನೆಯ ವನಮಾಲೆಯನ್ನು ಧರಿಸಿರುವನು. ಈ ಶಿಲ್ಪವು ಹೊಂದಿರುವ ಪ್ರತಿಮಾ ಲಕ್ಷಣಗಳು ಪುರಾಣ ಮತ್ತು ಆಗಮಶಾಸ್ತ್ರಗಳು ಉಲ್ಲೇಖಿಸುವ ಶಿವನ ಯಾವುದೇ ರೂಪದ ಲಕ್ಷಣಗಳಿಗಿಂತ ವಿಭಿನ್ನವಾಗಿವೆ. ಆದ್ದರಿಂದ ಇದು ಶಿವನ ಯಾವ ರೂಪವೆಂದು ಗುರುತಿಸಲಾಗಿಲ್ಲ.

ಹಾಗೆಯೇ ಈ ಶಿಲ್ಪದ ಪಕ್ಕದಲ್ಲಿಯೇ ಇನ್ನೊಂದು ಶಿವನ ಶಿಲ್ಪವಿದ್ದು, ಪತ್ನಿ ಸಮೇತನಾಗಿರುವನು. ಶಿಲ್ಪವು ಸಮಭಂಗದಲ್ಲಿ ಸ್ಥಾನಿಕವಾಗಿದ್ದು, ಚತುರ್ಭುಜಗಳನ್ನು ಹೊಂದಿದೆ. ಮುಂದಿನ ಬಲಹಸ್ತವು ತ್ರುಟಿಗೊಂಡಿದ್ದು, ಹಿಂದಿನ ಹಸ್ತದಲ್ಲಿ ತ್ರಿಶೂಲವನ್ನು ಹಿಡಿದಿರುವನು. ಮುಂದಿನ ಎಡಹಸ್ತದಲ್ಲಿ ಖೇಟವನ್ನು ಹಿಡಿದಿದ್ದು, ಹಿಂದಿನ ಹಸ್ತದಲ್ಲಿ ಡಮರವನ್ನು ಹಿಡಿದಿರುವನು. ಕಿರೀಟ ಮುಕುಟ, ಕರ್ಣಭರಣ, ಕೊರಳಾಭರಣಗಳು, ಭುಜವಳಿಯ, ಬಾಹುವಳಯ, ಕಂಕಣಗಳನ್ನು ಧರಿಸಿರುವನು ಹಾಗೂ ಉದ್ದನೆಯ ಅಲಂಕೃತ ವಸ್ತ್ರವನ್ನು ಧರಿಸಿರುವನು. ಈತನ ಎಡಪಕ್ಕದಲ್ಲಿ ದೇವಿಯು ದ್ವಿಭಂಗದಲ್ಲಿ

ಸ್ಥಾನಿಕಳಾಗಿದ್ದು, ದ್ವಿಭುಜಗಳನ್ನು ಹೊಂದಿರುವಳು. ಬಲಹಸ್ತದಲ್ಲಿ ಪುಷ್ಪವನ್ನು ಹಿಡಿದಿದ್ದು, ಎಡಹಸ್ತವು ಡೋಲಹಸ್ತದಲ್ಲಿದೆ. ಶಿವನ ಶಿಲ್ಪದಂತೆ ದೇವಿಯೂ ಸರ್ವ ವಸ್ತ್ರಾಭರಣ ಅಲಂಕೃತಳಾಗಿರುವಳು. ಶಿವನ ಈ ಶಿಲ್ಪವನ್ನು ವೀರಭದ್ರ ಎಂದು ಊಹಿಸಬಹುದಾದರೂ ಹಿಂದಿನ ಹಸ್ತಗಳಲ್ಲಿ ಬಿಲ್ಲು ಬಾಣಗಳ ಬದಲಾಗಿ ತ್ರಿಶೂಲ ಡಮರುವನ್ನು ಹಿಡಿದಿರುವನು. ಹಾಗೆಯೇ ವೀರಭದ್ರನ ಶಿಲ್ಪದ ಪಕ್ಕದಲ್ಲಿ ದೇವಿ ಶಿಲ್ಪವಿದ್ದು, ಅದು ವೀರಭದ್ರನ ಪತ್ನಿ ಕಾಳಿ ಎಂದು ಹೇಳಲು, ಕಾಳಿಯ ಪ್ರತಿಮಾ ಲಕ್ಷಣಗಳನ್ನು ಒಳಗೊಂಡಿಲ್ಲ. ವೀರಭದ್ರನ ಶಿಲ್ಪದ ಪಕ್ಕದಲ್ಲಿ ಆತನಂತೆಯೇ ಆಯುಧಗಳನ್ನು ಧರಿಸಿದ ಕಾಳಿಯ ಶಿಲ್ಪವನ್ನು ನಿರ್ಮಿಸಲಾಗುತ್ತದೆಯೇ ಹೊರತು ಸೌಮ್ಯ ರೂಪದ ದೇವಿಯನ್ನು ನಿರ್ಮಿಸುವುದಿಲ್ಲ. ಹಾಗೆಯೇ ಇನ್ನೊಂದು ಮುಖ್ಯವಾದ ಲಕ್ಷಣವೆಂದರೆ ದಕ್ಷಬ್ರಹ್ಮನನ್ನು ತೋರಿಸಲಾಗಿಲ್ಲ. ಆದ್ದರಿಂದ ಶಿವ ಯಾವ ರೂಪವೆಂದು ಗುರುತಿಸಲಾಗಲಿಲ್ಲ.



ಆಸೀನಶಿಲ್ಪ, ಕುದುರೆಲಾಯ, ಹಂಪಿ



ಆಸೀನಶಿಲ್ಪ, ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ವಸ್ತುಸಂಗ್ರಹಾಲಯ, ಕಮಲಾಪುರ



ಶಿರಭಾಗ, ಭಾರತೀಯ ಪುರಾತತ್ವ ಸರ್ವೇಕ್ಷಣ
ಇಲಾಖೆಯ ವಸ್ತುಸಂಗ್ರಹಾಲಯ, ಕಮಲಾಪುರ



ವೀರಭದ್ರ?, ಜಂಬುನಾಥ ದೇವಾಲಯ,
ಹೊಸಪೇಟೆ



ಲಕುಲೀಶ?, ಜಂಬುನಾಥ ದೇವಾಲಯ,
ಹೊಸಪೇಟೆ



ಸ್ಥಾನಕ ಶಿಲ್ಪ, ಮುಖ್ಯದ್ವಾರಗೋಪುರ,
ವಿರೂಪಾಕ್ಷ ದೇವಾಲಯ, ಹಂಪಿ



ಸ್ಥಾನಕ ಶಿಲ್ಪ, ಎಡಪ್ರಾಕಾರ ಮಂಟಪದ
ಮೇಲಿನ ಗಾರೆಯ ದೇವಕೋಷ್ಟ, ವಿರೂಪಾಕ್ಷ
ದೇವಾಲಯ, ಹಂಪಿ



ಸ್ಥಾನಕ ಶಿಲ್ಪ, ಎಡಪ್ರಾಕಾರ ಮಂಟಪದ
ಮೇಲಿನ ಗಾರೆಯ ದೇವಕೋಷ್ಟ,
ವಿರೂಪಾಕ್ಷ ದೇವಾಲಯ, ಹಂಪಿ

ಇತರೆ ಶಿಲ್ಪಗಳು

| ಗ್ರಾಮ | ದೇವಾಲಯಗಳು/ ಸ್ಮಾರಕ | ಶಿಲ್ಪಗಳು ದೊರೆತಿರುವ ಸ್ಥಳ | ಶಿಲ್ಪಗಳ ಸಂಖ್ಯೆ |
|---|---|---|---|
| ಹಂಪಿ | ವಿರೂಪಾಕ್ಷ | ಮುಖ್ಯದ್ವಾರ ಗೋಪುರದ ಪೂರ್ವದಿಕ್ಕಿನ ಪಾರ್ಶ್ವ | ೧ |
| ಹಂಪಿ | ವಿರೂಪಾಕ್ಷ | ಎಡ ಪ್ರಾಕಾರ ಮಂಟಪದ ಮೇಲಿನ ಗಾರೆಯ ದೇವಕೋಷ್ಠ | ೨ |
| ಹಂಪಿ | ಕುದರೆಲಾಯ | ಒಳ ಆವರಣ | ೧ |
| ಕಮಲಾಪುರ | ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ವಸ್ತುಸಂಗ್ರಹಾಲಯ | ಒಳ ಆವರಣ | ೨ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೧೫ನೇ ಕಂಬ' | ೧ |
| ಹೊಸಪೇಟೆ | ಜಂಬುನಾಥ | ಮಹಾಮಂಟಪದ ೨೦ನೇ ಕಂಬ | ೧ |
| | | ಒಟ್ಟು | ೮ |

ಒಟ್ಟಾರೆಯಾಗಿ ಹಂಪಿ ಪರಿಸರದಲ್ಲಿ ವಿವಿಧ ರೀತಿಯ ಶೈವ ಶಿಲ್ಪಗಳು ದೊರೆಯುತ್ತಿದ್ದು, ಶೈವ ಧರ್ಮದ ಪ್ರಾಮುಖ್ಯತೆಯನ್ನು ಬಿಂಬಿಸುತ್ತವೆ. ಪ್ರಾಚೀನ ಕಾಲದಿಂದಲೂ ಶೈವ ಕೇಂದ್ರವಾದ ಹಂಪಿಯು ಪ್ರಸ್ತುತದಲ್ಲಿಯೂ ಒಂದು ಪ್ರಸಿದ್ಧ ಶೈವ ಕ್ಷೇತ್ರವಾಗಿ ಜನರ ಆಕರ್ಷಣೆಯನ್ನು ಗಳಿಸಿದೆ. ವಿಜಯನಗರ ಸಾಮ್ರಾಜ್ಯವು ಈ ಪ್ರದೇಶದಲ್ಲಿ ಆಳ್ವಿಕೆಯನ್ನು ನಡೆಸಿ ಇದರ ಪ್ರಾಮುಖ್ಯತೆ ಇನ್ನೂ ಹೆಚ್ಚುವಂತೆ ಮಾಡಿದರು. ಇವರಲ್ಲಿ ತುಳುವ ಹಾಗೂ ಅರವೀಡು ಅರಸರು ವೈಷ್ಣವ ಧರ್ಮಕ್ಕೆ ಹೆಚ್ಚಿನ ಆಶ್ರಯ ನೀಡಿ ವೈಷ್ಣವ ದೇವಾಲಯ ಹಾಗೂ ಶಿಲ್ಪಗಳಿಗೆ ಹೆಚ್ಚು ಆದ್ಯತೆ ಕೊಟ್ಟರೂ ಶೈವ ಧರ್ಮವು ತನ್ನ ವರ್ಚಸ್ಸನ್ನು ಕಳೆದುಕೊಳ್ಳಲಿಲ್ಲ. ಇಂದಿಗೂ ಇಲ್ಲಿನ ಶೈವ ದೇವಾಲಯಗಳಲ್ಲಿ ಪೂಜೆಯು ನಿರಂತರವಾಗಿ ಸಾಗಿದೆ. ವೈಷ್ಣವ ಧರ್ಮದ ಪ್ರಭಾವದಿಂದ ಶೈವ ದೇವಾಲಯಗಳು ಕಡಿಮೆ ಪ್ರಮಾಣದಲ್ಲಿ ಅಥವಾ ವೈಷ್ಣವ ದೇವಾಲಯಗಳಷ್ಟು ದೊಡ್ಡ ಸಂಕೀರ್ಣ ದೇವಾಲಯಗಳು ನಿರ್ಮಾಣವಾಗದಿದ್ದರೂ, ರಚಿಸಲ್ಪಟ್ಟ ಸಣ್ಣ-ಸಣ್ಣ ಶೈವ ದೇವಾಲಯಗಳಲ್ಲಿ ವಿಭಿನ್ನ ಶೈವ ಶಿಲ್ಪಗಳು ಕಂಡುಬಂದಿವೆ. ಹಾಗೂ ಅವುಗಳು ಶಾಸ್ತ್ರಗ್ರಂಥಗಳು ಉಲ್ಲೇಖಿಸುವ ಪ್ರತಿಮಾ ಲಕ್ಷಣಗಳನ್ನು ಅನುಸರಿಸಿ ರಚಿತಗೊಂಡಿರುವುದು ವಿಶೇಷವೆನ್ನಬಹುದು. ಒಟ್ಟಾರೆ ಹಂಪಿಯು ಪ್ರಾಚೀನ ಕಾಲದಿಂದಲೂ ಪ್ರಸ್ತುತದವರೆಗೆ ಕರ್ನಾಟಕದ ಒಂದು ಪ್ರಸಿದ್ಧ ಧಾರ್ಮಿಕ ಹಾಗೂ ಶೈವ ಕ್ಷೇತ್ರವಾಗಿದೆ.




ಹಂಪಿ ಪರಿಸರದಲ್ಲಿನ ಒಟ್ಟು ಶಿವನ ಶಿಲ್ಪಗಳನ್ನು ಮೇಲಿನ ಗ್ರಾಫ್‌ನಲ್ಲಿ ತೋರಿಸಲಾಗಿದೆ. ಅದರಲ್ಲಿ ಗಮನಕ್ಕೆ ಬರುವ ಮುಖ್ಯ ವಿಷಯವೆಂದರೆ ಭೈರವ ಶಿಲ್ಪಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿ ದೊರೆಯುತ್ತವೆ. ನಂತರದ ಸ್ಥಾನ ವೀರಭದ್ರ ಶಿಲ್ಪಗಳಿಗೆ ಸಲ್ಲುತ್ತದೆ. ಆದ್ದರಿಂದ ಹಂಪಿ ಪರಿಸರದಲ್ಲಿನ ಶಿಲ್ಪಗಳ ಸಂಖ್ಯಾಧಾರದಿಂದ ಭೈರವ ಮತ್ತು ವೀರಭದ್ರನ ಆರಾಧನೆ ಅತಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿತ್ತು. ಹೀಗೆ ಹಂಪಿ ಪರಿಸರದಲ್ಲಿ ಶಿವನ ಉಗ್ರ ಸ್ವರೂಪಗಳಾದ ಭೈರವ(೯೧) ಮತ್ತು ವೀರಭದ್ರರ(೮೨) ಪ್ರಭಾವ ಶಿವನ ಉಳಿದ ಸ್ವರೂಪಗಳಿಗಿಂತಲೂ ಅಧಿಕವಾಗಿತ್ತೆಂದು ಹೇಳಬಹುದು. ಇವುಗಳ ನಂತರದ ಸ್ಥಾನವು ಭಿಕ್ಷಾಟನಾ ಮೂರ್ತಿಗೆ(೨೨) ಸಲ್ಲುತ್ತದೆ. ಶಿವನ ಭಿಕ್ಷಾಟನಾ ಸ್ವರೂಪವು ಆಧಾತ್ಮದಲ್ಲಿ ತಲೀನರಾದ ಋಷಿಗಳಿಗೆ ಲೌಖಿಕ ಮಾರ್ಗದ ಅವಶ್ಯಕತೆಯನ್ನು ಮನವರಿಕೆ ಮಾಡಿಕೊಡಲು ಧರಿಸಿದ ರೂಪ. ಹಂಪಿ ಪರಿಸರದಲ್ಲಿ ಇಂತಹ ಶಿಲ್ಪಗಳು ಹೆಚ್ಚು ಪ್ರಮಾಣದಲ್ಲಿ ದೊರೆತಿರುವುದರಿಂದ ಶಿವನ ಈ ಸ್ವರೂಪದ ಮೂಲಕ ಲೌಖಿಕ ಮಾರ್ಗದ ಅನುಸರಣೆಯನ್ನು ತಿಳಿಸಿಕೊಟ್ಟಿರುವುದು ಹಾಗೂ ಲೌಖಿಕ ಜೀವನಕ್ಕೆ ಪ್ರಾಮುಖ್ಯತೆ ನೀಡಿರುವುದು ತಿಳಿಯುತ್ತದೆ. ನಂತರದ ಸ್ಥಾನದಲ್ಲಿ ಶಿವಲಿಂಗವನ್ನು ಆಲಂಗಿಸಿದ ಪಾರ್ವತಿ ಶಿಲ್ಪಗಳಿವೆ(೧೫). ಈ ಶಿಲ್ಪಗಳ ಮೂಲಕ ಶಿವನ ಪತ್ನಿಯಾದ ದೇವಿ ಪಾರ್ವತಿಯೇ ಶಿವನನ್ನು ಲಿಂಗರೂಪದಲ್ಲಿ ಪೂಜಿಸಿರುವುದು ಹಾಗೂ ಲಿಂಗರೂಪದ ಶ್ರೇಷ್ಠತೆ ಯನ್ನು ಮತ್ತು ಆರಾಧನಾ ಪ್ರಾಮುಖ್ಯತೆಯನ್ನು ತಿಳಿಸುತ್ತದೆ. ದಕ್ಷಿಣಾಮೂರ್ತಿ ಸ್ವರೂಪ(೯+೬+೩=೧೮), ಮೈಲಾರ(೧೨) ಮತ್ತು ವೃಷಭವಾಹನ(೧೨) ಶಿಲ್ಪಗಳು ಸಹ ಹಂಪಿ ಪರಿಸರದಲ್ಲಿ ತಮ್ಮದೆ ಆರಾಧನಾ ವೈಶಿಷ್ಟತೆಯನ್ನು ಹೊಂದಿರುವುದು ತಿಳಿಯತ್ತದೆ. ಶಿವನ ಇತರ ಸ್ವರೂಪಗಳು ಕಡಿಮೆ ಪ್ರಮಾಣದಲ್ಲಿ ಕಂಡುಬಂದರೂ ಅವುಗಳು ಶೈವ ಆರಾಧನಾ ಪ್ರಾಮುಖ್ಯತೆಯನ್ನು ತಿಳಿಸುವಲ್ಲಿ ಮುಖ್ಯ ಪಾತ್ರ ವಹಿಸಿವೆ ಎನ್ನಬಹುದು.

**ಅಡಿಟಿಪ್ಪಣಿಗಳು**

೧. ಜ್ಞಾನಾನಂದ ಜಿ.(ಸಂ.), *ಶ್ರೀ ಕಾಶ್ಯಪ ಶಿಲ್ಪ ಶಾಸ್ತ್ರಂ (ಉತ್ತರಾರ್ಧ)*, ಪು.೧೨೦

೨. Gopinath Rao T.A., *Elements of Hindu Iconography,* Vol.2, Pat-I, pp.75

೩. *Ibid,* pp.75-99

೪. Vasudevan C.S., *Report on the Excavation At Hampi, 1991-2010*, pp.9-10

೫. ಜ್ಞಾನಾಂದ ಜಿ.(ಸಂ.), *ಪೂರ್ವೋಕ್ತ*, ಪು.೧೭೮-೧೭೯

೬. ರಮೇಶ ಕೆ.ವಿ.(ಸಂ.), *ಶ್ರೀತತ್ವನಿಧಿ ಸಂ.೩, ಶಿವನಿಧಿ*, ಪು.೧೧೨-೧೧೩

೭. ವಾಸುದೇವನ್ ಸಿ.ಎಸ್., 'ಹಂಪಿಯ ಅಪರೂಪದ ಪಂಚಮುಖಲಿಂಗ', *ವಿಜಯನಗರ ಅಧ್ಯಯನ*, ಸಂ.೧೫, ಪು.೧೫೧-೧೭೭

೮. ಚಂದ್ರಶೇಖರ ವಿ.ಡಾವಣಗೇರಿ, 'ಹಂಪಿ ಶ್ರೀ ವಿರೂಪಾಕ್ಷ ದೇವಾಲಯ ಪೌರಾಣಿಕ ಹಾಗೂ ಐತಿಹಾಸಿಕ ಹಿನ್ನೆಲೆ', *ವಿಜಯನಗರ ಅಧ್ಯಯನ*, ಸಂ.೯, ಪು.೧೮೩

೯. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂ.೨, *ಕೊಪ್ಪಳ ಜಿಲ್ಲೆ, ಕುಷ್ಟಗಿ ತಾ.ಪುರ*, ಶಾ.ಸಂ.೧೮

೧೦. ವಾಸುದೇವನ್ ಸಿ.ಎಸ್., 'ಹಂಪಿ ಪರಿಸರದ ಪಂಚಲಿಂಗಗಳು', *ವಿಜಯನಗರ ಅಧ್ಯಯನ*, ಸಂ.೧೨, ಪು.೨೩೧-೨೪೩ ಮತ್ತು 'ಹಂಪಿಯ ಅಪರೂಪದ ಪಂಚಮುಖಲಿಂಗ,' *ವಿಜಯನಗರ ಅಧ್ಯಯನ*, ಸಂ.೧೫, ಪು.೧೫೧-೧೭೭

೧೧. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂ.೩, *ಹಂಪಿ ಶಾಸನಗಳು*, ಶಾ.ಸಂ.೧೫೯, ೧೬೬, ೧೭೪

೧೨. ಸಿದ್ಧಲಿಂಗೇಶ್ವರ ಸ್ವಾಮಿಗಳು, *ಶ್ರೀ ಪಂಪಾಮಹಾತ್ಮೆ*, ಪು.೩೫೬-೩೬೧

೧೩. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂ.೩, ಪೂರ್ವೋಕ್ತ, ಶಾ.ಸಂ.೧೬೪

೧೪. ಅದೇ, ಶಾ.ಸಂ.೧೬೫

೧೫. ಕಿಶನ್‌ರಾವ್ ಕುಲಕರ್ಣಿ, 'ಪೌರಾಣಿಕ ಕಥೆ ಹೇಳುವ ಶಿವಲಿಂಗಗಳು', *ತರಂಗ ಮಾಸಪತ್ರಿಕೆ*, ಫೆಬ್ರವರಿ ೨೬, ೨೦೦೯, ಪು.೩೬-೩೮

೧೬. ಕೊಟ್ರಯ್ಯ ಸಿ.ಟಿ.ಎಂ., ಸರ್ವಾಂಗಲಿಂಗ, ಪು.೧-೧೬

೧೭. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂ.೩, *ಪೂರ್ವೋಕ್ತ*, ಶಾ.ಸಂ.೮೩ ಮತ್ತು ೮೪

೧೮. ಕಲಬುರ್ಗಿ ಎಂ.ಎಂ., *ಕರ್ನಾಟಕ ಕೈಫಿಯತ್ತುಗಳು*, ಪು.೪೩೨

೧೯. ಕೊಟ್ರಯ್ಯ ಸಿ.ಟಿ.ಎಂ., *ಸರ್ವಾಂಗಲಿಂಗ,* ಪು.೧೦-೧೬ ಮತ್ತು 'ಹಂಪಿಯಲ್ಲೊಂದು ಸಿದ್ಧರಾಮೇಶ್ವರ ಪ್ರಣೀತ ಲಿಂಗಕ್ಕೆ ಲಿಂಗವೇ ಪೀಠವಾಗಿರ್ಪ ಯೋಗಾಂಗಲಿಂಗ', *ವಿಜಯನಗರ ಅಧ್ಯಯನ,* ಸಂ.೧, ಪು.೨೦-೨೫ ಮತ್ತು 'Linga Superimposed by Another linga from Hampi', *Vijayanagara Progress Research,1988-1991,* pp.135-140

೨೦. ಅಯ್ಯಾಳಿ ಯರಿಸ್ವಾಮಿ, *ಹಂಪಿ ಪರಿಸರದ ಐತಿಹ್ಯಗಳು: ಚಾರಿತ್ರಿಕ ವಿಶ್ಲೇಷಣೆ,* ಅಪ್ರಕಟಿತ ಎಂ.ಫಿಲ್. ಪ್ರಬಂಧ, ಪು.೬೬-೬೭

೨೧. ಮಂಜುನಾಥ ಟಿ.ಎಂ., 'ಮಾಲ್ಯವಂತ ಪರ್ವತ ಒಂದು ಅಧ್ಯಯನ,' *ವಿಜಯನಗರ ಅಧ್ಯಯನ,* ಸಂ.೪, ಪು.೫೬

೨೨. ಅದೇ

೨೩. ಸಿದ್ಧಲಿಂಗೇಶ್ವರ ಸ್ವಾಮಿಗಳು(ಸಂ), *ಪೂರ್ವೋಕ್ತ,* ಪು.೨೭೯

೨೪. ಧನುಂಜಯ ಸಿ., 'ಶ್ರೀಕಾಳಹಸ್ತಿ ದೇವಾಲಯದ ಐತಿಹ್ಯವನ್ನು ತಿಳಿಸುವ ಹಂಪಿಯ ವಿರೂಪಾಕ್ಷ ದೇವಾಲಯದಲ್ಲಿನ ಪ್ರಾಣಿಶಿಲ್ಪಗಳು,' *ಇತಿಹಾಸ ದರ್ಶನ,* ಸಂ.೩೦, ಪು.೨೦೩-೨೦೪

೨೫. ಮಂಜುನಾಥಯ್ಯ ಟಿ.ಎಂ., *ಪೂರ್ವೋಕ್ತ,* ಪು.೫೦

೨೬. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂ.೩, *ಪೂರ್ವೋಕ್ತ,* ಪು.೩೪೫

೨೭. Balasubramanya, *Virupaksha Temple at Hampi,* Unpublished Ph.D Thesis, University of Mysore, pp.137

೨೮. ಸೀತಾರಾಮ ಸೋಮಯಾಜಿ, *ಪರಮೇಶ್ವರನ ಇಪ್ಪತ್ತೈದು ಅವತಾರಗಳು,* ಪು.೧

೨೯. Gopinath Rao T.A., *Op cit, pp.*113-114

೩೦. *Ibid,* pp.117-18

೩೧. ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ೬೬ನೇ ಪಟಲ ಪು.೪೪೮-೪೪೯

೩೨. Bhatt N.R.(Ed.), *Rauravagama* Vol II, *Kriyapada,* pp.103-105

೩೩. Bhatt N.R., Jean Filliozat, Pierre Selvain filliozat(Ed), *The Great Tantra of Ajita, Patala XXXVI,* pp.58-59

೩೪. Swaminath C. (Ed.), *Kamikagama, Chapter 48th,* pp.845-847

೩೫. Mayilai Madaliar (Ed.), *Karanagama, Chapter 54,* pp.283-284

೩೬. ರಮೇಶ್ ಕೆ.ವಿ. (ಪ್ರ.ಸಂ), *ಪೂರ್ವೋಕ್ತ,* ಪು.೧೨೬

೩೭. Swaminath C. (Etd) *Op cit,* chapter 48th, p.847

೩೮. ಸೀತಾರಾಮ ಸೋಮಯಾಜಿ, *ಪೂರ್ವೋಕ್ತ,* ಪು.೫೭-೫೮

೩೯. ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೪೨೫

೪೦. Bhatt N.R., Jean Filliozat, Pierre selvain Filliozat (Ed.) *op cit, Patala XXXVI,* p.49

೪೧. Bhatt N.R. (Ed.) *Op cit,* p.44

೪೨. Marie-Luce Barazer-Billoret, Bruno Dagens of Vincent Lefevre and Sumbandha Sivacarya (Ed.), *Diptagama, Tome I, Chapter 16,* p.230

೪೩. ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೪೦೧-೪೧೧

೪೪. Sambasiva Sastri K. (Ed.), *Silparatna of Sri Kumara Part II, Chapter 22,* pp.101-102

೪೫. Gopinath Rao T.A., *Op cit,* pp.130-131 ಮತ್ತು ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೪೩೪-೪೩೫

೪೬. *Ibid,* pp.132-133

೪೭. ಜ್ಞಾನಾನಂದ ಜಿ., *ಪೂರ್ವೋಕ್ತ,* ಪು.೫೨೨-೫೨೩

೪೮. ಅದೇ, ಪು.೫೨೯-೫೨೧

೪೯. Sambasivasastri K. (Ed.), *Op cit,* pp.111-112

೫೦. Gopinath Rao T.A., *Op cit,* p.151

೫೧ Mayilai Mudaliar (Ed.), *Op cit, Chpater 77,* p.320

೫೨. ರಮೇಶ ಕೆ.ವಿ. (ಪ್ರಸಂ), *ಪೂರ್ವೋಕ್ತ,* ಪು.೧೩೨

೫೩. ಸುರೇಶ ಕೆ.ಎಂ., 'ತಿಮ್ಮಲಾಪುರದ ಗಜಸಂಹಾರ ಉಬ್ಬುಶಿಲ್ಪ', *ವಿಜಯನಗರ ಅಧ್ಯಯನ,* ಸಂ.೯, ಪು.೫೧-೫೩

೫೪. Suresh K.M., *Vijayanagara Sculptures at Hampi,* p.41

೫೫. ವಾಸುದೇವನ್ ಸಿ.ಎಸ್., 'ಹಂಪಿ ಪರಿಸರದ ಮಾರ್ಕಂಡೇಯನ ನಿರೂಪಣಾತ್ಮಕ ಶಿಲ್ಪಗಳು', *ವಿಜಯನಗರ ಅಧ್ಯಯನ,* ಸಂ.೧೯, ಪು.೧೬೦

೫೬. ಅದೇ, ಪು.೧೬೨

೫೭. Gopinath Rao T.A., *Op cit,* pp.156-158 ಮತ್ತು ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೫೭೫

೫೮. ಜ್ಞಾನಾನಂದ ಜಿ. (ಸಂ.), *ಪುರ್ವೋಕ್ತ,* ೮೦ನೇ ಪಟಲ, ಪು.೫೭೦–೫೭೫

೫೯. Swaminath C. (Ed.), *Op cit, chapter 57*, pp.870-880

೬೦. Gopinath Rao T.A., *Op cit,* p.161

೬೧. Bhatt N.R. (Ed.), *Op cit, Chapter 35th,* p.107-108

೬೨. Bhatt N.R., Jean Filliozat, Pierre-Sylvain Filliozat (Ed.) *op cit, Patala 36th,* pp.60-61

೬೩. Sambasivasastri K. (Ed), *Op cit, chapter 22nd,* pp.117-118

೬೪. Gopinath Rao T.A., *Op cit,* pp.156-161 ಮತ್ತು ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೫೭೬

೬೫. ವಾಸುದೇವನ್ ಸಿ.ಎಸ್., 'ಹಂಪಿ ಪರಿಸರದ ಮಾರ್ಕಂಡೇಯನ ನಿರೂಪಣಾತ್ಮಕ ಶಿಲ್ಪಗಳು', *ವಿಜಯನಗರ ಅಧ್ಯಯನ,* ಸಂ.೧೯, ಪು.೧೬೯–೧೮೧

೬೬. Suresh K.M., *Op cit,* pp.43-44

೬೭. Gopinath Rao T.A., *Op cit,* pp.182-186

೬೮. Mayilai Mudaliar (Ed.), *Op cit, Chapter 61*, pp.296-297

೬೯. ರಮೇಶ ಕೆ.ವಿ. (ಪ್ರಸಂ), *ಪೂರ್ವೋಕ್ತ,* ಪು.೧೩೩

೭೦. ವಸಂತಲಕ್ಷ್ಮಿ ಕೆ., *ಕರ್ನಾಟಕದ ಶೈವಶಿಲ್ಪಗಳು,* ಪು.೮೭

೭೧. Ramachandra Rao S.K., *Siva Kosha, Vol.2,* p.342

೭೨. Balasubramanya, 'Virabhadra Sculptures in Hampi', Nagaraja Rao (Ed.), Vijayanagara Progress of Research 1983-1984, pp.133-135

೭೩. ವಸಂತಲಕ್ಷ್ಮಿ ಕೆ., *ಪೂರ್ವೋಕ್ತ,* ಪು.೭೩

೭೪. Gopinath Rao T.A., *Op cit,* pp.174-175

೭೫. *Ibid,* pp.175-176

೭೬. *Ibid,* p.176

೭೭. Ramachandra Rao S.K., *Op cit, Vol.2,* pp.367-368

೭೮. Gopinath Rao T.A., *Op cit,* pp.176

೭೯. ವಸಂತಲಕ್ಷ್ಮಿ ಕೆ., *ಪೂರ್ವೋಕ್ತ,* ಪು.೭೫

೮೦. Gopinath Rao T.A., *Op cit,* pp.180-181 and Ramachandra Rao S.K., *Op cit,* pp.370-374

೮೧. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂ.೧, *ಬಳ್ಳಾರಿ ಜಿಲ್ಲೆ,* ಶಾ.ಸಂ.೪೦

೮೨. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂ.೩, *ಹಂಪಿ ಶಾಸನಗಳು,* ಶಾ.ಸಂ.೫೫

೮೩. Anila Verghese, *Religious Tradition At Vijayanagara*, pp.22-23

೮೪. Gopinath Rao T.A., *Op cit,* p.191

೮೫. ರಾಮಚಂದ್ರರಾವ್ ಎಸ್.ಕೆ., *ಮೂರ್ತಿಶಿಲ್ಪ ನೆಲೆ–ಹಿನ್ನೆಲೆ,* ಪು.೨೦೬–೨೦೭

೮೬. Gopinath Rao T.A., *Op cit,,* p.192

೮೭. ರಾಮಚಂದ್ರರಾವ್ ಎಸ್.ಕೆ., *ಪೂರ್ವೋಕ್ತ,* ಪು.೨೦೭

೮೮. ವಾಸುದೇವ ಬಡಿಗೇರ, 'ಹಂಪಿ ಪರಿಸರದ ಮೈಲಾರನ ಪರಂಪರೆ,' *ವಿಜಯನಗರ ಅಧ್ಯಯನ,* ಸಂ.೮, ಪು.೧೪೭–೧೪೮

೮೯. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩, *ಹಂಪಿ ಶಾಸನಗಳು,* ಶಾ.ಸಂ.೩೬೫

೯೦. ಮಂಜುನಾಥಯ್ಯ ಟಿ.ಎಂ., 'ಮಾಲ್ಯವಂತ ಪರ್ವತ ಒಂದು ಅಧ್ಯಯನ', *ವಿಜಯನಗರ ಅಧ್ಯಯನ,* ಸಂ.೪, ಪು.೫೩

೯೧. Ramachandra Rao S.K., *Op cit, Vol I,* pp.188-189

೯೨. Suresh K.M., *Op cit,* pp.39-40

೯೩. ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೫೨೬–೫೨೭

೯೪. Mayilal Mudaliar, *Op cit, Chapter 79*, p.322

೯೫. ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೫೨೪–೫೨೬

೯೬. ರಮೇಶ ಕೆ.ವಿ. (ಸಂ.), *ಪೂರ್ವೋಕ್ತ,* ಪು.೨೬೩–೨೬೪

೯೭. ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೪೮೨

೯೮. Gopinath Rao T.A., *Op cit,* pp.223-224

೯೯. Anand Coomarswamy, *The Dance of Siva Fourtheen Indain Essays,* p.59

೧೦೦. Swaminath C. (Ed.), *Op cit, chapter 46,* pp.832-836

೧೦೧. Mayilai Mudalior (Ed.), *Op cit, Chapter 55,* pp.286

೧೦೨. ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ, ೬೮ನೇ ಪಟಲ,* ಪು.೪೬೧-೪೮೧

೧೦೩. Bhatt N.R. (Ed.), *Op cit, chapter 35th,* pp.110-116

೧೦೪. Bhatt N.R., Jean Filliozat, Pierre-Sylvain Filliozat (Ed.), *op cit, chapter 36th,* pp.55-56

೧೦೫. Sambasivasastri K. (Ed.), *Op cit, Chapter 22,* pp.104-107

೧೦೬. Gopinath Rao T.A., *Op cit,* pp.224-231

೧೦೭. ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೪೮೨-೪೮೮

೧೦೮. ವಸಂತಲಕ್ಷ್ಮಿ ಕೆ. (ಸಂ.), *ಪೂರ್ವೋಕ್ತ,* ಪು.೧೩೭

೧೦೯. Gopinath Rao T.A., *Op cit,* pp.264-265

೧೧೦. ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೫೬೫

೧೧೧. Ramachandra Rao S.K., *Op cit,* Vol.2, pp.295-298

೧೧೨. *Ibid,* p.298

೧೧೩. Gopinath Rao T.A., *Op cit,* pp.273-278

೧೧೪. *Ibid,* Pp.284-285, ಮತ್ತು ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೫೬೮

೧೧೫. Suresh K.M., *Op cit,* pp.55-56

೧೧೬. ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೫೩೯-೫೪೦

೧೧೭. ಅದೇ, ಪು.೫೨೮-೫೩೯

೧೧೮. Swaminath C. (Ed.), *Op cit, chapter 52th,* pp.862-864

೧೧೯. Bhatt N.R. (Ed.), *Op cit, chapter 35th,* pp.116-119

೧೨೦. Mudaliar (Ed.), *Op cit, Chapter 78th,* p.321

೧೨೧. Sambasivasatri K. (Ed.), *Op cit,* pp.112-113

೧೨೨. ರಮೇಶ್ ಕೆ.ವಿ. (ಪ್ರಸಂ), *ಪೂರ್ವೋಕ್ತ,* ಪು.೧೩೫-೧೩೬

೧೨೩. Gopinath Rao T.A., *Op cit,* pp.303-305 ಮತ್ತು ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೫೪೩-೫೪೪

೧೨೪. ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೫೪೩

೧೨೫. ಅದೇ, ಪು.೫೫೪ ಮತ್ತು Gopinath Rao T.A. *Op cit,* pp.306-307

೧೨೬. Sambasivasastri K. (Ed.), *Op cit, chapter 22nd,* p.114

೧೨೭. Mayilai Mudaliar (Ed.), *Op cit, chapter 57th,* p.291

೧೨೮. Swaminatha C. (Ed.), *Op cit, chapter 52nd,* pp.863-864

೧೨೯. Bhatt N.R., Jean Filliozat, Pierre-Sylvain Filliozat (Ed.), *Op cit, The Great Tantra of Ajita,* Vol III, *39th Patala,* pp.52-52

೧೩೦. Bhatt N.R. (Ed.), *Op cit, Chapter 35th,* p.116

೧೩೧. Ramachandra Rao S.K., *Op cit,* Vol.1 pp.243-245 and Gopinath Rao T.A.,*Op cit,* pp.313-315

೧೩೨. Gopinath Rao T.A., *Op cit,* pp.315-316

೧೩೩. Sambasivasastri K. (Ed.), *Silparatna of Sri Kumara,* Prt II, *22 chapter*, p.108

೧೩೪. Swaminatha C. (Ed.), *Op cit, chapter 63,* p.902

೧೩೫. Ramachandra Rao S.K., *Op cit,* Vol.1, pp.249-250

೧೩೬. Suresh K.M., *Op cit,* pp.65-67

೧೩೭. Gopinath Rao T.A., *Op cit,* pp.321-323 ಮತ್ತು ಜ್ಞಾನಾನಂದ ಜಿ., *ಪೂರ್ವೋಕ್ತ,* ಪು.೫೧೬-೧೭

೧೩೮. *Ibid,* pp.323-326

೧೩೯. Ramachandra Rao S.K., *Op cit,* Vol II, pp.273-274

೧೪೦. Bhatt N.R. (Ed.), *Op cit,* 35th chapter, p.119

೧೪೧. Suresh K.M., *Op cit,* p.60

೧೪೨. ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ,* ಪು.೫೪೮-೫೫೦

೧೪೩. Gopinath Rao T.A., *Op cit,* pp.332-334

೧೪೪.ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ*, ೭೬ನೇ ಪಟಲ, ಪು.೫೪೫-೫೪೮

೧೪೫. Sambasivasastri K., *Op cit,* p.113

೧೪೬. Suresh K.M., *Op cit,* pp.60-62

೧೪೭. Anila Verghese, 'The Harihara Temple on Hemakuta Hill,' *Archaeology Art and Religion New perspectives on Vijayanagara,* pp.199-206

೧೪೮. Ramachandra Rao S.K., *Op cit,* Vol.II, pp.253-254

೧೪೯. Gopinath Rao T.A., *Op cit,* pp.337-388

೧೫೦. Ramachandra Rao S.K., *Op cit,* Vol.2 pp.256-262

೧೫೧.ಜ್ಞಾನಾನಂದ ಜಿ. (ಸಂ.), *ಪೂರ್ವೋಕ್ತ*, ಪು.೪೫೯-೪೬೦ ಮತ್ತು Gopinath Rao T.A., *Op cit,* pp.352-354

೧೫೨. Sambasivasastri K. (Ed.), *Op cit,* Chapter 22, p.104

೧೫೩. Swamitha C. (Ed.), *Op cit,* Chapter 62, p.399

೧೫೪.ಜ್ಞಾನಾನಂದ ಜಿ. (ಸಂ.), ಪೂರ್ವೋಕ್ತ, ೬೭ನೇ ಪಟಲ, ಪು.೪೫೫-೪೫೯

೧೫೫. Bhatt N.R. (Ed.), *Op cit,* chapter 35th, pp.96-97

೧೫೬. Mayilai Mudaliar (Ed.), *Op cit,* Chapter 59, p.294

೧೫೭. Bhatt N.R., Jean Filliozat, Pierre-Sylvain Filliozat (Ed.), *Op cit,* Vol.II, p.65

೧೫೮. Shivarudraswamy S.N., *Timmapura Agrahara (A Cultural Study of Vijayanagara Hampi Temple Complex),* p.103

೧೫೯. Kirankranth Choudary, 'Some Rare Forms of Siva and vishnu; Shanmugam P. and Srinivasan(Ed.), *Recent Advancess in Vijayanagara Studies*, pp.216-217

೧೬೦. Shivarudraswamy, *Op cit,* pp.103

೧೬೧. ಪಂಡರೀನಾಥಾಚಾರ್ಯ ಗಲಗಲಿ (ಅನು), *ಶ್ರೀ ಶಿವ ಮಹಾಪುರಾಣ (ಭಾಗ-೧)*, ಪು.೩೪೩-೪೪

೧೬೨. Kirankranth Choudary, *Op cit,* pp.217-219

೧೬೩. Syamacharaya V. (Ed.), *The Karnataka Mahabharata By Kumaravyasa Mahakavi,* Vol.3, Sabhaparva, Sandhi 7th, pp.120-131

೧೬೪ ಹೇಮಾವತಿ ಶಿ.ಮೆಣಸಗಿ, *'ಹಂಪಿಯ ಶಿಲ್ಪಗಳಲ್ಲಿ ಮಹಾಭಾರತ ಉಲ್ಲೇಖಿತ ಪುರುಷಮೃಗ ಶಿಲ್ಪ,'* *ಇತಿಹಾಸ ದರ್ಶನ*, ಸಂ.೩೦, ಪು.೨೦೫-೨೦೬

೧೬೫. ಹೇಮಾವತಿ ಶಿ. ಮೆಣಸಗಿ, 'ಹಂಪಿ ವಿರೂಪಾಕ್ಷ ದೇವಾಲಯದಲ್ಲೊಂದು ಕಂಚಿಯ ಏಕಾಂಬರೇಶ್ವರ ದೇವಾಲಯದ ದಂತಕಥೆ ಹೇಳುವ ಪಾರ್ವತಿ ಶಿಲ್ಪ', ನಾರಾಯಣ ಗೌಡ ವಿ., ಏರಿಗೌಡ ಕೆ.ಪಿ., ವೆಂಕಟಗೌಡ ಎನ್.ಕೆ. (ಸಂ)., *ಕರ್ನಾಟಕದ ಭೌಗೋಳಿಕ ಲಕ್ಷಣಗಳು ಮತ್ತು ಇತಿಹಾಸ ಹಾಗೂ ಪ್ರವಾಸೋದ್ಯಮದೊಡನೆ ಸಂಬಂಧಗಳು*, ಪು.೨೧೩-೨೧೬

೧೬೬. ಪಾಟಣಕರ ಚಂದ್ರಶೇಖರ ಭಟ್ಟ (ಅನು), *ಶ್ರೀ ಕಾಂಚಿಮಹಾತ್ಯಂ*, ಪು.೪೦೨-೪೧೨

೧೬೭. Gopinath Rao T.A., *Op cit*, pp.407-411

೧೬೮. ಸಿದ್ಧಲಿಂಗೇಶ್ವರ ಸ್ವಾಮಿಗಳು (ಸಂ.), *ಪೂರ್ವೋಕ್ತ*, ಪು.೭೭೧-೮೦೧

೧೬೯. ಅದೇ, ಪು. ೭೭೬

೧೭೦. ಹೇಮಾವತಿ ಶಿ.ಮೆಣಸಗಿ, *'ಹಂಪಿಯ ವಿಶಿಷ್ಟ ಹರಿಹರ ಶಿಲ್ಪ', ವಿಜಯನಗರ ಅಧ್ಯಯನ*, ಸಂ.೧೬, ಪು.೨೦೪-೨೦೬

## ಅಧ್ಯಾಯ ಆರು

# ಸಮಾರೋಪ

'ಹಂಪೆ'ಯು ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿ ಮೆರೆದು, ದೇಶೀಯ ಹಾಗೂ ವಿದೇಶಿಯ ಸಾಹಿತ್ಯಗಳಲ್ಲಿ ನಾನಾ ಬಗೆಯಲ್ಲಿ ವರ್ಣಿಸಲ್ಪಟ್ಟು, ಸಾಮ್ರಾಜ್ಯದ ಅವನತಿಯನ್ನೂ ಕಂಡು, 'ಹಾಳು ಹಂಪೆ' ಎಂದು ಆಧುನಿಕ ಇತಿಹಾಸಕಾರರಿಂದ ಸಂಬೋಧಿಸಲ್ಪಟ್ಟು, ಇಂದು ವಿಶ್ವಪರಂಪರೆಯ ತಾಣಗಳಲ್ಲೊಂದಾಗಿ ಮೆರೆಯುತ್ತಿದೆ. ಒಂದು ಸಾಮ್ರಾಜ್ಯದ ಉದಯ, ಉತ್ಕರ್ಷ ಹಾಗೂ ಅವನತಿಗೆ ಸಾಕ್ಷಿಯಾದ ಈ ಪ್ರದೇಶವು ಇತಿಹಾಸದ ಪುಟಗಳಲ್ಲಿ ತನ್ನದೇ ಆದ ಸ್ಥಾನವನ್ನು ಹೊಂದಿದೆ. 'ವಿಜಯನಗರದಂಥ ನಗರವನ್ನು ಕಣ್ಣು ಕಂಡಿಲ್ಲ, ಕಿವಿ ಕೇಳಿಲ್ಲ' ಎಂಬ ವಿದೇಶಿ ಪ್ರವಾಸಿಗ ಅಬ್ದುಲ್ ರಜಾಕನ ವರ್ಣನೆ ಇಂದಿಗೂ ಹಂಪಿಯ ಅಳಿದುಳಿದ ಅವಶೇಷಗಳಿಂದ ಸ್ಪಷ್ಟವಾಗಿ ಗೋಚರಿಸುತ್ತದೆ. ಇದು ವಿಜಯನಗರ ಸಾಮ್ರಾಜ್ಯದ ಉದಯಕ್ಕೂ ಮೊದಲೇ ಪೌರಾಣಿಕ ನೆಲೆಯಾಗಿ ಪವಿತ್ರ ಕ್ಷೇತ್ರವೆನಿಸಿತ್ತು. ಪಂಪಾತೀರ್ಥ, ಪಂಪಾವರಕ್ಷೇತ್ರ, ವಿರೂಪಾಕ್ಷತೀರ್ಥ, ಹಂಪಾತೀರ್ಥ, ಭಾಸ್ಕರ ಕ್ಷೇತ್ರ ಎಂದು ಮುಂತಾಗಿ ಶಾಸನಗಳಲ್ಲಿ ಉಲ್ಲೇಖಿತಗೊಂಡ ಹಂಪೆಯ ಇತಿಹಾಸವು ಪೌರಾಣಿಕ ಕಾಲಘಟ್ಟದಿಂದ ಗುರುತಿಸಲ್ಪಟ್ಟಿದೆ. ಬ್ರಹ್ಮನ ಮಾನಸಪುತ್ರಿಯಾದ ಪಂಪೆಯನ್ನು ವಿರೂಪಾಕ್ಷನು ವರಿಸಿದ ನಂತರ ವಿರೂಪಾಕ್ಷ ತೀರ್ಥ ಅಥವಾ ವಿರೂಪಾಕ್ಷ ಕ್ಷೇತ್ರವೆಂದು ಕರೆಯಲ್ಪಟ್ಟಿತು. ಭೌಗೋಳಿಕವಾಗಿ ಹಲವು ತೀರ್ಥ ಹಾಗೂ ಬೆಟ್ಟಗಳಿಂದ ಆವೃತ್ತವಾದ ಹಂಪಿಯ ಪವಿತ್ರ ಕ್ಷೇತ್ರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡ ವಿಜಯನಗರ ಅರಸರು ಹಲವು ದೇವಾಲಯಗಳನ್ನು, ಮಂಟಪಗಳನ್ನು ನಿರ್ಮಿಸಿ ಅದರ ಪಾವಿತ್ರ್ಯತೆಯನ್ನು ಇನ್ನೂ ಇಮ್ಮಡಿಗೊಳಿಸಿದರು. ಇವರು ನಿರ್ಮಿಸಿದ ಇಂತಹ ಸ್ಮಾರಕಗಳು ಅವರದೇ ಆದ ಕಲೆ ಮತ್ತು ವಾಸ್ತುಶಿಲ್ಪದ ಪ್ರತೀಕಗಳಾಗಿದ್ದು, ಇಂದು ಸಂಶೋಧನ ಕ್ಷೇತ್ರದ ಅಧ್ಯಯನಕಾರರಿಗೆ ಇದು ಮುಖ್ಯ ಕ್ಷೇತ್ರವೆನಿಸಿದೆ. ಇಲ್ಲಿಯ ಭೌಗೋಳಿಕ ವಿಶೇಷತೆಗಳೆನಿಸಿದ ನಿಸರ್ಗ ನಿರ್ಮಿತ ಕಲ್ಲುಬಂಡೆಗಳನ್ನು ಬಳಸಿ ರಚನೆಗೊಂಡ ಸ್ಮಾರಕಗಳು ಇಂದು ಅಧ್ಯಯನಕಾರರಿಗೆ ಮುಖ್ಯ ವಿಷಯವಸ್ತುವಾಗಿವೆ. ಈಗಾಗಲೇ ಈ ಕ್ಷೇತ್ರದಲ್ಲಿನ ಹಲವು ವಿಶೇಷತೆಗಳನ್ನು ಕುರಿತು ಅಧ್ಯಯನಗಳು ಸಾಕಷ್ಟು ಆಗಿ ಹೋಗಿವೆ ಹಾಗೂ ಇನ್ನೂ ಹಲವು ಅಧ್ಯಯನಗಳು ನಡೆಯುತ್ತಲೇ ಇವೆ. ಪ್ರಸ್ತುತ ಅಧ್ಯಯನವು ಸಹ ಹಂಪಿ ಕ್ಷೇತ್ರವನ್ನು ಕುರಿತಾಗಿದ್ದು, 'ಹಂಪಿ ಪರಿಸರದ ಶೈವ ಶಿಲ್ಪಗಳು'ಎಂಬ ಶೀರ್ಷಿಕೆಯಡಿಯಲ್ಲಿ ವಿಷಯವನ್ನು ವಿಶ್ಲೇಷಿಸಲಾಗಿದೆ. ಅಂದರೆ

